# "ಮಕ್ಕಳ ಕಥಾ ಸಾಹಿತ್ಯ : ಸ್ವರೂಪ ಮತ್ತು ತಾತ್ವಿಕತೆ"

ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ ಹಂಪಿ, ಇಲ್ಲಿಗೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಮಾನ್ಯತಾ ಸಂಸ್ಥೆ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು


ಸಂಶೋಧಕ

ಮಾದುಪ್ರಸಾದ್. ಕೆ

ನೋಂದಣಿ ಸಂಖ್ಯೆ : KSPBKS.0277

ಮಾರ್ಗದರ್ಶಕರು

ಡಾ.ಬೈರಮಂಗಲ ರಾಮೇಗೌಡ

ಪ್ರಾಧ್ಯಾಪಕರು






ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# "ಮಕ್ಕಳ ಕಥಾ ಸಾಹಿತ್ಯ : ಸ್ವರೂಪ ಮತ್ತು ತಾತ್ವಿಕತೆ"

ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ ಹಂಪಿ, ಇಲ್ಲಿಗೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಮಾನ್ಯತಾ ಸಂಸ್ಥೆ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು



ಸಂಶೋಧಕ

**ಮಾದುಪ್ರಸಾದ್. ಕೆ**

ನೋಂದಣಿ ಸಂಖ್ಯೆ : KSPBKS 0277

ಮಾರ್ಗದರ್ಶಕರು

**ಡಾ.ಬೈರಮಂಗಲ ರಾಮೇಗೌಡ**

ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩-೨೭೬

೨೦೧೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಮಾದುಪ್ರಸಾದ್. ಕೆ ಇವರು 'ಮಕ್ಕಳ ಕಥಾ ಸಾಹಿತ್ಯ: ಸ್ವರೂಪ ಮತ್ತು ತಾತ್ವಿಕತೆ' ಎಂಬ ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವ ವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಮಾನ್ಯತಾ ಸಂಸ್ಥೆಯ ಮೂಲಕ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಡಾ.ಬೈರಮಂಗಲ ರಾಮೇಗೌಡ

ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು

ದಿನಾಂಕ : 03-03-2018.

ಸ್ಥಳ : ಕ. ಸಾ. ಪ. ಬೆಂಗಳೂರು

ಡಾ. ರಾಮೇಗೌಡ
ಸಹ ಪ್ರಾಧ್ಯಾಪಕ ಮತ್ತು ಕನ್ನಡ ವಿಭಾಗದ ಮುಖ್ಯಸ್ಥ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ರಾಜಾಜಿನಗರ, ಬೆಂಗಳೂರು - 560 010.,

# ಸಂಶೋಧಕರ ಪ್ರಮಾಣ ಪತ್ರ

'ಮಕ್ಕಳ ಕಥಾ ಸಾಹಿತ್ಯ: ಸ್ವರೂಪ ಮತ್ತು ತಾತ್ವಿಕತೆ' ಎಂಬ ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವ ವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ಡಾ.ಬೈರಮಂಗಲ ರಾಮೇಗೌಡ ಇವರ ಮಾರ್ಗದರ್ಶನದಲ್ಲಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಮಾನ್ಯತಾ ಸಂಸ್ಥೆಯ ಮೂಲಕ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾದುಪ್ರಸಾದ್ ಕೆ

ಸಂಶೋಧಕ

ದಿನಾಂಕ : 03-03-2018

ಸ್ಥಳ : ಕ. ಸಾ. ಪ. ಬೆಂಗಳೂರು

## ಪರಿವಿಡಿ

## ಅಧ್ಯಾಯ : ೧

## ಅಧ್ಯಯನದ ಉದ್ದೇಶ ಮತ್ತು ಮಹತ್ತ್ವ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ತ್ವ

೧.೩ ಅಧ್ಯಯನದ ವ್ಯಾಪ್ತಿ, ಆಕರಗಳು

೧.೪ ಅಧ್ಯಯನದ ವಿಧಾನ

೧.೫ ಹಿಂದಿನ ಅಧ್ಯಯನಗಳ ಸಮೀಕ್ಷೆ

೧.೬ ಮಕ್ಕಳ ಸಾಹಿತ್ಯ, ಮಕ್ಕಳ ಕಥಾ ಸಾಹಿತ್ಯ, ಮಕ್ಕಳ ಕಥಾ ಸಾಹಿತ್ಯದ ಸ್ವರೂಪ, ತಾತ್ವಿಕತೆಗಳ ಪರಿಕಲ್ಪನಾತ್ಮಕ ಚರ್ಚೆ

## ಅಧ್ಯಾಯ : ೧

# ಅಧ್ಯಯನದ ಉದ್ದೇಶ ಮತ್ತು ಮಹತ್ತ್ವ

ಭಾಷೆ ಮತ್ತು ಸಾಹಿತ್ಯ ಮಾನವನ ಜೀವನದ ಅತಿ ಶ್ರೇಷ್ಠವಾದ ಅಂಶಗಳು. 'ಭಾಷೆಯಿಲ್ಲದಿದ್ದರೆ ಮಾನವನ ಜೀವನ ಅಂಧಕಾರದಿಂದ ಕೂಡಿರುತ್ತಿತ್ತು' ಎಂದು ದಂಡಿಯು ಅಭಿಪ್ರಾಯಿಸುತ್ತಾರೆ. ಮಾನವನ ಬದುಕಿಗೆ ಭಾಷೆಯು ಬೆಳಕಾದರೆ ಭಾಷೆಗೆ ಸಾಹಿತ್ಯವೇ ಬೆಳಕು ಎನ್ನಬಹುದು. ಸಾಹಿತ್ಯವು ಮಾನವನ ಬದುಕನ್ನು ಹಸನಾಗಿಸುತ್ತದೆ. ಮಾನವನ ಜೀವನವು ಸಂಸ್ಕೃತಿಯನ್ನು ಆಶ್ರಯಿಸಿದೆ. ಸಾಹಿತ್ಯವು ಅದನ್ನು ರೂಪಿಸುತ್ತದೆ. ಬದುಕು ಮತ್ತು ಸಂಸ್ಕೃತಿಯನ್ನು ಕಟ್ಟುವ ಕಲೆಯು ಸಾಹಿತ್ಯದಿಂದ ಬರುವುದರಿಂದ ಮಾನವನ ಜೀವನದಲ್ಲಿ ಸಾಹಿತ್ಯವು ಪ್ರಧಾನವಾದುದಾಗಿ ಕಾಣಿಸಿಕೊಳ್ಳುತ್ತದೆ. ಒಂದು ದೇಶದ ಸಂಪತ್ತಾಗಿ ಸಾಹಿತ್ಯವನ್ನು ಪರಿಗಣಿಸುವುದಾದರೆ ಅದು ಆ ದೇಶದ ಬೌದ್ಧಿಕ ಆಸ್ತಿಯಾಗಿ ಕಾಣಿಸಿಕೊಳ್ಳುತ್ತದೆ. ಯುದ್ಧವನ್ನು ನಡೆಸುವುದಕ್ಕಿಂತ ತಡೆಯುವುದು ಶ್ರೇಷ್ಠ ಎನ್ನುವವರು ಬೌದ್ಧಿಕ ಆಸ್ತಿಯನ್ನು ಅವಲಂಬಿಸುತ್ತಾರೆ. ಭಾರತ ದೇಶವು ಇಂತಹ ಶಾಂತಿಪ್ರಿಯರ ಸಾಲಿನಲ್ಲಿ ನಿಲ್ಲುವ ಪ್ರಮುಖ ರಾಷ್ಟ್ರವಾಗಿದೆ. ಆದುದರಿಂದಲೇ ಭಾರತವು ಶಾಂತಿ ಮತ್ತು ಸಂಸ್ಕೃತಿಯ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತದೆ. ಈ ದೇಶದ ಪ್ರಧಾನ ಸಂಪತ್ತುಗಳಲ್ಲಿ ಸಾಹಿತ್ಯವು ಒಂದಾಗಿದ್ದು, ಸಾಹಿತ್ಯವು ಈ ದೇಶದ ಶಾಂತಿ ಮತ್ತು ಸಂಸ್ಕೃತಿಯನ್ನು ಕಟ್ಟುವಲ್ಲಿ ಮುತುವರ್ಜಿ ವಹಿಸಿದೆ. ಭಾರತದ ಸಂಸ್ಕೃತಿಗಳ ನೆರಳು ಕರ್ನಾಟಕದ ಮೇಲೆ ಬಿದ್ದಂತೆ ಕಾಣಿಸಿಕೊಂಡು ಭಾರತದ ವೈವಿಧ್ಯ, ಭಿನ್ನತೆಗಳು ಕರ್ನಾಟಕದ ಸಂಸ್ಕೃತಿಯಲ್ಲಿಯು ಸಹ ಕಾಣಿಸಿಕೊಳ್ಳುತ್ತವೆ. ಕೇವಲ ಸಾಂಸ್ಕೃತಿಕ ವಾತಾವರಣದ ಮೇಲಷ್ಟೆ ಭಾರತದ ಪ್ರಭಾವವಾಗದೆ ಅದು ಸಾಹಿತ್ಯದ ಮೇಲೂ ಉಂಟಾಗಿದೆ. ಕನ್ನಡದ ಸಾಹಿತ್ಯವು ಭಾರತದ, ಜಗತ್ತಿನ ಸಾಹಿತ್ಯದ ಪ್ರಭಾವ, ಪ್ರೇರಣೆಗಳನ್ನು ಉಂಡು ಸಮೃದ್ಧಿಯನ್ನು ಕಂಡಿದೆ. ಕನ್ನಡ ಸಾಹಿತ್ಯವು ಜಗತ್ತಿನ ಜ್ಞಾನ ಶಾಖೆಗಳ ಸ್ವೀಕಾರಗಳೊಂದಿಗೆ ನವೋದಯವನ್ನು ಸ್ವಾಗತಿಸಿ ತನ್ನದೇ ಆದ ಪಥವನ್ನು ಕಂಡುಕೊಂಡಿದೆ. ಪರಂಪರೆಯ ಪುರಾಣ, ವೇದ, ರಾಮಾಯಣ, ಮಹಾಭಾರತದ ಕತೆಗಳಿಂದ, ಅವುಗಳ ಪಾತ್ರಗಳಿಂದ ಹೊರಬಂದು ಮಾನವನ ಬದುಕಿನ ಸೂಕ್ಷ್ಮತೆಗಳನ್ನು, ವಾಸ್ತವ ಬದುಕಿನ ಮಾದರಿಯ ರಚನೆಗಳನ್ನು ಮುಂದಿರಿಸಿಕೊಂಡು ಸಾಹಿತ್ಯದ ಶಾಖೆಗಳನ್ನು ಲೇಖಕರು ವಿಸ್ತರಿಸಿಕೊಂಡರು. ಮೌಖಿಕ ಪರಂಪರೆಯನ್ನು ಆಶ್ರಯಿಸಿಕೊಂಡು ಬೆಳೆದು ಬಂದಿದ್ದ ಮಕ್ಕಳ ಸಾಹಿತ್ಯದ ಮೇಲೂ ಇದರ ಹೇರಳವಾದ ಪ್ರಭಾವವು ಉಂಟಾಯಿತು.

ಕನ್ನಡ ಸಾಹಿತ್ಯ, ಕನ್ನಡ ಮಕ್ಕಳ ಸಾಹಿತ್ಯ, ಕನ್ನಡ ಮಕ್ಕಳ ಕಥಾ ಸಾಹಿತ್ಯ ಎಂಬ ಪರಿಕಲ್ಪನೆಗಳು ಹುಟ್ಟಿಕೊಂಡಿರುವುದು ಸಾಹಿತ್ಯದ ವಿಕಾಸದ ಕುರುಹು. ಸಾಹಿತ್ಯವು ತನ್ನ ಬೆಳವಣಿಗೆಯಲ್ಲಿ ಹಂತಹಂತವಾಗಿ ವಿಕಾಸವಾದಂತೆ ಇಂತಹ ಪರಿಕಲ್ಪನೆಗಳು ಹುಟ್ಟಿಕೊಳ್ಳುತ್ತಾ ಬಂದಿವೆ ಎನ್ನಬಹುದು. ಕನ್ನಡ ಸಾಹಿತ್ಯದಲ್ಲಿ ಮಕ್ಕಳ ಸಾಹಿತ್ಯವು ಒಂದು ಪ್ರತ್ಯೇಕವಾದ ಶಾಖೆಯಾಗಿಯೇ ಕಾಣಿಸಿಕೊಂಡಿದೆ.

ಅದರಲ್ಲಿಯೂ ಪದ್ಯ, ಗದ್ಯ ಎಂಬ ವಿಭಾಗಗಳಾಗಿ ಗದ್ಯದ ಭಾಗದಲ್ಲಿ ಕತೆ, ಕಾದಂಬರಿ, ಲೇಖನಗಳೆಂಬ ವಿಧಗಳು ಕಾಣಿಸಿಕೊಂಡಿವೆ. ಕಾಲ ಮತ್ತು ಕಾಲದೊಡನೆ ಸಾಹಿತ್ಯದ ಸ್ಪಂದನೆಯು ನಿರಂತರವಾಗಿ ಕಂಡುಬರುತ್ತಿರುವುದರಿಂದ ಇಂತಹ ಬದಲಾವಣೆಗಳು ಗತಿಸುತ್ತಿವೆ. ಮತ್ತೊಂದು ದಿಕ್ಕಿನಲ್ಲಿ ನೋಡುವುದಾದರೆ ಮುಖ್ಯಧಾರೆಯ ಸಾಹಿತ್ಯವು ಇಂತಹ ಬದಲಾವಣೆಯನ್ನು ಅನುಭವಿಸುತ್ತಿರುವುದರಿಂದ ಅದನ್ನೇ ಅನುಸರಿಸುತ್ತಿರುವ ಮಕ್ಕಳ ಸಾಹಿತ್ಯದಲ್ಲೂ ಬದಲಾವಣೆಗಳು ಉಂಟಾಗುತ್ತಿವೆ. ಇವೆಲ್ಲವು ಅಗತ್ಯದ ಸಂಗತಿಗಳಾಗಿರುವುದರಿಂದ ತೀವ್ರಗತಿಯಲ್ಲಿ ಗತಿಸುತ್ತಿವೆ. ಮಕ್ಕಳಲ್ಲಿಯೂ ವೈವಿಧ್ಯತೆಯನ್ನು ಬಯಸುವ ಓದುಗ ವರ್ಗವಿರುವುದರಿಂದ ಅವರ ಅವಶ್ಯಕತೆಗಳನ್ನು ಪೂರೈಸುವಂತಹ ಸಾಹಿತ್ಯದ ನಿರ್ಮಾಣ ಅನಿವಾರ್ಯವಾಗಿದೆ. ಆದುದರಿಂದಲೇ ಇಂತಹ ಶಾಖೆಗಳು ಉಂಟಾಗುತಿದ್ದು ಹೊಸ ಹೊಸ ಅನ್ವೇಷಣೆಯ ಕಡೆಗೆ ಲೇಖಕರು ಮನಸ್ಸು ಮಾಡುತ್ತಿದ್ದಾರೆ ಎನ್ನಬಹುದು. ಪದ್ಯಗಳಗಷ್ಟೆ ಸೀಮಿತವಾಗಿದ್ದ ಮಕ್ಕಳ ಸಾಹಿತ್ಯವು ತನ್ನ ಸಂಕುಚಿತತೆಯಲ್ಲಿ ನಿಲ್ಲುವ ಅನಿವಾರ್ಯತೆಯನ್ನು ತಳೆದಿತ್ತು. 'ಪದ್ಯಂ ವದ್ಯಂ ಗದ್ಯಂ ಹೃದಯಂ' ಎಂಬ ಮಾತು ಹಿರಿಯರ ಮುಖ್ಯವಾಹಿನಿಯ ಸಾಹಿತ್ಯದಲ್ಲಿ ಗದ್ಯದ ಮಹತ್ತ್ವವನ್ನು ಅದರ ಹೃದಯ ಸ್ಪರ್ಶಿ ಸಹೃದಯಿಗಳ ಸೆಳೆತವನ್ನು ತಿಳಿಸಿದ ಮೇಲೆ ಎಳೆಯ ಓದುಗ ವರ್ಗವೂ ಗದ್ಯವನ್ನು ಅರ್ಥೈಸಿಕೊಳ್ಳಬಲ್ಲದು. ಅವರಿಗೂ ಇದು ರುಚಿಸುತ್ತದೆ ಎಂದು ಭಾವಿಸಿ ಮಕ್ಕಳ ಸಾಹಿತ್ಯದಲ್ಲಿ ಗದ್ಯವನ್ನು ತರಲಾಯಿತು. ಗದ್ಯವೆಂದರೆ ಹಿರಿಯರಲ್ಲಿ ಅನೇಕ ರೀತಿಯ ಗ್ರಹಿಕೆಗಳಿರುವಂತೆ ಮಕ್ಕಳಲ್ಲಿ ಇರದೆ, ಅದು ಕತೆಗಳೆ ಎನ್ನುವಂತೆ ಇತ್ತು. ಆದರೆ ಈಗ ಈ ಕಲ್ಪನೆ ಬದಲಾಗುತ್ತಾ ಅದರೊಳಗೆ, ಕತೆ, ಕಾದಂಬರಿ, ಅನುಭವಕಥನ ಲೇಖನಗಳು ಸೇರುವ ಸಮಯ ಈಗ ಕಾಣಿಸಿಕೊಂಡಿದೆ. ಆದುದರಿಂದ ಇವೆಲ್ಲವುಗಳ ತಿಳುವಳಿಕೆಗಾಗಿ ಹಿರಿಯರ ಸಾಹಿತ್ಯದಂತೆ ಅಧ್ಯಯನಗಳು ನಡೆಯುವ ಅಗತ್ಯವಿದೆ.

ಮಕ್ಕಳ ಗದ್ಯವೆಂದರೆ ಅದು ಬಹು ಪಾಲು ಕತೆಗಳೇ ಆಗಿದ್ದವು. ಅವು ಸಹ ಮೌಖಿಕ ಸೆಲೆಯ ಜನಪದದ ಸೆರಗಿನೊಳಗೆ ಪೋಷಣೆಗೊಂಡಿದ್ದವು. ಮಕ್ಕಳಿಗೆ ಸಮಯ ಸಿಕ್ಕಾಗ ಕತೆಗಳನ್ನು ಮೌಖಿಕವಾಗಿ ಹೇಳಲಾಗುತ್ತಿತ್ತೆ ವಿನಹ ಅವುಗಳಿಗೆ ಸಾಹಿತ್ಯದ ಸ್ಥಾನಮಾನ ಸಿಕ್ಕಿರಲಿಲ್ಲ ಎನ್ನಬಹುದು. ಬರೆಹ ಸಂಸ್ಕೃತಿ ಕಾಲಿಡುವ ವರೆಗೂ ಅವುಗಳಿಗೆ ಸಾಹಿತ್ಯದ ಸಂಸ್ಕಾರವಿರಲಿಲ್ಲ. ಹಿರಿಯರ ಸಾಹಿತ್ಯಕ್ಕೆ ಇಂತಹ ಸಂಸ್ಕಾರವು ಲಭಿಸಿ ಅನೇಕ ವರ್ಷಗಳು ಕಳೆದಿದ್ದವು. ಮಕ್ಕಳ ಸಾಹಿತ್ಯವನ್ನು ಆರಂಭಿಸಿದ್ದು ಬರೆಹದ ಸ್ವರೂಪ ಬಂದ ಮೇಲೂ ಅನೇಕ ವರ್ಷಗಳು ಘಟಿಸಿ ಶಿಕ್ಷಣ ವ್ಯವಸ್ಥೆಯು ಕಾಲಿರಿಸಿದ್ದಾಗ ಎನ್ನಬಹುದು. ಅಲ್ಲಿಂದ ಹಿಂದಕ್ಕೆ ಮಕ್ಕಳ ಸಾಹಿತ್ಯವು ಜನಪದದ ಸ್ವರೂಪದಲ್ಲಿ ಕತೆಗಳನ್ನು ಒಳಗೊಂಡಿದ್ದು ಮೌಖಿಕ ಸ್ವರೂಪದಲ್ಲಿ ಹರಿದಾಡುತ್ತಿತ್ತು. ಪ್ರಬುದ್ಧರ ಸಾಹಿತ್ಯಕ್ಕೆ ನವೋದಯದ ಗಾಳಿ ಬೀಸಿ, ಅದು ಬದಲಾವಣೆಯನ್ನು ಕಂಡುಕೊಂಡಾಗ, ಸೃಜನಶೀಲ ಲೇಖಕರಲ್ಲಿ ಕೆಲವರು ಮಕ್ಕಳ ಸಾಹಿತ್ಯದ ಅಗತ್ಯತೆಯನ್ನು ಕಂಡುಕೊಂಡರು. ಮಕ್ಕಳ ಸಾಹಿತ್ಯವು ಪ್ರಬುದ್ಧರ ಸಾಹಿತ್ಯದ ಮೇಲೆ ನಡೆಯುತ್ತಿರುವ ಪ್ರಯೋಗಗಳನ್ನು ಕಂಡುಕೊಂಡು ತನ್ನ ಹುಟ್ಟನ್ನು ಪ್ರತ್ಯೇಕಿಸಿಕೊಂಡು, ಹೊರಬರಲು ತವಕಿಸಿತು. ಮಕ್ಕಳ ಸಾಹಿತ್ಯವು ಪ್ರತ್ಯೇಕವಾದ ಅಸ್ತಿತ್ವವನ್ನು ಇಲ್ಲಿಯವರೆಗೂ ಕಂಡುಕೊಳ್ಳದೆ ಜನಪದದ ಸಾಹಿತ್ಯದೊಂದಿಗೆ ಬೆರೆತು ಮೌಖಿಕವಾಗಿ ಕಾಣಿಸಿಕೊಂಡಿತ್ತು. ಮಕ್ಕಳ ಕತೆಗಳ ಅಸ್ತಿತ್ವವಿದ್ದುದ್ದು ಅಜ್ಜಿಕತೆಗಳ ಸ್ವರೂಪದಲ್ಲಿ ಮಾತ್ರ.

ಅಜ್ಜಿಯು ಮಕ್ಕಳಿಗಾಗಿ ಹೇಳುತ್ತಿದ್ದ ಕತೆಗಳು ಸಹ ಮಕ್ಕಳ ಕತೆಗಳಾಗಿರದೆ ದೊಡ್ಡವರ ಕತೆಗಳೇ ಆಗಿರುತ್ತಿದ್ದವು. ಅವುಗಳನ್ನು ಮಕ್ಕಳಿಗಾಗಿ ತುಂಡುರಿಸಿ, ಪರಿಷ್ಕರಿಸಿ, ಲಂಬಿಸಿ ಹೇಳುವ ಮೂಲಕ ಮಕ್ಕಳ ಮುಂದಿರಿಸುತ್ತಿದ್ದ ಅಜ್ಜಿಯು ಜನಪದದಲ್ಲಿ ಕಾಣಿಸಿಕೊಂಡಿದ್ದಾಳೆ. ಹೀಗೆ ಕಾಣಿಸಿಕೊಂಡ ಅಜ್ಜಿಯು ಹೇಳಿದ ಕತೆಗಳಿಂದ ಮಕ್ಕಳ ಮೌಖಿಕ ಸಂಪ್ರದಾಯದ ಕತೆಗಳ ಆರಂಭ ಎಂದು ಗುರ್ತಿಸಿಕೊಳ್ಳಬೇಕು. ಜನಪದದ ಹಿನ್ನೆಲೆಯು ಮಕ್ಕಳ ಕಥಾ ಸಾಹಿತ್ಯವನ್ನು ಬೆಳೆಸುವಲ್ಲಿ ನೀಡಿದ ಕೊಡುಗೆಗಳು ಅಮೂಲ್ಯವಾದವು. ಅಜ್ಜಿಕತೆಗೆ ವಸ್ತುವನ್ನು ಒದಗಿಸಿದ್ದು ಜನಪದ ರೂಪದಲ್ಲಿದ್ದ ಪುರಾಣದ ಕತೆಗಳು, ಭಾರತೀಯ ಪರಂಪರೆಯ ಕತೆಗಳು, ರಾಮಾಯಣ, ಮಹಾಭಾರತ, ಅವುಗಳ ಪಾತ್ರಗಳು ವಸ್ತುಗಳಾಗಿ ಹರಿದಾಡಿರುವುದನ್ನು ಇಲ್ಲಿ ಕಾಣಬಹುದು. ಭಾರತೀಯರ ಕಲೆ, ಸಂಸ್ಕೃತಿಯ ನೆಪದಲ್ಲಿ ಬಂದ ವಸ್ತುಗಳು ಸಹ ಅಜ್ಜಿಯರ ಬಾಯಿಯಲ್ಲಿ ಹರಿದಾಡಿದ ಕತೆಗಳಂತೆ ಮಕ್ಕಳ ಕತೆಗಳಿಗೆ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ನೆರವು ನೀಡಿರುವುದನ್ನು ವಿವರಿಸಿ ಹೇಳುವ ಅಗತ್ಯವಿದೆ. ಗ್ರಾಮೀಣ ಪ್ರದೇಶದ ಮಕ್ಕಳ ಪರಿಸರದಲ್ಲಿ ನಡೆದ ಬೆಳವಣಿಗೆಗಳು, ಬದಲಾವಣೆಗಳು, ನಗರದ ಮಕ್ಕಳ ಪರಿಸರದಲ್ಲಿ ನಡೆದ ಸಂಗತಿಗಳಿಗಿಂತ ಭಿನ್ನತೆಯನ್ನು ಗಮನಿಸಿದಾಗ ಕಂಡುಬರುವ ವ್ಯತ್ಯಾಸಗಳನ್ನು ಅಧ್ಯಯನದ ಹಿನ್ನೆಲೆಯಿಂದ ಕಾಣಲಾಗಿದೆ. ಯಕ್ಷಗಾನ, ಬಯಲಾಟಗಳು, ಕೃಷ್ಣ ಪಾರಿಜಾತ, ನಾಟಕಗಳು ದೊಡ್ಡವರಿಗಾಗಿ ಏರ್ಪಾಡಾದಾಗಲೂ ಅವರೊಂದಿಗೆ ಮಕ್ಕಳು ಕೂಡಿ ನೋಡುವುದರಿಂದ ಮಕ್ಕಳ ಕತೆಗಳ ಮೇಲೆ ಉಂಟಾದ ಪರಿಣಾಮಗಳನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಅಜ್ಜಿಕತೆಗಳಂತೆಯೇ ಕಾಣಿಸಿಕೊಳ್ಳುವ ಆದರೆ ಅವುಗಳಷ್ಟು ಮಹತ್ತ್ವವಿಲ್ಲದ, ಹಾಗಂತ ಅಲ್ಲಗಳೆಯಲೂ ಆಗದ ಅಡಗೂಲಜ್ಜಿಯ ಕತೆಗಳನ್ನು, ಅವುಗಳು ಮಕ್ಕಳ ಕತೆಗಳ ಮೇಲೆ ಬೀರಿದ ಪ್ರಭಾವವನ್ನು ಭಾರತದ, ಕನ್ನಡದ ಮಕ್ಕಳ ಸಾಹಿತ್ಯದಲ್ಲಿ ಕಾಣಬಹುದು.

## ೧.೧ ಪ್ರಸ್ತಾವನೆ

ಮಕ್ಕಳ ಸಾಹಿತ್ಯದ ಪರಿಕಲ್ಪನೆ, ಅದರಲ್ಲಿ ಮಕ್ಕಳ ಕತೆಗಳು, ಅವುಗಳ ಪ್ರತ್ಯೇಕತೆ, ವಿಂಗಡಿಸಿ ನೋಡುವ ಕಲ್ಪನೆಗಳು ಭಾರತೀಯರಲ್ಲಿ ಇರಲಿಲ್ಲ. ಇದು ನಮ್ಮಲ್ಲಿ ಕಾಣಿಸಿಕೊಂಡಿದ್ದು ಭಾರತಕ್ಕೆ ವಿದೇಶಿಯರ ಸಾಹಿತ್ಯದ ಪ್ರಭಾವವಾದ ಮೇಲೆಯೆ. ಇದಕ್ಕೂ ಮೊದಲು ಮಕ್ಕಳಿಗಾಗಿನ ಸಾಹಿತ್ಯವೆಂದರೆ ಭಾರತದಲ್ಲಿ ಕಾಣಿಸುತ್ತಿದ್ದು ಪರಂಪರೆಯ, ಪುರಾಣದ, ಜನಪದದ, ರಾಮಾಯಣದ, ಮಹಾಭಾರತದ ಪಾತ್ರಗಳಲ್ಲಿ ಕಾಣಿಸಿಕೊಳ್ಳುವ ಮಕ್ಕಳ ಬಾಲ್ಯದ ಸಂಗತಿಗಳಾಗಿದ್ದವು.ರಾಮನ ಬಾಲ್ಯ, ಕೃಷ್ಣನ ಬಾಲ್ಯದ ಲೀಲೆಗಳಂತಹ ಕತೆಗಳು, ಕೌರವ ಪಾಂಡವರ ಬಾಲ್ಯ, ಧ್ರುವಕುಮಾರನ ಕತೆ, ವಿವಿಧ ಬಾಲ್ಯದ ಸಂಗತಿಗಳು ಮಕ್ಕಳ ಕತೆಗಳಾಗಿದ್ದವು. ಮಕ್ಕಳ ಸಾಹಿತ್ಯವು ಪುರಾಣದ ಸಂಗತಿಗಳನ್ನು ಮಕ್ಕಳಿಗೆ ಹೇಳಿ ಅವರನ್ನು ಪುರಾಣದ ಆದರ್ಶ ಪುರುಷರಂತೆ ಮೌಲ್ಯಗಳನ್ನು ಕಟ್ಟಿಕೊಂಡು ಬದುಕಲು ಸಜ್ಜುಗೊಳಿಸುವ ಸಾಧನವಾಗಿ ಕಾಣಿಸಿಕೊಂಡಿತ್ತು. ಪರಂಪರೆಯ ಸರಕುಗಳನ್ನು ತಲೆಮಾರಿನಿಂದ ತಲೆಮಾರಿಗೆ ಕೊಂಡೊಯ್ಯಲು ಸಹ ಇದು ಸೇತುವೆಯೂ ಆಗಿತ್ತು. ಔಪಚಾರಿಕ ಶಿಕ್ಷಣದ ಭಾಗವಾಗಿದ್ದ ಶ್ಲೋಕಗಳು,

ಧಾರ್ಮಿಕ ಗ್ರಂಥದ ವ್ಯಾಖ್ಯಾನಗಳನ್ನು ಮಕ್ಕಳು ಬಾಯಿಪಾಠ ಮಾಡುವ ಮೂಲಕ ಗಳಿಸಿಕೊಳ್ಳುವ ಜ್ಞಾನವು ಇದರ ಆಶಯವಾಗಿ ಕಾಣಿಸಿಕೊಂಡಿತ್ತು. ಆದರೆ ಇಂತಹ ವಾತಾವರಣವು ಎಲ್ಲ ಮಕ್ಕಳಿಗೂ ಸಿಗದೆ ಕಲಿಕೆಯಲ್ಲಿ ಆಸಕ್ತಿ ಹೊಂದಿದ ಕೆಲವೇ ಕೆಲವು ಕುಟುಂಬಗಳ ಮಕ್ಕಳಿಗೆ ಸೀಮಿತವಾಗಿತ್ತು. ಇದು ಔಪಚಾರಿಕ ಗುರುಕುಲದ ಶಿಕ್ಷಣ ವ್ಯವಸ್ಥೆಯಿಂದ ಹೊರಗುಳಿದ ಮಕ್ಕಳಿಗೆ ಸಿಗದೆ ಅವರು ಅನೌಪಚಾರಿಕವಾದ ಸಮಾಜದ ವಿವಿಧ ಸ್ತರಗಳಿಂದ ಜ್ಞಾನವನ್ನು ಗಳಿಸಿಕೊಳ್ಳುವ ಅನಿವಾರ್ಯತೆ ಕಾಣಿಸಿಕೊಂಡಿತ್ತು. ಭಾರತಕ್ಕೆ ಸಾರ್ವತ್ರಿಕವಾದ ಶಿಕ್ಷಣವು ಕಾಲಿರಿಸಿದಾಗ ಮಾತ್ರವೇ ಎಲ್ಲ ಮಕ್ಕಳನ್ನು ಪರಿಗಣಿಸುವಂತಹ ಶಿಕ್ಷಣದ ಕಲ್ಪನೆಗಳು ಉಂಟಾದವು. ಇಂತಹ ಬದಲಾವಣೆಯು ಸಾಮಾಜಿಕವಾಗಿ ಕಾಣಿಸಿಕೊಂಡಂತೆ ಸಾಹಿತ್ಯಕವಾಗಿಯೂ ಕಾಣಿಸಿಕೊಂಡು ಮಕ್ಕಳ ಸಾಹಿತ್ಯದ ಅಗತ್ಯವನ್ನು ಶೈಕ್ಷಣಿಕ ಭಾಗವಾಗಿ ಕಾಣಿಸಿಕೊಳ್ಳುವಂತೆ ಮಾಡಿತು. ಭಾರತದ ಜನಪದ ಸಾಹಿತ್ಯವು ಸಮೃದ್ಧವಾಗಿ ಬೆಳೆದು ಜನಮಾನಸವನ್ನು ತಲುಪಿದಂತೆಯೇ ಮಕ್ಕಳಿಗೂ ಅನೌಪಚಾರಿಕವಾಗಿ ಕತೆಗಳನ್ನು ಹೇಳುವ ಮೂಲಕ ಮೌಖಿಕ ಸ್ವರೂಪದಲ್ಲಿ ಹರಿದಾಡಿತ್ತು. ಮಕ್ಕಳ ಕತೆಗಳು ಎಂದು ಪ್ರತ್ಯೇಕವಾಗಿರದೆ ಅವು ದೊಡ್ಡವರದೇ ಆದ ಕತೆಗಳಾಗಿದ್ದು ಮಕ್ಕಳ ಮುಂದೆ ಇರಿಸುವಾಗ ಪರಿಷ್ಕರಿಸಲ್ಪಟ್ಟು ಕಾಣಿಸಿಕೊಳ್ಳುತ್ತಿದ್ದವು. ಇವು ಸಹ ಭಾರತದ ಪುರಾಣ, ಪುಣ್ಯಕತೆಗಳ, ಆದರ್ಶ ಪುರುಷರ ದಂತಕತೆಗಳಾಗಿ ಕಾಣಿಸಿಕೊಂಡವು. ರಾಮಾಯಣ, ಮಹಾಭಾರತ ಅವುಗಳ ಪಾತ್ರಗಳು ಜನರ ಬಾಯಿಯಲ್ಲಿ ಹರಿದಾಡುವಾಗ ಮಕ್ಕಳನ್ನು ತಲುಪಿ ಮಕ್ಕಳ ಕತೆಗಳಾಗಿ ಕಾಣಿಸಿಕೊಂಡು ಆರಂಭದಲ್ಲಿ ಮಕ್ಕಳಿಗೆ ಕತೆಗಳ ಕೊರತೆಯನ್ನು ನೀಗಿಸಿವೆ. ಭಾರತದಲ್ಲಿ 'ಅಜ್ಜಿಕತೆ' ಎಂಬ ಮೌಖಿಕ ಸ್ವರೂಪದ ಪರಂಪರೆಯ ಕತೆಗಳೆ ಮಕ್ಕಳಿಗಾಗಿ ಎಂದು ಕಾಣಿಸಿಕೊಂಡ ಮೊದಲ ಕತೆಗಳು ಎನ್ನಬಹುದು. ಆದರೆ ಇವು ಮಕ್ಕಳಿಗಾಗಿ ಕಂಡುಕೊಂಡ ರಚನೆಗಳಲ್ಲ. ಮಕ್ಕಳಿಗಾಗಿ ಹೇಳಲ್ಪಟ್ಟವು ಎನ್ನಬಹುದು. ಅಜ್ಜಿಯು ತಾನು ಬಿಡುವಾದ ಸಮಯದಲ್ಲಿ ವಿವಿಧ ಉದ್ದೇಶಗಳಿಗಾಗಿ ಮಕ್ಕಳನ್ನು ಮುಂದೆ ಕೂರಿಸಿಕೊಂಡು ತನಗೆ ತಿಳಿದ ಕತೆಯನ್ನು ತನ್ನದೇ ತಂತ್ರಗಾರಿಕೆ ಬಳಸಿ ಹೇಳುತ್ತಿದ್ದ ಕತೆಗಳವು. ಸಾಮಾನ್ಯವಾಗಿ ಜನಪದದ ಸರಕು ಅಜ್ಜಿಕತೆಯ ವಸ್ತುವಾಗಿರುತ್ತಿತ್ತು. ಇಲ್ಲಿ ಮಕ್ಕಳು ಪ್ರತ್ಯೇಕವಾಗಿ ಕಾಣಿಸಿಕೊಂಡರೇ ವಿನಹ ಅವರಿಗಾಗಿ ಕತೆಗಳು ಪ್ರತ್ಯೇಕವಾದುದನ್ನು ಕಾಣಲಿಲ್ಲ. ಸಮಾಜದಲ್ಲಿ ಕಾಣಿಸಿಕೊಳ್ಳುತ್ತಿದ್ದ ವಿವಿಧ ಕಲೆಗಳಾದ ಯಕ್ಷಗಾನ, ಬಯಲಾಟ, ನಾಟಕಗಳಲ್ಲಿ ಬರುವ ಕತೆಗಳು ದೊಡ್ಡವರಿಗಾಗಿ ಏರ್ಪಾಡಾಗುತ್ತಿದ್ದು ಮಕ್ಕಳು ಅವರೊಂದಿಗೆಯೇ ಇವುಗಳನ್ನು ಕಾಣುತ್ತಾ, ಗ್ರಹಿಸುವುದಿತ್ತು. ಅಜ್ಜಿ ಕತೆಗಳಿಂದಾಗಿ ಹಿರಿಯರಿಂದ ಮಕ್ಕಳನ್ನು ಪ್ರತ್ಯೇಕಿಸಿ ಕತೆ ಹೇಳುವ ರೂಢಿಯು ಆರಂಭವಾಗಿರುವುದನ್ನು ಕಾಣುತ್ತೇವೆ.

ಮಕ್ಕಳಿಗಾಗಿ ಕತೆಗಳನ್ನು ಪ್ರತ್ಯೇಕಿಸಿ ನೋಡುವ ರೂಢಿಯು ಭಾರತದಲ್ಲಿ ಇರಲಿಲ್ಲ. ಅದು ಇತ್ತೀಚಿನ ಕಲ್ಪನೆಯಾಗಿ ಕಾಣಿಸಿಕೊಂಡಿದೆ. ಪಾಶ್ಚಾತ್ಯ ಸಾಹಿತ್ಯದ ಪ್ರಭಾವವು ಭಾರತದ ಸಾಹಿತ್ಯದ ಮೇಲೆ ಪ್ರೇರಣೆಯನ್ನು ತಂದಿರುವಂತೆ ಅವರ ಮಕ್ಕಳ ಸಾಹಿತ್ಯದ ಪ್ರಭಾವವು ಸಹ ನಮ್ಮಲ್ಲಿನ ಮಕ್ಕಳ ಸಾಹಿತ್ಯದ ಗ್ರಹಿಕೆಯಲ್ಲಿ ಬದಲಾವಣೆ ಮಾಡಿಕೊಳ್ಳುವಂತೆ ಮಾಡಿತು. ಇದರಿಂದಾಗಿ ಭಾರತದ ಇತರ ಭಾಷೆಗಳಲ್ಲಿನ

ಮಕ್ಕಳ ಸಾಹಿತ್ಯವು ಹೊಸತನದ ಗಾಳಿಗೆ ಮೈಯೊಡ್ಡಿ ಬದಲಾವಣೆಗಳನ್ನು ಸ್ವೀಕರಿಸಿತು. ಹಾಗೇಯೆ ಹೊಸ ಓದಿನ ಹಂಬಲದಲ್ಲಿದ್ದ ಕನ್ನಡದ ಲೇಖಕರು ಸಹ ಹೊಸತನಗಳಿಗೆ ಸ್ಪಂದಿಸಿದರು. ಕನ್ನಡ ಸಾಹಿತ್ಯದಿಂದ ಕನ್ನಡ ಮಕ್ಕಳ ಸಾಹಿತ್ಯವು ಪ್ರತ್ಯೇಕವಾಗಿ ಕಾಣಿಸಿಕೊಳ್ಳುವ ಅಗತ್ಯಗಳನ್ನು ಮುಂದಿರಿಸಿಕೊಂಡು ನೋಡಿದಾಗ ಅದು ಅನಿವಾರ್ಯವೂ ಅಗತ್ಯವೂ ಆಗಿ ಕಾಣಿಸಿಕೊಂಡಿತು. ಕಥಾ ಸಾಹಿತ್ಯದ ಅಭಿರುಚಿಯು, ಗ್ರಹಿಕೆಯು ಹಿರಿಯರಲ್ಲಿ ಹೇಗೆ ಹೃದ್ಗತವಾಗಿದೆಯೋ ಹಾಗೆಯೆ ಮಕ್ಕಳಲ್ಲಿಯು ಇದೆ ಎಂದು ಭಾವಿಸಿದ ಕಾರಣ ಮಕ್ಕಳಿಗೆ ಅಗತ್ಯವಾದ ಕಥಾಸಾಹಿತ್ಯವು ಕಾಣಿಸಿಕೊಂಡಿತು. ಸಾಹಿತ್ಯದಲ್ಲಿಯು ಅದು ಭಿನ್ನತೆಯನ್ನು ಅನುಭವಿಸುವ ಅಗತ್ಯವನ್ನು ನಾವು ಕಾಣುತ್ತೇವೆ. ಹಿರಿಯ ತಲೆಮಾರಿನ ಲೇಖಕರಿಗೆ ಇದರ ಅರಿವು ಇದ್ದುದ್ದರಿಂದಲೇ ಕನ್ನಡದಲ್ಲಿಯೂ ಮಕ್ಕಳ ಸಾಹಿತ್ಯದ ಕೃಷಿಯಾಗಿದೆ. ಆದರೆ ಅದು ಅವಶ್ಯವಾದಷ್ಟು ಬೆಳಸನ್ನು ತಂದಿಲ್ಲ ಎನ್ನಬಹುದಾದರು ಪ್ರಯೋಗಗಳಂತೂ ನಡೆದಿವೆ. ಪಾಶ್ಚಾತ್ಯರಲ್ಲಿ ಇಂತಹ ಸಾಧ್ಯತೆಗಳು ಕಾಣಿಸಿಕೊಂಡ ಮೇಲೆ ಅವರ ಪ್ರಭಾವವು ನಮ್ಮಲ್ಲಿಯು ಉಂಟಾಗಿ ಕನ್ನಡ ಮಕ್ಕಳ ಸಾಹಿತ್ಯ ವಿವಿಧ ಶಾಖೆಗಳನ್ನು ತೆರದುಕೊಂಡಿದೆ. ಮಕ್ಕಳ ಕತೆಗಳು ಶಿಕ್ಷಣದ ಭಾಗವಾಗಿ ಕಾಣಿಸಿಕೊಂಡು ಎಲ್ಲರನ್ನು ಉಚಿತ ಸ್ವರೂಪದಲ್ಲಿ ತಲುಪಿದಾಗಲೂ ಭಾರತದ ಮಕ್ಕಳ ಕತೆಗಳು ಮಾತ್ರ ದೇಸಿಯತೆಯ ಹೆಸರಿನಲ್ಲಿ, ಸಂಸ್ಕೃತಿಯ ಪೋಷಣೆ ಮಾಡುವ ಸಲುವಾಗಿ ಪರಂಪರೆಯ ಕತೆಗಳನ್ನೇ ಅವಲಂಬಿಸಿದವು. ಮಕ್ಕಳ ಶಿಕ್ಷಣ ಮತ್ತು ಕತೆಗಳು ನೀತಿ ಹೇಳುವ ತಂತ್ರಗಳಾಗಿ ಬದಲಾದವು. ಸಂಪ್ರದಾಯದ ಚೌಕಟ್ಟನ್ನು ಮೀರಿ ಬೆಳೆಯದೆ ಉಳಿಯುವಂತಾದವು. ಶಿಕ್ಷಣವು ಸಹ ಆತ್ಮ ಸಾಕ್ಷಾತ್ಕಾರ, ಮುಕ್ತಿ, ಆದರ್ಶಪ್ರಜೆಯ ನಿರ್ಮಾಣ ಮುಂತಾದ ಗುರಿಗಳನ್ನು ಹೊಂದಿತ್ತು. ಕತೆಗಳು ಇಂತಹ ನೀತಿಗಳನ್ನು ತಿಳಿಸುವ ಸಾಧನಗಳಾದವು. ಇದಕ್ಕಾಗಿ ಪಂಚತಂತ್ರದಂತಹ ಕತೆಗಳು, ಈಸೋಪನ ನೀತಿಕತೆಗಳು ನೀತಿ ಚಿಂತಾಮಣಿ, ನೀತಿಯಾಧರಿತ ಕತೆಗಳುಳ್ಳ ಪಠ್ಯವಸ್ತುಗಳೇ ರಾರಾಜಿಸಿದವು. ಪಂಜೆ ಮಂಗೇಶ ರಾಯರಂತಹ ಹಿರಿಯ ಲೇಖಕರು ಈ ಚೌಕಟ್ಟಿನಿಂದ ಸರಿದು ಆಚೆಗೆ ಮಕ್ಕಳ ಕತೆಗಳನ್ನು ನಿಲ್ಲಿಸುವ ಪ್ರಯೋಗಗಳನ್ನು ಮಾಡಿ ಹೊಸತನಕ್ಕೆ ತೆರೆದುಕೊಳ್ಳುವ ಲಕ್ಷಣಗಳನ್ನು ಪ್ರಕಟಿಸಿದರು. ನವೋದಯದಲ್ಲಿ ಹಿರಿಯರ ಸಾಹಿತ್ಯದಲ್ಲಾದ ಬದಲಾವಣೆಗಳು ಮಕ್ಕಳ ಕತೆಗಳಲ್ಲಿಯು ಕಾಣತೊಡಗಿದವು. ಪ್ರಾಣಿ ಪಕ್ಷಿಗಳ ಲೋಕವು ಮಾನವನ ಬದುಕನ್ನು ಪ್ರೇರೇಪಿಸುವ ತಂತ್ರಗಾರಿಕೆಯು ಹೊಸತಲೆಮಾರಿನ ಲೇಖಕರ ಬರೆವಣಿಗೆಯಲ್ಲಿ ಬಂದು ಮಕ್ಕಳನ್ನು ಆಕರ್ಷಿಸಿತು. ನಂತರ ಮಕ್ಕಳ ಬೇಕು ಬೇಡಗಳ ಬಗೆಗೆ ಚಿಂತನೆಗಳುಂಟಾದವು. ಪಾಶ್ಚಾತ್ಯರಂತೆ ನಮ್ಮಲ್ಲಿಯೂ ಫ್ಯಾಂಟಸಿ ಕಾಲೂರಿತು. ಭಾರತದ ಜನಪದ ಕತೆಗಳಲ್ಲಿ ಇದು ಈಗಾಗಲೇ ಇದ್ದಾಗಿಯೂ ಮಕ್ಕಳಿಗಾಗಿ ಕಾಣಿಸಿಕೊಂಡಿರಲಿಲ್ಲ. ಇಲ್ಲಿ ಅವರಿಗಾಗಿಯೆ ಕಂಡುಕೊಂಡ ಅಗತ್ಯದಿಂದಾಗಿ ಫ್ಯಾಂಟಸಿ ದಕ್ಕಿತು. ಅವಾಸ್ತವದ ಕಲ್ಪನೆಗಳಿಂದ ಮಕ್ಕಳಲ್ಲಿ ಕುತೂಹಲಗಳು ಮೂಡಿದವು. ಅವರನ್ನು ಭಾವಿ ಸಂಶೋಧಕರನ್ನಾಗಿ ಕಾಣುವ ಆಶಯಗಳು ಗರಿಗೆದರಿದಂತೆ ವಾಸ್ತವದ ಸಮಸ್ಯೆಗಳಿಗೂ ಸಾಹಿತ್ಯವು ತುಡಿದು ಮಕ್ಕಳಿಗೆ ಉಂಟಾಗುವ ತೊಂದರೆಗಳನ್ನು ಅವರೇ ನಿವಾರಿಸಿಕೊಳ್ಳುವಂತಾಗುವ ಸಾಹಿತ್ಯದ ಅಗತ್ಯವನ್ನು ಲೇಖಕರು ಕಂಡುಕೊಂಡು ಸಾಮಾಜಿಕ ಸಮಸ್ಯೆಗಳಾದ ಹಸಿವು, ಬಡತನ ಹಾಗೂ ಮತ್ತೊಂದೆಡೆ ಆನಂದದ ಸಂಗತಿಗಳಿಂದ ಕೂಡಿದ ಕತೆಗಳು

ಮೂಡಿಬಂದವು. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯದ ಆಶಯಗಳು ಹಿರಿಯರ ಸಾಹಿತ್ಯದಲ್ಲಿ ತೆರೆದುಕೊಂಡಂತೆ ಮಕ್ಕಳ ಕತೆಯ ವಸ್ತುಗಳು ವಿವಿಧ ತೆರನಾಗಿ ವಿಸ್ತಾರಗೊಂಡವು. ಕಾಮಿಕ್ಸ್‌ಗಳ ಸ್ವರೂಪವೂ ಮಕ್ಕಳ ಕತೆಯನ್ನು ಹೇಳುವಂತಾಯಿತು. ಚಿತ್ರಕತೆ, ಸಂಭಾಷಣೆ, ವ್ಯಂಗ್ಯ ನಿರೂಪಣೆಯಿಂದ ಹೊಸತನವು ಕಾಲಿರಿಸಿ ಮಕ್ಕಳ ಕತೆಯು ಶೋಭಾಯಮಾನವಾದ ರೂಪವನ್ನು ತಳೆಯಿತು. ಕತೆ, ನೀಳ್ಗತೆ, ಕಾದಂಬರಿ, ಮಿನಿ ಕಾದಂಬರಿ ಎಂಬ ಬಗೆಬಗೆಯ ವಿಧಗಳಲ್ಲಿ ತನ್ನ ಅಸ್ಮಿತೆಯನ್ನು ಮಕ್ಕಳ ಕತೆಗಳು ಕಂಡುಕೊಂಡು ನವ ಪ್ರಯೋಗಗಳಿಂದ ಮಕ್ಕಳನ್ನು ರಂಜಿಸುವ ಸಾಧನವಾಗಿ ಬೆಳೆಯಿತು. ಈ ಎಲ್ಲ ಬದಲಾವಣೆಗಳಿಗೆ ಬೆನ್ನೆಲುಬಾಗಿ ನಿಂತ ಮಾಧ್ಯಮಗಳು, ಪತ್ರಿಕೆಗಳು, ಮಾರುಕಟ್ಟೆಯ ಸಾಧ್ಯತೆಗಳು ಹುಟ್ಟಿಕೊಂಡು ಇನ್ನಷ್ಟು ಚೈತನ್ಯವನ್ನು ಕನ್ನಡದ ಮಕ್ಕಳ ಕತೆಗಳು ಪಡೆದುಕೊಂಡು ವಿದೇಶದ ಮಕ್ಕಳನ್ನು ತಲುಪುವಂತಾದವು. ಪ್ರಬುದ್ಧರ ಸಾಹಿತ್ಯದಂತೆ ಇಲ್ಲಿಯೂ ಅಧ್ಯಯನ ಮತ್ತು ವಿಮರ್ಶೆಗಳು ನಡೆದವು. ಹೇರಳವಾಗಿ ಆಗದಿದ್ದರು ವಿರಳವಾಗಿಯಾದರೂ ಈ ಶಾಖೆಗಳು ತೆರದುಕೊಂಡಿದ್ದು ಮಕ್ಕಳ ಕತೆಗಳ ಮಹತ್ತ್ವವನ್ನು ಸಾದರಪಡಿಸಲು ನೆರವಾಯಿತು. ಗಂಭೀರವಾದ ಚರ್ಚೆ, ಸಂವಾದಗಳು ಸಂಘಟಿತವಾಗಿ ಕಾಣಿಸಿಕೊಳ್ಳದಿದ್ದರೂ ಈ ವಿಷಯದ ಬಗೆಗೆ ಅಲ್ಲಲ್ಲಿ ಪ್ರತಿಭಾವಂತ ಲೇಖಕರು ಮುನ್ನುಡಿ, ಬೆನ್ನುಡಿಯ ರೂಪದಲ್ಲಿ ಮಕ್ಕಳ ಕತೆಗಳ ಮೂಲಕ ಮಕ್ಕಳ ಸಾಹಿತ್ಯದ ಅಗತ್ಯತೆಯನ್ನು ಕಾಣುವ ಹಂಬಲದ ಮಾತುಗಳನ್ನು ಆಡಿದರು. ಶಿಕ್ಷಕ ಸಾಹಿತಿಗಳು ಮಕ್ಕಳ ಸಾಹಿತ್ಯದ ಬೆಳವಣಿಗೆಗಾಗಿ ಮಾಡಿದ ಪ್ರಯತ್ನಗಳು ಮತ್ತು ಇಂದಿನ ತಲೆಮಾರಿನ ಲೇಖಕರ ಪ್ರಯೋಗಳು ಎಲ್ಲವು ಮಕ್ಕಳ ಕತೆಗಳ ನೆಲೆಗೆ ಹೇಗೆ ಸಹಕಾರಿಯಾಗಿವೆ ಎಂಬ ವಿಷಗಳನ್ನು ಅಧ್ಯಯನದ ಹಿನ್ನೆಯಲ್ಲಿ ಇಲ್ಲಿ ನೋಡಿದೆ. ಈ ಕ್ಷೇತ್ರದಲ್ಲಿ ಇದುವರೆಗೆ ನಡೆದ ಮಹತ್ತ್ವದ ಸಂಶೋಧನೆಗಳು ಏನನ್ನು ತಿಳಿಸಲು ಇಚ್ಛಿಸಿವೆ ಎಂಬುದನ್ನು ಈ ಹಿನ್ನೆಯಲ್ಲಿ ಗಮನಿಸಲಾಗಿದೆ. ಇಲ್ಲಿ ಆಧುನಿಕ ತಂತ್ರಜ್ಞಾನಗಳಾದ ಸಮೂಹ ಮಾಧ್ಯಮ, ಪತ್ರಿಕೆಗಳು, ಗಣಕಯಂತ್ರಗಳ ನೆರವು, ಪ್ರಭಾವ, ಪ್ರೇರಣೆ, ದೇಶದ ಆಚೀಚಿನ ವಿದ್ಯಮಾನಗಳಲ್ಲಿ ನಡೆದ ಪ್ರಯೋಗಗಳ ಪ್ರೇರಣೆ, ಕನ್ನಡದ ಮಕ್ಕಳ ಕತೆಗಳಿಗೆ ಆಧಾರವಾಗಿ ಪೋಷಿಸಿದ ವಿವಿಧ ಆಯಾಮಗಳನ್ನು ಪರಿಗಣಿಸುವ ಮಹತ್ತ್ವದ ನೋಟವನ್ನು ಕಾಣುವ ಆಶಯಗಳಿವೆ

## ೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ತ್ವ

### ಉದ್ದೇಶ

ಮಕ್ಕಳಿಗಾಗಿ ರಚಿತವಾಗಿರುವ ಸಾಹಿತ್ಯದಲ್ಲಿ ಕತೆಗಳ ಪಾತ್ರವೇ ದೊಡ್ಡದು. ಕನ್ನಡದಲ್ಲಿ ನವೋದಯದ ಸಮಯದಲ್ಲಿ ಪ್ರಬುದ್ಧರ ಗದ್ಯಸಾಹಿತ್ಯವು ಹೊಸದಾರಿಯನ್ನು ಕಂಡುಕೊಂಡ ಹಾಗೆಯೇ ಮಕ್ಕಳ ಗದ್ಯಸಾಹಿತ್ಯವು ತನ್ನದೆಯಾದ ಹುಟ್ಟನ್ನು ಪಡೆಯಿತು. ಇದಕ್ಕಿಂತ ಮೊದಲು ಕತೆಗಳು ಕಾಣಿಸಿಕೊಂಡಿರುವುದು ಗ್ರಾಮೀಣರ ಜನಪದದಲ್ಲಿ ಮೌಖಿಕವಾಗಿ ಮಾತ್ರ. ಜನಪದದಲ್ಲಿ ಕತೆಯು ಮೌಖಿಕ ಸಂಪ್ರದಾಯದಲ್ಲಿ ಇದ್ದುದರಿಂದ ಸ್ಪಷ್ಟವಾಗಿ ತನ್ನ ಆಕಾರವನ್ನು ಪಡೆದಿರಲಿಲ್ಲ, ನಿರ್ದಿಷ್ಟ ಸ್ವರೂಪವನ್ನೂ ಪಡೆದಿರಲಿಲ್ಲ. ಭಾರತೀಯರ ಸಾಂಸ್ಕೃತಿಕ ಪರಿಸರದಲ್ಲಿ ಒಟ್ಟಾರೆಯಾಗಿ ಹರಿದು ಬಂದಿರುವ ಕಥಾ

ಸಾಹಿತ್ಯದ ವಾತಾವರಣದಲ್ಲಿ ಕನ್ನಡದ ಮಕ್ಕಳಿಗಾಗಿ ಇರುವ ಕಥಾ ಸಾಹಿತ್ಯದ ಹಿನ್ನೆಲೆಯನ್ನು ಗಮನಿಸಿದರೆ ಕನ್ನಡದಲ್ಲಿ ತೀರ ಕಡಿಮೆ ಹಾಗು ವಿರಳವೆನಿಸುತ್ತದೆ.

೧ ಈ ಪ್ರಬಂಧದ ಉದ್ದೇಶವು ಪಾರಂಪರಿಕ ಹಾಗೂ ಜಾನಪದದ ಹಿನ್ನೆಲೆಯನ್ನು ಹೊಂದಿರುವ ಮಕ್ಕಳ ಕಥಾ ಸಾಹಿತ್ಯವು ನವೋದಯದ ಸಮಯದಲ್ಲಿ, ಬರೆವಣಿಗೆಯ ಹೊಸ ಗದ್ಯಪ್ರಕಾರವು ಸೃಷ್ಟಿಯಾದಾಗಿನಿಂದ ರೂಪಗೊಳ್ಳುತ್ತ ಬಂದಿರುವುದನ್ನು ಅಧ್ಯಯನ ಮಾಡುವುದಾಗಿದೆ.

೨ ಮಕ್ಕಳಿಗಾಗಿ ಇರುವ ಕಥಾ ಸಾಹಿತ್ಯವನ್ನು ಸಂಪೂರ್ಣವಾಗಿ ಅವಲೋಕಿಸುವುದರ ಜೊತೆಗೆ, ಪ್ರಬುದ್ಧರ ಗದ್ಯ ಸಾಹಿತ್ಯದ ತುಲನೆಯಲ್ಲಿ ಮಕ್ಕಳಿಗಾಗಿ ಇರುವ ಕಥಾ ಸಾಹಿತ್ಯ ಹೇಗೆಲ್ಲ ಬೆಳೆದು ಬಂದಿತು, ಏನೇನೆಲ್ಲ ಆಕಾರ ಪಡೆಯಿತು, ಯಾವೆಲ್ಲ ಪ್ರಭಾವಗಳನ್ನು ಅರಗಿಸಿಕೊಂಡಿತು, ಅಗತ್ಯವಾದ ವಾತಾವರಣದ ಕೊರತೆಯಿದ್ದಾಗಲೂ ಅನನುಕೂಲಗಳನ್ನು ಹೇಗೆಲ್ಲ ಅನುಭವಿಸಿತು, ಕಥಾಸಾಹಿತ್ಯ ಸಮೃದ್ಧಗೊಳ್ಳುವಲ್ಲಿ ಅದರ ಪರಿಣಾಮಗಳು ಹೇಗೆಲ್ಲ ಆದವು ಎಂಬುದನ್ನು ಪ್ರಬಂಧ ಕೂಲಂಕಷವಾಗಿ ನೋಡಿದೆ.

೩ ಮಕ್ಕಳಿಗಾಗಿನ ಕಥಾ ಸಾಹಿತ್ಯ ಯಾವ ಯಾವ ಬಗೆಯ ಪ್ರಕಾರಗಳಲ್ಲಿ ತನ್ನ ಸ್ವರೂಪವನ್ನು ಕಂಡುಕೊಂಡಿತು, ಆ ಪ್ರಕಾರಗಳ ಮಹತ್ತ್ವವನ್ನು, ಅವುಗಳಲ್ಲಿ ಉಂಟಾದ ಪ್ರಯೋಗಾತ್ಮಕ ಚಟುವಟಿಕೆಗಳನ್ನು ಈ ಅಧ್ಯಯನವು ಒಳಗೊಂಡಿದೆ.

೪ ಪ್ರಮುಖ ಲೇಖಕರು ಯಾರೆಲ್ಲ ಈ ರಂಗದಲ್ಲಿ ಕೃಷಿ ಮಾಡಿದರು, ಈ ಕಥಾ ಸಾಹಿತ್ಯದ ಅಧ್ಯಯನ ಈವರೆಗೆ ಎಷ್ಟೆಲ್ಲ ಸಾಧ್ಯವಾಗಿದೆ ಮುಂತಾದ ಒಂದು ಸಮಗ್ರ ಚಿತ್ರಣವನ್ನು ಈ ಪ್ರಬಂಧದಲ್ಲಿ ನೋಡಲು ಉದ್ದೇಶಿಸಲಾಗಿದೆ.

೫ ಮುದ್ರಣ ವ್ಯವಸ್ಥೆ ಬಂದಾಗ ಕನ್ನಡದ ಕತೆಗಳ ಮೇಲೆ ಉಂಟಾದ ಪರಿಣಾಮಗಳು, ಮಕ್ಕಳಿಗಾಗಿ ಶಾಲಾವ್ಯವಸ್ಥೆ ಹೊಸದಾಗಿ ಕಾಣಿಸಿಕೊಂಡ ಮೇಲೆ ಕಂಡುಬಂದ ಬದಲಾವಣೆಗಳ ಮೇಲೆ ಪ್ರಬಂಧವು ಬೆಳಕು ಚೆಲ್ಲಲಿದೆ.

೬ ವಾಕ್ ಪರಂಪರೆಯಲ್ಲಿದ್ದ ಕಥಾ ಸಾಹಿತ್ಯ ಹೇಗೆ ಹೊಸತನಕೆ ಹಂಬಲಿಸಿತು, ಅದು ಮೊದಲಿಗಿಂತ ಮಕ್ಕಳಿಗೆ ಹೇಗೆ ನೆರವಾಯಿತು, ಹೊಸ ರೂಪವನ್ನು ಪಡೆಯುವಲ್ಲಿ ಏನೇನೆಲ್ಲ ಬದಲಾವಣೆಗಳನ್ನು ಅನುಭವಿಸಿತು, ಯಾವ ಮಿತಿಗಳನ್ನು ಎದುರಿಸಬೇಕಾಯಿತು, ಸಾಧ್ಯತೆಗಳನ್ನು ಹೇಗೆ ಕಂಡುಕೊಂಡಿತು, ಬಹು ಮುಖ್ಯವಾಗಿ ಶಾಲಾ ಪಠ್ಯವಾಗಿ ಈ ಸಾಹಿತ್ಯ ಕಾಣಿಸಿಕೊಂಡುದರಿಂದ ತನ್ನ ಸ್ವರೂಪವನ್ನು ಹೇಗೆಲ್ಲ ಕಾಣಿಸಿಕೊಂಡಿತು ಎಂಬೆಲ್ಲಾ ಅಂಶಗಳಿಗೆ ಈ ಅಧ್ಯಯನವು ಕಾರಣಗಳನ್ನು ಹುಡುಕುವ ಪ್ರಯತ್ನವನ್ನು ಮಾಡಿದೆ.

೭ ಮಕ್ಕಳ ವಿಭಿನ್ನವಾದ ವಯೋಮಿತಿಗಳನ್ನು ಅನುಸರಿಸುತ್ತಾ, ಅದಕ್ಕೆ ಪೂರಕವಾಗಿ ಹೇಗೆ ಸಜ್ಜುಗೊಳ್ಳುತ್ತಾ ಬಂದಿತು ಎನ್ನುವುದನ್ನು ಇಲ್ಲಿ ಅಗತ್ಯವಾಗಿ ಗಮನಿಸಲಾಗಿದೆ.

೮ ವಿಭಿನ್ನವಾದ ಹಿನ್ನೆಲೆಯ ಲೇಖಕರ ಬರವಣಿಗೆಗಳು ಈ ಶೈಕ್ಷಣಿಕ ವಾತಾವರಣದಲ್ಲಿ ತಮ್ಮ ಮನೋಧರ್ಮಗಳನ್ನು ಹೇಗೆಲ್ಲ ಕತೆಗಳ ಮೂಲಕ ತೋರ್ಪಡಿಸಿಕೊಂಡವು ಎನ್ನುವುದು ಇಲ್ಲಿ ಇನ್ನೊಂದು ಪ್ರಮುಖವಾದ ಅಂಶವಾಗಿ ನೋಡಿದೆ.

೯ ಶಾಲಾ ಪಠ್ಯದ ಅಂಗವಾಗಿ ಕಾಣಿಸಿಕೊಂಡ ಕಥಾ ಸಾಹಿತ್ಯ ಅದರಾಚೆಗೂ ತುಡಿಯತೊಡಗಿತು. ಇದೆ ಕಾರಣದಿಂದಾಗಿ ಅನೇಕ ಬಗೆಗಳಲ್ಲಿ ಸ್ವಾತಂತ್ರ್ಯವನ್ನು ಅನುಭವಿಸತೊಡಗಿತು. ಈ ಸ್ವಾತಂತ್ರ್ಯದ ಪರಿಣಾಮದಿಂದಾದ ಉಂಟಾದ ಕತೆಯ ಹೊಸತನಗಳನ್ನು ಇಲ್ಲಿ ಹೇಳಲಾಗಿದೆ. ಇಂತಹ ಸಾಧ್ಯತೆಗಳು ಕಾಣಿಸಿಕೊಂಡಾಗ ಈ ಕತೆಗಳನ್ನು ರಚಿಸಲು ತುಡಿದ ಕತೆಗಾರರು ಏನೆಲ್ಲ ಹೊಸತನಕೆ ಹಂಬಲಿಸಿದರು ಎಂದು ನೋಡಲಾಗಿದೆ.

೧೦ ಮಕ್ಕಳು ತಮ್ಮ ಸುತ್ತಲಿನ ಪರಿಸರದಲ್ಲಿ ನಡೆಯುವ ಸಂಗತಿಗಳಿಗೆ, ಲೇಖಕರು ಮಕ್ಕಳಿಗಾಗಿ ಎಷ್ಟರ ಮಟ್ಟಿಗೆ ಸ್ಪಂದಿಸಿದರು. ಏನೇನೆಲ್ಲ ಅಗತ್ಯಗಳನ್ನು ಕಂಡುಕೊಂಡರು ಎನ್ನುವುದನ್ನು ಅಗತ್ಯವೆಂದು ಪರಿಗಣಿಸಲಾಗಿದೆ. ಹೀಗೆ ತೊಡಗಿಸಿಕೊಂಡ ಬರಹಗಾರರು, ಶಿಕ್ಷಕರು ಹಾಗೆಯೇ ಶಾಲಾ ವ್ಯವಸ್ಥೆಯಾಚೆಯಿಂದ ಬಂದವರು, ಇವರು ಹೊಸತನಕೆ ಹಂಬಲಿಸುವಲ್ಲಿ ಪ್ರೇರಣೆಗಳನ್ನು ಎಲ್ಲೆಲ್ಲಿಂದ ಪಡೆದುಕೊಂಡುರು, ಓದಿನ ವಿಸ್ತಾರವನ್ನು ಹೇಗೆಲ್ಲ ಬೆಳೆಸಿಕೊಂಡರು ಮುಂತಾದ ಹಿನ್ನೆಲೆಯನ್ನು ಅಗತ್ಯವಾಗಿ ಅಧ್ಯಯನಕ್ಕೆ ಒಳಪಡಿಸಿ ನೋಡಲಾಗಿದೆ.

೧೧ ಮಕ್ಕಳ ಸಾಹಿತ್ಯಕ್ಕೆ ಒಟ್ಟಾರೆಯಾಗಿ ಪಾಶ್ಚ್ಯಾತ್ಯರ ಪ್ರೇರಣೆ ದೊಡ್ಡ ಪ್ರಮಾಣದಲ್ಲಾಗಿದೆ ಎಂಬುದು ನವೋದಯದ ಸಂದರ್ಭದಲ್ಲಿ ಅವರ ಪ್ರಭಾವ, ಪ್ರೇರಣೆಗಳನ್ನು ಇಂಗ್ಲಿಷಿನಿಂದ ಪಡೆದುಕೊಂಡಿದ್ದ ಸಂದರ್ಭ, ಇಂಗ್ಲಿಷಿನಲ್ಲಿ ಮಕ್ಕಳ ಸಾಹಿತ್ಯ ತನ್ನತನವನ್ನು ಸಾಕಷ್ಟು ಕಂಡುಕೊಂಡ ವಿಧಾನ, ತನ್ನದೇ ಆದ ದಾರಿಯನ್ನು ಕಂಡುಕೊಂಡು ತನ್ನ ಅಸ್ಮಿತೆಯನ್ನು ತೋರಿಸಿಕೊಂಡ ಬಗೆ, ಅಲ್ಲಿ ಸಾಕಷ್ಟು ಪ್ರಯೋಗಗಳು ನಡೆದ ರೀತಿಯನ್ನು ನೋಡಿದೆ. ನಮ್ಮವರ ಮುಂದೆ ಇವೆಲ್ಲವು ಸವಾಲುಗಳಾಗಿ ಕಾಣಿಸಿಕೊಂಡು ಬಂದವು. ಅವರ ಕೃತಿಗಳನ್ನು ಎಷ್ಟರ ಮಟ್ಟಿಗೆ ಅವಲೋಕಿಸಲಾಯಿತು, ಅವುಗಳಿಂದ ಎಷ್ಟರ ಮಟ್ಟಿಗೆ ಪ್ರೇರಣೆಗಳನ್ನು ಪಡೆಯಲಾಯಿತು ಎನ್ನುವುದನ್ನು ಅಧ್ಯಯನದ ಪ್ರಮುಖವಾದ ಅಂಶವೆಂದು ನೋಡಿದೆ.

೧೨ ಇಲ್ಲಿಯ ವರೆಗೆ ಹರಿದು ಬಂದಿರುವ ಕಥಾ ಸಾಹಿತ್ಯವು ತನ್ನನ್ನು ರೂಪಿಸಿಕೊಳ್ಳುವಲ್ಲಿ ಏನೇನೆಲ್ಲ ಹೊಸತನಕ್ಕಾಗಿ ತುಡಿದಿದೆ, ತನ್ನ ವೈವಿಧ್ಯವನ್ನು ಹೇಗೆಲ್ಲ ಸಾಧ್ಯ ಮಾಡಿಕೊಂಡಿದೆ, ಪ್ರಬುದ್ಧರ ಕಥಾ ಸಾಹಿತ್ಯದಾಚೆ ತನ್ನದೇ ಆದ ಅಸ್ಮಿತೆಯನ್ನು ಹೇಗೆಲ್ಲ ತೋರಿಸಿಕೊಂಡಿದೆ ಎನ್ನುವುದನ್ನು ಚರ್ಚಿಸುವುದು ಅಧ್ಯಯನದ ಗುರಿಯಾಗಿದೆ.

## ಮಹತ್ತ್ವ

ಮಕ್ಕಳ ಕತೆಗಳ ಕುರಿತು ಅಧ್ಯಯನಗಳು ನಡೆಯದಿರುವುದು ಕನ್ನಡ ಮಕ್ಕಳ ಸಾಹಿತ್ಯದ ಬೆಳವಣಿಗೆಗೆ ತೊಡಕಾಗಿರುವುದರಿಂದ ಇಂತಹ ಅಧ್ಯಯನಗಳು ಅಗತ್ಯವಾಗಿ ನಡೆಯಬೇಕಿದೆ. ಪ್ರಬುದ್ಧರ ಸಾಹಿತ್ಯದೊಡನೆ ಮಕ್ಕಳ ಸಾಹಿತ್ಯವನ್ನು ಹೋಲಿಕೆ ಮಾಡಿ ನೋಡುವ ಮನೋಭಾವನೆಗಳಿಂದಾಗಿ ಅದು ನಿರ್ಲಕ್ಷ್ಯವನ್ನು ಅನುಭವಿಸಿದೆ. ಗಂಭೀರವಾಗಿ ಮಕ್ಕಳ ಸಾಹಿತ್ಯವನ್ನು ಪರಿಗಣಿಸುವ ಸಲುವಾಗಿ ಮಕ್ಕಳ ಸಾಹಿತ್ಯದ ಪ್ರಮುಖ ಶಾಖೆಗಳು, ಅವುಗಳಿಂದಾಗುವ ಪ್ರಯೋಜನಗಳನ್ನು ಹೊರತರುವ ಅಗತ್ಯವಿದೆ. ಮಕ್ಕಳ ಸಾಹಿತ್ಯವು ಮಗುವಿನ ವಯಸ್ಸಿಗನುಗುಣವಾಗಿ ನಿರ್ಮಾಣಗೊಂಡು ಮಕ್ಕಳಲ್ಲಿ ಚಿಂತನಾ, ಕಲ್ಪನಾ, ಮುಂದಾಲೋಚನ ವಿಧಾನಗಳನ್ನು ಸ್ವತಃ ರೂಢಿಸಿಕೊಳ್ಳಲು ನೆರವಾಗುತ್ತದೆ. ಆದುದರಿಂದ ಸಮಾಜದಲ್ಲಿ ಜೀವಿಸುವ ಮಗುವಿಗೆ ಬೌದ್ಧಿಕ ವಿಕಾಸಕ್ಕೆ ಸಹಕಾರಿಯಾಗುವ ಅಗತ್ಯ ಮಾರ್ಗದರ್ಶನವನ್ನು ಇದು ನೀಡುವುದರಿಂದ ಇದರ ಮಹತ್ತ್ವವನ್ನು ಅಲ್ಲಗಳೆಯಲಾಗುವುದಿಲ್ಲ. ಒಂದು ದೇಶದ ಜನಸಂಖ್ಯೆಯ ಬಹುಪಾಲು ಮಕ್ಕಳಿಂದ ಕೂಡಿರುವುದರಿಂದ ಅವರನ್ನು ಸರಿಯಾದ ದಿಕ್ಕಿಗೆ ಕೊಂಡೊಯ್ಯುವ ಸಾಮರ್ಥ್ಯವನ್ನು ಸಾಹಿತ್ಯದ ಮೂಲಕ ಕಟ್ಟಿಕೊಡುವಲ್ಲಿ ಮಕ್ಕಳ ಸಾಹಿತ್ಯದ ಮಹತ್ತ್ವ ಪ್ರಧಾನವಾದುದು. ಭಾರತೀಯರ ಇತರ ಭಾಷೆಗಳಲ್ಲಿ ಮಕ್ಕಳ ಸಾಹಿತ್ಯವನ್ನು ನೋಡುವ, ಕತೆಗಳಿಗೆ ನೀಡುವ ಮನ್ನಣೆಯನ್ನು ಗಮನಿಸಿ ಕನ್ನಡದ ಮಕ್ಕಳ ಸಾಹಿತ್ಯವು ಅಗತ್ಯವಾದ ಬದಲಾವಣೆಗಳನ್ನು ಕಂಡುಕೊಳ್ಳಲು ಇಂತಹ ಅಧ್ಯಯನಗಳು ಮಹತ್ತ್ವವೆನಿಸುತ್ತವೆ. ಹೊಸಗಾಲದಲ್ಲಿ ಪ್ರಬುದ್ಧರ ಸಾಹಿತ್ಯವು ಪಡೆಯುವ ಅಪೇಕ್ಷಿತ ತಿರುವುಗಳು ಮಕ್ಕಳ ಸಾಹಿತ್ಯವನ್ನು ಪ್ರೇರೇಪಿಸುವುದರಿಂದ ಅಂತಹ ಬದಲಾವಣೆಗಳ ಮಹತ್ತ್ವವನ್ನು ಕೂಲಂಕುಷವಾಗಿ ನೋಡುವ ಅಗತ್ಯವಿದೆ. ಮಕ್ಕಳ ಕತೆಗಳು ತೆರೆದುಕೊಳ್ಳುತ್ತಿರುವ ಹೊಸ ಬಗೆಯ ಸ್ವರೂಪಗಳಿಗೆ ಸ್ಪಂದನೆ ನೀಡುವ ಅಂಶಗಳನ್ನು ತಿಳಿಯಲು ಸಹಕಾರಿಯಾಗಿದೆ. ಪಾಶ್ಚಾತ್ಯರ ಮಕ್ಕಳ ಸಾಹಿತ್ಯದಲ್ಲಿ ನಡೆದ, ನಡೆಯುತ್ತಿರುವ ಪ್ರಯೋಗಗಳಿಗೂ ಕನ್ನಡ ಮಕ್ಕಳ ಸಾಹಿತ್ಯದ ಸ್ಪಂದನೆಯನ್ನು ಮತ್ತು ಸ್ವೀಕರಣೆಯನ್ನು ಅಗತ್ಯವಾಗಿ ತಿಳಿಯಲು ಇಂತಹ ಅಧ್ಯಯನಗಳು ಮಹತ್ತ್ವವೆನಿಸುತ್ತವೆ. ವಿಶ್ವವಿದ್ಯಾಲಯಗಳು, ಸರ್ಕಾರದ ಸಹಕಾರ, ಪತ್ರಿಕೆ, ಮಾಧ್ಯಮಗಳ ವಾತಾವರಣದ ನಿರ್ಮಾಣವು ಹೇಗೆಲ್ಲ ಪ್ರೇರೇಪಣೆಯನ್ನು ಒದಗಿಸಿದೆ ಎಂಬುದನ್ನು ವಿವರವಾಗಿ ಅಭ್ಯಸಿಸಲು ಅಗತ್ಯವಾಗಿ ಇಂತಹ ಕಾರ್ಯಗಳು ನಡೆಯಬೇಕಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ, ಆಕರಗಳು

### ವಿಷಯ ವ್ಯಾಪ್ತಿ

ನವೋದಯದ ಸಮಯದಲ್ಲಿ ಕನ್ನಡದಲ್ಲಿ ಮುದ್ರಣ ವ್ಯವಸ್ಥೆ ಬಂದಾಗ, ಶಾಲಾ ವ್ಯವಸ್ಥೆಯು ಹೊಸದಾಗಿ ಕಾಣಿಸಿಕೊಂಡಿತು. ಮಕ್ಕಳಿಗಾಗಿ ಪ್ರತ್ಯೇಕವಾದ ಬರವಣಿಗೆಯ ಅಗತ್ಯತೆ,

ಅದನ್ನು ಪ್ರಕಾಶಿಸುವಂತೆ ಮಾಡಲು ಅದರೊಂದಿಗೆ ಅನೇಕ ಚಟುವಟಿಗೆಳು ಕಾಣಿಸಿಕೊಂಡವು. ಇಲ್ಲಿಯವರೆಗೆ ಮೌಖಿಕ ಸಂಪ್ರದಾಯದಲ್ಲಿಯೇ ಮಕ್ಕಳ ಸಾಹಿತ್ಯಲೋಕ ತನಗೆ ಸಾಧ್ಯವಾದುದನ್ನು ಕಂಡುಕೊಂಡಿತ್ತು. ಈಗ ಅದು ಪ್ರತ್ಯೇಕವಾದ ತನ್ನದೇ ವ್ಯವಸ್ಥೆಯನ್ನು ಕಾಣತೊಡಗಿತು. ಹೀಗೆ ಹೊಸದಾಗಿ ಮಕ್ಕಳಿಗೆ ರೂಪುಗೊಳ್ಳತೊಡಗಿದ ಕಥಾ ಸಾಹಿತ್ಯವು ಈಗಾಗಲೇ ಇದ್ದ ಭಾರತೀಯ ಸಂಪ್ರದಾಯದ ಕಥಾ ಸಾಹಿತ್ಯದ ಪ್ರಭಾವಗಳನ್ನು ಹೇಗೆಲ್ಲ ಸ್ವೀಕರಿಸಿತು, ಆ ಪರಂಪರೆಯು ಹೇಗೆಲ್ಲ ಮುಂದುವರೆಯಿತು, ಕನ್ನಡದ ಜನಪದದಲ್ಲಿದ್ದ ತನ್ನದೇ ಆದ ಕಥಾಸಾಹಿತ್ಯದ ಕಡೆಯಿಂದ ಎಷ್ಟೆಲ್ಲ ಪ್ರಭಾವ, ಪ್ರೇರಣೆಗಳನ್ನು ಪಡೆಯಿತು ಎನ್ನುವುದು ಗಮನಿಸಬೇಕಾದ ಸಂಗತಿ. ಹಾಗೆಯೇ ನವೋದಯದ ಹುಟ್ಟಿಗೆ ಪ್ರೇರಣೆಯಾಗಿ ನಿಂತ ಪಾಶ್ಚಾತ್ಯ, ಇಂಗ್ಲಿಷ್ ಸಾಹಿತ್ಯದಿಂದ ಕನ್ನಡದ ಮಕ್ಕಳ ಕಥಾಸಾಹಿತ್ಯ ಹೇಗೆಲ್ಲ ಪ್ರಭಾವಗೊಂಡಿತು ಎಂಬುದನ್ನು ಅವಲೋಕಿಸುವುದು ಅಗತ್ಯವಾಗುತ್ತದೆ. ಈಗಾಗಲೇ ಇಂಗ್ಲಿಷಿನಲ್ಲಿ ಮಕ್ಕಳ ಸಾಹಿತ್ಯ ಸಾಕಷ್ಟು ಬೆಳೆದು ತನ್ನ ಅಸ್ತಿತ್ವವನ್ನು ಸಾಧ್ಯಮಾಡಿಕೊಂಡಿತ್ತಲ್ಲದೆ, ವಿಶ್ವದಾದ್ಯಂತ ಪ್ರಚಾರಗೊಂಡ ಅನೇಕ ಸಾಹಿತಿಗಳ ಕೃತಿಗಳನ್ನು ಕಂಡುಕೊಂಡ ಬಗೆ, ನವೋದಯದ ಸಮಯದಲ್ಲಿ ಕನ್ನಡ ಸಾಹಿತ್ಯದ ವಾತಾವರಣ ರೂಪಿಸುವಲ್ಲಿ ತೊಡಗಿಸಿಕೊಂಡ ಹಿರಿಯ ಸಾಹಿತಿಗಳಿಗೆಲ್ಲ ಈ ಹೊರಗಿನ ಇಂಗ್ಲಿಷಿನ ಪರಿಚಯ ಸಾಕಷ್ಟಾಗಿದ್ದು. ಪ್ರಬುದ್ಧರ ಸಾಹಿತ್ಯದಂತೆ ಅಲ್ಲಿನ ಮಕ್ಕಳ ಸಾಹಿತ್ಯದ ಕುರಿತೂ ಇವರ ದೃಷ್ಟಿ ಹರಿದಿರಬಹುದು ಎಂಬುದನ್ನು ಖಂಡಿತವಾಗಿಯೂ ಊಹಿಸಬಹುದಾಗಿದೆ. ಅಲ್ಲಿನ ಕೆಲವು ಕೃತಿಗಳನ್ನು ಕನ್ನಡಕ್ಕೆ ಅನುವಾದವಾಗಿ ಇಲ್ಲವೇ ಸಂಗ್ರಹವಾಗಿಯಾದರೂ ತರುವ ಕೆಲಸವನ್ನು ಪ್ರಯತ್ನ ಪೂರ್ವಕವಾಗಿ ಇವರು ಮಾಡಿದ್ದರು.

ಪಂಜೆ ಮಂಗೇಶರಾಯರಂಥ ಕನ್ನಡದ ಪ್ರಮುಖ ಸಾಹಿತಿಗಳು ಮಕ್ಕಳ ಸಾಹಿತ್ಯದೆಡೆಗೂ ತುಡಿಯುತ್ತಾ ಬಂದುದರಿಂದ ಮಕ್ಕಳ ಸಾಹಿತ್ಯ ತನ್ನ ವೈವಿಧ್ಯ ಸ್ವರೂಪವನ್ನು ಪಡೆಯುತ್ತಾ ಬಂತು. ಹೊಸ ಶಿಕ್ಷಣ ವ್ಯವಸ್ಥೆಯಲ್ಲಿ ಶಾಲಾಪಠ್ಯಗಳನ್ನು ಸಿದ್ಧಪಡಿಸುವ ಅಗತ್ಯದೊಡನೆಯೇ ಮಕ್ಕಳಿಗೆ ಮುದನೀಡುವ ಕೃತಿಗಳ ಸೃಷ್ಟಿಯಲ್ಲೂ ಅನೇಕರು ಕಾಣಿಸಿಕೊಂಡರು. ಮಕ್ಕಳ ಸಾಹಿತ್ಯದ ವಾತಾವರಣ ಉಂಟು ಮಾಡುವಲ್ಲಿ ಅನೇಕರು ಪರೋಕ್ಷವಾಗಿ ಕೆಲಸ ಮಾಡಿದರು. ಎಂ.ಎಸ್. ಪುಟ್ಟಣ್ಣನಂಥವರು ಮಕ್ಕಳಿಗಾಗಿ ಕತೆಗಳನ್ನು ಬರೆಯುತ್ತಾ ಈ ಬಗೆಯ ಸಾಹಿತ್ಯಕ್ಕೆ ನಾಂದಿಯಾಡಿದರು. ಶಿಕ್ಷಕ ವೃತ್ತಿಯಲ್ಲಿದ್ದು, ಸಾಹಿತ್ಯ ರಂಗದಲ್ಲಿ ವಿಶೇಷವಾಗಿಯೇ ತೊಡಗಿಸಿಕೊಂಡ ಪಂಜೆ ಮಂಗೇಶರಾಯರು, ಜಿ. ಪಿ. ರಾಜರತ್ನಂ ಮೊದಲಾದವರು ಮಕ್ಕಳ ಸಾಹಿತ್ಯಕ್ಕೆ ಹಿರಿಯದಾದ ಕೊಡುಗೆಯನ್ನು ನೀಡುವುದರೊಂದಿಗೆ ಅದಕ್ಕೆ ನಿರ್ದಿಷ್ಟವಾದ ದಾರಿಯನ್ನು ತೋರಿದರು. ಕುವೆಂಪು ಅಂತಹ ಖ್ಯಾತನಾಮರು ಮಕ್ಕಳಿಗಾಗಿ ಬರವಣಿಗೆಯಲ್ಲಿ ತೋರಿದ ಪ್ರೀತಿ ದೊಡ್ಡದು. ದಿನಕರದೇಸಾಯಿ ಅಂತಹ ಗಂಭೀರ ಪ್ರವೃತ್ತಿಯ ಸಾಹಿತಿ, ಸಾಮಾಜಿಕ ಚಟುವಟಿಕೆಯಲ್ಲಿ ಬಿಡುವಿಲ್ಲದೆ ತೊಡಗಿಸಿಕೊಂಡವರು ಕೂಡ ಮಕ್ಕಳಿಗಾಗಿಯೂ ತುಡಿದುದು ಗಮನಿಸಬೇಕಾದ ಸಂಗತಿ. ದೇವುಡು ಅವರು ಮಕ್ಕಳಿಗಾಗಿ ಪತ್ರಿಕೆಯನ್ನೇ ನಡೆಸಿದರು. ಕಾರಂತರು ಬಾಲವನವನ್ನು ಕಟ್ಟಿಕೊಂಡು ವಿಶೇಷವಾಗಿಯೇ ತೊಡಗಿಸಿಕೊಂಡುದುದನ್ನು ಇಲ್ಲಿ ಸ್ಮರಿಸಬಹುದು. ಈ

ಎಲ್ಲ ಹಿರಿಯರು ವಿಭಿನ್ನವಾಗಿ, ತಮ್ಮದೇ ಆದ ದೃಷ್ಟಿಕೋನಗಳಲ್ಲಿ ಮಕ್ಕಳಿಗಾಗಿ ಬರವಣಿಗೆಯ ದಾರಿಯನ್ನು ಕಂಡುಕೊಂಡದ್ದರಿಂದ ನವೋದಯದ ಸಮಯದಲ್ಲಿ ಮಕ್ಕಳ ಸಾಹಿತ್ಯ ತನ್ನ ಅಸ್ತಿತ್ವವನ್ನು ಕಂಡುಕೊಂಡಿತು. ಈ ಹಿರಿಯರನ್ನು ಅನುಸರಿಸಿದ ಅನೇಕರು ಆಸಕ್ತಿಯಿಂದ ತೊಡಸಿಗಿಕೊಂಡು ನವೋದಯದ ಈ ಸ್ವರೂಪವನ್ನು ಮುಂದುವರೆಸಿದರು. ಹೊಯ್ಸಳ, ಮೇವುಂಡಿ ಮಲ್ಲಾರಿ, ಭಾರತಿಸುತ, ಎಮ್ ಎನ್ ಕಾಮತ ಮುಂತಾದವರು ಅನೇಕ ರೀತಿಯಲ್ಲಿ ಆಸ್ಥೆ ವಹಿಸಿದುದರಿಂದ ಮಕ್ಕಳಿಗಾಗಿ ಪ್ರತ್ಯೇಕವಾಗಿ ಕಥಾ ಸಾಹಿತ್ಯ ಸಾಕಷ್ಟು ಬಗೆಯಲ್ಲಿ ಬೆಳವಣಿಗೆ ಕಂಡಿತು.

ನವೋದಯದ ನಂತರ ಕನ್ನಡ ಸಾಹಿತ್ಯ ನವ್ಯದೆಡೆಗೆ ಹೊರಳಿದಾಗ ಮಕ್ಕಳ ಲೋಕ ಕಡೆಗಣಿಯಾದುದು ಸತ್ಯ ಎನ್ನಬಹುದು. ಆದರೆ ಈ ಮಧ್ಯಂತರದಲ್ಲಿ ಉಂಟಾದ ನಷ್ಟ ತುಂಬುವಲ್ಲಿ ಶಿಕ್ಷಕ ಸಮುದಾಯ ತನ್ನದೇ ಆದ ಬಗೆಯಲ್ಲಿ ಆಸ್ಥೆ ವಹಿಸಿ ಮಕ್ಕಳ ಸಾಹಿತ್ಯದ ಕೃಷಿಯನ್ನು ಅಪಾರ ಪ್ರಮಾಣದಲ್ಲಿ ಹೊರತಂದಿತು. ಮಕ್ಕಳೊಡನೆಯೇ ತಮ್ಮ ವೃತ್ತಿಯನ್ನು ಕಂಡುಕೊಂಡಿದ್ದ ಈ ಲೇಖಕರಿಗೆ ಮಕ್ಕಳಿಗಾಗಿನ ಸಾಹಿತ್ಯದ ತುರ್ತು ವಿಶೇಷವಾಗಿಯೇ ಕಂಡಿತು. ಹಾಗಾಗಿ ತಮ್ಮದೇ ಆದ ಆಸಕ್ತಿ, ಶ್ರಮ, ಮುತುವರ್ಜಿ ವಹಿಸಿ, ಪ್ರಕಟಣೆಯಿಂದ ಹಿಡಿದು, ಅಕಾಡೆಮಿಯಂತಹ ಸಂಸ್ಥೆಯನ್ನು ಕಟ್ಟಿಕೊಳ್ಳುವವರೆಗೂ ತಮ್ಮ ಚಟುವಟಿಗೆಳನ್ನು ವಿಸ್ತರಿಸಿಕೊಂಡರು. ಇವರು ಮಕ್ಕಳ ಸಾಹಿತ್ಯಕ್ಕಾಗಿ ಅವಿರತವಾಗಿ, ತಮ್ಮದೊಂದು ಕರ್ತವ್ಯವೆಂದೇ ದುಡಿದರು. ಸಿಸು ಸಂಗಮೇಶ, ಆರ್ ಕಲ್ಯಾಣಮ್ಮ, ಬಿ.ಎಂ.ಶ್ರೀ, ಪಾಂಡುರಂಗರಾವ್, ಟಿ ಎಮ್. ಆರ್. ಸ್ವಾಮಿ, ಪಳಕಳ ಸೀತಾರಾಮ ಭಟ್ಟ, ಶಂ.ಗು ಬಿರಾದಾರ ಮೊದಲಾದ ದೊಡ್ಡದೊಂದು ಪಡೆಯು ಈ ಸಮಯದಲ್ಲಿ ಮಕ್ಕಳ ಸಾಹಿತ್ಯಕ್ಕಾಗಿ ಕೆಲಸ ಮಾಡಿತು. ಇವರೆಲ್ಲರೂ ಮಕ್ಕಳ ಕಾವ್ಯಕೃಷಿಯಲ್ಲಿ ಆಸ್ಥೆ ತೋರಿದಂತೆ ಕಥಾ ಸಾಹಿತ್ಯದಲ್ಲೂ ಕೃಷಿಮಾಡಿದರು. ಈ ಹಿರಿಯರೆಲ್ಲರ ಹೆಜ್ಜೆಗಳನ್ನು ಅನುಕರಿಸುತ್ತಾ, ಹೊಸತನಕೆ ತುಡಿಯುತ್ತ ಹೊಸದೊಂದು ತಲೆಮಾರು ಮಕ್ಕಳ ಸಾಹಿತ್ಯದಲ್ಲಿ ತೊಡಗಿಸಿಕೊಂಡು ಹೊಸ ದಿಕ್ಕುದೆಸೆಗಳನ್ನು ಕನ್ನಡಕ್ಕೆ ತಂದಿತು. ಬಹುಮುಖ್ಯವಾಗಿ ಸಾಹಿತ್ಯದ ಮುಖ್ಯಧಾರೆಯಲ್ಲಿದ್ದ ಎಚ್. ಎಸ್ ವೆಂಕಟೇಶಮೂರ್ತಿ, ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಸುಮತೀಂದ್ರ ನಾಡಿಗ, ನಾ ಡಿಸೋಜ, ಬೋಳುವಾರ ಮೊಹಮ್ಮದ ಕುಂಯಿಯವರು ಮಕ್ಕಳೆಡೆಗೆ ತುಡಿದರು. ಇದು ಸಾಕಷ್ಟು ಹೊಸಪ್ರಯೋಗಕ್ಕೆ ಕಾರಣವಾಯಿತು. ಇವರನ್ನು ಅನುಸರಿಸಿ ಶ್ರೀನಿವಾಸ ಉಡುಪ, ಟಿ ಎಸ್ ನಾಗರಾಜಶೆಟ್ಟಿ, ಪ. ಗು ಸಿದ್ದಾಪುರ, ರಾಧೇಶ ತೋಳ್ಪಾಡಿ ಮೊದಲಾದ ಅನೇಕರು ತಮ್ಮದೇ ಆದ ರೀತಿಯಲ್ಲಿ ಹೊಸಕಾಲದ ಹೊಸತಿಗಾಗಿ ಕೊಡುಗೆ ನೀಡುತ್ತ ಬಂದಿದ್ದಾರೆ.

ಹೀಗೆ ಮಕ್ಕಳ ಕಥಾಸಾಹಿತ್ಯ ನವೋದಯದಿಂದ ಹಿಡಿದು ಇಲ್ಲಿಯವರೆಗೆ ಸಾಕಷ್ಟು ಸ್ಥಿತ್ಯಂತರಗಳನ್ನು ಕಂಡಿದೆ. ಅದು ಬಹು ಮುಖ್ಯವಾಗಿ ಗ್ರಾಮೀಣ ಕತೆಗಳು, ಪುರಾಣಾಧಾರಿತ ಪರಂಪರೆಯ ಕತೆಗಳು, ಪಂಚತಂತ್ರದ ಕತೆಗಳನ್ನು ಆಶ್ರಯಿಸಿದ ಕನ್ನಡದ ಮಕ್ಕಳ ಕಥಾ ಸಾಹಿತ್ಯ ಬರಬರುತ್ತ ಹೊಸಗಾಲದ ಹೊಸ ಅಗತ್ಯಗಳಿಗಾಗಿ ತುಡಿಯಿತು. ವಾಸ್ತವದ ಬದುಕನ್ನು ವಸ್ತುವಾಗಿ ಪಡೆಯುತ್ತಾ ಹೊಸತಾಗಿ ರೂಪು ತಳೆದು ಪ್ರಯೋಗಶೀಲವಾಗಿದೆ. ಆದರೆ ಪಕ್ವತೆ ಪರಿಪೂರ್ಣವಾಗಿ

ಲಭಿಸದಿದ್ದರು ಅಸ್ಮಿತೆಗೆ ತೊಂದರೆಯಿಲ್ಲದೆ ಬೆಳೆದು ಬಂದಿದೆ. ಕೊರತೆಗಳು ಸಹ ಸಾಕಷ್ಟಿವೆ. ಪ್ರಬುದ್ಧರ ಸಾಹಿತ್ಯ ಪಡೆದಷ್ಟು ಪ್ರಾಮುಖ್ಯತೆಯನ್ನು ಈ ಪ್ರಕಾರ ಪಡೆಯಲಿಲ್ಲ. ಇದಕ್ಕೆ ಅಗತ್ಯವಾದ ವಾತಾವರಣ ಹಿರಿಯ ಸಂಸ್ಥೆಗಳಿಂದ ದೊರೆಯಲಿಲ್ಲ, ಪ್ರತಿಭಾವಂತ ಲೇಖಕರು ನಂತರ ಈ ಕಡೆಗೆ ಅಷ್ಟಾಗಿ ತಿರುಗಿ ನೋಡದಿದ್ದುದು ಮುಂತಾದ ಅನೇಕ ಕಾರಣಗಳಿಗಾಗಿ ಮಕ್ಕಳ ಕಥಾಸಾಹಿತ್ಯ ಪ್ರಬುದ್ಧರ ಕಥಾ ಸಾಹಿತ್ಯದೊಂದಿಗಿನ ತುಲನೆಯಲ್ಲಿ ಸೊರಗಿದೆ. ಬಹಳಷ್ಟು ಟೀಕೆಗಳಿಗೂ ಸಹ ಒಳಗಾಗಿದೆ. ವಿಮರ್ಶೆ ಅಧ್ಯಯನಗಳು ಸಾಕಷ್ಟು ನಡೆಯಲೇ ಇಲ್ಲ ಎನ್ನುವುದು ಒಂದು ದೊಡ್ಡ ಕಾರಣ. ಅದೇನೇ ಇರಲಿ ಈ ಎಲ್ಲ ಗತಿಸಿದ ವಾತಾವರಣದಲ್ಲಿ ಮಕ್ಕಳಿಗಾಗಿ ಅಗತ್ಯವಿರುವ ಕಥಾ ಸಾಹಿತ್ಯ ಏನೆಲ್ಲವನ್ನು ಅನುಭವಿಸಿತು, ಅದು ಹೇಗೆಲ್ಲ ತನ್ನ ಪ್ರೇರಣೆಗಳನ್ನು ಪಡೆದುಕೊಂಡಿತು, ಹೇಗೆ ತನ್ನ ಸ್ವರೂಪವನ್ನು ಕಂಡುಕೊಂಡಿತು, ಇಲ್ಲಿಯವರೆಗಿನ ಅದರ ಪಯಣ ಏನೆಲ್ಲ ಹೇಳುತ್ತಿದೆ, ಮತ್ತು ಸದ್ಯದ ಸ್ಥಿತಿಯಲ್ಲಿ ಈ ಪ್ರಕಾರ ಹೊಸತನಕ್ಕೆ ಹೇಗೆಲ್ಲ ಸ್ಪಂದಿಸುತ್ತಿದೆ ಎಂಬುದನ್ನೆಲ್ಲ ಈ ಪ್ರಬಂಧ ಕೂಲಂಕಷವಾಗಿ ಚರ್ಚಿಸಲಿದೆ.

### ಕಾಲ ವ್ಯಾಪ್ತಿ

ನವೋದಯ ಕಾಲದ ಮಕ್ಕಳ ಕತೆಗಳನ್ನು ಇಲ್ಲಿ ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ. ಮಕ್ಕಳ ಸಾಹಿತ್ಯದ ಆರಂಭವನ್ನು ಪ್ರಬುದ್ಧರ ಸಾಹಿತ್ಯದ ನವೋದಯ ಕಾಲದಿಂದ ಗುರ್ತಿಸಿಕೊಂಡು ನೋಡಬಹುದಾದ್ದರಿಂದ ಅಧ್ಯಯನದ ಕಾಲವು ಸಹ ನವೋದಯದಿಂದಲೇ ಆಗಿದೆ. ಮಕ್ಕಳ ಕತೆಗಳು ಈ ಕಾಲದಲ್ಲಿ ಜನ್ಮ ತಳೆದವು ಎಂದು ನಿಖರವಾಗಿ ಹೇಳಲಾಗದು. ಆದರೆ ನವೋದಯದ ಸಂದರ್ಭದಲ್ಲಿ ಪ್ರತ್ಯೇಕವಾಗಿ ಮಕ್ಕಳ ಸಾಹಿತ್ಯವನ್ನು ಕಾಣುವಂತಾದ ಮೇಲೆ ಕತೆಗಳನ್ನು ಸಹ ಇದೇ ಕಾಲದಲ್ಲಿ ಮಕ್ಕಳ ಸಾಹಿತ್ಯದಿಂದ ಪ್ರತ್ಯೇಕಿಸಿ ನೋಡಿರುವುದರಿಂದ ಅಧ್ಯಯನಕ್ಕೆ ಈ ಕಾಲವೇ ಆರಂಭವನ್ನು ಒದಗಿಸಿದೆ. ನವೋದಯದಲ್ಲಿ ಉಂಟಾದ ಕತೆಗಳನ್ನು ಏಕಾ ಏಕಿ ಅಧ್ಯಯನ ಮಾಡಲು ಯತ್ನಿಸಿದರೆ ಅಪರಿಪೂರ್ಣವಾಗುವುದರಿಂದ ಅದರ ಹಿನ್ನೆಯ ಜನಪದದ ಕಾಲವನ್ನು, ಆ ಕಾಲದ ಕತೆಗಳ ಸ್ಥಿತಿಗತಿಗಳನ್ನು ಕುರಿತು ಸಂಕ್ಷಿಪ್ತವಾಗಿ ನೋಡುವುದು ಅಗತ್ಯವೆಂದು ಭಾವಿಸಲಾಗಿದೆ. ನವೋದಯದ ಹಿಂದೆ ಇದ್ದ ವಾತಾವರಣ, ನಂತರದ ವಾತಾವರಣವನ್ನು ಆಧರಿಸಿ ಕನ್ನಡದ ಕತೆಗಳನ್ನು ಅವಲೋಕಿಸಲಾಗಿದೆ. ವರ್ತಮಾನದಲ್ಲಿ ನಡೆಯುತ್ತಿರುವ ಸಂಗತಿಗಳು ಮತ್ತು ಇಲ್ಲಿಯ ವರೆಗೆ ಕಂಡುಬಂದ ಬದಲಾವಣೆಗಳನ್ನು ಗಮನಿಸಲಾಗಿದೆ. ಪ್ರಸ್ತುತ ದಿನಗಳಲ್ಲಿ ಹೊಸಗಾಲಕ್ಕೆ ಪ್ರಯೋಗಗಳ ಮೂಲಕ ಅಣಿಯಾಗುತ್ತಿರುವ ಕುರುಹುಗಳನ್ನು ಪತ್ತೆಹಚ್ಚಿ ಅಧ್ಯಯನಕ್ಕೆ ಒಳಪಡಿಸಿದೆ. ಪ್ರಧಾನವಾಗಿ ನವೋದಯದ ನಂತರದ ಮಕ್ಕಳ ಕತೆಗಳನ್ನು, ಅವುಗಳ ಸ್ವರೂಪವನ್ನು, ತಾತ್ವಿಕ ಹಿನ್ನೆಲೆಯಲ್ಲಿ ಗ್ರಹಿಸಿದೆ.

### ಪ್ರದೇಶ ವ್ಯಾಪ್ತಿ

ಕನ್ನಡ ವಾತಾವರಣವಿರುವ ಕರ್ನಾಟಕದ ಮಕ್ಕಳ ಕತೆಗಳನ್ನು ಪ್ರಧಾನವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ. ಮಕ್ಕಳ ಕತೆಗಳನ್ನು ಪ್ರದೇಶದ ಹಿನ್ನೆಲೆಯಲ್ಲಿ ಅಧ್ಯನ ಮಾಡುವುದಾದರೆ

ಭಾರತದ ಭೌಗೋಳಿಕತೆಯಲ್ಲಿ ಮತ್ತು ಜಾಗತಿಕ ಪ್ರೇರಣೆಯಲ್ಲಿ ಬಹು ವಿಸ್ತಾರವನ್ನು ಪಡೆದುಕೊಳ್ಳುತ್ತದೆ. ಆದುದರಿಂದ ಇಲ್ಲಿ ಕನ್ನಡದ ಮಕ್ಕಳ ಕತೆಗಳನ್ನು ಮಾತ್ರ ಪರಿಗಣಿಸಲಾಗಿದೆ. ಕನ್ನಡದ ಮಕ್ಕಳ ಕತೆಗಳನ್ನು ನೋಡುವಾಗ ಅದರ ಮೇಲೆ ಪ್ರಭಾವ ಬೀರಿದ ಭಾರತದ ಇತರ ರಾಜ್ಯಗಳನ್ನು, ಭಾರತದ ಹೊರಗಿನ ಪ್ರದೇಶದಲ್ಲುಂಟಾದ ಕ್ರಾಂತಿಕಾರಕ ಅಂಶಗಳನ್ನು ಹಿನ್ನೆಲೆಯಲ್ಲಿರಿಸಿಕೊಂಡು ನೋಡಿದೆ.

## ಭಾಷೆಯ ವ್ಯಾಪ್ತಿ

ಮಕ್ಕಳ ಕತೆಗಳನ್ನು ಅಧ್ಯಯನ ಮಾಡುವಾಗ ಇಲ್ಲಿ ಪ್ರಧಾನವಾಗಿ ಕನ್ನಡ ಭಾಷೆಯ ಮಕ್ಕಳ ಕತೆಗಳನ್ನು ಅವಲೋಕಿಸಿ ಅಧ್ಯಯನಕ್ಕೆ ಮುನ್ನೆಲೆಯಾಗಿಸಿಕೊಂಡು ನೋಡಿದೆ. ಕನ್ನಡ ಭಾಷೆಯ ಜೊತೆಗೆ ಸಂಬಂಧವಿರಿಸಿಕೊಂಡು ಬಂದಿರುವ ನೆರೆಹೊರೆಯ ರಾಜ್ಯಗಳ ಭಾಷೆಯಲ್ಲಿ ಮಕ್ಕಳ ಕತೆಗಳು ಕಂಡುಕೊಂಡ ನೆಲೆಗಳು, ಬದಲಾವಣೆಗಳನ್ನು ಹಿನ್ನೆಲೆಯಾಗಿಸಿ ನೋಡಿದೆ. ಅದರೊಂದಿಗೆ ಇಂಗ್ಲಿಷ್ ಭಾಷೆಯಲ್ಲಾದ ಪ್ರಯೋಗಗಳು ಕನ್ನಡದ ಮೇಲೆ ತೀವ್ರವಾಗಿ ಪರಿಣಾಮ ಬೀರಿರುವುದರಿಂದ ಇಂಗ್ಲಿಷ್ ಮಕ್ಕಳ ಸಾಹಿತ್ಯದ ಕತೆಗಳನ್ನು ಹಿನ್ನೆಲೆಯಾಗಿ ಕಾಣಿಸಿಕೊಂಡು ಅಧ್ಯಯನಕ್ಕೆ ಒಳಗೊಳಸಲಾಗಿದೆ. ಇವೆಲ್ಲವೂ ಕನ್ನಡ ಮಕ್ಕಳ ಕತೆಗಳಿಗೆ ಪೂರಕವಾಗಿ ಕಾಣಿಸಿಕೊಂಡಿವೆ.

## ಆಕರಗಳ ವ್ಯಾಪ್ತಿ

ಪ್ರಧಾನವಾಗಿ ಮಕ್ಕಳ ಸಾಹಿತ್ಯ ಕುರಿತಾದ ಚಿಂತನೆಗಳನ್ನು ಒಳಗೊಂಡ ಬರೆಹಗಳನ್ನು ಆಧರಿಸಿ ಅಧ್ಯನವನ್ನು ಮಾಡಲಾಗಿದೆ. ಮಕ್ಕಳ ಸಾಹಿತ್ಯ ಕುರಿತಾದ ವಿಮರ್ಶೆ, ಅಧ್ಯಯನಗಳು ಸಾಕಷ್ಟು ನಡೆಯದಿದ್ದರೂ ಅಲ್ಲಲ್ಲಿ ಸಿಗಬಹುದಾದ ಬಿಡಿಬರೆಹಗಳು, ಭಾಷಣದ ಮಾಲಿಕೆಗಳನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನವು ಸಾಗಿ ಬಂದಿದೆ. ಭಾರತ ಮತ್ತು ವಿದೇಶಿಯ ಮಕ್ಕಳ ಸಾಹಿತ್ಯವನ್ನು ಕುರಿತಾದ ಮಾಹಿತಿಯನ್ನು ಒಳಗೊಂಡಿರುವ ಪುಸ್ತಕಗಳು ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ವಿಷಯದಲ್ಲಿ ಸಿಗುವುದು ವಿರಳವಾದುದರಿಂದ ಇಂಗ್ಲೀಷಿನ, ಹಿಂದಿಯ ಪುಸ್ತಕಗಳನ್ನು ಅವಲೋಕಿಸಿ ಮಾಹಿತಿಯನ್ನು ಕಲೆಹಾಕಿ ನೋಡಿರುವುದು ಇದೆ. ಪ್ರಮುಖವಾಗಿ 'ಮಕ್ಕಳ ಸಾಹಿತ್ಯದ ವಿಮರ್ಶೆ' ಎಂಬುದರೆಡೆಗೆ ಕನ್ನಡದಲ್ಲಿ ಕಾಣಬಹುದಾದ ಪುಸ್ತಕಗಳೆಂದರೆ 'ಮುಗುಳು', 'ಅಲರು', 'ಹೀಗಷ್ಟು ...ಖುಷಿ ಕೊಟ್ಟವು' ಆನಂದ ಪಾಟೀಲರ ಕೃತಿಗಳು. 'ಮಕ್ಕಳ ಸಾಹಿತ್ಯ ಶತಮಾನ' ಇದು ಮಕ್ಕಳ ಸಾಹಿತ್ಯದ ನೂರು ವರ್ಷದ ಬದಲಾವಣೆಗಳ ಮಿತಿಯನ್ನಿರಿಸಿಕೊಂಡು ಬಂದ ಸಂಪಾದಿತ ಕೃತಿ. ಸಂಧ್ಯಾ ಸಾಹಿತ್ಯ ಬಳಗ ಶಹಪೂರ ಇವರು ಪ್ರಕಟಿಸಿರುವುದು. ಪ್ರಮುಖ ಬರೆಹಗಾರರು ಬರೆದಿರುವ ಲೇಖನಗಳಿಂದ ಕೂಡಿದ ಮಹತ್ತ್ವದ ಕೃತಿಯಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಇವರು ಹೊರ ತಂದಿರುವ ಮಕ್ಕಳ ಸಾಹಿತ್ಯ ಚರಿತ್ರೆ, ಸಂಪುಟ ೯, ಬಸು ಬೇವಿನಗಿಡದ ಅವರು ಸಂಪಾದಿಸಿರುವ ಕೃತಿ. ಇವುಗಳನ್ನು ಪ್ರಧಾನವಾಗಿ ಪ್ರಾಥಮಿಕ ಆಕರಗಳನ್ನಾಗಿಸಿಕೊಂಡು ಸಂಶೋಧನೆಗೆ ಪೂರಕವಾದ ವಿಷಯಾಂಶಗಳನ್ನು ಪಡೆಯಲಾಗಿದೆ. ಕನ್ನಡದ 'ವಡ್ಡರಾಧನೆ'ಯ ಕಾಲದ ಕತೆಗಳ ಹಿನ್ನೆಯನ್ನು ವಡ್ಡರಾಧನೆಯಿಂದ, ಸುವರ್ಣ

ಜಾನಪದ, ಸಂಪುಟ ೧, ೨ ಇವುಗಳಿಂದ ಕನ್ನಡಜನಪದದ ಪರಿಸರದ ಕತೆಗಳನ್ನು, ಅಜ್ಜಿಕತೆಗಳ ಮಹತ್ತ್ವವನ್ನು ತೀ.ನಂ.ಶ್ರೀ ಇವರ ಸುವರ್ಣ ಜಾನಪದ ಸಂಪುಟ ೧ರ ಲೇಖನದಿಂದಲೂ, ಅಡುಗೂಲಜ್ಜಿಯ ಸಂಗತಿಗಳನ್ನು 'ಉರಿಯ ನಾಲಗೆ' ಕೀರ್ತಿನಾಥ ಕುರ್ತಕೋಟಿ ಇವರ ಕೃತಿಯಿಂದಲು ಗ್ರಹಿಸಲಾಗಿದೆ. ಜನಪದದ ಹಿನ್ನೆಲೆಯಲ್ಲಿ ಮಕ್ಕಳ ಕತೆಗಳನ್ನು ಗ್ರಹಿಸಲು ವಿವಿಧ ಪತ್ರಿಕೆಗಳಲ್ಲಿ ಬರುವ ಲೇಖನಗಳನ್ನು ಅವಲೋಕಿಸಿದೆ. ಮಕ್ಕಳ ಕತೆಗಳ ಸ್ವರೂಪ, ಪ್ರಮುಖ ಲೇಖಕರ ಪ್ರಯೋಗಗಳಿಗಾಗಿ ಸಂಧ್ಯಾ ಸಾಹಿತ್ಯ ಬಳಗವು ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆಗಳನ್ನು ಆರಂಭದಿಂದ ಇಲ್ಲಿಯವರೆಗೂ ಗಮನಿಸಲಾಗಿದೆ. ಆನಂದ ಪಾಟೀಲರು ಪ್ರಕಟಿಸುತ್ತಿರುವ 'ಮಕ್ಕಳ ಸಾಹಿತ್ಯ ಮಾತುಕತೆ' ಎಂಬ ಅಂತರ್ಜಾಲ ಪತ್ರಿಕೆಯ ವಿವಿಧ ಸಂಚಿಕೆಗಳನ್ನು ಗಮನಿಸಲಾಗಿದೆ. ಇದು ದೇಶ ವಿದೇಶಗಳಲ್ಲಿ ಮಕ್ಕಳ ಕತೆಗಳ, ಪತ್ರಿಕೆಗಳ ಬಗೆಗೆ ವಿವರವನ್ನು ಒದಗಿಸಿದೆ. ಹೊಸ ತಲೆಮಾರಿನ ಲೇಖಕರ ಮಹತ್ತ್ವದ ಕಾದಂಬರಿಗಳನ್ನು ಸಹ ಪ್ರಾಥಮಿಕ ಆಕರಗಳಾಗಿ ಅವಲೋಕಿಸಲಾಗಿದೆ. ಕಾಮಿಕ್ಸ್‌ಗಳ ಮಾಹಿತಿಗಾಗಿ ಗಣಕಯಂತ್ರದ ಮೂಲಕ ಅಂತರ್ಜಾಲದ ನೆರವನ್ನು ಪೂರಕ ಆಕರವಾಗಿ ವಿಸ್ತರಿಸಿಕೊಳ್ಳಲಾಗಿದೆ. ಮಕ್ಕಳ ಸಾಹಿತ್ಯದ ಸಂವಾದ, ಗೋಷ್ಠಿ, ಚಿಂತನ ಸಭೆಗಳಲ್ಲಿ ಭಾಗವಹಿಸಿ ಕಲೆಹಾಕಿದ ಮಾಹಿತಿಯನ್ನು, ಕೇರಳದ ಬಾಲ ಸಾಹಿತ್ಯ ಅಕಾಡೆಮಿ, ತಮಿಳುನಾಡಿನ ಕನ್ಯಾಕುಮಾರಿ ಬುಕ್ ಹೌಸ್, ಮಹಾರಾಷ್ಟ್ರ ಮಧುಮಾಲ ಆಗಾಡೆ, ಉತ್ತರ ಪ್ರದೇಶದ ನಾಗೇಶ ಪಾಂಡೆ, ಆಂಧ್ರದ ರವಿಶಂಕರ್‌ಶರ್ಮಾ, ಕರ್ನಾಟಕದ ಆನಂದ ಪಾಟೀಲ, ನಾಡಿಸೋಜ, ಶ್ರೀನಿವಾಸ ಉಡುಪ, ಎಚ್. ಎಸ್, ವಿ ಅವರ ಮಾತುಗಳನ್ನು ಪೂರಕವಾಗಿ, ಸಂದರ್ಭೋಚಿತವಾಗಿ ಬಳಸಲಾಗಿದೆ. ಹೀಗೆ ಪ್ರಮುಖವಾಗಿ ಸಂದರ್ಶಿಸಿದ ವ್ಯಕ್ತಿಗಳಿಂದ ಪಡೆದ ವಿಚಾರಗಳನ್ನು ಪೂರಕ ಆಕರಗಳಾಗಿ ಪರಿಗಣಿಸಿದೆ.

### ೧.೪ ಅಧ್ಯಯನದ ವಿಧಾನ

ಅಧ್ಯಯನದ ಪ್ರತಿ ಹಂತದಲ್ಲೂ ವಿವಿಧ ಸಮಸ್ಯೆಗಳನ್ನು ಮುಂದಿರಿಸಿಕೊಂಡು, ಅವುಗಳಿಗೆ ಕಾರಣಗಳನ್ನು ಹುಡುಕಿ, ಅವುಗಳನ್ನು ವಿಶ್ಲೇಷಿಸಿ ನೋಡಲಾಗಿದೆ. ಇದು ಅಧ್ಯಯನಕ್ಕೆ ಅಗತ್ಯವಾದ ಶಿಸ್ತು, ಚೌಕಟ್ಟನ್ನು ಹಾಕಿಕೊಳ್ಳಲು ನೆರವಾಗಿದೆ. ಕೆಲವು ಸಲ ಆಕರಗಳ ವ್ಯಾಪ್ತಿಯು ಮಕ್ಕಳ ಸಾಹಿತ್ಯದ ಸಮಗ್ರತೆಯನ್ನು ತೆರೆದಿಡುವಾಗ ಅದನ್ನು ತುಂಡಿರಿಸಿ, ಮಕ್ಕಳ ಕತೆಗಳ ಗ್ರಹಿಕೆಗೆ ಹೊಂದಿಸಿ ನೋಡಲಾಗಿದೆ. ಹಿಂದಿನ ಕಾಲಘಟ್ಟದಲ್ಲಿ ಮಕ್ಕಳ ಸಾಹಿತ್ಯವನ್ನು ಸಮಗ್ರವಾಗಿ ನೋಡಿರುವುದರ ಪರಿಣಾಮದಿಂದಾಗಿ ಇಂತಹ ಸಮಸ್ಯೆಗಳು ಎದುರಾಗಿವೆ. ಇಂತಹ ತೊಡಕುಗಳನ್ನು ನಿವಾರಿಸಿಕೊಂಡು ಕತೆಗಳ ಮಿತಿಯನ್ನು ಕಂಡುಕೊಳ್ಳಲಾಗಿದೆ.

ಅಧ್ಯಯನವನ್ನು ಮೊದಲ ಬಾರಿಗೆ, ಆರಂಭದಲ್ಲಿ ಮುಂದಿರಿಸಿಕೊಂಡು ನೋಡಿದಾಗ ಅನಿಸಿದಂತೆ ವಿಷಯಕ್ಕೆ ಪೂರಕವಾದ ಅಂಶಗಳನ್ನು ಸಂಗ್ರಹಿಸಿಕೊಂಡು, ಅಧ್ಯಯನ ಪೂರ್ವದಲ್ಲಿ ನಡೆಸಿದ ಸಿದ್ಧತೆಗಳೊಂದಿಗೆ ತಾಳೆ ನೋಡಲಾಯಿತು. ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ನಡೆದಿರುವ

ಸಂಶೋಧನಾ ಕೃತಿಗಳನ್ನು ಅವಲೋಕಿಸಿ ಅವುಗಳ ವಿಷಯದ ಆಯ್ಕೆ, ವಿಭಜನೆಯ ಕ್ರಮ, ತಾತ್ವಿಕವಾದ ವಿಶ್ಲೇಷಣೆ, ವಿಷಯದ ಪ್ರಸ್ತುತತೆ, ಪ್ರಸ್ತುತಿಪಡಿಸಿರುವ ಭಾಷೆ, ವಿಧಾನಗಳನ್ನು ಕೂಲಂಕಷವಾಗಿ ತಿಳಿಯಲಾಯಿತು.

೧. ಅಧ್ಯಯನದ ಸಂದರ್ಭದಲ್ಲಿ ಲೇಖಕ ಮತ್ತು ಆತನ ವೃತ್ತಿಯು, ಇವುಗಳ ನೆರವು, ವೈವಿಧ್ಯಗಳನ್ನು ಪರಸ್ಪರ ಮುಂದಿರಿಸಿ ನೋಡಲಾಗಿದೆ. ಮಕ್ಕಳ ಸಾಹಿತ್ಯದ ಬೆಳವಣಿಗೆಯ ಹಿನ್ನೆಯಲ್ಲಿ ಕತೆಗಳು ವೈಯಕ್ತಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದುಕಿನ ಮೇಲೆ ಬೀರಿದ ಪರಿಣಾಮಗಳನ್ನು ಅವುಗಳಿಗೆ ಕಂಡುಕೊಂಡ ಪರಿಹಾರಗಳು, ತಾತ್ವಿಕವಾದ ಬದಲಾವಣೆಗಳು, ಅವುಗಳಿಂದ ಕತೆಗಳ ಮೇಲಾದ ಬದಲಾವಣೆಗಳನ್ನು ಸಂಬಂಧೀಕರಿಸಿ, ಬೇರ್ಪಡಿಸಿ ನೋಡಲಾಗಿದೆ.

೨. ಅಧ್ಯಯನ ಪೂರ್ವದಲ್ಲಿ ರೂಪಿಸಿಕೊಂಡ ಸಿದ್ಧ ಚೌಕಟ್ಟಿನೊಂದಿಗೆ ಅದಕ್ಕೆ ಪೂರಕವಾದ ಮಾಹಿತಿಯನ್ನು ಸಂಗ್ರಹದಿಂದ ಆರಿಸಿಕೊಂಡು ವಿಶ್ಲೇಷಿಸಲಾಯಿತು. ಇಲ್ಲಿ ಎದುರಾದ ಸಮಸ್ಯಾತ್ಮಕ ಸಂಗತಿಗಳನ್ನು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಯಿತು. ಇದೊಂದು ಸಿದ್ಧ ಮಾದರಿಯ **'ಅನ್ವಯೀಕರಣ'** ಎನ್ನಬಹುದು. ಪರಿಕಲ್ಪನೆಗಳನ್ನು ಮೊದಲೇ ಆರಿಸಿಕೊಂಡು ವಿಷಯಕ್ಕೆ ಪೂರಕವಾಗಿ ಸಮಂಜಸವಾದುದನ್ನು, ವಿರುದ್ಧವಾದುದನ್ನು ಒಟ್ಟಾಗಿ ನೋಡಲಾಯಿತು. ಇದು **'ಅನುಸಂಧಾನ'**ದ ಮಾರ್ಗವಾಗಿ ಕಾಣಿಸಿತು. ಈ ಅಧ್ಯಯನದಲ್ಲಿ ಬಹುಮುಖಿ ಆಯಾಮಗಳಿಂದ ತಾತ್ವಿಕತೆಯನ್ನು ವಿಷಯದಲ್ಲಿ ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೩. ಈ ಅಧ್ಯಯನವು ಮಕ್ಕಳ ಸಾಹಿತ್ಯದ ಮಾಹಿತಿ ಸಂಗ್ರಹಿಸುವ ಕಾರ್ಯವನ್ನು ಮಾಡಿ, ಇತಿಹಾಸ ಕಟ್ಟಿಕೊಡುವಂತಾಗುವ ಅಪಾಯವನ್ನು ತಪ್ಪಿಸಿ, ಸಂಶೋಧನಾತ್ಮಕ ಹುಡುಕಾಟದ ನೆಲೆಗಳನ್ನು ಅನುಸರಿಸಿ ಹೊಸ ಮಾರ್ಗದ, **ಹೊಸ ಸಂವೇದನೆ**ಗಳನ್ನು ಹೊರತರಲು ಯತ್ನಿಸಿದೆ. (ಕಾಮಿಕ್ಸ್ ಬೆಳವಣಿಗೆಯ ತಾತ್ವಿಕತೆ)

೪. ಕನ್ನಡ ಸಾಹಿತ್ಯ, ಮಕ್ಕಳ ಸಾಹಿತ್ಯ, ಮಕ್ಕಳ ಕಥಾ ಸಾಹಿತ್ಯ ಎಂದು ಮೂರು ಪರಿಕಲ್ಪನೆಗಳನ್ನು ಮುಂದಿರಿಸಿಕೊಂಡು, ಮಕ್ಕಳ ಕಥಾ ಸಾಹಿತ್ಯವನ್ನು ಕೇಂದ್ರವಾಗಿರಿಸಿಕೊಂಡು ನೋಡಿ, ಒಂದರ ಮೇಲೆ ಇನ್ನೊಂದು ಪ್ರಭಾವಿಸಿಕೊಂಡು ಬಂದ ರೀತಿಯನ್ನು ಹೋಲಿಕೆ ಮಾಡಿ ನೋಡಿದೆ.

೫. ಕನ್ನಡದ ಮಕ್ಕಳ ಕತೆಗಳು, ಭಾರತದ ಇತರ ಭಾಷೆಯ ಮಕ್ಕಳ ಕತೆಗಳು, ಭಾರತದ ಹೊರಗಿನ ಮಕ್ಕಳ ಕತೆಗಳನ್ನು ಕನ್ನಡದ ವಾತಾವರಣದಲ್ಲಿ **'ತೌಲನಿಕ'**ವಾಗಿ ನೋಡಿದೆ. ಅವುಗಳಿಗೆ ಒದಗಿದ ಮಾರಕಟ್ಟೆಯನ್ನು, ಅದರ ಏರುಪೇರುಗಳು ಉಂಟಾಗಲು ತಾತ್ವಿಕ ಕಾರಣಗಳನ್ನು ಚರ್ಚಿಸಿದೆ.

೬. ಮಕ್ಕಳ ಕತೆಗಳ ಸ್ವರೂಪಗಳನ್ನು ವಿಂಗಡಿಸಿಕೊಂಡು, ಪ್ರತ್ಯೇಕವಾಗಿ ಅವುಗಳನ್ನು ವಿವಿಧ ಅಧ್ಯಯಗಳಲ್ಲಿ **ಚರ್ಚಿಸಿ, ವರ್ಗೀಕರಿಸಿ,** ಭಾರತದ ಹೊರಗೆ, ಒಳಗೆ, ಕನ್ನಡದಲ್ಲಿ ನಡೆದ ಪ್ರಯೋಗಗಳನ್ನು ಹಂತಹಂತವಾಗಿ ವಿವರಿಸಿದೆ. ಮಹತ್ತ್ವದ ಕೆಲವು ಪ್ರಯೋಗಗಳನ್ನು ಉದಾಹರಣೆಯಾಗಿ ನೀಡುವಾಗ ಅದರಲ್ಲಿ ತಾತ್ವಿಕ ವಿಷಯಗಳನ್ನು ಅನುಲಕ್ಷಿಸಿ ಅಧ್ಯಯನಮಾಡಿದೆ.

೭. ಮಕ್ಕಳ ಕತೆಗಳ ವಾತಾವರಣ ನಿರ್ಮಾಣವಾಗುವಾಗ ನೆರವಾಗುವ ಮಾಧ್ಯಮಗಳ ವಿವರಣೆಯಿದ್ದು ಅದು ಕತೆಗಳ ಬೆಳವಣಿಗೆಗೆ ಪೂರಕವಾಗಿ ನಿರ್ಮಿಸಿರುವ ಅನುಕೂಲಗಳನ್ನು, ಅನುಭವಿಸಿದ ಮಿತಿಗಳನ್ನು **ತಾತ್ವಿಕ ವಿಧಾನ** ದಲ್ಲಿ ಕಾರಣಗಳೊಂದಿಗೆ ಹೇಳಿದೆ, ಅವಕಾಶಗಳ ಸಾಧ್ಯತೆಯನ್ನು ಊಹಿಸಿ ಅಧ್ಯಯನ ಮಾಡಲಾಗಿದೆ.

೮. ಮಕ್ಕಳ ಕತೆಗಳ ಲಕ್ಷಣ, ಬೆಳವಣಿಗೆಯನ್ನು ಗುರುತಿಸಿ, ಅವುಗಳ ಅಗತ್ಯವನ್ನು ಅರಿತು, ಮಕ್ಕಳಿಗಾಗಿ ಕಾಳಜಿವಹಿಸಿದ ವಿಶೇಷವಾದ, ಲೇಖಕರ ಮನಸ್ಥಿತಿಗೆ ಕಾರಣಗಳನ್ನು, ಅವರ ಮಾತುಗಳ ತಾತ್ವಿಕತೆಯನ್ನು, ಅವರ ಚಿಂತನೆಗಳನ್ನು **ವಿಮರ್ಶಾತ್ಮಕ** ದೃಷ್ಟಿಯಿಂದ ನೋಡಿ ಅಧ್ಯಯನವನ್ನು ಮಾಡಲಾಗಿದೆ.

೯. ಪ್ರಬುದ್ಧರ ಸಾಹಿತ್ಯದ ಹೊಸ ಓಟದೊಂದಿಗೆ ಗುರ್ತಿಸಿಕೊಂಡ ಸೃಜನಶೀಲ ಲೇಖಕರು ಮಕ್ಕಳ ಸಾಹಿತ್ಯವನ್ನು, ನಿರ್ಲಕ್ಷ್ಯ ಮಾಡಲು, ಲಕ್ಷ್ಯವಹಿಸಲು ಕಾರಣಗಳನ್ನು ಕೆದಕಿ ತೆಗೆಯುವ ಪ್ರಯತ್ನಗಳು ಮತ್ತು ಅಂತಹ ಲೇಖಕರ ಮನೋಧೋರಣೆಗಳು, ಆಸ್ಥೆಯ ವಿವರಣೆಯನ್ನು ಮುಂದಿಟ್ಟುಕೊಂಡು **ವಿಶ್ಲೇಷಣಾ ವಿಧಾನ**ದಲ್ಲಿ ನೋಡಿದೆ.

೧೦. ಅಧ್ಯಯನದ ವಿವರಣೆಯಲ್ಲಿ, ನಿರೂಪಣೆಯಲ್ಲಿ ಸ್ಪಷ್ಟತೆಗೆ ಆದ್ಯತೆಯನ್ನು ನೀಡಿ, ತೀರ್ಮಾನಗಳನ್ನು ಅಂತಿಮವಾಗಿ ಕೈಗೊಳ್ಳದೆ, ಸಾಧ್ಯತೆಗಳು ಇನ್ನೂ ತೆರೆದುಕೊಳ್ಳುವಂತೆ ಇದ್ದರು ವಿಷಯದ ಮಿತಿಗೆ ಒಳಪಡಿಸಿ ನೋಡಲಾಗಿದೆ.

೧೧. ವಿಷಯಗಳನ್ನು ಪ್ರಸ್ತುತಿ ಪಡಿಸುವಾಗ ಅದರ ಒಳಗೂ, ಹೊರಗೂ ಕಾಣುವ ಅಂಶಗಳನ್ನು ಪೂರಕವಾಗಿ ಹೇಳಿದೆ ಮತ್ತು ಅದರ ಪ್ರಸ್ತುತತೆಯ ವಿಚಾರವನ್ನು ಮುಂದಿಡುವಾಗ ವಿದೇಶೀಯ ಅಂಶಗಳೊಂದಿಗೆ **ಸಮೀಕರಿಸಿ,** ತುಲನೆ ಮಾಡಿ, ಮುಖಾಮುಖಿಯಾಗಿಸಿಯೂ ನೋಡಿದೆ.

೧೨. ಪ್ರಾದೇಶಿಕತೆಯನ್ನು ಹೇಳುವಾಗ ಕನ್ನಡದ, ಭಾರತದ ಇತರ ಭಾಷೆಗಳ, ಭಾರತದ ಹೊರಗಿನ ಭಾಷೆಗಳನ್ನು **ಅನುಗಮನ** ಮತ್ತು **ನಿಗಮನ ವಿಧಾನಗಳಲ್ಲಿ**ಯೂ ವಿಷಯಾಂಶಗಳನ್ನು ಪ್ರಸ್ತುತಿ ಪಡಿಸಿ ಅಗತ್ಯತೆಯನ್ನು ಸ್ವಾತಂತ್ರ್ಯಕ್ಕೆ ತಕ್ಕಂತೆ ವಿಸ್ತರಿಸಿಕೊಂಡಿದೆ.

೧೩. ಮಕ್ಕಳ ಕತೆಗಳನ್ನು ಪ್ರಸಾರ ಮಾಡುವ ಪತ್ರಿಕೆ, ಮಾಧ್ಯಮಗಳನ್ನು ತಿಳಸುವಾಗ ಮಾಹಿತಿಯನ್ನು ಅನುಸರಿಸಿ, ಅನುಕೂಲ ಕಲ್ಪಿಸಿ ಕೊಡುವಂತೆ ವಿವರಗಳನ್ನು ನೀಡಿದೆ. ಆರಂಭದಲ್ಲಿ ಮಕ್ಕಳ ಕತೆಗಳ ಬೆಳವಣಿಗೆಗಾಗಿ ಶ್ರಮಿಸಿದ ಸಂಸ್ಥೆಗಳು, ಅವುಗಳ ಗುರಿ, ಉದ್ದೇಶಗಳನ್ನು ವಿವರಣಾತ್ಮಕವಾಗಿ ಅಧ್ಯಯನ ನಡೆಸಲಾಗಿದೆ.

### ೧.೫ ಹಿಂದಿನ ಅಧ್ಯಯನಗಳ ಸಮೀಕ್ಷೆ

ಮಕ್ಕಳ ಸಾಹಿತ್ಯ ಕುರಿತಾಗಿ ಈ ಹಿಂದೆ ನಡೆದಿರುವ ಸಂಶೋಧನೆಗಳು ಕನ್ನಡದ ವಾತಾವರಣದಲ್ಲಿ ಬೆರಳೆಣಿಕೆಯಷ್ಟು ಮಾತ್ರ ಕಾಣಿಸಿಕೊಂಡಿವೆ. ಇದಕ್ಕೆ ಪೂರಕವಾದ ವಾತಾವರಣದ ಕೊರತೆಯೂ, ಸಂಶೋಧಕರು ಈ ಕ್ಷೇತ್ರದ ಕಡೆಗೆ ಗಮನ ಹರಿಸದೆ ಇರುವುದು ಕಾರಣವಾಗಿದೆ. ಮಕ್ಕಳ ಸಾಹಿತ್ಯವನ್ನು ಉತ್ತೇಜಿಸುವ ಸಲುವಾಗಿ ಯಾವುದೇ ವಿಶ್ವವಿದ್ಯಾಲಯವು ಪ್ರತ್ಯೇಕವಾದ ಅಧ್ಯಯನ ಕೇಂದ್ರವನ್ನು ಹೊಂದಿರುವುದಿಲ್ಲ. ಆದುದರಿಂದ ಈ ಕ್ಷೇತ್ರದಲ್ಲಿ ಅಗತ್ಯವಾದಷ್ಟು ಸಂಶೋಧನೆಗಳು ನಡೆಯುತ್ತಿಲ್ಲ. ಆದರೂ ಕೆಲವು ವಿಶ್ವವಿದ್ಯಾಲಯಗಳು ಸಾಹಿತ್ಯದ ಭಾಗವಾಗಿ ಮಕ್ಕಳ ಸಾಹಿತ್ಯವನ್ನು ಗಂಭೀರ ಸಾಹಿತ್ಯವೆಂದು ಪರಿಗಣಿಸಿ ಅಲ್ಲಲ್ಲಿ ಅವಕಾಶಗಳನ್ನು ನೀಡಿರುವುದಿದೆ. ಇದುವರೆಗೆ ನಡೆದಿರುವ ಸಂಶೋಧನೆಗಳಲ್ಲಿ ಮಕ್ಕಳ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡಿರುವುದು ಸಿಗುವುದಿಲ್ಲ. ಪ್ರಮುಖ ಮಕ್ಕಳ ಸಾಹಿತಿಗಳನ್ನು ಮತ್ತು ಅವರ ಸಾಹಿತ್ಯವನ್ನು ವ್ಯಕ್ತಿಗತವಾಗಿ ಅಧ್ಯಯನ ಮಾಡಿರುವುದು ಕಾಣಿಸಿಕೊಳ್ಳುತ್ತದೆ. ಇದು ಸಾಹಿತಿಗಳು ನೀಡಿದ ಕೊಡುಗೆಯನ್ನು, ಅವರ ಮನೋಧೋರಣೆಯಲ್ಲಿ ಮಕ್ಕಳ ಸಾಹಿತ್ಯದ ಕಲ್ಪನೆಯನ್ನು ಹೇಳತ್ತದೆಯೇ ವಿನಹ ಮಕ್ಕಳ ಸಾಹಿತ್ಯವು ಪಡೆದುಕೊಂಡ ಬೆಳವಣಿಗೆ, ತಿರುವುಗಳು, ಪ್ರಭಾವ, ಪ್ರೇರಣೆಗಳನ್ನು ಕುರಿತಾಗಿ ವಿವರವನ್ನು ಒದಗಿಸಿರುವುದಿಲ್ಲ. ಮಕ್ಕಳ ಸಾಹಿತ್ಯವನ್ನು ಇಂದು ಇಡೀಯಾಗಿ ನೋಡುವ ಅಗತ್ಯವಿದೆ. ಮಕ್ಕಳ ಸಾಹಿತ್ಯದ ಪ್ರತ್ಯೇಕ ಶಾಖೆಗಳನ್ನು ಕುರಿತು ವಿವರವಾಗಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವು ಇಂದು ತುರ್ತಾಗಿರುವುದರಿಂದ ಈ ಕಡೆಗೆ ಹೆಚ್ಚು ಗಮನಹರಿಸಬೇಕಿದೆ. ಹಿರಿಯರ ಸಾಹಿತ್ಯದ ಗಂಭೀರತೆಯನ್ನು ತಮ್ಮ ಬರೆವಣಿಗೆಯ ಅಸ್ತ್ರವಾಗಿಸಿಕೊಂಡು, ವ್ಯಂಗ್ಯ, ಹಾಸ್ಯ, ವಿನೋದತೆಯಿಂದ ಕಾಣಿಸಿಕೊಂಡು ಬರೆದ, ತಮ್ಮ ಬರವಣಿಗೆಯ ಮೂಲಕ ಹೆಸರಾದವರು ದಿನಕರ ದೇಸಾಯಿ.

೧ ದಿನಕರ ದೇಸಾಯಿಯವರನ್ನು ಕುರಿತು ಸಂಶೋಧನೆ ನಡೆಸಿದ ಶ್ರೀಪಾದಶೆಟ್ಟಿಯವರ ಲೇಖನಗಳು, ಅವರು ಮಕ್ಕಳ ಸಾಹಿತ್ಯದ ಬಗೆಗೆ ಹೊಂದಿದ್ದ ಅಭಿಪ್ರಾಯವನ್ನು ತಿಳಿಯಲು ಸಹಕಾರಿಯಾಗುತ್ತವೆ. ಇಲ್ಲಿ ದೇಸಾಯಿ ಅವರ ಕೊಡುಗೆಯನ್ನು ಮಾತ್ರ ಸೀಮಿತಗೊಳಿಸಿಕೊಂಡು

ನೋಡಲಾಗಿದೆ. ದಿನಕರರ ದೃಷ್ಟಿಯಲ್ಲಿ ಮಕ್ಕಳ ಬಾಲ್ಯ, ಅವರ ಗ್ರಹಿಕೆ, ಭಾಷೆಯ ಬಳಕೆಗಳ ಬಗೆಗೆ ಬೆಳಕು ಚೆಲ್ಲಿರುವುದಿದೆ. ಆದರೆ ಇದು ಇಡೀ ಮಕ್ಕಳ ಸಾಹಿತ್ಯದ ಸ್ವರೂಪವನ್ನು ಈ ಅಧ್ಯಯನದಲ್ಲಿ ಕಾಣಲು ಸಾಧ್ಯವಾಗಿಲ್ಲ.

೨ ಚಲ್ಯ ರವರು ದೇವುಡು ನರಸಿಂಹಶಾಸ್ತ್ರಿಗಳ ಕುರಿತು ಬರೆದ ಪ್ರಬಂಧದಿಂದ ದೇವುಡು ರವರ ಮಕ್ಕಳ ಸಾಹಿತ್ಯದ ಮನೋಭಾವವನ್ನು ಅರಿಯಬಹುದಾಗಿದೆ. ದೇವುಡು ಅವರು ಸಹ ಕನ್ನಡ ಸಾಹಿತ್ಯದ ಗಂಭೀರ ಲೇಖಕರು. ಅವರು ಮಕ್ಕಳಿಗಾಗಿ ಬರೆದು ತಮ್ಮ ಅಭಿವ್ಯಕ್ತಿಯನ್ನು ಪ್ರಕಟಿಸಿರುವ ಹಿಂದಿನ ಉದ್ದೇಶಗಳು, ಅವರ ಸಾಹಿತ್ಯದಲ್ಲಿನ ಮಹತ್ತ, ಮಕ್ಕಳಿಗಾಗಿ ಅವರು ಕಂಡುಕೊಂಡ ನೀತಿಯ ನಡೆ ಮುಂತಾದವುಗಳನ್ನು ಮಾತ್ರ ಇಲ್ಲಿ ಚಲ್ಯ ರವರು ಸಂಶೋಧನೆಗೆ ಒಳಪಡಿಸಿ ನೋಡಿದ್ದಾರೆ. ಇದು ಸಹ ಅವರ ವೈಯಕ್ತಿಕ ಕೊಡುಗೆಯೇ ಸರಿ. ಮಕ್ಕಳ ಸಾಹಿತ್ಯದ ಸ್ವರೂಪವನ್ನಾಗಲಿ ಅದರ ಬೆಳವಣಿಗೆಗೆ ಕಂಡುಕೊಂಡ ತಾತ್ವಿಕ ನಡೆಯನ್ನು ಇಲ್ಲಿ ನಿರ್ಧರಿಸುವುದಿಲ್ಲ.

೩ ಎಚ್.ಎಸ್. ಸುಜಾತರು ಮಂಡಿಸಿದ ಪ್ರಬಂಧದಿಂದ ಎಂ.ಎಸ್. ಪುಟ್ಟಣ್ಣನವರ ನೀತಿಕತೆಗಳ ಬೆಳವಣಿಗೆ, ಕೊಡುಗೆ, ಮಹತ್ತ್ವ, ಅವುಗಳಿಂದಾದ ಶಿಕ್ಷಣದ ಕಾರ್ಯ, ಮಕ್ಕಳಿಗೆ ಇವುಗಳಿಂದಾದ ಪ್ರಯೋಜನಗಳನ್ನು ಪುಟ್ಟಣ್ಣನವರ ಕೊಡುಗೆಯಾಗಿ ನೋಡಲಾಗಿದೆ. ಅವರ ಅಭಿಪ್ರಾಯದಲ್ಲಿನ ವಿಮರ್ಶೆಯನ್ನು ಕಾಣಬಹುದಾಗಿದೆಯೇ ಹೊರತು ಮಕ್ಕಳ ಸಾಹಿತ್ಯದ ಸಮಗ್ರವಾದ ವಿಮರ್ಶೆಯನ್ನಲ್ಲ.

೪ ವರದರಾಜ ಹುಯಿಲಗೋಳ ಅವರು ದುರ್ಗಸಿಂಹನ ಪಂಚತಂತ್ರಗಳನ್ನು ಕುರಿತು ನಡೆಸಿದ ಸಂಶೋಧನೆಯಿಂದ ಆ ಕತೆಗಳಲ್ಲಿನ ವಸ್ತು ವಿನ್ಯಾಸ, ವ್ಯಾಪ್ತಿ, ಪಾತ್ರಗಳ ಕುರಿತಾದ ಅಧ್ಯನವನ್ನು ಮಕ್ಕಳಿಗೆ ಅದರಿಂದಾದ ಪ್ರಯೋಜನವನ್ನು, ಅವುಗಳ ರಂಜನೀಯ ವ್ಯಾಪ್ತಿಯನ್ನು ನೋಡಬಹುದಾಗಿದೆ. ಇದು ಸಹ ಪಂಚತಂತ್ರವನ್ನಾಧರಿಸಿದ ಸಂಶೋಧನೆಯೇ ಆಗಿದೆ. ಮಕ್ಕಳ ಸಾಹಿತ್ಯದ ಬಗೆಗೆ ಇದು ಬೆಳಕು ಬೀರುವುದಿಲ್ಲ.

೫ ನಾಗುಬಾಯಿ ಬುಳ್ಳಾ ಅವರು ಸಿದ್ಧಯ್ಯ ಪುರಾಣಿಕರ ಬಗ್ಗೆ ನಡೆಸಿದ ಅಧ್ಯಯನವು ಮಹತ್ತ್ವದ ದಾಖಲೆಯಾಗಿ ಕಾಣಿಸಿಕೊಂಡಿದೆ. ಇಲ್ಲಿ ಸಿದ್ಧಯ್ಯ ಪುರಾಣಿಕರ ಮಕ್ಕಳ ಸಾಹಿತ್ಯ, ಅದರ ಮಹತ್ತ್ವ, ಮಕ್ಕಳರಂಜನೆ ಕುರಿತಾದ ವೈಯಕ್ತಿಕವಾದ ದಾಖಲೆಯನ್ನು ಮಾಹಿತಿಯೊಂದಿಗೆ ಕಲೆಹಾಕುವ ಕೆಲಸವನ್ನು ಅದು ಮಾಡಿದೆ. ಇಲ್ಲಿ ಮಕ್ಕಳ ಸಾಹಿತ್ಯದ ಪೂರ್ಣಚಿತ್ರಣ ಕಾಣಿಸಿಕೊಳ್ಳುವುದಿಲ್ಲ.

೬ ಸಿಸು ಸಂಗಮೇಶರ ಸಮಗ್ರ ಮಕ್ಕಳ ಸಾಹಿತ್ಯವನ್ನು ಕುರಿತ ರಾಜೇಂದ್ರ ಎಸ್. ಗಡಾದ ಅವರ ಪ್ರಬಂಧವು ಸಹ ಸಿಸು ಸಂಗಮೇಶರ ಮಕ್ಕಳ ಸಾಹಿತ್ಯವನ್ನು ವಿಹಂಗಮವಾಗಿ ನೋಡಲು ದಾರಿಯಾಗಿದೆ. ಇಲ್ಲಿ ಮಕ್ಕಳ ಸಾಹಿತ್ಯವನ್ನು ಹಿನ್ನೆಲೆಯಾಗಿ ನೋಡಿ ಅದರೊಂದಿಗೆ ಸಂಗಮೇಶರ ಸಾಹಿತ್ಯವನ್ನು ಮಕ್ಕಳಗಾಗಿ ಸಮಗ್ರತೆಯ ನೋಟ, ಮಕ್ಕಳಗಾಗಿ ಅವರು ನಡೆಸಿದ ಸಂಘಟನೆಗಳನ್ನು ಕುರಿತಾದ ಮಾಹಿತಿಯುಳ್ಳ ವಿವರಣೆಗಳ ದಾಖಲೆಯು ಸಿಗುತ್ತದೆ. ಮಕ್ಕಳ ಸಾಹಿತ್ಯದ ಒಟ್ಟಾರೆಯ ಗ್ರಹಿಕೆಯು ಕನ್ನಡ ಮಕ್ಕಳ ಸಾಹಿತ್ಯ ಸಂಶೋಧನೆಯಲ್ಲಿ ಈ ಕೃತಿಯಲ್ಲಿ ಕಾಣಿಸಿಕೊಂಡಿದೆ. ಅದರೊಂದಿಗೆ ಸಂಗಮೇಶರ ಕೊಡುಗೆಗಳ ಮಹತ್ತ್ವವನ್ನು ಹೇಳುತ್ತದೆ. ಆದರೆ ನಮಗೆ ಇಲ್ಲಿಯೂ ಸಮಗ್ರವಾಗಿ, ಪ್ರತ್ಯೇಕವಾಗಿ ನೋಡಿದ ಲಕ್ಷಣಗಳು ಕಾಣಿಸಿಕೊಳ್ಳುವುದಿಲ್ಲ.

೭ ಮಕ್ಕಳ ರಂಗಭೂಮಿ: ಪ್ರದರ್ಶನ, ಪ್ರತಿಕ್ರಿಯೆಯ ಕುರಿತಾದ ನಿಂಗು ಸೊಲಗಿ ಅವರ ಸಂಶೋಧನ ಗ್ರಂಥವು ಸಹ ಒಂದು ಮಜಲಾಗಿ ಕಾಣಿಸಿಕೊಂಡಿದೆ. ಇಲ್ಲಿಯೂ ಮಕ್ಕಳ ವಯಸ್ಸು, ಮಕ್ಕಳ ಸಾಹಿತ್ಯದ ಗ್ರಹಿಕೆಗಳು ಕಾಣಿಸಿಕೊಂಡಿದ್ದು ಮಕ್ಕಳ ಸಾಹಿತ್ಯದೊಂದಿಗೆ ರಂಗಭೂಮಿಯನ್ನು ಅಧ್ಯಯನ ನಡೆಸಿರುವುದಿದೆ. ಮಕ್ಕಳಗೆ ಇರುವ ರಂಗಭೂಮಿಯ ನಂಟು, ಅವಕಾಶಗಳ ಬಗೆಗೆ ಇಲ್ಲಿ ವಿವರವಾಗಿ ನೋಡಲಾಗಿದೆ. ಇಲ್ಲಿ ಮಕ್ಕಳ ಸಾಹಿತ್ಯವು ಸಾಹಿತ್ಯದ ಲಕ್ಷಣವಾಗಿ ಕಾಣಿಸಿಕೊಳ್ಳುವುದಕ್ಕಿಂತ ರಂಗಭೂಮಿಯ ಸ್ವರೂಪ, ಲಕ್ಷಣಗಳ ಕಡೆಗೆ ತಿರುಗಿ ನೋಡಿದ್ದಿದೆ.

ಮೇಲಿನ ಎಲ್ಲಾ ಸಂಶೋಧನೆಗಳು ಮಕ್ಕಳ ಸಾಹಿತ್ಯದ ಶಾಖೆಗಳಾಗಿದ್ದು, ಕನ್ನಡ ಸಾಹಿತ್ಯ ಅಧ್ಯಯನದ ಭಾಗವಾಗಿಯೇ ನಡೆದಿವೆ. ಇವು ಸಹ ಸಾಹಿತ್ಯದ ಲಕ್ಷಣಗಳನ್ನು ಮತ್ತು ಅವುಗಳ ಪ್ರಭಾವವನ್ನು ಮಕ್ಕಳ ಸಾಹಿತ್ಯದ ಪ್ರಭಾವ, ಲಕ್ಷಣಗಳೊಂದಿಗೆ ನೋಡುವ ಕಾರ್ಯವನ್ನು ಮಾಡಿವೆ. ಆದರೆ ನಮಗೆ ನೇರವಾಗಿ ಸಿಗುವುದಿಲ್ಲ. ಹಿರಿಯ ಸಾಹಿತಿಗಳು ಮಕ್ಕಳ ಸಾಹಿತ್ಯಕ್ಕೆ ನೀಡಿದ ಕೊಡುಗೆಗಳು, ಮಹತ್ತ್ವಗಳು, ಅವುಗಳ ನಿಹಿತಾರ್ಥಗಳನ್ನು ಮಾತ್ರ ಅವು ಹೇಳವೆ. ಕನ್ನಡದ ಮಕ್ಕಳ ಸಾಹಿತ್ಯವನ್ನು ಸಮೃದ್ಧಗೊಳಸಿದ ಬಗೆಯನ್ನು ಹೇಳದಂತೆ ಕನ್ನಡದ ವಾತಾವರಣವು ಅನುಭವಿಸಿದ ಪ್ರೇರಣೆಯನ್ನು ಇಲ್ಲಿ ಕಟ್ಟಿಕೊಡಲಾಗಿಲ್ಲ. ಆದರೂ ಅವುಗಳ ಮಹತ್ತ್ವವನ್ನು ಅಲ್ಲಗಳೆಯುವಂತಿಲ್ಲ. ಪಂಚತಂತ್ರ ಕತೆಯ ಪರಿಸರವು ಕನ್ನಡದಲ್ಲಿ ಉಂಟು ಮಾಡಿದ ಪ್ರೇರಣೆಯು ನಮ್ಮ ಮಕ್ಕಳ ಸಾಹಿತ್ಯದ ದಿಕ್ಕನ್ನು, ಕತೆಗಳ ವಸ್ತು ವಿನ್ಯಾಸವನ್ನು ಬದಲಾವಣೆ ಮಾಡಿಕೊಳ್ಳಲು ನೆರವಾಗಿವೆ. ದಿನಕರ ದೇಸಾಯಿ, ಸಿಸು ಸಂಗಮೇಶ, ಪುಟ್ಟಣ್ಣನವರ ಕತೆಗಳ ನೀತಿ ಸ್ವರೂಪದ ಸಾಹಿತ್ಯದಿಂದುಂಟಾದ ಅಗಾಧವಾದ ಬದಲಾವಣೆಯನ್ನು ಮುಂದಿನ ಅಧ್ಯಯನದ ಸ್ಫೂರ್ತಿಯಾಗಿ ಬಳಸಲು ಮಾರ್ಗದರ್ಶಿಯಾಗಿಸಿಕೊಳ್ಳಲಾಗಿದೆ. ಈ ಎಲ್ಲ ಹಿಂದಿನ ಅಧ್ಯಯನಗಳು ಈ ಅಧ್ಯಯನಕ್ಕೆ ಹೊಸ ದಾರಿಯನ್ನು ತೋರಿಸಲು ನೆರವಾಗಿವೆ.

ಹಿಂದೆ ಏನೆಲ್ಲ ಅಧ್ಯಯನಗಳು ಸಾಧ್ಯವಾಗಿವೆಯೋ ಅಲ್ಲಿ ಕಾಣಿಸಿದ ಅಂಶಗಳ ನೆರವಿನಿಂದ ಹೊಸತನದ ಹುಡುಕಾಟವನ್ನು ಆರಂಭಿಸಲು ಸಹಕಾರಿಯಾಗಿದೆ. ಈ ಅಧ್ಯಯನದಲ್ಲಿ ಮಕ್ಕಳ ಸಾಹಿತ್ಯದ

ಪ್ರಮುಖ ಶಾಖೆಯಾದ ಕತೆಗಳನ್ನು ಪ್ರತ್ಯೇಕಿಸಿಕೊಂಡು ನೋಡಲಾಗಿದೆ. ಕತೆಗಳಿಗೆ ಮಕ್ಕಳ ಸಾಹಿತ್ಯದ ಹಿನ್ನೆಯಲ್ಲಿ ಹೊಸ ವ್ಯಾಖ್ಯಾನವನ್ನು ನೀಡಿದೆ. ಕನ್ನಡದ ಮಕ್ಕಳ ಕತೆಗಳ ವಾತಾವರಣವನ್ನು ಜನಪದದ ಹಿನ್ನೆಯಲ್ಲಿ ನೋಡಲಾಗಿದೆ. ಭಾರತದ ಇತರ ಭಾಷೆಗಳ ಪರಿಸರವನ್ನು ನೋಡಿ ಕನ್ನಡದ ಮೇಲೆ ಅವುಗಳಿಂದಾದ ಪರಿಣಾಮಗಳನ್ನು ತಾತ್ವಿಕವಾಗಿ ವಿವರಿಸಿದೆ. ಭಾರತದ ಕೈಗಾರಿಕಾ ಬದಲಾವಣೆಗಳು ಮಕ್ಕಳ ಸಾಹಿತ್ಯದ ಮೇಲೆ ಬೀರಿದ ಪರಿಣಾಮಗಳು, ವಿದೇಶಿಯರ ಆಗಮನ, ಮುದ್ರಣ ವ್ಯವಸ್ಥೆಯಿಂದಾದ ಬದಲಾವಣೆಗಳು ಮಕ್ಕಳ ಸಾಹಿತ್ಯಕ್ಕೆ ಪ್ರೇರಣೆಯಾದುದು, ಧರ್ಮದ ಕಾರಣದಿಂದ ಉಂಟಾದ ಸಾಹಿತ್ಯಕ ಅಂಶಗಳು, ಶಿಕ್ಷಣದ ಭಾಗವಾದ ಮಕ್ಕಳ ಸಾಹಿತ್ಯ, ಪರಂಪರೆಯ ಸಾಹಿತ್ಯ, ದೇಸಿಯ ಕಲೆಗಳ ಪ್ರಭಾವ, ವಿದೇಶಿಯ ಹೊಸ ಬಗೆಯ ನೋಟಗಳು, ಮಕ್ಕಳ ಕತೆಗಳನ್ನು ಪ್ರತ್ಯೇಕಿಸಿ, ಪ್ರೇರೇಪಿಸಿ ನೋಡಿರುವುದನ್ನು ಈ ಅಧ್ಯಯನದಲ್ಲಿ ಅವಶ್ಯವಾಗಿ ನೋಡಲಾಗಿದೆ. ಮಕ್ಕಳ ಕತೆಗಳು ಸಹ ತನ್ನನ್ನು ತಾನು ಕಟ್ಟಿಕೊಂಡ ಬಗೆಯನ್ನು, ಅವುಗಳ ಸ್ವರೂಪಗಳ ಹುಟ್ಟು, ವಿದೇಶೀ ಮಕ್ಕಳ ಸಾಹಿತ್ಯದ ಹಿನ್ನೆಲೆಯಲ್ಲಿ ಪ್ರೇರಣೆ, ಬೆಳವಣಿಗೆ, ಕನ್ನಡದಲ್ಲಿನ ಪ್ರಯೋಗಗಳು, ಲೇಖಕರ ಹಿನ್ನೆಲೆ, ವೃತ್ತಿ, ಹೊಸ ಓದಿನ ಪ್ರೇರಣೆ, ಮಾಧ್ಯಮಗಳ ನೆರವು, ಪ್ರಸಾರಕ್ಕಿರುವ ಸಾಧ್ಯತೆಗಳು, ಆಧುನಿಕ ಕಾಲದಲ್ಲಿ ಮಕ್ಕಳ ಸಾಹಿತ್ಯದಲ್ಲಿ ಕತೆಗಳ ಅನಿವಾರ್ಯತೆ ಎಲ್ಲ ಅಂಶಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿ ನೋಡಲು ಸಾಧ್ಯವಾಗಿದೆ.

## ೧.೬ ಮಕ್ಕಳ ಸಾಹಿತ್ಯ, ಮಕ್ಕಳ ಕಥಾ ಸಾಹಿತ್ಯ, ಮಕ್ಕಳ ಕಥಾ ಸಾಹಿತ್ಯದ ಸ್ವರೂಪ, ತಾತ್ವಿಕತೆಗಳ ಪರಿಕಲ್ಪನಾತ್ಮಕ ಚರ್ಚೆ

ಕನ್ನಡದ ಜನ ಸಮುದಾಯದಲ್ಲಿ ಮೂರನೆಯ ಒಂದು ಭಾಗ ಮಕ್ಕಳಿದ್ದಾರೆ. ಆ ಎಲ್ಲ ಮಕ್ಕಳಿಗೆ ಸಾಹಿತ್ಯದ ಸಂಸ್ಕಾರದ ಅಗತ್ಯವಿದೆ. ಸಾಹಿತ್ಯದ ಮಹತ್ತ್ವದಂತೆಯೇ ಮಕ್ಕಳ ಸಾಹಿತ್ಯವನ್ನು ಗ್ರಹಿಸಬೇಕಿದೆ. ಬಾಲ ಸಾಹಿತ್ಯದ ಓದು ಮಕ್ಕಳಿಗೆ ಮೊದಲನೆಯ ಓದುವಾಗಿ ಕಾಣಿಸಿಕೊಂಡು ಅಭಿರುಚಿಯನ್ನು ಬೆಳಸಿ, ಅವರನ್ನು ಮುಖ್ಯಧಾರೆಯ ಸಾಹಿತ್ಯದ ಓದಿಗೆ ಅಣಿಗೊಳಿಸುತ್ತದೆ. ಆದುದರಿಂದ ಮಕ್ಕಳ ಸಾಹಿತ್ಯದ ಓದು ಆರಂಭಿಕವಾಗಿ ವ್ಯವಸ್ಥಿತವಾಗಿರಬೇಕು. ಇದು ಅವರ ಮುಂದಿನ ಮುಖ್ಯಧಾರೆಯನ್ನು ನಿರ್ಧರಿಸುವುದರಿಂದ ಜ್ಞಾನಾತ್ಮಕ, ಭಾವನಾತ್ಮಕ, ರಂಜನೀಯವಾಗಿಯೂ ಕಾಣಿಸಿಕೊಳ್ಳುವ ಅಗತ್ಯವಿದೆ. ಈ ಅಗತ್ಯಗಳನ್ನು ಶಿಕ್ಷಣದ ಸಾಧನದ ಮೂಲಕ ಮಾತ್ರ ತರುವ ಪ್ರಯತ್ನವು ಇಂದಿನ ವಿಶಾಲವಾದ ಜ್ಞಾನ ಜಗತ್ತಿನಲ್ಲಿ ಸಾಲುತ್ತಿಲ್ಲವಾಗಿದೆ. ಅದಕ್ಕಾಗಿ ಅವರದೇ ಆದ ಸಾಹಿತ್ಯದ ಪ್ರತ್ಯೇಕ ಪ್ರಸ್ತುತಿಯು ಅಗತ್ಯವಾಗಿದೆ. ಮಕ್ಕಳ ಅನುಭವ ಜಗತ್ತು ಇಂದು ಬಹಳ ವಿಸ್ತರಿಸಿಕೊಂಡಿದೆ. ಅವರು ಅವರದೇ ಆದ ಬಾಲ್ಯವನ್ನು ಅನುಭವಿಸುವ ಅವಕಾಶಗಳು ಬೇಕಾಗಿವೆ. ಇಂತಹ ಅವಕಾಶಗಳನ್ನು ಮಕ್ಕಳು ಸಾಹಿತ್ಯದಿಂದ ಪಡೆಯಬಲ್ಲರು, ಆದರೆ ಮುಖ್ಯವಾಹಿನಿಯ ಪ್ರಬುದ್ಧರ ಸಾಹಿತ್ಯ ಮಕ್ಕಳ ಬೇಕು ಬೇಡಗಳನ್ನು ನಿರ್ಧರಿಸಲಾರದು ಮತ್ತು ಪೂರೈಸಲಾರದು. ಇದರಿಂದಾಗಿ ಮಕ್ಕಳ ಅಗತ್ಯತೆಯನ್ನು ಅರಿತು ಅವಶ್ಯಕತೆಗಳನ್ನು ಈಡೇರಿಸುವ ಅವರದೇ ಸಾಹಿತ್ಯವನ್ನು ಕಂಡುಕೊಳ್ಳುವ ಅಗತ್ಯವಿದೆ. ಇಂತಹ ಅಗತ್ಯವನ್ನು ಪೂರೈಸುವ ಸಾಹಿತ್ಯದ ಪರಿಕಲ್ಪನೆಯೇ 'ಮಕ್ಕಳ ಸಾಹಿತ್ಯ'ವಾಗಿದೆ. ಮಕ್ಕಳಿಗಾಗಿ ಇರುವ ಸಾಹಿತ್ಯ ಎನ್ನುವ ಅರ್ಥವನ್ನು ಇದು

ನೀಡುತ್ತದೆ. ಅದನ್ನು ಬರೆದವರು ಯಾರು ಎನ್ನುವುದು ಇಲ್ಲಿ ಅಪ್ರಸ್ತುತವಾದುದು, ಯಾರಿಗಾಗಿ ಬರೆಯಲಾಗಿದೆ ಎನ್ನುವುದು ಮುಖ್ಯವಾದುದು. ಮಕ್ಕಳಗಾಗಿ, ಅವರ ಅಭಿರುಚಿಯ ಅನುಸಾರ, ಅವರ ಓದಿನ ಸಾಮರ್ಥವನ್ನು ಆಧರಿಸಿ, ವಯಸ್ಸಿನ ಪಕ್ವತೆ (ಮಾನಸಿಕ, ದೈಹಿಕ ವಯಸ್ಸನ್ನು ಒಳಗೊಂಡಿರುವುದು) ನಿರ್ಧರಿಸಿಕೊಂಡು ಅವರ ಪರಿಸರದ ಅನುಭವವನ್ನು ಒದಗಿಸಿಕೊಡುವ ಸಾಹಿತ್ಯವು ಇದಾಗಿದೆ. ಮಕ್ಕಳು ಮಕ್ಕಳಗಾಗಿ ಬರೆಯುವ ಸಾಹಿತ್ಯವನ್ನು ಮಕ್ಕಳ ಸಾಹಿತ್ಯವೆಂದರೆ ಅವರಿಂದ ಇಂತಹ ನಿರೀಕ್ಷೆಗಳು ಸಾಧುವಲ್ಲ. ಹಿರಿಯರೆ ಮಕ್ಕಳಗಾಗಿ ಇಂತಹ ಅಗತ್ಯಗಳನ್ನು ಪೂರೈಸಿಕೊಡ ಬೇಕಾದುದರಿಂದ, ಪೂರೈಸ ಬಲ್ಲವರಾದುದರಿಂದ ಅವರೇ ಮಕ್ಕಳ ಸಾಹಿತ್ಯವನ್ನು ಬರೆಯಲು ಸೂಕ್ತ. ಹಿರಿಯರ ರಚನೆಯಲ್ಲಿ ಈಗಾಗಲೇ ಬರೆದಿರುವ ಸಂಗತಿಗಳಲ್ಲಿ ಮಕ್ಕಳ ಸಾಹಿತ್ಯಕ್ಕೆ ತಕ್ಕಂತೆ ಮೇಲೆ ಚರ್ಚಿಸಿದ ಅಂಶಗಳನ್ನು ಒಳಗೊಂಡಂತೆ ಆರಿಸಿ ಕೊಡುವ ಕ್ರಮವೂ ಸಹ ಮಕ್ಕಳ ಸಾಹಿತ್ಯವೇ ಆಗಿವೆ. ಆದರೆ ಆರಿಸುವಾಗ ಎಚ್ಚರಿಕೆಯು ಅಗತ್ಯವಾದುದು. ಪ್ರಸ್ತುತ ಶಿಕ್ಷಣ ವ್ಯವಸ್ಥೆಯು ಈ ವಿಧಾನವನ್ನು ಅಳವಡಿಸಿಕೊಂಡು ಅನುಸರಿಸಿಕೊಂಡು ಬಂದಿದೆ. ಇದು ಕೂಡ ಮಕ್ಕಳ ಸಾಹಿತ್ಯದ ಪರಿಕಲ್ಪನೆಯ ಕಾರ್ಯವಾಗಿದೆ. ಮಕ್ಕಳು ಮಕ್ಕಳಗಾಗಿಯೆ ಬರೆದುಕೊಂಡದ್ದು ಮಕ್ಕಳ ಸಾಹಿತ್ಯ ಎಂಬ ಪರಿಕಲ್ಪನೆ ನಮ್ಮಲ್ಲಿ ಬೇರೂರಿದೆ. ಆದರೆ ಮಕ್ಕಳು ಬರೆಯುವಾಗ ಹಿರಿಯವರಂತೆ ಆಸ್ಥೆ ವಹಿಸುವುದು ಕಂಡುಬರುವುದಿಲ್ಲ. ಆ ರಚನೆಗಳಲ್ಲಿ ಮಕ್ಕಳ ಸಾಹಿತ್ಯದ ಲಕ್ಷಣಗಳು ಕಾಣಿಸಿಕೊಳ್ಳದೆ ದೊಡ್ಡವರದೇ ಸಾಹಿತ್ಯದಂತಹ ಲಕ್ಷಣಗಳು ಗೋಚರಿಸಿದರೆ ಅದು ಮಕ್ಕಳ ಸಾಹಿತ್ಯವಾಗುವುದಿಲ್ಲ. ಅಂತಹ ಲೇಖಕರು ವಯಸ್ಸಿನಿಂದ ಎಳೆಯರಾಗಿದ್ದು ಅನುಭವದದಲ್ಲಿ ಹಿರಿಯರ ಛಾಯೆಯನ್ನು ಮೂಡಿಸಿ ಬರೆಯುತ್ತಾರೆ ಎನ್ನುವುದಿದೆ. ಕೆಲವು ಸಲ ಮಕ್ಕಳ ಪರಿಸರದ ಸಂಗತಿಗಳಂದ ಕೂಡಿದ ರಚನೆಗಳು ಅವರಿಂದ ಉಂಟಾಗಲೂ ಬಹುದು. ಇಂತಹ ಸಾಧ್ಯತೆಗಳನ್ನು ಮಕ್ಕಳ ಸಾಹಿತ್ಯವೆಂದು ಭಾವಿಸಬಹುದು. ಹೀಗೆ ಮಕ್ಕಳ ಸಾಹಿತ್ಯದ ಪರಿಕಲ್ಪನೆಯ ಗ್ರಹಿಕೆಗೆ ಮೂರು ಆಯಾಮಗಳವೆ.

ಮಕ್ಕಳ ಸಾಹಿತ್ಯದಿಂದ ಕವಲೊಡೆದ ಶಾಖೆಯಾಗಿ ಕಾಣಿಸಿಕೊಂಡು ಪ್ರತೇಕವಾಗಿ ಅಸ್ಮಿತೆಯನ್ನು ಕಂಡುಕೊಂಡ ಗದ್ಯಪ್ರಕಾರ ಸಾಹಿತ್ಯದ ಒಂದು ಭಾಗವೇ ಮಕ್ಕಳ ಕಥಾ ಸಾಹಿತ್ಯವಾಗಿದೆ. 'ಮಕ್ಕಳ ಕಥಾ ಸಾಹಿತ್ಯ' ಎಂಬ ಪರಿಕಲ್ಪನೆಯು ಉಂಟಾದುದು ಮಕ್ಕಳ ಸಾಹಿತ್ಯವನ್ನು ಪ್ರತ್ಯೇಕಿಸಿ ನೋಡಿದ ಮೇಲೆಯೇ ಎನ್ನಬಹುದು. ಮಕ್ಕಳ ಸಾಹಿತ್ಯದಲ್ಲಿಯೂ ಪದ್ಯ ಮತ್ತು ಗದ್ಯ ಎಂಬ ಪ್ರಕಾರಗಳು ಕಾಣಿಸಿಕೊಂಡು ಪ್ರಬುದ್ಧರ ಸಾಹಿತ್ಯದಂತೆಯೇ ವಿಂಗಡಿಸಿ ನೋಡಲಾಯಿತು. ಮೊದಲಿಗೆ ಗದ್ಯ ಎಂದರೆ ಮಕ್ಕಳ ಸಾಹಿತ್ಯದಲ್ಲಿ ಕತೆಯ ಸ್ವರೂಪದಲ್ಲಿದ್ದ ಎಲ್ಲವೂ ಸೇರಿತ್ತು. ಪ್ರಬುದ್ಧರ ಸಾಹಿತ್ಯದ ಪ್ರಭಾವವನ್ನು ಬಳಸಿಕೊಂಡು ಮಕ್ಕಳ ಸಾಹಿತ್ಯವನ್ನು ಅದರ ಸ್ವರೂಪದ ಅನುಸಾರ ವರ್ಗೀಕರಿಸಿ ನೋಡಿದಾಗ ಗದ್ಯದ ಪರಿಕಲ್ಪನೆಯೊಳಗೆ ಸೇರಿದ್ದ ಕತೆ , ಕಾದಂಬರಿ, ಸಣ್ಣಕತೆ, ನೀಳ್ಗತೆ, ದೀರ್ಘಕತೆ, ಕಿರುಕಾದಂಬರಿ ಎಂಬ ಪ್ರಕಾರಗಳು ಹೊರಬಂದು ಪ್ರತ್ಯೇಕವಾಗಿ ಹುಟ್ಟಿಕೊಂಡವು. ಅವು ಮಕ್ಕಳಗಾಗಿ ಇರುವುದರಿಂದ ಮಕ್ಕಳ ಕತೆ, ಮಕ್ಕಳ ಕಾದಂಬರಿ ಮಕ್ಕಳ ಸಣ್ಣಕತೆ, ಮಕ್ಕಳ ನೀಳ್ಗತೆ, ಮಕ್ಕಳ ದೀರ್ಘಕತೆ, ಮಕ್ಕಳ ಕಿರುಕಾದಂಬರಿ ಎಂಬ

ಸ್ವರೂಪದಲ್ಲಿ ಗುರ್ತಿಸುವಂತಾಯಿತು. ಹೀಗೆ ಉಂಟಾದ 'ಮಕ್ಕಳ ಕತೆ' ಎಂಬ ಪರಿಕಲ್ಪನೆಯು ಮಕ್ಕಳ ಸಾಹಿತ್ಯದ ಪ್ರಮುಖ ಪ್ರಕಾರವಾಗಿದ್ದು 'ಮಕ್ಕಳಗಾಗಿ ರಚಿತವಾದ ಕತೆಗಳು' ಎಂಬ ಅರ್ಥವನ್ನು ನೀಡುತ್ತದೆ. ಇದನ್ನು ಸಹ ಮಕ್ಕಳ ಸಾಹಿತ್ಯದ ಹಿನ್ನೆಯಲ್ಲಿಯೇ ಗ್ರಹಿಸುವುದರಿಂದ ಮೂರು ಆಯಾಮಗಳಲ್ಲಿ ಕಾಣಬಹುದು. ಮಕ್ಕಳಗಾಗಿ ಹಿರಿಯರು ಬರೆದ ಕತೆಗಳು, ಮಕ್ಕಳಗಾಗಿ ಹಿರಿಯರ ಸಾಹಿತ್ಯದಿಂದ ಆರಿಸಿ ನೀಡಿದ, ಹೇಳಿದ ಕತೆಗಳು. ಮಕ್ಕಳು ತಮಗಾಗಿ ಬರೆದುಕೊಂಡ ಕತೆಗಳು ಎಂಬ ಅರ್ಥದಲ್ಲಿ ಈ ಪರಿಕಲ್ಪನೆಯನ್ನು ನೋಡಲಾಗಿದೆ. ಯಾವುದೇ ಮೂಲದಿಂದ ಮಕ್ಕಳಗಾಗಿ ಬಂದಿರುವ ಕತೆಗಳನ್ನು ಮಕ್ಕಳ ಕತೆಗಳು ಎಂಬ ಪರಿಕಲ್ಪನೆಯಿಂದ ಅರ್ಥಮಾಡಿಕೊಳ್ಳಬಹುದಾಗಿದೆ.

## ಮಕ್ಕಳ ಕಥಾ ಸಾಹಿತ್ಯದ ಸ್ವರೂಪ

ಪ್ರತ್ಯೇಕವಾಗಿ ಕಾಣಿಸಿಕೊಂಡ ಮಕ್ಕಳ ಕಥಾ ಸಾಹಿತ್ಯವು ಯಾವ ಯಾವ ರೂಪದಲ್ಲಿ ಸಿಗುತ್ತದೆ, ಏನೆಲ್ಲ ವಿಧಗಳಲ್ಲಿ ಅದು ವರ್ಗೀಕರಣಗೊಂಡಿದೆ, ಯಾವ ವಿಧಾನದಲ್ಲಿ ತನ್ನ ಪ್ರಭಾವವನ್ನು, ಪ್ರೇರಣೆಯನ್ನು ಹೊಂದಿದೆ ಎಂದು ಕಂಡುಕೊಳ್ಳುವುದು ಅದರ ಸ್ವರೂಪವಾಗಿದೆ. ಈ ಹಿನ್ನೆಯ ಅರ್ಥವ್ಯಾಪಿಯನ್ನು ಹೇಳುವ ಪರಿಕಲ್ಪನೆಯನ್ನು ಮಕ್ಕಳ ಕಥಾ ಸಾಹಿತ್ಯ ಸ್ವರೂಪದ ಪರಿಕಲ್ಪನೆ ಎನ್ನಬಹುದಾಗಿದೆ. ಮಕ್ಕಳ ಕತೆಗಳು ಆರಂಭದಲ್ಲಿ ಕಾಣಿಸಿಕೊಂಡದ್ದು ಮೌಖಿಕ ಸ್ವರೂಪದ ಜನಪದದಲ್ಲಿ. ನಂತರ ಅದು ಅದೇ ಪರಂಪರೆಯ ಅಜ್ಜಿಕತೆಗಳ ಸ್ವರೂಪವನ್ನು ಪಡೆದುಕೊಂಡು ಕಾಣಿಸಿಕೊಂಡಿತು. ಅಡಗೂಲಜ್ಜಿಯ ಸ್ವರೂಪದಲ್ಲೂ ಮಕ್ಕಳ ಕತೆಗಳು ಪರೋಕ್ಷವಾಗಿ ಗುಪ್ತಗಾಮಿನಿಯಂತೆ ಹರಿದಾಡಿರುವುದಿದೆ. ಆದುದರಿಂದ ಅದೂ ಸಹ ಇದರ ಸ್ವರೂಪದ ಭಾಗವಾಗಿದೆ ಎನ್ನಬಹುದು. ಗೀತ ಕಥನ, ಕಥನಾಕಾವ್ಯದಲ್ಲಿಯೂ ಮಕ್ಕಳ ಕತೆಗಳು ಕಾಣಿಸಿಕೊಂಡಿರುವುದರಿಂದ ಅವುಗಳು ಇದರ ಸ್ವರೂಪವಾಗಿವೆ. ಅಲ್ಲಿಯವರೆಗೆ ಬಾಯ್ದೆರೆಯಲ್ಲಿದ್ದವು ಬರೆಹದ ವ್ಯವಸ್ಥೆಗೆ ಸಿಕ್ಕಿ ಲಿಖಿತ ರೂಪದಲ್ಲಿ ಕತೆಗಳು ಹರಿದಾಡಿದ ಮೇಲೆ ಲಿಖಿತ ಸ್ವರೂಪದ ಕತೆಗಳು ಎಂಬ ಪರಿಕಲ್ಪನೆಯಲ್ಲಿಯೂ ಗ್ರಹಿಸುವಂತಾಯಿತು. ಪರಂಪರೆಯ ವಸ್ತುವಿನ ಹರವುಳ್ಳವಾಗಿದ್ದು ಕತೆಗಳು ಕಾಣಿಸಿಕೊಂಡಾಗ ಅವು ಪರಂಪರೆಯ ಸ್ವರೂಪದ ಕತೆಗಳು ಎಂತಲೂ ಕರೆಸಿಕೊಂಡವು. ನವೋದಯದ ಪ್ರಭಾವವು ಹಿರಿಯರ ಸಾಹಿತ್ಯದ ಮೇಲಾಗಿ, ಅದು ಮಕ್ಕಳ ಸಾಹಿತ್ಯದ ಮೇಲೂ ಪ್ರೇರಣೆಯಾದಾಗ ಹೊಸ ದಿಕ್ಕು ತೆರೆದುಕೊಂಡು ವಿದೇಶಿ ವಸ್ತುಗಳೊಂದಿಗೆ ಕಾಣಿಸಿಕೊಂಡಾಗ ಅವುಗಳ ಸ್ವರೂಪದಲ್ಲೂ ಬದಲಾವಣೆಗಳು ಉಂಟಾದವು. ಆಗ ಇದು ಕತೆ, ಸಣ್ಣಕತೆ, ನೀಳ್ಗತೆ, ಕಿರುಕಾದಂಬರಿ, ದೀರ್ಘಕಾದಂಬರಿ ಸ್ವರೂಪಗಳನ್ನು ಪಡೆಯಿತು. ಅದರ ಪರಿಕಲ್ಪನೆಯು ಬದಲಾಯಿತು. ಕತೆಯ ವಸ್ತುವು ನೀತಿ ಹೇಳುವ ಸಲುವಾಗಿ ಆಶಯಗಳನ್ನು ಇರಿಸಿಕೊಂಡು ಬಂದಾಗ ನೀತಿಕತೆ ಸ್ವರೂಪವನ್ನು, ಶಿಕ್ಷಣದ ಭಾಗವಾಗಿ ಕಾಣಿಸಿಕೊಂಡಾಗ, ಆದರ್ಶದ ತಯಾರಿಗಾಗಿ ಬಳಕೆಯಾದಾಗ ಮೌಲ್ಯ ಸ್ವರೂಪದ ಕತೆಗಳ ಪರಿಕಲ್ಪನೆಯನ್ನು ತಳೆದಿದೆ. ವಿವಿಧ ವಸ್ತು ವೈವಿಧ್ಯತೆಯೊಂದಿಗೆ ಮೂಡಿ ಬಂದಾಗ ಮಾನುಷ, ಅಮಾನುಷ, ಅತಿಮಾನುಷ ಶಕ್ತಿಗಳೊಂದಿಗೆ ಅವಾಸ್ತವದ ಕಲ್ಪನೆಗಳನ್ನು ಹೊಂದಿದ

ಕತೆಗಳು ಫ್ಯಾಂಟಸಿ ಸ್ವರೂಪದವೆನಿಸುತ್ತವೆ. ಅದಕ್ಕೆ ವಿರುದ್ಧವಾಗಿ ಬದುಕಿನ ಸ್ತರಗಳು, ಅನುಭವಗಳು, ಸಮಸ್ಯೆಗಳು, ರಂಜನೆಯನ್ನು ಹೊತ್ತು ವಾಸ್ತವದ ಬದುಕಿನ ಮಿಡಿತಗಳನ್ನು ಕಟ್ಟಿಕೊಡುವಂತಹವು ವಾಸ್ತವ ಸ್ವರೂಪದ ಕತೆಗಳೆನಿಸುತ್ತವೆ. ಕತೆಗಳು ರಂಜಿಸುವ ಸಲುವಾಗಿ ಬಂದು ಆಕರ್ಷಣೆಯ ಸಲುವಾಗಿ ಬಣ್ಣಬಣ್ಣದ ಚಿತ್ರಗಳನ್ನು ಹೊಂದಿ, ಚಿತ್ರ ಸ್ವರೂಪದ ಕಾಮಿಕ್ಸ್‌ಗಳಾಗಿ ಕಾಣಿಸಿಕೊಂಡಿವೆ. ಕತೆಯು ದೀರ್ಘವಾಗಿ ಇದ್ದು ತುಂಡು ತುಂಡಾಗಿ ಮಕ್ಕಳನ್ನು ತಲುಪುವಾಗ ಧಾರಾವಾಹಿ ಸ್ವರೂಪದಲ್ಲಿ ಹೇಳುವುದಿದೆ. ಹೀಗೆಲ್ಲ ಸ್ವರೂಪದ ಪರಿಕಲ್ಪನೆಯು ಕತೆ ಕಾಣಿಸಿಕೊಂಡಲೆಲ್ಲ ಕಾಣಿಸಿಕೊಂಡು ತನ್ನ ವ್ಯಾಪ್ತಿಯನ್ನು ಹೇಳುತ್ತದೆ.

### ತಾತ್ವಿಕತೆ

ಮಕ್ಕಳ ಕಥಾ ಸಾಹಿತ್ಯ ಸ್ವರೂಪವನ್ನು ಹೇಳುವಾಗ 'ತಾತ್ವಿಕತೆ'ಯ ಪರಿಕಲ್ಪನೆಯನ್ನು ದಾರಿಮಾಡಿಕೊಂಡು ಅದರ ಉದ್ದಕ್ಕೂ ದೃಷ್ಟಿಯನ್ನು ಹರಿಸಿ ನಡೆದಾಡಿದಂತಿದೆ. ತಾತ್ವಿಕತೆಯ ಪರಿಕಲ್ಪನೆಯ ಅರ್ಥವನ್ನು ವಿವಿಧ ಐಡಿಯಾಲಾಜಿಗಳನ್ನು ಮುಂದಿರಿಸಿಕೊಂಡು ಕತೆಗಳನ್ನು ಅಧ್ಯಯನ ಮಾಡಲಾಗಿದೆ. ಜನಪದದ ಸ್ವರೂಪದಲ್ಲಿ ಹುದುಗಿದ್ದ ಮಕ್ಕಳ ಕತೆಗಳು ಪ್ರತ್ಯೇಕತೆಯನ್ನು ಅನುಭವಿಸುವಾಗ ಅದರ ವಿಭಜನೆಗೆ ಕಾರಣವಾದ ಅಂಶಗಳನ್ನು ಇದರ ತಾತ್ವಿಕತೆಯ ಪರಿಕಲ್ಪನೆ ಎಂದು ಭಾವಿಸಿಕೊಳ್ಳಲಾಗಿದೆ. ಪರಂಪರೆಯ ಕತೆಗಳನ್ನೇ ಮಕ್ಕಳಿಗೆ ಹೇಳಲು, ಶಿಕ್ಷಣದ ರೂಪದಲ್ಲಿ ನೀಡಲು ಅವುಗಳು ಮಹತ್ತ್ವವಹಿಸಿರುವುದು, ಆದರ್ಶ ಸಮಾಜದ ತುಡಿತ, ಮಕ್ಕಳ ಭವಿಷ್ಯದ ತಯಾರಿಗಾಗಿ ವಹಿಸಿದ ಕಾಳಜಿ ಇವೆಲ್ಲವೂ ಬೆನ್ನೆಲುಬಾಗಿ ಕಾಣಿಸಿಕೊಂಡಿರುವುದು ಕತೆಗಳ ಹಿಂದಿನ ತಾತ್ವಿಕತೆಯಾಗಿದೆ. ಭಾರತಕ್ಕೆ ಕತೆಗಳು ಕಾಲಿಟ್ಟಾಗ ಸ್ವೀಕರಿಸಿದ ಮಾರುಕಟ್ಟೆ, ಓದುಗ ಮಕ್ಕಳು, ಮುದ್ರಕರು, ಅವುಗಳನ್ನು ತಂದ ಮಿಷನರಿಗಳು ಎಲ್ಲರ ಉದ್ದೇಶಗಳು ಬೇರೆ ಬೇರೆಯೇ ಆಗಿವೆ. ಅವುಗಳನ್ನು ಅವರದೇ ದೃಷ್ಟಿಕೋನದಲ್ಲಿ ಚಿಂತಿಸುವುದು ತಾತ್ವಿಕತೆಯ ಪರಿಕಲ್ಪನೆಯಾಗಿದೆ. ನವೋದಯದಲ್ಲಿ ಮಕ್ಕಳ ಕತೆಗಳು ಪ್ರಭಾವ, ಪ್ರೇರಣೆಗಳನ್ನು ಪಡೆದುಕೊಳ್ಳುವಲ್ಲಿ ಇದ್ದ ಅನಿವಾರ್ಯತೆಗಳು, ಪ್ರಭಾವಿಸಿದ ಸಾಹಿತ್ಯದ ತುರ್ತು, ಶಿಕ್ಷಣದ ಹೇರಿಕೆಯಿಂದ ಉಂಟಾದ ಬದಲಾವಣೆಗಳ ಹಿನ್ನೆಲೆಯಲ್ಲಿ ನಿಂತು ವಿಶ್ಲೇಷಿಸುವುದು, ವಿಷಯಗಳನ್ನು ಹರಡಿಕೊಂಡು ನೋಡುವುದು, ಹೇಗೆ, ಏಕೆ, ಏನು ಎಂದು ಉಂಟಾಗುವ ಪ್ರಶ್ನೆಗಳಿಗೆ ಪರಿಹಾರೋಪಾಯದ ಹಾದಿಯನ್ನು ಹುಡುಕುವುದು ತಾತ್ವಿಕತೆಯ ಪರಿಕಲ್ಪನೆಯನ್ನು ತಿಳಿಸುತ್ತದೆ. ತೌಲನಿಕವಾಗಿ ನೋಡುವಾಗ ಒಂದನ್ನು ಇನ್ನೊಂದರ ಮುಂದಿರಿಸಲು, ಎದುರಾಗಿಸಲು, ಹೊಸತನವನ್ನು ಹೇಳಲು ನಡೆಸಿದ ಯತ್ನಗಳು ಇದೇ ಪರಿಕಲ್ಪನೆಯನ್ನು ನೀಡುತ್ತವೆ. ಕತೆಗಳ ಅಗತ್ಯ,ಮಹತ್ತ , ಉದ್ದೇಶಗಳ ಹಿಂದೆ ಬಿದ್ದು ಅವುಗಳ ಮುನ್ನಡೆಯನ್ನು ತರ್ಕಿಸುವ ವ್ಯಾಪ್ತಿಯನ್ನು ತಾತ್ವಿಕತೆಯು ನೇರಳಾಗಿ ಹೇಳುತ್ತದೆ. ಮಕ್ಕಳ ಕತೆಗಳು ಆಧುನಿಕ ತುಡಿತದೊಂದಿಗೆ ನಡೆಸಿದ ಪ್ರಯೋಗಗಳ ಹಿಂದಿನ ಆಶಯಗಳು, ಬದಲಾದ ಸಂಗತಿಗಳಲ್ಲಿ ಕತೆಗಳ ಸ್ಥಾನ, ನೆರವಿಗೆ ಬಂದ ಮಾಧ್ಯಮಗಳು, ಟ್ರಸ್ಟ್‌ಗಳು, ವ್ಯಕ್ತಿಗಳು ಇರಿಸಿಕೊಂಡು ಬಂದ ಉದ್ದೇಶಗಳನ್ನು ತಿಳಿಯುವುದು ಇದೆ ಪರಿಕಲ್ಪನೆಯಿಂದಾಗಿದೆ. ಮಕ್ಕಳ ಕತೆಗಳ ಒಳ ಹೊರಗನ್ನು, ಸಾಧ್ಯತೆ,

ಸವಾಲುಗಳನ್ನು ಕೆದಕಿ ನೋಡುವ ಫಲವಾಗಿ ಕಾಣಿಸಿಕೊಂಡ ಅಧ್ಯಯನ ಇದಾಗಿದೆ. ಇಲ್ಲಿ ದೇಶ ವಿದೇಶಗಳ ಸಾಧ್ಯತೆಗಳನ್ನು ಕನ್ನಡದ ಕತೆಗಳನ್ನು ಕೇಂದ್ರವಾಗಿರಿಸಿಕೊಂಡು ಅವೆಲ್ಲವುಗಳು ಪರಿಧಿಯಲ್ಲಿ ಕಾಣಿಸಿಕೊಂಡಿವೆ. ಭಾರತದ ಬಹುಭಾಷೆಯಿಂದ ಬಹುಸಂಸ್ಕೃತಿಯಿಂದ ಪ್ರಚೋದನೆಗೊಂಡ ಕತೆಗಳನ್ನು, ವಾಸ್ತವದಲ್ಲಿ ಅವು ಕಾಣಿಸಿಕೊಳ್ಳಬೇಕಾದ ಅನಿವಾರ್ಯತೆಗಳನ್ನು ಒಂದು ಕಡೆ ತುರ್ತಾಗಿ ಭಾವಿಸಿಕೊಂಡು ನೋಡುವ ಪ್ರಯತ್ನಗಳು ಈ ಪರಿಕಲ್ಪನೆಯಲ್ಲಿ ಕಾಣಿಸಲು ಸಾಧ್ಯವಾಗಿವೆ.

# ಅಧ್ಯಾಯಃ ೨

## ಮಕ್ಕಳ ಕಥಾ ಸಾಹಿತ್ಯದ ಹಿನ್ನೆಲೆ, ಅರ್ಥ, ಸ್ವರೂಪ, ಅಗತ್ಯ, ವ್ಯಾಪ್ತಿ, ಲಕ್ಷಣಗಳು

೨.೧ ಮಕ್ಕಳ ಕಥಾ ಸಾಹಿತ್ಯದ ಹಿನ್ನೆಲೆ

೨.೨ ಮಕ್ಕಳ ಕಥಾ ಸಾಹಿತ್ಯದ ಅರ್ಥ

೨.೩ ಮಕ್ಕಳ ಕಥಾ ಸಾಹಿತ್ಯದ ಸ್ವರೂಪ

೨.೪ ಮಕ್ಕಳ ಕಥಾ ಸಾಹಿತ್ಯದ ಅಗತ್ಯ

೨.೫ ಮಕ್ಕಳ ಕಥಾ ಸಾಹಿತ್ಯದ ವ್ಯಾಪ್ತಿ

೨.೬ ಮಕ್ಕಳ ಕತೆಗಳ ಪ್ರಮುಖ ಲಕ್ಷಣಗಳು

# ಅಧ್ಯಾಯ ೨

# ಮಕ್ಕಳ ಕಥಾ ಸಾಹಿತ್ಯ ಹಿನ್ನೆಲೆ, ಅರ್ಥ, ಸ್ವರೂಪ, ಅಗತ್ಯ, ವ್ಯಾಪ್ತಿ, ಲಕ್ಷಣಗಳು

ಮಕ್ಕಳ ಸಾಹಿತ್ಯವು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಒಂದಾಗಿದೆ. ಕನ್ನಡ ಸಾಹಿತ್ಯವು ಆರಂಭದಲ್ಲಿ ಕಾವ್ಯವನ್ನು ತನ್ನ ಪ್ರಧಾನ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡು ಜನ ಮಾನಸದಲ್ಲಿ ನೆಲೆಯನ್ನು ಕಂಡುಕೊಂಡಿತು. ನಂತರ ಗದ್ಯಯುಗವು ಆರಂಭವಾದ ಮೇಲೆ ಇನ್ನಷ್ಟು ವಿಸ್ತರಿಸಿಕೊಂಡು ಬೆಳೆದು ಬಂದಿದೆ. ಗದ್ಯ ಸಾಹಿತ್ಯಕ್ಕೆ ಹೊರಗಿನ ಪ್ರೇರಣೆಗಳಾದ ಮೇಲೆ ಅದು ನವೋದಯದಲ್ಲಿ ಹೊಸತನದ ಸೃಷ್ಟಿಯನ್ನು ತಳೆದು ತನ್ನ ವಿಕಾಸವನ್ನು ಹೊಂದಿತು. ಗದ್ಯವು ಕತೆ, ಸಣ್ಣಕತೆ, ನೀಳ್ಗತೆ, ದೀರ್ಘಕತೆ, ಕಿರುಕಾದಂಬರಿ, ಕಾದಂಬರಿ, ಪ್ರಬಂಧಗಳು, ಆತ್ಮಚರಿತ್ರೆ, ಜೀವನ ಚರಿತ್ರೆ, ಅನುಭವಕಥನ, ಪ್ರವಾಸ ಕಥನಾ ಮುಂತಾದ ಸ್ವರೂಪಗಳಲ್ಲಿ ಕಾಣಿಸಿಕೊಂಡಿತು. ತಳಮಟ್ಟದವರ ಅನುಭವಗಳು ಬರೆಹದ ವಸ್ತುವಾದ ಕಾಲಕ್ಕೆ ಪ್ರಗತಿಶೀಲ, ದಲಿತ ಸಾಹಿತ್ಯ, ಬಂಡಾಯ, ಮಹಿಳಾ ಸಾಹಿತ್ಯ, ನವ್ಯ ಎಂಬ ಪ್ರಕಾರಗಳಲ್ಲಿ ಸಾಹಿತ್ಯವನ್ನು ವಿಂಗಡಿಸಿ ನೋಡುವ ಬೆಳವಣಿಗೆಗಳು ಕನ್ನಡದ ವಾತಾವರಣದಲ್ಲಿಯೂ ಕಾಣಿಸಿಕೊಂಡವು. ಇದು ಸಾಹಿತ್ಯದ ವಸ್ತು, ಅಭಿವ್ಯಕ್ತವಾಗುವ ಭಾವ, ಪ್ರಾದೇಶಿಕತೆ, ಸಂವೇದನಾಶೀಲತೆಯನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡು, ಬರೆದ ವರ್ಗ, ಓದುಗ ಪಂಥ, ಪ್ರದೇಶ, ಸಾಹಿತ್ಯಕ್ಕೆ ವಸ್ತುವಾದ ಸಮೂಹ ಮುಂತಾದ ವಿವಿಧ ಕಾರಣಗಳಗಾಗಿ ಸಾಹಿತ್ಯದ ಶಾಖೆಗಳುಂಟಾದ ಮೇಲೆ ಮಕ್ಕಳನ್ನು ಓದುಗರೆಂದು ಭಾವಿಸಿ, ಅವರದೇ ಪರಿಸರ, ವಸ್ತು, ಭಾವ, ಸಂಗತಿಗಳು, ಭಾಷೆಯ ಸ್ತರವನ್ನು ಆಧರಿಸಿ ಮಕ್ಕಳ ಸಾಹಿತ್ಯ ಎಂಬ ಪ್ರಕಾರವು ಕಾಣಿಸಿಕೊಂಡಿತು. ಮಕ್ಕಳ ಸಾಹಿತ್ಯವು ಹಿಂದೆ ತಿರುಗಿ ತನ್ನ ಜನ್ಮ ನೆಲೆಯನ್ನು ನೋಡುತ್ತ ತನ್ನ ತಾಯಿಯಂತಿರುವ ಪ್ರಬುದ್ಧರ ಸಾಹಿತ್ಯದ ಬದಲಾವಣೆಗಳನ್ನು ತನ್ನಲ್ಲಿ ತಂದುಕೊಂಡು ಬೆಳೆಯಲು ಯತ್ನಿಸಿ, ಅಗತ್ಯ ಮಾರ್ಪಾಡುಗಳೊಂದಿಗೆ ಪ್ರತ್ಯೇಕವಾಗಿ ಬೆಳೆದು ಬಂದಿತು. ಮಕ್ಕಳ ಸಾಹಿತ್ಯವು ಸಹ ಪ್ರಬುದ್ಧರ ಸಾಹಿತ್ಯದಂತೆ ವಿಶಾಲವಾಗಿ ಚಾಚಿಕೊಳ್ಳದಿದ್ದರೂ ಪ್ರಯತ್ನಗಳನ್ನು ಮಾಡಿದೆ. ಇಂತಹ ಪ್ರಯತ್ನಗಳ ಫಲವಾಗಿ ಮಕ್ಕಳ ಸಾಹಿತ್ಯದಲ್ಲಿಯು ಅನೇಕ ಪ್ರಕಾರಗಳು ಉಂಟಾಗಿವೆ. ಪದ್ಯ, ಗದ್ಯ ಎಂಬ ಪ್ರಮುಖವಾದ ಎರಡು ಪ್ರತ್ಯೇಕ ಶಾಖೆಯನ್ನು ಮಕ್ಕಳ ಸಾಹಿತ್ಯದಲ್ಲಿ ಕಾಣುತ್ತೇವೆ. ಗದ್ಯದ ಭಾಗದಲ್ಲಿ ಕಾಲ ಕಾಲಕ್ಕೆ ಅನೇಕ ರೀತಿಯ ಪ್ರಭಾವಗಳನ್ನು ಅನುಭವಿಸಿಕೊಂಡು ಬಂದ ಮಕ್ಕಳ ಸಾಹಿತ್ಯವು ಗದ್ಯದ ವಿಸ್ತಾರವನ್ನು ಹರಡಿಕೊಂಡಿದೆ. ಅದರಲ್ಲಿಯು ವಿವಿಧ ಪ್ರಕಾರಗಳು ಕಾಣಿಸಿಕೊಂಡಿವೆ. ಅವುಗಳಲ್ಲಿ ಮಕ್ಕಳ ಕತೆ, ಸಣ್ಣಕತೆ, ನೀಳ್ಗತೆ, ದೀರ್ಘಕತೆ, ಕಿರುಕಾದಂಬರಿ, ಕಾದಂಬರಿ ಪ್ರಮುಖವಾದವುಗಳಾಗಿವೆ. ಮಕ್ಕಳ ಸಾಹಿತ್ಯದಲ್ಲಿ ಕತೆಯ ಸ್ವರೂಪವು ಇತ್ತೀಚೆಗೆ ಹೆಚ್ಚಾಗಿ ಪ್ರಭಾವ ಮತ್ತು ಪ್ರೇರಣೆಯನ್ನು ಅನುಭವಿಸಿಕೊಂಡು ಬೆಳೆಯುತ್ತಿದೆ. ಆದುದರಿಂದ ಅದರ ಸ್ವರೂಪಗಳನ್ನು, ಹಿನ್ನೆಲೆಯನ್ನು, ಅರ್ಥವನ್ನು ಅಗತ್ಯಗಳನ್ನು ವಿವರವಾಗಿ ತಿಳಿಯುವ ಅವಶ್ಯಕತೆ ಇದೆ.

## ೨.೧ ಮಕ್ಕಳ ಕಥಾ ಸಾಹಿತ್ಯದ ಹಿನ್ನೆಲೆ

ಭಾರತೀಯರ ಕಥಾ ಸಾಹಿತ್ಯದಲ್ಲಿ ಮಕ್ಕಳ ಕಥಾಸಾಹಿತ್ಯವನ್ನು ಪ್ರತ್ಯೇಕಿಸಿ ನೋಡುವ ಪರಿಪಾಠ ಇತ್ತೀಚಿನ ಕಲ್ಪನೆಯಾಗಿದೆ. ಸರ್ವೆಸಾಮಾನ್ಯವಾಗಿ ಎಲ್ಲ ಸಂಸ್ಕೃತಿಗಳಲ್ಲೂ ಕಾಣುವ ಹಾಗೆ ಮೊದಲಿಗೆ ಭಾರತದಲ್ಲಿ ಕತೆಗಳೆಂದರೆ ದೊಡ್ಡವರಿಗಾಗಿಯೇ ರಚಿಸಿದ ರಚನೆಗಳಾಗಿದ್ದವು. ಮಕ್ಕಳಗಾಗಿ ಅವು ಪ್ರತ್ಯೇಕವಾಗಿರಲಿಲ್ಲ. ಭಾರತೀಯರಿಗೆ ಇದರ ಅವಶ್ಯಕತೆ ಕಂಡುಬಂದದ್ದು, ಹೊಸಗಾಲದಲ್ಲಿ, ಪಾಶ್ಚ್ಯಾತ್ಯರ ಸಾಹಿತ್ಯದ ಪ್ರಭಾವದಿಂದಲೇ ಎನ್ನಬಹುದು. ಎಲ್ಲೆಡೆಯಂತೆ ಭಾರತದಲ್ಲಿಯೂ ಕಥಾಪರಂಪರೆಯು ಬೆಳೆದುಬಂದದು ಮೌಖಿಕ ಕಥಾ ಪರಂಪರೆಯಿಂದ ಕೂಡಿದ ಜನಪದ ಹಿನ್ನೆಲೆಯಿಂದಲೇ ಕೆಲವು ಜನಪದ ವೃತ್ತಿಗಾಯಕರಾದ ಗೊಂದಲಿಗರು, ಚೌಡಿಕೆಯವರು, ದೊಂಬಿದಾಸರು, ಮತ್ತಿತರರು ತಮ್ಮ ಹಾಡುಗಾರಿಕೆ ಕಲೆಯ ಮೂಲಕ ಊರಿಂದ ಊರಿಗೆ ಹೋಗಿ 'ಕಥನಕಾವ್ಯ'ಗಳನ್ನು ಹಾಡುತ್ತಿದ್ದರು. ಮಕ್ಕಳಗಾಗಿ ಅವರು ಪ್ರತ್ಯೇಕ ಹಾಡುಗಳನ್ನು ಹಾಡುತ್ತಿರಲಿಲ್ಲ. ದೊಡ್ಡವರಿಗಾಗಿಯೇ ಹಾಡಿದ ಹಾಡುಗಳಲ್ಲಿ ಇರಬಹುದಾದ ಕತೆಗಳನ್ನು ಮಕ್ಕಳು ಗ್ರಹಿಸುತ್ತಿದ್ದರು. ಬಯಲಾಟ, ಯಕ್ಷಗಾನ, ಬೀದಿನಾಟಕಗಳು, ಗೊಂಬೆ ಕುಣಿತ, ಹಗಲುವೇಷ, ದೊಡ್ಡಾಟ, ಸಣ್ಣಾಟ, ತೊಗಲು ಗೊಂಬೆಯಾಟ ಮುಂತಾದ ಜನಪದ ಕಲೆಗಳಲ್ಲಿ ಕತೆಗಳನ್ನು ಅಳವಡಿಸಿಕೊಂಡು, ಕಲಾವಿದರು ಕತೆಗಳನ್ನು ಸಾದರಪಡಿಸುತ್ತಿದ್ದರು. ಇವೆಲ್ಲವೂ ದೊಡ್ಡವರಿಗಾಗಿಯೇ ಏರ್ಪಾಡಾಗುತ್ತಿದ್ದವು. ದೊಡ್ಡವರೊಂದಿಗೆ ಮಕ್ಕಳೂ ಇವನ್ನು ಆಸ್ವಾದಿಸುತ್ತಿದ್ದರು.

ಜಾತ್ರೆ, ಹಬ್ಬ, ಸುಗ್ಗಿ, ಮಾರಿಪೂಜೆ, ಭೂತಕೋಲ, ಬಲಿ, ದೇವತಾ ಪೂಜೆ, ಕೋಲಾಟ, ಉತ್ಸವ, ಮೆರವಣಿಗೆ, ಹರಿದಿನ, ಗಣಾರಾಧನೆ, ಮದುವೆಯಂತಹ ವಿಶೇಷ ದಿನಗಳಲ್ಲಿ ಸಾರ್ವಜನಿಕವಾಗಿ ಪ್ರದರ್ಶಿಸಲ್ಪಡುತ್ತಿದ್ದ ಇಂತಹ ಕಲೆಗಳನ್ನು ದೊಡ್ಡವರೊಡಗೂಡಿ ಮಕ್ಕಳೂ ವೀಕ್ಷಿಸಿ, ಕತೆಗಳನ್ನು ಗ್ರಹಿಸುತ್ತಿದ್ದರೇ ವಿನಃ ಅವರಿಗಾಗಿಯೇ ವಿಶೇಷವಾಗಿ ಕತೆಕಟ್ಟಿ ಹೇಳುವ ಸಾಧ್ಯತೆಗಳು ಬಹುವಿರಳವಾಗಿದ್ದವು.

ಮನೆಯಲ್ಲಿ ಅಜ್ಜ-ಅಜ್ಜಿಯರು ತಮ್ಮ ಬಿಡುವಿನ ಸಮಯ ಕಳೆಯಲು ಮಕ್ಕಳಗೆ ಕತೆ ಹೇಳುತ್ತಿದ್ದರು. ಆದರೆ ಅವು ಮಕ್ಕಳ ಕತೆಗಳಾಗಿರದೆ ದೊಡ್ಡವರಿಗಾಗಿ ಇರುವ ಸಾಮಾನ್ಯ ಕತೆಗಳೇ ಆಗಿರುತ್ತಿದ್ದವು. ಆ ಕತೆಗಳನ್ನೇ ಯಥಾವತ್ತಾಗಿ ಹೇಳದೆ ಮಕ್ಕಳ ಮಟ್ಟಕ್ಕೆ ಸುಲಭೀಕರಿಸಿ, ಸರಳ ಭಾಷೆಯಲ್ಲಿ ಹೇಳುತ್ತಿದ್ದರು. ಇದರಿಂದಾಗಿ ಎಷ್ಟೋಬಾರಿ ಕತೆಗಳಲ್ಲಿ ಕೆಲವು ಸಂದರ್ಭಗಳನ್ನು ಬಿಟ್ಟು, ಇಲ್ಲವೇ ಸೇರಿಸಿಯೋ ಹೇಳುತ್ತಿದ್ದರು ಅಂದುಕೊಳ್ಳಬಹುದು. ಅಪಾಯಕಾರಿ, ಅಶ್ಲೀಲತೆ, ಅನೈತಿಕತೆ, ಮುಜುಗರ ಸಂಗತಿಗಳಿರುವಾಗ ಅವುಗಳನ್ನು ಮರೆಮಾಚಿಸಿ ಇಲ್ಲವೇ ತೇಲಿಸಿ ಕತೆ ಹೇಳುತ್ತಿದ್ದರು.

ಮಕ್ಕಳಗಾಗಿ ಕತೆ ಹೇಳುವುದೆಂದರೆ ವೀರ ಶೂರರ ಪರಂಪರೆ, ಇಲ್ಲವೇ ದೇವರು ಅವತರಿಸಿದ, ಶಿಷ್ಟರನುಳಿಸಿದ ಪುರಾಣ, ಅಸುರ ಸಂಹಾರ, ರಾಮಾಯಣ, ಮಹಾಭಾರತ ಆಧಾರಿತ, ಅವುಗಳ ಪಾತ್ರಗಳಾಧಾರಿತ ಕತೆಗಳು, ಸ್ಥಳೀಯ ಜನಪದಕತೆಗಳು, ಗ್ರಾಮ ದೇವತೆ ಕುರಿತ ದಂತಕತೆಗಳು, ಸ್ಥಳೀಕರ ಸಾಹಸ ಕತೆಗಳು, ದೆವ್ವ, ಪೀಡೆ, ಭೂತ ಚೇಷ್ಟೆಗಳ ಕುರಿತಾದ ಕತೆಗಳು, ಕೆರೆ-ಕಟ್ಟೆ ನಿರ್ಮಿಸಿದ, ಕೃಷಿ ಬದುಕಿನ, ಸಾಕುಪ್ರಾಣಿ-ಪಕ್ಷಿ, ಕಾಡು, ಆಕಾಶ, ಮಳೆ, ನಿತ್ಯಬದುಕಿನ ಒಡನಾಟದ ವಸ್ತುಗಳೆಲ್ಲಾ ಇವರ

ಕತೆಗಳಿಗೆ ವಸ್ತುವಾಗಿರುತ್ತಿದ್ದವು. ಮಕ್ಕಳಿಗೆ ಕತೆ ಹೇಳುವ ಸಂಪ್ರದಾಯ ಬೆಳೆದುಬಂದುದು ಮನೆಯ ಹಿರಿಯರಿಂದ. ಅವರಲ್ಲಿ ಅಜ್ಜ-ಅಜ್ಜಿಯರ ಪಾಲು ದೊಡ್ಡಪ್ರಮಾಣದ್ದಾಗಿದೆ. 'ಅಜ್ಜಿಕತೆಗಳು' ಅನ್ನುವ ನಾಣ್ನುಡಿಯು ನಮ್ಮಲ್ಲಿ ಪ್ರಚಲಿತವಾಗಿದೆ. ಸಾಮಾನ್ಯವಾಗಿ ಅಜ್ಜ-ಅಜ್ಜಿಯಂದಿರು ತಮ್ಮ ಇಳಿವಯಸ್ಸಿನ ದಿನಗಳಲ್ಲಿ ದುಡಿಮೆಯಿಂದ ದೂರಾಗಿ, ಮುಂದಿನ ಬದುಕಿಗೆ ತಮ್ಮಮಕ್ಕಳನ್ನು ಅವಲಂಬಿಸುತ್ತಿದ್ದರು. ಆಗ ದುಡಿಮೆ, ಬೇಸಾಯದ ಸಲುವಾಗಿ ಮಗ-ಸೊಸೆ, ಮನೆಯ ನಡುವಯಸ್ಕರು ಮನೆಬಿಟ್ಟು ಹೊರಹೋಗುತ್ತಿದ್ದರು. ಇಂತಹ ಸಂದರ್ಭದಲ್ಲಿ ಮನೆಯಲ್ಲಿರುವ ಚಿಕ್ಕಮಕ್ಕಳನ್ನು ಸಲುಹುವ, ಆರೈಕೆಮಾಡುವ ಜವಾಬ್ದಾರಿ, ಮಕ್ಕಳ ಪಾಲನೆಯ ಹೊಣೆಗಾರಿಕೆ ಮನೆಯಲ್ಲಿರುತ್ತಿದ್ದ ಹಿರಿಯರಾದ ವಯೋವೃದ್ಧ ಅಜ್ಜಿ-ಅಜ್ಜರ ಪಾಲಿಗಿರುತ್ತಿತ್ತು. ಅಜ್ಜಂದಿರಿಗಿಂತ ಅಜ್ಜಿಯಂದಿರು ಮಕ್ಕಳ ಮೇಲೆ ಮುತುವರ್ಜಿ ವಹಿಸುತ್ತಿದ್ದರು. ಅವರನ್ನು ನಿಭಾಯಿಸುವ ಸಲುವಾಗಿಯು, ಮಕ್ಕಳ ಬಾಲ್ಯ ಸಹಜ ಚೇಷ್ಟೆಗಳನ್ನು ತಡೆಯುವ ಸಲುವಾಗಿಯು, ಓಡಾಡುವ ಪ್ರವೃತ್ತಿಯುಳ್ಳ ಎಳೆಯರನ್ನು ಒಂದುಕಡೆ ಸೇರಿಸುವ, ಉಣಬಡಿಸಿದ್ದನ್ನು ಪೂರ್ಣ ತಿನ್ನುವವರೆಗೆ ಮಕ್ಕಳನ್ನು ಕೂರಿಸಲು, ಅವರನ್ನು ರಂಜಿಸುವ ಸಲುವಾಗಿಯು, ನೀತಿಹೇಳಿ ಸರಿದಾರಿಗೆ ತರುವ ಸಲುವಾಗಿಯೂ, ಅವರ ಮನರಂಜನೆಗಾಗಿಯೂ, ಮಕ್ಕಳ ನಿದ್ರೆಮಾಡಿಸುವ ಸಲುವಾಗಿಯು ಮಕ್ಕಳಿಗೆ ಕತೆಗಳನ್ನು ಹೇಳುತ್ತಿದ್ದರು. ಚಂದಮಾಮನನ್ನು ತೋರಿಸಿ ಬೆಳದಿಂಗಳಿಗಿರಿಸಿ, ಊಟೋಪಚಾರ ಮಾಡುವ ಸನ್ನಿವೇಶಗಳಲ್ಲಿ ಮಕ್ಕಳ ಲಾಲಿತ್ಯ ಕತೆಗಳು ಮೂಡುತ್ತಿದ್ದವು. ಸುಗ್ಗಿದಿನಗಳಲ್ಲಿ ಹಗಲು ರಾತ್ರಿ ಎನ್ನದೆ ದುಡಿಯುವ ವರ್ಗದ ಜನರು ತಮ್ಮ ಶ್ರಮಪರಿಹಾರಕ್ಕಾಗಿ ಕಟ್ಟುತ್ತಿದ್ದ ಹಾಡು, ಕತೆ ಗಳು ಅವರೊಂದಿಗೆ ಇರುತ್ತಿದ್ದ ಮಕ್ಕಳನ್ನು ತಲುಪುತ್ತಿದ್ದವು. ಇಲ್ಲವೇ ಮನೆಗೆ ದುಡಿದು ಬಂದ ಶ್ರಮಿಕವರ್ಗದವರು ತಮ್ಮ ದಿನಕಳೆದ ಅನುಭವವನ್ನು ಮನೆಯ ಇತರರೊಂದಿಗೆ ಹಂಚಿಕೊಳ್ಳುವಾಗ, ಜಮೀನಿನಲ್ಲಿ ಸುಗ್ಗಿ ಸಂಭ್ರಮಿಸುವಾಗ ಹೇಳಿದನ್ನು ಮಕ್ಕಳು ಕೇಳಿಸಿಕೊಂಡು ತಮ್ಮದೇ ದಾಟಿಯಲ್ಲಿ ಅರ್ಥೈಸಿಕೊಳ್ಳುತ್ತಿದ್ದರು. ಇಲ್ಲಿವರೆಗೆ ಮಕ್ಕಳಿಗಾಗಿ ಕಥಾವಸ್ತು ಬೇರ್ಪಡದಿದ್ದರೂ ಹಿರಿಯರ ಕತೆಯನ್ನೇ ಮಕ್ಕಳ ಕತೆಯನ್ನಾಗಿಸಿ ಅಥವಾ ಪ್ರತ್ಯೇಕಿಸಿ ಹೇಳುವ ರೂಢಿ ಬೆಳೆದುಬಂದಿತು.

**ಅಜ್ಜಿಕತೆ**

ಭಾರತದಂತಹ ಸಮೃದ್ಧ ಜನಪದ ಹಿನ್ನೆಲೆಯುಳ್ಳ ಸಂಸ್ಕೃತಿಯು ಭವಿಷ್ಯದ ಸಮಾಜದ ಪ್ರಜೆಗಳನ್ನು ರೂಪಿಸುವ ಸಲುವಾಗಿ ನೀತಿಹೇಳುವ ಮಾರ್ಗವನ್ನು ಅನುಸರಿಸುತಿತ್ತು. ಹಿಂದಿನ ಸಮಾಜದಲ್ಲಿ ನೀತಿಯೆಲ್ಲವು ಜನಪದರ ಕತೆಗಳಲ್ಲಿ ಬಹುತೇಕ ಅಡಕವಾಗಿದ್ದವು. ಕತೆ ಕೇಳಲು ಹಂಬಲಿಸದೆ ಇರುವ ಮಗುವೆ ಇದ್ದಿರಲಾರದು ಎನ್ನುವಷ್ಟು ಮಟ್ಟಿಗೆ ಮಕ್ಕಳು ಕತೆಗಳನ್ನು ಬಯಸುತ್ತಾರೆ. ಮಕ್ಕಳಿಗೆ ಕತೆ ಎಂದರೆ ಜೀವ. ಅದಕ್ಕಾಗಿ ಊಟ, ನಿದ್ರೆ ಬಿಡುವವರಿದ್ದಾರೆ. ಅಜ್ಜಿಯಷ್ಟು ಸೊಗಸಾಗಿ ಮಕ್ಕಳಿಗೆ ಕತೆ ಹೇಳುವವರು ಮತ್ತೊಬ್ಬರಿರುವುದಿಲ್ಲ. ಅಜ್ಜಿಯಂದಿರು ಅಷ್ಟೆ ಮಕ್ಕಳನ್ನು ಸೆಳೆಯಲು ಈ ಮಾರ್ಗವನ್ನೆ ಅನುಸರಿಸುತ್ತಾರೆ.

'ಕತೆಗಳೇ ಮಕ್ಕಳ ವಶೀಕರಣಮಂತ್ರಗಳು',[೧] ಅಜ್ಜಿಯೇ ಮಾಟಗಾತಿ. ವಯಸ್ಸು ಗತಿಸಿದಂತೆ ಅಜ್ಜಿಗೆ ಮಾತಿನ ಚಾಪಲ್ಯ ಹೆಚ್ಚುತ್ತದೆ. ಅವಳ ಮಾತು ಕೇಳುವವರು ಬೇಕು. ಅದಕ್ಕಾಗಿ ಮಕ್ಕಳು ಇವಳಿಗೆ ಅನಿವಾರ್ಯವೂ ಹೌದು. ಕತೆ ಹೇಳುವುದು ಮತ್ತು ಕೇಳುವುದು ಮಾನವ ಜಾತಿಯ ಹುಟ್ಟುಗುಣವಾದರಿಂದ ಅನಾದಿ ಕಾಲದ ಕತೆಗಳು ಜನರ ನಾಲಿಗೆಯಲ್ಲಿ ಇನ್ನೂ ಉಳಿದು ಬಂದಿವೆ. ಜಾನಪದ ಜಾಯಮಾನದ ಅಸ್ತಿತ್ವಕ್ಕೆ ಅಜ್ಜಿಯರ ಕೊಡುಗೆಯು ಈ ಪ್ರಕಾರದ ಕತೆಗಳಾಗಿವೆ. ಮಕ್ಕಳ ನೆನಪಿನ ಶಕ್ತಿ, ಚುರುಕುತನ, ಆಲೋಚನಾ ಕಾರ್ಯಗಳಿಗೆ ಈ ಕತೆಗಳು ರಾಮಬಾಣವಾಗಲು ಸಹಕಾರಿಯಾಗಿವೆ. ಅಜ್ಜಿಕತೆಗಳು ಜನಪದ ಕತೆಗಳೇ ಆಗಿವೆ. ಅದೇ ಅವುಗಳ ಮೂಲಬಂಡವಾಳ ಎನ್ನುವುದು ಎದ್ದುಕಾಣಿಸುತ್ತದೆ. ಅಜ್ಜಿಯಂದಿರು ತಮ್ಮ ಬದುಕಿನ ವಿವಿಧ ಹಂತಗಳಲ್ಲಿ ಕಲಿತ, ಕೇಳಿದ ಕತೆಗಳನ್ನು ಬಹುಜೋಪಾನವಾಗಿ ಕಾಯ್ದುಕೊಂಡು ಬಂದು ಮಕ್ಕಳಿಗೆ ತನ್ನ ವಯಸ್ಸಾದ ದಿನಗಳಲ್ಲಿ ಹೇಳುವುದುಂಟು. ಇದರ ಹಿಂದೆ ಇನ್ನೊಂದು ತಾತ್ವಿಕತೆಯು ಇದೆ. ತಾನು ಕಲಿತ ಕತೆಗಳು ಮರೆತು ಹೋಗದಂತೆ ಸ್ಮೃತಿಯಲ್ಲಿ ಉಳಿಯ ಬೇಕಾದರೆ ಆಗಾಗ ಹೇಳುವ ಮೂಲಕ ಪುನರ್ಬಲನವಾಗಲು ಕತೆ ಹೇಳಲಾಗುತ್ತದೆ. ಈ ಕತೆಗಳನ್ನು ಕೇಳಲು ಬಿಡುವಾದ ಕೇಳುಗನೆಂದರೆ ಅದು ಮಕ್ಕಳೇ ಎನ್ನುವುದು ಅಜ್ಜಿಯರು ಕಂಡುಕೊಂಡ ಸಂಗತಿಯಾಗಿದೆ. ಮಕ್ಕಳಿಗೂ ಕತೆಗಳು ಆಕರ್ಷಣೀಯವಾದವು. ಮಕ್ಕಳಿಗೆ ಕತೆ ಹೇಳಲು ಇತರರಿಗಿಂತ ಹೆಚ್ಚು ಸೂಕ್ತವೆನಿಸುವುದು ಅಜ್ಜಿಯೆ. ತೀನಂಶ್ರೀಯವರು ಈ ಪ್ರಕಾರವನ್ನು ಕುರಿತು ಹೇಳುವಾಗ ಅಜ್ಜಿಯ ಪಾತ್ರವನ್ನು ವಿಭಿನ್ನವಾದ ಕಾರಣಗಳಿಗಾಗಿ ಸ್ಮರಿಸುತ್ತಾರೆ. ತಾಯಿಗೆ, ತಂದೆಗೆ ತನ್ನ ಮಗುವಿನ ಮೇಲೆ ಎಷ್ಟೇ ಪ್ರೀತಿಯಿದ್ದರೂ ಮಗುವಿನ ಕಾಡುಹರಟೆಯನ್ನು ಕೇಳುವ ತಾಳ್ಮೆ, ಸಹನೆ ಇರುವುದಿಲ್ಲ. ಅಜ್ಜನಿಗೂ ಇರುವುದಿಲ್ಲ. ಆದುದರಿಂದ ಅಜ್ಜಿಯೇ ಸೂಕ್ತವಾದವಳು[೨]. ಮಕ್ಕಳಿಗೆ ಅವಳೆ ಪ್ರಿಯವೆನಿಸುತ್ತಾಳೆ. ಮಕ್ಕಳ ಚೇಷ್ಟೆಯನ್ನು ನಿಯಂತ್ರಿಸುವುದಷ್ಟೆ ಕತೆ ಹೇಳುವ ಉದ್ದೇಶವಲ್ಲ. ಅವರಲ್ಲಿ ಏಕಾಗ್ರತೆಯನ್ನು ತಂದು ಆಲೋಚನೆಗೆ ಹಚ್ಚುವಂತೆ ಮಾಡುವುದಾಗಿದೆ. ಅಜ್ಜಿಯು ಹೇಳಿದ ಕತೆಗಳಲ್ಲಿನ ಮಾತು, ಸಂಭಾಷಣೆಯನ್ನು ಸಂದರ್ಭಾನುಸಾರ ನೆನಪಿನಲ್ಲಿಟ್ಟುಕೊಂಡು ಯಥಾವತ್ತಾಗಿ ಹೇಳುವುದರಿಂದ ಅವರ ಜ್ಞಾಪಕಶಕ್ತಿಯು ವೃದ್ಧಿಯಾಗುತ್ತದೆ. ತಾವು ಕೇಳಿದ ಕತೆಗಳನ್ನು ಮಕ್ಕಳು ತಮ್ಮ ಸಹಪಾಠಿಗಳಿಗೆ ಹೇಳುವಾಗ ತಮ್ಮದೇ ಆದ ನಿರೂಪಣೆಯ ತಂತ್ರಗಾರಿಕೆ ಬಳಸಿ ಸೃಜನಶೀಲತೆಯನ್ನು ಪ್ರದರ್ಶಿಸುವರು. ಮಕ್ಕಳು ಕತೆ ಕೇಳುವಾಗ ಸೋಜಿಗವೆಂಬಂತೆ, ಆ ಕತೆಯ ಭಾಗವೆಂಬಂತೆ ತಲ್ಲೀನರಾಗಿ ಹ್ಞೂಂ ಗುಡುವುದರಿಂದ ಹೇಳುವವರ ಆಸಕ್ತಿಯು ಕೆರಳುತ್ತದೆ ಮತ್ತು ಕೇಳುಗರನ್ನು ತನ್ನತ್ತ ಸೆಳೆದಿಡುತ್ತವೆ. ಕತೆ ಹೇಳವವರೂ, ಕೇಳುವವರೂ ಮಕ್ಕಳಾಗಿಬಿಡಬೇಕು, ಸಂಕೋಚ ಮುರಿದು ಸವಿಯಬೇಕು. ಆಗ ಮಾತ್ರ ಇದರ ಸ್ವಾರಸ್ಯದ ಉಣಿಸು ಸಿಗುತ್ತದೆ ಎನ್ನುತ್ತಾರೆ. ಅಜ್ಜಿಕತೆಗಳ ಮಹತ್ತ್ವ ಹಿರಿಯದಾಗಲು ಕಾರಣವಾದ ಅಂಶಗಳೆಂದರೆ ಅದು ಜನಪದದ ಮೂಲದಿಂದ ಬಂದುದಾಗಿದೆ ಹಾಗೂ ಅಜ್ಜಿಯಂತಹ ಪಳಗಿದ ನಿರೂಪಕರಿಂದ ಶ್ರವ್ಯಹಿತವನ್ನು ಕಾಯ್ದು ಕೊಂಡುಬಂದು, ತಲೆಮಾರುಗಳನ್ನು ದಾಟಿ, ಮಕ್ಕಳ ಕತೆಗಳ

---

[೧] ಸುವರ್ಣ ಜಾನಪದ, ಪುಟ ೬೩, ತೀ.ನಂ.ಶ್ರೀ. ವಿದ್ಯಾದಾಯಿನಿ ಮೈಸೂರು, ಫೆಬ್ರವರಿ, ೧೯೩೧.

[೨] ಅದೇಪುಟ.

ಜನ್ಮಕ್ಕೆ ಮೂಲಕಾರಣವಾಗಿರುವುದು. ಬಹುತೇಕ ಇದು ಹಿಂದಿನ ಶೈಕ್ಷಣಿಕ ವ್ಯವಸ್ಥೆಯಿಲ್ಲದ ಕಾಲಮಾನಮಾದಲ್ಲಿ ಮೌಖಿಕ ರೂಪದಲ್ಲಿ ಶಿಕ್ಷಣದ ಕಾರ್ಯವನ್ನು ಸಹ ನಿರ್ವಹಿಸಿದೆ. ಆದರೆ ಜನಪದ ಕತೆಗಳಲ್ಲಿ ಬಾಲ್ಯವು ಕಾಣಿಸಿಕೊಳ್ಳುವುದೆ ವಿರಳ ಎನ್ನುವುದನ್ನೂ ಗಮನಿಸಬೇಕು. ಅವು ಬಹುಪಾಲು ದೊಡ್ಡವರ ನಡುವೆ ನಡೆಯುವ ಕತೆಗಳೆ ಆಗಿರುತ್ತವೆ. ಹೊಸಕಾಲದ ಮಕ್ಕಳ ಕತೆಗಳು ಮುಖ್ಯವಾಗಿ ಬಾಲಕ, ಬಾಲಕಿಯರಿರುವುದನ್ನು ಅಗತ್ಯವಾಗಿ ಬಯಸುತ್ತವೆ. ಹಾಗಾಗಿ ಜನಪದ ಕತೆಗಳು ತಮ್ಮ ಅವಾಸ್ತವ ಸಂಗತಿಗಳಿಂದ, ಕುತೂಹಲದಿಂದ ನೋಡುವ ಈ ಕತೆಗಳು ಅನೇಕ ತಿರುವುಗಳಿಂದ ಕೂಡಿದ್ದು ಮಕ್ಕಳನ್ನು ಹಿಡಿದಿಡಬಲ್ಲವು. ಅಲ್ಲದೆ ಯಾವುದೇ ಕಾಲದ ಕತೆಗಳಾಗಿದ್ದರೂ, ನಮ್ಮ ನಡುವಿನ ಪರಿಸರದವಲ್ಲವಾಗಿಯೂ ಕೂಡ ಇವು ಫ್ಯಾಂಟಸಿಯ ಆಕರ್ಷಕ ವಾತಾವರಣವನ್ನು ತಂದಿಡುತ್ತವೆ. ಈ ಬಗೆಯ ಅವಾಸ್ತವದ ಕಲ್ಪನಾ ಲೋಕ, ಮುಂದೇನಾಗುತ್ತದೆ ಎನ್ನುವ ಕತೆಯ ಸಹಜದ ಕುತೂಹಲ, ಕತೆಗಳಲ್ಲಿ ಬರುವ ಚಮತ್ಕೃತಿಗಳು, ಮೋಜಿನ ಪ್ರಸಂಗಗಳು, ಹಾಸ್ಯ, ಪೆದ್ದರನ್ನು ಲೇವಡಿ ಮಾಡುವುದು, ಅನನುಕೂಲದ, ಅಶಕ್ತ, ತೆಗಳಿಕೆಗೆ ಈಡಾದ, ಕಷ್ಟದಲ್ಲಿ ಸಿಲುಕಿರುವ ಪಾತ್ರಗಳು ಯಾವುದೋ ಅನಿರೀಕ್ಷಿತ ಸಹಾಯದಿಂದ ವಿಜಯ ಸಾಧಿಸವುದು, ಕೊನೆಯಲ್ಲಿ ಸುಖ ಕಾಣುವುದು ಮುಂತಾದ ಅನುಕಂಪೆಯ ಕಥಾ ಹಂದರಗಳಿಂದ ಕೂಡಿದ್ದು ಈ ಕಥಾ ಪ್ರಪಂಚ ಮಕ್ಕಳನ್ನು ಆಕರ್ಷಿಸುವುದಾಗಿದೆ.

ಹೀಗಿರುವಾಗಲೂ ಇವು ಅಜ್ಜ ಅಜ್ಜಿಯರ ಬಾಯಲ್ಲಿ ಮಕ್ಕಳ ವಯೋಮಾನಕ್ಕೆ, ಅಲ್ಲಲ್ಲಿನ ಪರಿಸರದಲ್ಲಿ ಪರಿಷ್ಕಾರಗೊಂಡು ರೂಪುಗೊಂಡವು ಎಂದೇ ಹೇಳಬೇಕು. ಒಂದು ಕತೆ ಮಕ್ಕಳಿಗೆ ಕೆಲವೇ ಸಂಗತಿಗಳಿಂದ ಮುಟ್ಟುವುಂತೆ, ಅದು ಹಿರಿಯರ ನಡುವೆ ನಾನಾ ಬಗೆಯ ವಿಸ್ತಾರಗಳಿಗೆ ತೆರೆದುಕೊಳ್ಳುವ ಸಾಧ್ಯತೆಗಳಿದ್ದೇ ಇರುತ್ತವೆ. 'ಅಜ್ಜಿಕತೆ' ಎನ್ನುವುದು ಮಕ್ಕಳಿಗಾಗಿ ಪರಿಷ್ಕೃತವಾದ ಒಟ್ಟು ಜನಪದ ಕತೆಯೆ ಆಗಿದೆ ಎನ್ನುವುದು ಸೂಕ್ತ.

ಆದರೆ ಇವು ಎಷ್ಟರ ಮಟ್ಟಿಗೆ ಬಾಲ್ಯವನ್ನು ಆಶ್ರಯಿಸಿವೆ ಎನ್ನುವುದು ಪ್ರಶ್ನೆಯೇ ಆಗಿದೆ. (ಯಾವಗಲೂ ಬಾಲ್ಯವನ್ನು ಇವು ಹೊಂದಿರುವುದಿಲ್ಲ.) ಅಲ್ಲಿಯೂ ಮಕ್ಕಳಿಗಾಗಿಯೇ ಸೂಕ್ತವಾದ ಕತೆ ಗಳಿರುವ ಸಾಧ್ಯತೆ ಇದ್ದೇ ಇದೆ. ಇಲ್ಲವೆಂದು ಹೇಳಲಾಗುವುದಿಲ್ಲ, ಅಂಥವುಗಳನ್ನು ಆಯ್ದು ನೋಡುವ ಕೆಲಸ ನಮ್ಮ ನಡುವೆ ಇದುವರೆಗೂ ಅಷ್ಟಾಗಿ ಆಗಲಿಲ್ಲ ಎಂದೇ ಹೇಳಬೇಕು. ಜನಪದ ಆಧ್ಯಯನದ ವಿಷಯವಾಗಿ ಹಲವು ವಿಧದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕಾಣಿಸಿಕೊಂಡಾಗಿದೆ. ಅಲ್ಲಿ ಕತೆಗಳ ವಿಂಗಡಣೆ, ಅವುಗಳಲ್ಲಿನ ಆಶಯ (Motif) ಗಳು, ಪ್ರಾದೇಶಿಕ ವಿಭಿನ್ನತೆಗಳು, ಸ್ಥಳೀಯ ಪುರಾಣಗಳು, ಐತಿಹ್ಯಗಳು ಮುಂತಾಗಿ ಎಲ್ಲ ತೊಡಗಿಸಿಕೊಂಡಿರುವುದಿದೆ. ಆದರೆ ಒಟ್ಟಾರೆಯಾಗಿ ಈ ಕತೆಗಳ ಸಾಹಿತ್ಯಿಕ ಅಧ್ಯಯನ ಅಷ್ಟಾಗಿ ತೆರೆದುಕೊಂಡಿಲ್ಲ. ಈಚಿನ ದಿನಗಳಲ್ಲಿ ಸ್ಥಳಿಯ ಪುರಾಣಕತೆಗಳು, ಸಾಂಸ್ಕೃತಿಕ ವಿಭಿನ್ನ ನೆಲೆಯ ಕತೆಗಳು ಇವನ್ನೆಲ್ಲ ಅಧ್ಯಯನಕ್ಕೆ ಅಳವಡಿಸಿಕೊಳ್ಳುತ್ತಿರುವುದು ಕಂಡುಬಂದಿದೆ. ಆದರೆ ಮಕ್ಕಳಿಗಾಗಿ ಈ ಕಥಾ ಜಗತ್ತು ಎಷ್ಟೆಲ್ಲ ತೊಡಗಿಸಿಕೊಂಡುದು ಎನ್ನುವುದರ ಕಡೆಗೆ ಗಮನ ಹರಿಸಿರುವುದು ಇಲ್ಲವಾಗಿದೆ. ಈ ವಿಸ್ತೃತವಾದ ಸರಕಿನಲ್ಲಿ ಮಕ್ಕಳಿಗೇ ಆಪ್ಯಾಯಮಾನವಾದ ಕತೆಗಳು ಕೆಲವೆಲ್ಲ

ಇರುವುದಿದೆ. ಅಂತಹವುಗಳಲ್ಲಿ ಈಗಾಗಲೇ ಮಕ್ಕಳಿಗಾಗಿ ಎಂದು ಈ ಕತೆಗಳನ್ನು ಸಂಗ್ರಹಿಸಿ ನೀಡಿರುವ ಲೇಖಕರ ಪುಸ್ತಕಗಳಲ್ಲಿ ಅಲ್ಲಲ್ಲಿ ಕಾಣುತ್ತೇವೆ. ಈ ಕುರಿತು ಹೆಚ್ಚಿನ ಅಧ್ಯಯನ ಆಗಲಿಲ್ಲ ಎನ್ನುವುದು ಮಾತ್ರ ನಿಜವೆನಿಸುತ್ತದೆ.

ಕಿರಿಯರನ್ನು ಮುಂದಿನ ಹಿರಿಯರೆಂದು ಪರಿಗಣಿಸಲಾಗುತ್ತಿದ್ದ ಪರಿಪಾಠಗಳೇ ವಿಶ್ವದ ಎಲ್ಲ ಸಂಸ್ಕೃತಿಗಳಲ್ಲಿ ಕಾಣುತ್ತದೆ. ಬಾಲ್ಯವನ್ನು ಪ್ರತ್ಯೇಕವಾಗಿ ಗ್ರಹಿಸುವ, ಅದಕ್ಕಾಗಿ ವಿಶೇಷ ಆಸ್ಥೆ ವಹಿಸುವ ಮನೋವ್ಯಾಪಾರ ಅಷ್ಟಾಗಿ ಸಂಸ್ಕೃತಿಯ ಪ್ರಾರಂಭದಲ್ಲಿ ಕಾಣುವುದಿಲ್ಲ. ಮಗು ಏನಿದ್ದರೂ ದೊಡ್ಡವರದೇ ಚಿಕ್ಕ ಪ್ರತಿರೂಪ, ಎಲ್ಲ ತಯಾರಿ ದೊಡ್ಡವರಾಗುವುದಕ್ಕೆ ನೇರಗೊಂಡಿದೆ. ಈ ಕಲ್ಪನೆಯಿಂದ ಕಥಾಲೋಕ ಅಲ್ಲಿ ಮಕ್ಕಳಿಗಾಗಿ ಪ್ರತ್ಯೇಕವಾಗಿ ತೆರೆದುಕೊಳ್ಳಲಿಲ್ಲ ಎನ್ನಬಹುದು.

ಈಗ ಜನಪದ ಎಂದರೆ ಸಾಮಾನ್ಯವಾಗಿ ನಮ್ಮ ಗ್ರಾಮೀಣ ಪರಿಸರವೇ ನಮ್ಮ ಮುಂದಿರುತ್ತದೆ. ಅದರಲ್ಲೂ ಕತೆಗಳನ್ನು ನಾವು ಸಂಗ್ರಹಿಸುವುದು ಈ ಹಳ್ಳಿಗಾಡಿನ ಜನರ ನಡುವೆಯೇ. ಅಲ್ಲಿ ಸಂಸ್ಕೃತಿಯ ಎಷ್ಟೋ ಪದರುಗಳು ಮರೆಗೆ ಸರಿಯುತ್ತ, ಹೊಸರೂಪ ತಳೆಯುತ್ತ ಬಂದುದಾಗಿರುವುದೇ. ಬುಡಕಟ್ಟು ಜನಗಳಲ್ಲಿನ ಕತೆಗಳು, ನಮ್ಮ ನಡುವಿನ ನಗರಕ್ಕೆ ಹತ್ತಿರವಾದ ಗ್ರಾಮಗಳಲ್ಲಿ ಕತೆಗಳು, ಬಲು ದೂರದ ನಾಗರಿಕತೆಯಿಂದ ಇನ್ನೂ ಅಂತರದಲ್ಲೇ ಉಳಿದ ಜನಗಳ ಕತೆಗಳು ನಾನಾ ಬಗೆಯ ವಿಭಿನ್ನತೆಗಳನ್ನು ಹೇಳುತ್ತವೆ. ಕನ್ನಡದ ಮಕ್ಕಳ ಕಥಾ ಲೋಕವೆಂದರೆ ನಮ್ಮ ಹತ್ತಿರದ ಗ್ರಾಮೀಣ ಪರಿಸರದಲ್ಲಿ ಉಳಿದುಬಂದ ಕತೆಗಳೇ ಸಾಮಾನ್ಯವಾಗಿವೆ. ನವೋದಯದ ಸಮಯದಲ್ಲಿ ಸರಿಸುಮಾರು ಈ ಬಗೆಯ ಕತೆಗಳು ಮಕ್ಕಳಿಗಾಗಿ ಎಂದು ಮುದ್ರಣಕ್ಕೆ ಬರತೊಡಗಿದುದು. ಆಗೆಲ್ಲ ಅವರಿಗೆ ಈ ಬಗೆಯ ಸರಕು ಆಶ್ರಯವಾಗಿದೆ. ಪಂಜೆಮಂಗೇಶರಾಯರು ತಮ್ಮ ಸುತ್ತಲಿನ, ತಾವು ಕೇಳಿ ಬೆಳೆದ, ಪ್ರಚಾರದಲ್ಲಿರುವ ಕತೆಗಳನ್ನೇ ಆಯ್ದುಕೊಂಡರು. ಇದು ಜನಪದದ ಬಗೆಗಿನ ಅವರ ಆಸಕ್ತಿಯನ್ನು ಹೇಳುತ್ತದೆ.

ಜನಪದದ ಬಗೆಗಿನ ಅಧ್ಯಯನ ನಮ್ಮ ನಡುವೆ ತೆರೆದುಕೊಂಡುದೇ ಬಲು ನಿಧಾನವಾಗಿ. ಈ ಹಳ್ಳಿಗಾಡಿನ ಹಿರಿಯರು ತಮ್ಮ ಬದುಕಿನಲ್ಲಿ ಅನುಭವಿಸಿದ ಎಲ್ಲ ಸ್ತರಗಳನ್ನು ಸಾಮಾನ್ಯವಾಗಿ ಮಕ್ಕಳ ಮುಂದೆ ತೆರೆದಿಡುತ್ತಿರಲಿಲ್ಲ ಎಂದುಕೊಳ್ಳಬಹುದು. ಶ್ರಮದ ದುಡಿಮೆಯಿಂದ ಸುಖದ ಬದುಕು ಸಿಗುವುದು ಎಂಬ ನೀತಿಯನ್ನು ಹೇಳಿದಂತೆ ಉತ್ತಮ ದಾಂಪತ್ಯದಿಂದಲೂ ಸುಖಜೀವನ ಸಿಗುವುದು ಎಂದು ಹೇಳಲಾಗುತ್ತಿರಲಿಲ್ಲ. ಸಮಾಜದಲ್ಲಿ ನಡೆಯುವ ದಾಂಪತ್ಯವು ರಹಸ್ಯವಾಗಿ, ಕಾಮ, ಲೈಂಗಿಕತೆಗಳು, ಯುವಕರ ಪ್ರೀತಿ-ಪ್ರಣಯಗಳು ತೇಲಿಕೆ ವಸ್ತುಗಳಾಗಿ ತೆರೆಮರೆಯಲ್ಲಿ ಗುನುಗುವ ಸಂಗತಿಗಳಾಗಿದ್ದು, ಅವರಿಗೆ ತಿಳಿಯದಂತೆ ಎಚ್ಚರವಹಿಸಲಾಗುತ್ತಿತ್ತೆಂದು ಹೇಳಬಹುದು. ಮಕ್ಕಳ ವಿಭಿನ್ನ ವಯೋಮಾನವೂ ಇಲ್ಲಿ ಪರಿಗಣಿಸಬೇಕಾದುದೆ ಆಗಿದೆ. ಒಂದು ಪುಟ್ಟ ಮಗು, ತುಸು ಬೆಳವಣಿಗೆ ಕಂಡ ಮಗು, ಹದಿಹರೆಯಕ್ಕೆ ಕಾಲಿಡುತ್ತಿರುವ ಮಕ್ಕಳು ಹೀಗೆ ನಾನಾಬಗೆಯ ಗ್ರಹಿಕೆಯ ಬಾಲ ಮನಸ್ಸುಗಳು ನಮ್ಮಸುತ್ತ ಇದ್ದೇ ಇರುತ್ತವೆ. ಅಜ್ಜ ಅಜ್ಜಿಯರು ತಮ್ಮ ಸುತ್ತಲಿನ ಇಂತಹ ಮಿಶ್ರಣಗೊಂಡ ಬಾಲ ಸಮೂಹಕ್ಕೇ ಕತೆ ಹೇಳುತ್ತಿದ್ದುದು ಎನ್ನುವುದರಲ್ಲಿ ಎರಡು ಮಾತಿಲ್ಲ. ಹೀಗೆ ಕತೆ ನಡೆದಿರುವಾಗ ವಯೋಮಾನಕ್ಕನುಗುಣವಾಗಿ ನಾನಾ ಬಗೆಯ ಪ್ರತಿಕ್ರಿಯೆಗಳು, ಅವಕ್ಕೆ ಸ್ಪಂದನೆಗಳು ನಡೆದೇ ಇರುತ್ತವೆ. ಪಾಶ್ಚಾತ್ಯರಲ್ಲಿ ಕೆಲವೆಲ್ಲ

ಉದಾಹರಣೆಗಳಲ್ಲಿ ನಡೆದ ಹಾಗೆ ಯಥಾವತ್ ಧ್ವನಿ ಮುದ್ರಿಸಿಕೊಳ್ಳುವ, ಅದನ್ನು ಹಾಗೆಯೇ ಅಭ್ಯಸಿಸುವ ಪರಿಪಾಠಗಳು ನಮ್ಮಲ್ಲಿ ನಡೆಯಲಿಲ್ಲ. ಮಕ್ಕಳ ಕಥಾಲೋಕವಂತೂ ದೂರವೇ ಉಳಯಿತು. ಕತೆ ಹೇಳುವ, ಕೇಳುವ ಸಂದರ್ಭವೇ ಈ ಒಟ್ಟು ಕತೆಯ ಸ್ವರೂಪದ ವಿಶಿಷ್ಟತೆಯನ್ನು ಹೇಳುತ್ತದೆ ಎನ್ನಬೇಕು. ಜನಪದರ ನಡುವೆ, ಅದು ಬಹಳಷ್ಟು ಸಲ ಅಜ್ಜಿಕತೆಯಾಗಿ ಕಾಣಿಸಿತು ಅನ್ನೋಣ. ಹೀಗೆ ಕತೆ ಜೀವಂತವಾಗಿ ನಡೆದ ಸಂದರ್ಭದ ಕೈಗೊಂಬೆ ಆಗಿರುತ್ತದೆ.

ಆದರೂ ಗ್ರಾಮೀಣ ಭಾಗದ ಮಕ್ಕಳು ನಮ್ಮ ನಗರದ ಮಕ್ಕಳಿಗೆ ಹೋಲಿಸಿದಾಗ ಒಂದಿಷ್ಟೆಲ್ಲ ಮುಕ್ತವಾಗಿಯೇ ಸುತ್ತಲಿನ ವಿದ್ಯಮಾನಗಳಿಗೆ ತೆರೆದುಕೊಳ್ಳುತ್ತ ಬಂದಿದ್ದಾರೆ ಎನ್ನಬೇಕು. ಬದುಕಿನ ಎಷ್ಟೋ ಸಂಗತಿಗಳೂ ಅವರ ನಡುವೆಯೇ ಅಲ್ಲಲ್ಲಿ ನಡೆಯುತ್ತವೆ. ಅವರ ಮುಂದೆ ಹಿರಿಯರೂ ಪೇಚಿಲ್ಲದೆ ನಡೆದುಕೊಳ್ಳುವುದಿದೆ.

ಅಲ್ಲದೆ ಮಕ್ಕಳೂ ಹಿರಿಯರ ಜೊತೆಜೊತೆಗೆ ಕೆಲಸದಲ್ಲಿ, ಬದುಕಿನ ಸಾಂಸಾರಿಕ ಸಂಗತಿಗಳಲ್ಲಿ ತೊಡಗಿಕೊಳ್ಳುವುದರಿಂದ ಅವನ್ನೆಲ್ಲ ತೆರೆದ ಕಣ್ಣುಗಳಿಂದ ನೋಡುತ್ತಲೇ, ಅನುಭವಿಸುತ್ತಲೇ ಬೆಳೆಯುತ್ತಾರೆ. ಬೈಗಳುಗಳಂತೂ ಏನೆಲ್ಲ ಅಶ್ಲೀಲಗಳ ಎಲ್ಲೆ ಮೀರಿದವುಗಳಾದರೂ ಅವು ಮಕ್ಕಳಿಗೆ ಯಾವ ಹೇರಿಕೆ ಇಲ್ಲದೆ, ಮುಜುಗರವಿಲ್ಲದೆ ಮುಟ್ಟುವುವೇ ಆಗಿರುತ್ತವೆ ಎನ್ನುವುದನ್ನು ನೋಡಬೇಕು. ಅವೆಲ್ಲ ಅವರ ಬದುಕಿನ ಪ್ರತಿಬಿಂಬಗಳೇ ಆಗಿರುತ್ತವೆ ಎನ್ನುವುದನ್ನು ನೋಡಬಹುದು. ಈ ನಿಟ್ಟಿನಲ್ಲಿಯೂ ಜನಪದ ಕತೆಗಳು ಮಕ್ಕಳ ನಡುವೆ ಒಂದಿಷ್ಟೆಲ್ಲ ಮುಕ್ತವಾಗಿ ಹರಿದಾಡಿಕೊಂಡಿರುವುದನ್ನು ಕಾಣುತ್ತೇವೆ. ಅಲ್ಲೂ ಕದ್ದು ಮುಚ್ಚಿ ಒಂದಿಷ್ಟೆಲ್ಲ ಕಥಾ ಸರಕು ಹರಿದಾಡಿಕೊಂಡುರುವುದಿದೆ. ಇಂದು ಹೊಸಗಾಲದ ಇಂಗ್ಲಿಷ್ ಮಕ್ಕಳ ಕಥಾಲೋಕದ 'Young Adult' ಪ್ರಕಾರ ಅಲ್ಲಿ ಹೀಗೆ ಅವ್ಯಾಹತವಾಗಿ ನಡೆದುಕೊಂಡಿರುವುದು ಕಾಣಸಿಗುತ್ತದೆ ಎನ್ನಬಹುದು. ಬಾಯಿ, ಕಿವಿಗಳ ಮಾಧ್ಯಮವಾಗಿಯೇ ಇವೆಲ್ಲಾ ಉಳದು ಹೋಗಿವೆ ಎನ್ನಬಹುದು. ಮಕ್ಕಳಿಗಾಗಿ ಮುದ್ರಣ ವ್ಯವಸ್ಥೆಯಲ್ಲಿ ನೀಡಿದ ನಮ್ಮ ಲೇಖಕರು ಈ ಬಗೆಯ ಮುಕ್ತತೆಯನ್ನು ಒಪ್ಪಿಕೊಂಡವರಲ್ಲ. ಬಹಳಷ್ಟು ಸಲ ಶಿಕ್ಷಣ ಪ್ರಕ್ರಿಯೆ ನಮ್ಮ ನಡುವೆ ಶುರುವಾಗಿ ಅದರೊಂದಿಗೆ ಈ ಮಕ್ಕಳ ಲೋಕ ತೆರದುಕೊಂಡುದುದರಿಂದ ಈ ಬಗೆಯ ಮಡಿವಂತಿಕೆ ಕಾಣಿಸಿಕೊಂಡಿದೆ. ಆದರೆ ಈ ಬಗೆಯ ಕತೆಗಳು ಒಟ್ಟಾರೆ ಜನಪದ ಕತೆಗಳೆಂದು ಅಧ್ಯಯನದ ದೃಷ್ಟಿಯಲ್ಲಿ ಸಾಕಷ್ಟು ಈಗ ಸಂಗ್ರಹಗೊಂಡಿವೆ. ಜನಪದದ ಮಕ್ಕಳ ಕಥಾ ಸಾಹಿತ್ಯವು ಈ ಬಗೆಯ ಮುಚ್ಚುಮರೆಯ ವಿಸ್ತಾರಗಳನ್ನು ತನ್ನ ಮೌಖಿಕ ಪರಂಪರೆಯಲ್ಲಿ ಅನುಭವಿಸಿ ಬೆಳೆದು ಬಂದಿದೆ.

ಈಗಾಗಲೇ ಚರ್ಚಿಸಿದಂತೆ ಒಟ್ಟಾರೆ ಜನಪದ ಕತೆಗಳಂತೆ, ಅಜ್ಜಿಕತೆಗಳು ಸ್ಥಿರಸ್ವರೂಪವುಳ್ಳವಲ್ಲ. ಅವು ಸನ್ನಿವೇಶಗಳನ್ನಾಧರಿಸಿ ಮಾರ್ಪಡಾಗುತ್ತಿದ್ದವು. ಅಜ್ಜಿ ಕತೆಯೆಂದರೆ ಅಜ್ಜ-ಅಜ್ಜಿಯರು ತಮ್ಮ ಬಿಡುವಿನ ವೇಳೆಯಲ್ಲಿ ತಮಗೆ ತಿಳಿದ ಕತೆ , ಸನ್ನಿವೇಶ, ಘಟನೆ, ಪ್ರಸಂಗ ಮುಂತಾದುವುಗಳನ್ನು ತಮ್ಮದೇ ಆದ ಭಾಷೆಯಲ್ಲಿ ವಿಶ್ಲೇಷಿಸಿ ಅಥವಾ ಸಂಕ್ಷೇಪಿಸಿ ಚತುರೋಕ್ತಿಗಳಿಂದ ರಸವತ್ತಾಗಿ ಹೇಳುತ್ತಿದ್ದ ಕತೆಗಳು. ಕತೆಗಾರರ ಮನಸ್ಥಿತಿ ಚೆನ್ನಾಗಿದ್ದಾಗ ಕತೆಯ ರಸವತ್ತಾದ ನಿರೂಪಣೆ ಸಾಧ್ಯವಾಗುತ್ತಿತ್ತು. ಕೆಲವೊಮ್ಮೆ ಕಥಾವಸ್ತುವನ್ನು ಸಂಸಾರದ ಕಲಹಗಳಿಗೆ, ಸಂಸಾರದ ಪಾತ್ರಗಳಿಗೆ ಹೋಲಿಸಿ ಹೆಳುತ್ತಿದ್ದುದ್ದರಿಂದ ಕತೆಯ

ಹಂದರ ತಪ್ಪಿ, ಕೇಳುಗರಾದ ಮಕ್ಕಳ ಮೇಲೆ ಪರಿಣಾಮ ಬೀರುವ ಸಾಧ್ಯತೆಗಳಿದ್ದವು. ಕತೆಯು ರಾತ್ರಿ ಸನ್ನಿವೇಶದಲ್ಲಿ ನಿರೂಪಿತವಾದಂತೆ ಹಗಲುವೇಳೆಯಲ್ಲಿ ಇರುತ್ತಿರಲಿಲ್ಲ. ಪರಿಚಿತ ವಸ್ತುಗಳು, ಸನ್ನಿವೇಶಗಳೊಂದಿಗೆ ಅವರ ಪರಿಸರದಲ್ಲಿ ಕಂಡುಬರುವ ವಸ್ತುಗಳಾದ ಜಗುಲಿ, ಕಾಣುವ ಕಲ್ಲು, ನಕ್ಷತ್ರ, ಚಂದ್ರ, ಮನೆಯ ಕಂಬ, ಮಕ್ಕಳು, ಊರ ಜನತೆ, ಬಡವ ಬಲ್ಲಿದ, ಯುವಕ, ಯುವತಿ, ಕಳ್ಳ, ಶೂರ, ರಾಜ, ರಾಣಿ ಸೈನಿಕ, ಊರದೇವತೆ, ಊರಪೀಡೆ, ಭೂತಚೇಷ್ಟೆ, ಕೆರೆಕಟ್ಟೆ, ಸಾಕುಪ್ರಾಣಿ, ಕಾಡುಮೇಡು, ಪಕ್ಷಿ, ಬೆಟ್ಟಗುಡ್ಡ, ಹೊಳೆ, ನೀರು, ಕಸುಬು ಹೀಗೆ ಕಣ್ಣಿಗೆ ಕಂಡವೆಲ್ಲಾ ಕತೆಯೊಳಗೆ ಇಣುಕಿ ಕತೆಯ ಭಾಗವಾಗುತ್ತಿದ್ದವು. ಕತೆಯನ್ನು ಕತೆಗಾರರು ತನ್ನಿಷ್ಟದಂತೆ ಆರಂಭಿಸಿಬಹುದಾಗಿತ್ತು, ಮುಗಿಸ ಬಹುದಾಗಿತ್ತು.

ಬಹಳಷ್ಟು ಕತೆಗಳು ಸಾಮಾನ್ಯವಾಗಿ ಆರಂಭಗೊಳ್ಳುವುದು 'ಒಂದಾನೊಂದು ಕಾಲದಲ್ಲಿ ಒಬ್ಬರಾಜ ಇದ್ನಂತೆ', 'ದೂರದ ಕಾಡ್ನಲಿ ಒಂದ್ ಸಿಮ್ಮ ಇತ್ತಂತೆ'. 'ನಿಮ್ಮಂಗೆ ಇಬ್ರು ಅಣ್ತಮ್ದಿರಿದ್ರಂತೆ', 'ಒಂದೂರ್ಲಿ ಅತ್ತೂ ಸೊಸ್ಗೂ ಜಗ್ಳಾಗಿತಂತೆ', 'ನಮ್ಮೂರಂಗೆ ಒಂದೂರಿತ್ತು'. 'ಒಂದೂರಲ್ಲಿ...ಅಜ್ಜಿ ಇದ್ಲಂತೆ,' 'ಒಂದ್ ಮನೇಲಿ ಗಂಡ-ಹೆಂಡ್ತಿ ಇದ್ದ್ರಂತೆ..' ಹೀಗೆ ತಮ್ಮಿಂದ ಅಂತರದಲ್ಲಿ ನಡೆದ ಕತೆಯಾಗಿ ಹೇಳುವುದು, ಅದು ನಡೆದು ಹೋದುದಾಗಿ ಮುಂದಿಡುವುದು ಸರ್ವೇಸಾಮಾನ್ಯವಾಗಿತ್ತು.

ಕತೆ ಯಾವುದೇ ಕಾಲದ್ದಾದರೂ ಕತೆಗಾರರು ತಮ್ಮ ಕಾಲಘಟ್ಟಕ್ಕೆ ಹೊಂದಿಸಿಕೊಂಡು, ತಮ್ಮ ಅನುಭವಜಗತ್ತನ್ನು ಅದರೊಳಗೆ ತೂರಿಸಿ, ಅವರೊಡನಾಡಿಗಳನ್ನೇ ಪಾತ್ರಧಾರಿಗಳನ್ನಾಗಿಸಿ, ಚಿತ್ರಿಸಿ ಹೇಳುತ್ತಿರುವುದು ಕಾಣಸಿಗುತ್ತಿತ್ತು. ಇದು ಮನರಂಜಿಸುವ ಜೊತೆಗೆ ಮನಮುಟ್ಟುತ್ತಿತ್ತು. ಹೀಗೆ ಇದೊಂದು ಮೌಖಿಕ ಕಥಾ ಪರಂಪರೆಯಾಗಿ ಬೆಳೆದುಬಂದಿತು ಎನ್ನಬಹುದಾಗಿದೆ. ಕೆಲವೊಮ್ಮೆ ಅಜ್ಜ ಅಜ್ಜಿಯರು ವೈಯಕ್ತಿಕ ಸಮಸ್ಯೆಯಿಂದ ಬಳಲುವ ಸಂದರ್ಭಗಳಲ್ಲಿ ತಮ್ಮ ನೋವನ್ನು ತೋಡಿಕೊಳ್ಳಲು ಕತೆಯಲ್ಲಿನ ಪಾತ್ರಗಳು ನೋವನ್ನು ಅನುಭವಿಸುವಂತೆ ಚಿತ್ರಿಸಿ ಹೇಳುತ್ತಿದ್ದನ್ನು ಗಮನಿಸಬಹುದು. ಇದರಿಂದಾಗಿ ಕತೆಯ ನಿಜವಾದ ಉದ್ದೇಶವು ಹಾದಿತಪ್ಪಿ ಮಕ್ಕಳಿಗೆ ಕತೆ ನಿರೂಪಕರ ಮೇಲೆ ಅನುಕಂಪ ಮೂಡುವಂತಾಗುತಿತ್ತು. ಹಾಗಾಗಿ ಅಜ್ಜಿಕತೆಗಳು ವಸ್ತು ನಿಷ್ಠವಾದವುಗಳಷ್ಟೇ ಅಲ್ಲ, ವ್ಯಕ್ತಿ ನಿಷ್ಠವೂ, ವ್ಯಕ್ತಿ ವೈಭವೀಕರಣವೂ ಆಗಿರುವುದು ಇವುಗಳ ಲಕ್ಷಣಗಳಾಗಿವೆ. ಆದರೆ ಜನಪದ ಸಾಹಿತ್ಯದಲ್ಲಿ ಅಜ್ಜಿಕತೆಗಳ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಅವು ನೀತಿಬೋಧನೆ ಕಾರ್ಯವನ್ನು, ಮನರಂಜನೆಯನ್ನು ಒದಗಿಸುವ ಕೆಲಸವನ್ನು ಧಾರಾಳವಾಗಿ ಮಾಡಿರುವುದನ್ನು ಕಾಣುತ್ತೇವೆ. ಶಿಕ್ಷಣ ವ್ಯವಸ್ಥೆ ಇಲ್ಲದ ಸಂದರ್ಭದಲ್ಲಿ ಈ ಬಗೆಯ ಕಥಾ ಸಮಯ ಮಕ್ಕಳಿಗೆ ಹಲವು ವಿಧದ ಶಿಕ್ಷಣವನ್ನೂ, ಸಂಗೀತಗಳನ್ನು ಕಲೆಯ ಮೂಲಕ ರವಾನಿಸಿದ್ದುದು ಇದೆ.

## ಅಡುಗೂಲಜ್ಜಿಯ ಕತೆ

ಇದರ ಕಾಲಘಟ್ಟವು ನಿರ್ಣಯಕವಾಗಿಲ್ಲ. ಕೆಲವು ರಾಜರ ಕಾಲದಲ್ಲಿನ ಸಾಹಿತ್ಯಕ ಉಲ್ಲೇಖಗಳನ್ನು ಅನುಸರಿಸಿ, ಅವರ ಕಾಲದಲ್ಲಿಯೂ ಇತ್ತೆಂಬುದನ್ನು ತಿಳಿಯಬಹುದೇ ವಿನಹ, ಅದರ ಆರಂಭವನ್ನು ಖಚಿತವಾಗಿ ಹೇಳಲಾಗುವುದಿಲ್ಲ. ಚಾಣಕ್ಯನ ಕತೆಗಳೊಂದಿಗೆ ಕಂಡುಬರುವುದರಿಂದ ಇದು ಚಂದ್ರಗುಪ್ತ ಮೌರ್ಯನ ಆಳ್ವಿಕೆಗಿಂತ ಹಿಂದೆಯೂ ಇತ್ತೆಂದು ತಿಳಿಯಬಹುದಾಗಿದೆ.

ಹಿಂದಿನ ಕಾಲದಲ್ಲಿ ಪ್ರಯಾಣ ಸೌಕರ್ಯಗಳು ಇಂದಿನಂತೆ ಸುಃಖಕರವಾಗಿರಲಿಲ್ಲ. ಒಂದು ಊರಿನಿಂದ ಮತ್ತೊಂದೂರಿಗೆ ಪ್ರಯಾಣ ಮಾಡುವವರು ಕಾಲ್ನಡಿಗೆಯಲ್ಲೋ, ಎತ್ತಿನಗಾಡಿಯಲ್ಲೋ ಸಂಚಾರ ಮಾಡಬೇಕಿತ್ತು. ಬಹುದೂರದ ಊರಿಗೆ ಪ್ರಯಾಣಿಸುವಾಗ ದಾರಿ ಸಾಗುವ ಮಧ್ಯೆ ಕತ್ತಲಾದರೆ ಬೆಳಕಿನ ಸೌಕರ್ಯಗಳಾಗಲಿ, ಈಗಿನಂತೆ ಹೊಟೆಲ್‌ಗಳು ಇರುತ್ತಿರಲಿಲ್ಲ. ಕೆಲವು ಪ್ರಮುಖ ದಾರಿಗಳ ನಡುವೆ ಆಯಾಸ ನಿವಾರಿಸಿಕೊಳ್ಳಲು ಅಲ್ಲಲ್ಲಿ ರಾಜರಿಂದ ನಿರ್ಮಿತವಾದ ತಂಗುದಾಣಗಳು, ದಾರಿಹೋಕರಿಗಾಗಿ ಕಟ್ಟಿಸಿದ ಅರವಟ್ಟಿಗೆ, ಧರ್ಮಛತ್ರಗಳು ಇರುತ್ತಿದ್ದವು. ಇಂತಹ ದೂರದೂರಿನ ಪ್ರಯಾಣಿಕರ ಊಟೋಪಚಾರಕ್ಕಾಗಿ ಕೆಲವು ಕಡೆಗಳಲ್ಲಿ ವಯಸ್ಸಾದ ಅಜ್ಜಿಯಂದಿರು ತಮ್ಮ ಮನೆಗಳಲ್ಲಿಯೇ ಅಡುಗೆಮಾಡಿ ಬಡಿಸುತ್ತಿದ್ದರು. ಪ್ರತಿಫಲವಾಗಿ ಪ್ರಯಾಣಿಕರಿಂದ ಹಣ ಪಡೆದು ವೃದ್ಧಹೆಂಗಸರು ತಮ್ಮ ಜೀವನ ಸಾಗಿಸುವ ಪರಿಪಾಠವಿತ್ತು ಅಂತ ಕಾಣುತ್ತದೆ. ಇಂತಹ ಮನೆಗಳಿಗೆ ಅಡುಗೂಲಜ್ಜಿಯ ಮನೆಯೆಂದು ಕರೆಯಲಾಗುತಿತ್ತು. ಪ್ರಯಾಣಿಕರಿಗೆ ಸೌಕರ್ಯವೊದಗಿಸುವ ಅಜ್ಜಿಯು ಅಡುಗೂಲಜ್ಜಿ ಎನಿಸುತ್ತಿದ್ದಳು. ಪ್ರಯಾಣಿಕರು ವಿಚಾರಿಸಿಕೊಂಡು ಬಂದಾಗ ಇಂತಹ ಅಜ್ಜಿಯ ಮನೆಗಳು ಊರುಗಳಲ್ಲಿ ಸಿಗುತ್ತಿದ್ದವು. ಇಲ್ಲ ಅಡುವುದು, ಅಂದರೆ ಅಡುಗೆ ಮಾಡುವ ಪ್ರಕ್ರಿಯೆಯು ವಿಶೇಷವಾಗಿ ಈ ಪದದಲ್ಲಿ ಅಡಕವಾಗಿರವುದನ್ನು ಗಮನಿಸಬೇಕು. ಪ್ರಯಾಣ ನಿಮಿತ್ತವಾಗಿ ಬಂದಂತಹ ಅತಿಥಿಗಳು ಅಜ್ಜಿಮನೆಗೆ ತಂಗಲು ಬಂದಾಗ ಅತಿಥಿಗಳನ್ನು ಆದರದಿಂದ ಸ್ವಾಗತಿಸಿ, ಅವರ ಅಗತ್ಯಕ್ಕನುಗುಣವಾಗಿ ಅಡುಗೆಮಾಡಿ ಬಡಿಸುವ ಅಜ್ಜಿಯರಿರುತ್ತಿದ್ದರು. ಅತಿಥಿಗಳ ಯೋಗಕ್ಷೇಮ ವಿಚಾರಿಸಿಕೊಂಡು, ಅವರಲ್ಲಿನ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವ ಸಂಪರ್ಕ ಕೇಂದ್ರವು ಅಡುಗೂಲಜ್ಜಿಯ ಮನೆಯಾಗಿರುತಿತ್ತು. ಕೆಲವೊಮ್ಮೆ ಅಲ್ಲಿ ತಂಗಿದ್ದು ಹೋದವರ ಸಮಾಚಾರಗಳನ್ನು ಮುಂದೆ ತಂಗಲು ಬರುವವರಿಗೆ ತಿಳಿಸುವ ಮಧ್ಯವರ್ತಿಯಾಗಿಯೂ ಅಡುಗೂಲಜ್ಜಿ ಮನೆ ಕಾಣಸಿಗುತಿತ್ತು. ಪ್ರಯಾಣಿಕರಿಗೆ ಮುಂದಿನ ಹಾದಿಯ, ಅನುಕೂಲಗಳ ಬಗೆಗೆ ಮಾಹಿತಿ ನೀಡುವ ಮಾರ್ಗದರ್ಶಿಕಾರ್ಯವು ಇಲ್ಲಿ ಲಭ್ಯವಾಗುತ್ತಿದ್ದರಿಂದ ಇದೊಂದು ಸಾಮಾಜಿಕ ಸಂಪರ್ಕ ತಾಣವಾಗಿಯೂ, ಸಂಸ್ಕೃತಿಯ ವಿನಿಮಯಕೇಂದ್ರವಾಗಿಯು ಇರುತಿತ್ತು. ಅಡುಗೂಲಜ್ಜಿಯು ಚುರುಕು ಮತ್ತು ಜಾಣ್ಮೆಯಿಂದ ಈ ಎಲ್ಲ ಕಾರ್ಯಗಳನ್ನು ನಿಭಾಯಿಸುತ್ತಿದ್ದಳು. ವಡ್ಡಾರಾಧನೆಯ ಚಾಣಕ್ಯರಿಸಿಯ ಕತೆಯಲ್ಲಿ ಪ್ರಸ್ತಾಪಿಸಿರುವಂತೆ ನವನಂದರೊಡನೆ ಯುದ್ಧವಾದಾಗ ಚಾಣಕ್ಯನು ಪಾಟಲೀಪುತ್ರದಲ್ಲಿ ಒಬ್ಬ ಅಜ್ಜಿಯ ಮನೆ ತಂಗಿದ್ದನಂತೆ. ಅಲ್ಲಿ ಹಸಿವಿನಿಂದ ಬಳಲಿ, ಬಿಸಿಯಾದ ಅಂಬಲಿಯನ್ನು ತಟ್ಟೆಯ ಮಧ್ಯೆಭಾಗದಿಂದ ಕುಡಿಯಲು ಹೋಗಿ ಬಾಯಿ ಸುಟ್ಟಿಕೊಂಡನಂತೆ. ಇದನು ಕಂಡ ಅಜ್ಜಿಯು ಚಾಣಕ್ಯನಿಗೆ ಬೈದು, ತಟ್ಟೆಯ ಅಂಚಿನಿಂದ ಕುಡಿಯಲು

ಉಪದೇಶಿಸಿದಳಂತೆ.[೩] ಚಾಣಕ್ಯನೂ ಸಹ ಅಜ್ಜಿಯಿಂದ ಕಲಿತನೆಂದರೆ ಅಜ್ಜಿಯ ಜಾಣ್ಮೆ ಇಲ್ಲಿ ತಿಳಿಯುತ್ತದೆ. ರಾಜನೀತಿ, ರಾಜರಹಸ್ಯದ ರಾಯಭಾರ ಮುಂತಾದ ಗುಣಗಳು ಅಡಗೂಲಜ್ಜಿಯ ಕತೆಗಳಲ್ಲಿ ಕಾಣಸಿಗುತ್ತವೆ. ಅಜ್ಜಿಯು ತಾನು ಅಡುಗೆ ತಯಾರಿಸಿ ಬಡಿಸುವವರೆಗೆ ಪ್ರಯಾಣಿಕರ ಬೇಸರ ಕಳೆಯಲೆಂದು ತನ್ನ ಊರಿನಲ್ಲಿ ನಡೆದ ಕತೆಯನ್ನೋ, ಘಟನೆಯನ್ನೋ, ಜನಪದ ಕತೆಯಲ್ಲಿ ಬರುವ, ವೀರಶೂರರ ಗುಣಗಾನ, ರಾಮಾಯಣ, ಮಹಾಭಾರತದ ಸನ್ನಿವೇಶವನ್ನಾಧಾರಿತ ಪಾತ್ರಗಳನ್ನೋ ತನಗೆ ತಿಳಿದಂತೆ ಕತೆಕಟ್ಟಿ ಹೇಳುತ್ತಿದ್ದಳು. ಇವೆ ಅಡಗೂಲಜ್ಜಿಯ ಕತೆಗಳೆನಿಸಿ ಜನಪ್ರಿಯವಾದವು ಎನ್ನಬಹುದು. ಅಡಗೂಲಜ್ಜಿಯ ಕತೆ ಎನ್ನುವ ಬಳಕೆ ಕತೆಯಲ್ಲಿ ಬರುವ ಈ ಬಗೆಯ ಅಜ್ಜಿಯ ಪಾತ್ರದಿಂದಲೂ ಬಳಕೆಗೆ ಬಂದಿರುವ ಸಾಧ್ಯತೆ ಇದೆ. ಈ ರೀತಿಯ ಅಜ್ಜಿಯ ಪಾತ್ರ ಕತೆಯಲ್ಲಿ ಅನೇಕ ಮಹತ್ತ್ವದ, ನಿರ್ದಿಷ್ಟವಾದ ತಿರುವುಗಳಿಗೆ ಕಾರಣವಾಗುತ್ತಿತ್ತು ಎನ್ನುವುದು ಕತೆಗಳಿಂದ ತಿಳಿದು ಬರುತ್ತದೆ. ಈ ಅಜ್ಜಿ ಒಳ್ಳೆಯವಳೂ ಹೌದು, ಕೆಟ್ಟವಳೂ ಹೌದು, ವಿಭಿನ್ನ ಬಗೆಯ ಪಾತ್ರವನ್ನು ಇವಳು ನಿಭಾಯಿಸಿರುವುದಿದೆ. ಅನೇಕ ಬಗೆಯ ಕತೆಗಳು ಇದಕ್ಕೆ ಉದಾಹರಣೆಯಾಗಿ ಸಿಗುತ್ತವೆ. ಈ ಪಾತ್ರದಿಂದಲೇ 'ಅಡಗೂಲಜ್ಜಿಯ ಕತೆ' ಎನ್ನುವುದು ಹೆಚ್ಚು ಪ್ರಚಾರವಾಗಿರಬೇಕು ಎನಿಸುತ್ತದೆ. ಅಜ್ಜಿಯ ಕತೆಗಳು ಎನ್ನುವಷ್ಟು ಅಡಗೂಲಜ್ಜಿಯ ಕತೆಗಳು ಎನ್ನುವುದು ನಮ್ಮ ನಡುವೆ ಪ್ರಚಾರವಾಗಿಲ್ಲ. ಈ ಬಗೆಯ ಪದಗಳ ಬಳಕೆ ಶುರುವಾದುದೇ ಮುದ್ರಣದಲ್ಲಿ ಕತೆಗಳನ್ನು ಹಿಡಿದಿರಿಸಿ ನೋಡತೊಡಗಿದಾಗಿನಿಂದ. ಹೀಗೆ ಬರಹದಲ್ಲಿ ಇರಿಸಿ ನೋಡತೊಡಗಿದವರು ಇವನ್ನು ನೋಡುವಾಗ ಇವುಗಳನ್ನು ಗುರುತಿಸಿರಲು ಸಾಧ್ಯವಾಗಿದೆ. ಅಜ್ಜಿಯ ಕಡೆಯಿಂದ ಸಂಗ್ರಹಿಸಿ ಹೇಳಿರುವುದು ಕಂಡುಬರುತ್ತದೆ. ಒಟ್ಟು ಜನಪದ ಕತೆಗಳನ್ನು ಮಕ್ಕಳಿಗೆ ಎಂದು ಬರಹದಲ್ಲಿ ನೀಡುವಾಗ ಅಜ್ಜಿಕತೆ ಎಂದು ಹೆಸರಿಸುವ ಪರಿಪಾಠ ಶುರುವಾಯಿತು ಎಂದುಕಾಣುತ್ತದೆ. ಆದರೆ ಅಡಗೂಲಜ್ಜಿಯ ಕತೆ ಎಂದು ಈ ಬಗೆಯ ಸಂಗ್ರಹಗಳನ್ನು ಕರೆದಿರುವುದು ತೀರವಿರಳ ಎನಿಸುತ್ತದೆ. 'Mother goose' ಎನ್ನುವ ಪದ ಇಂಗ್ಲಿಷಿನಲ್ಲಿ ಮೊದಮೊದಲು ಬಳಕೆಯಾದ ಉದಾಹರಣೆ ಇದೆ. ಮುಖಪುಟದಲ್ಲಿ ಬಾತು ಅಜ್ಜಿಯಾಗಿ ಕತೆಹೇಳುವ ಚಿತ್ರಗಳು ಸರ್ವೆ ಸಾಮಾನ್ಯವಾಗಿ ಕಂಡಿದ್ದವು. ಅಲ್ಲಿ ಕೂಡ ಈ ಪಾತ್ರ ಕತೆಯೊಳಗಿನದೇ ಆಗಿ ಪ್ರಚಾರವಾಗಿತ್ತು.

## ಗೀತಾ ಕಥನ

ಇದೊಂದು ಮೌಖಿಕ ಸ್ವರೂಪದ ಜನಪದ 'ಕಥಾಕಥನ' ವಿಧಾನವಾಗಿದೆ. ಗೀತೆಯೆಂದರೆ ಹಾಡುಗಳು, ಪದ್ಯ, ಕಾವ್ಯ, ಗಾಯನ, ಕೀರ್ತನ, ಪದಗಳು, ಲಾವಣಿ ಎಂಬುದಾಗಿದೆ. ಕಥನ ಎಂದರೆ ನಿರೂಪಿಸು, ಹೇಳು, ವಿವರಿಸು, ಬಣ್ಣಿಸು, ಅರ್ಥಹೇಳು ಎಂಬುದಾಗಿದೆ. 'ಗೀತ ಕಥನ' ಎಂದರೆ ಹಾಡುವ ಮೂಲಕ ಕತೆಯನ್ನು ಹೇಳುವುದಾಗಿದೆ. ಭಾರತದಂತಹ ದೊಡ್ಡದಾದ ದೇಶವು ವೈವಿಧ್ಯಮಯವಾದ ಜನರನ್ನು, ಅವರ ಭಿನ್ನವಾದ ಸಂಸ್ಕೃತಿಯನ್ನು ಹೊಂದಿರುವುದರಿಂದ ಸಾಂಸ್ಕೃತಿಕ ಪರಂಪರೆಯು ಬಹು

[೩] ಉರಿಯ ನಾಲಿಗೆ, ಲೇ: ಕೀರ್ತಿನಾಥ ಕುರ್ತಕೋಟಿ. ಪುಟ ೧೧೯. ಪ್ರ: ೨೦೧೪.

ವಿಶಾಲವಾಗಿ ಹರಡಿಕೊಂಡಿದೆ. ಭಾರತದಲ್ಲಿ ಅಲೆಮಾರಿ ಜನಾಂಗಗಳು ಅಲೆದಾಡುವ ಜೊತೆಗೆ ಸಾಂಸ್ಕೃತಿಕ ಪರ್ಯಾಟನೆಯೂ ನಡೆಯುತ್ತದೆ. ಇಂತಹ ಅಲೆದಾಟವು ವೃತ್ತಿಯಾಗಿಯೂ, ಕಲೆಗಾಗಿಯೂ, ಕೆಲವು ಸಲ ಹೊಟ್ಟೆಪಾಡಿಗಾಗಿಯು ನಡೆಯುತ್ತದೆ. ಹೊಟ್ಟೆ ಪಾಡಿಗಾಗಿ ಅವಲಂಬಿಸಿದ ವೃತ್ತಿಯು ಕಲೆಯಾಗಿ ಪೋಷಿಸಲ್ಪಡುವುದನ್ನು ನಾವು ಕಾಣುತ್ತೇವೆ. ಅಲೆಮಾರಿ ಜನಾಂಗಗಳಾದ ದೊಂಬಿದಾಸರು, ಗೊಂದಲಿಗರು, ಗೊಲ್ಲರು, ಹಗಲುವೇಷದವರು, ಅಂಟಿಗೆ ಪಿಂಟಿಗೆಯವರು ಹಾಗೂ ಕೆಲವು ವೃತ್ತಿಗಾಯಕರಾದ ಚೌಡಿಕೆಯವರು, ಕಂಸಾಳೆಯವರು, ಕೋಲಾಟದ ಪದದವರು ತಮ್ಮ ಜೀವನೋಪಾಯದ ಮಾರ್ಗವಾಗಿ ಕಂಡುಕೊಂಡ ಕೆಲವು ಗಾಯನ ಕಲೆಗಳು ಪುರಾಣ, ಮಹಾಭಾರತ, ರಾಮಾಯಣದ ಕತೆಗಳನ್ನು, ಪಾತ್ರಗಳನ್ನು ಆಧಾರಿಸಿ ಹಾಡುವ ಹಾಡುಗಳಲ್ಲಿ ಅಡಕವಾಗಿರುವ ಕತೆಗಳು ಮಕ್ಕಳನ್ನು ತಲುಪಿ, ಕೆಲವು ಕಾಲ ಮಕ್ಕಳ ಕತೆಗಳಲ್ಲಿನ ಅಗತ್ಯವನ್ನು ನೀಗಿಸಿವೆ. ಇವು ಮಕ್ಕಳಿಗಾಗಿನ ಪ್ರತ್ಯೇಕ ಕತೆಗಳಲ್ಲ. ಹಾಗಂತ ಇವುಗಳನ್ನು ಅಲ್ಲಗಳೆಯಲಾಗದು. ಕೆಲವು ಅಲೆಮಾರಿ ಜನಾಂಗದವರು ತಮ್ಮ ಜೀವನದ ವೃತ್ತಿ ಕಂಡುಕೊಂಡುದು ಕತೆಗಳನ್ನು ಹಾಡುವ ಮೂಲಕ. ಇವರು ವಿಶೇಷವಾಗಿ ಸುಗ್ಗಿಕಾಲದ ದಿನಗಳಲ್ಲಿ, ಜಾತ್ರೆಗಳಲ್ಲಿ, ಹಬ್ಬದದಿನಗಳಲ್ಲಿ ಹಾಡಿ, ಶ್ರಮಿಕ ವರ್ಗದ ಜನರನ್ನು ಮುದಗೊಳಿಸಿ ಅವರಿಂದ ದವಸ ಧಾನ್ಯಗಳನ್ನು ಪಡೆದು ಜೀವನ ನಡೆಸುವುದು ಇವರ ಉದ್ದೇಶವಾದರೂ ತಾವು ಕಲಿತ ಹಾಡುವ ಕಲೆಯ ಮೂಲಕ ಅನೇಕ ಪುರಾಣದ ಪುಣ್ಯಕತೆಗಳನ್ನು ಜನರಿಗೆ ತಲುಪಿಸಿ ಆ ಮೂಲಕ ನೀತಿ ಹೇಳುವ ಕಾರ್ಯವನ್ನು ಮಾಡಿದ್ದಾರೆ. ಕೆಲವು ಸಂದರ್ಭಗಳಲ್ಲಿ ತಾವು ಹಾಡುವ ಹಾಡು ಕ್ರಾಂತಿ ಹೇಳುವ ಕಥನಾ ಗೀತೆಯಾಗಿ ರಾಜ್ಯಕಟ್ಟುವಲ್ಲಿ ನೆರವಾಗಿರುವುದನ್ನು ಕಾಣಬಹುದಾಗಿದೆ. 'ನವ ನಂದರ ರಾಜ್ಯ ಪತನದ ನಂತರ ಅವರ ಮಂತ್ರಿಯಾದ ಅಮಾತ್ಯರಾಕ್ಷಸನ ಹೆಂಡತಿಯು, ಮಕ್ಕಳು ಚಂದನದಾಸನ ಮನೆಯಲ್ಲಿ ಅಡಗಿರುವ ವಿಚಾರವನ್ನು ತಿಳಿಯಲು ಚಾಣಕ್ಯನು ವೃತ್ತಿಗಾಯಕರನ್ನು ಕಳುಹಿಸುತ್ತಾನೆ. ಅಮಾತ್ಯನ ಚಿತ್ರಪಟವನ್ನು ಗಾಯಕರು ತೋರಿಸುತ್ತಾ, ಅವನ ಗುಣಗಾನ ಮಾಡುತ್ತಾ, ಹಾಡುವಾಗ ಹೆಂಡತಿಯು ನೋಡಿ ಕಣ್ಣೀರಿಡುತ್ತಾ ಹೋಗುವುದ'ನ್ನು ಗಾಯಕರು ಗಮನಿಸಿ ಅವಳೇ ಅಮಾತ್ಯನ ಹೆಂಡತಿ ಎಂದು ಕಂಡುಹಿಡಿಯುತ್ತಾರೆ' ಎಂಬ ಪ್ರಸಂಗವು ಕೆಂಪು ನಾರಾಯಣನ 'ಮುದ್ರಾ ಮಂಜೂಷ' ಕೃತಿಯಲ್ಲಿ ಕಾಣಬಹುದು. ಇದರಿಂದಾಗಿ ಅವು ಪತ್ತೇದಾರಿ ಕಾರ್ಯದಲ್ಲಿಯು ನೆರವಾಗಿವೆ ಎನಿಸುತ್ತದೆ.

ಉತ್ತರ ಕರ್ನಾಟಕದ ಸವದತ್ತಿ ಎಲ್ಲವ್ವನ ಕತೆಗಳು, ಕುಮಾರ ರಾಮನಕತೆ , ಕಿತ್ತೂರು ರಾಣಿಯಕತೆ , ಸಂಗೊಳ್ಳಿ ರಾಯಣ್ಣನ ಕತೆ, ಮೈಸೂರಿನ ಹೈದರಾಲಿಯ ಕತೆಗಳು, ಟಿಪ್ಪುವಿನ ಕತೆಗಳು, ಪಿರಿಯಾಪಟ್ಟಣದ ಕಾಳಗಗಳು ಇವರ ಬಾಯಿಯಲ್ಲಿ ಗೀತಕಥನಾಗಳಾಗಿ ಹರಿದಾಡಿರುವುದನ್ನು ನೋಡಬಹುದು. ವೃತ್ತಿಗಾಯಕರು ಮನೆಯಿಂದ ಮನೆಗೆ ಬಂದು ಹಾಡುವಾಗ ಮನೆಯಲ್ಲಿನ ಕೇಳುಗರೊಡನೆ ಕೂಡಿ ಇವರ ಕತೆಗಳನ್ನು ಮಕ್ಕಳು ಆಲಿಸಿ ಕಲಿತಿರುವುದನ್ನು ನೋಡಬಹುದಾಗಿದೆ. ಇವು ನೇರವಾಗಿ ಮಕ್ಕಳಿಗಾಗಿ ಏರ್ಪಟ್ಟವಲ್ಲ. ದೊಡ್ಡವರ ಸಹವಾಸದ, ಒಡನಾಟದಿಂದ ಲಭಿಸಿದವು. ಸಾರ್ವಜನಿಕ ಶಿಕ್ಷಣ ವ್ಯವಸ್ಥೆ ಜಾರಿಯಲ್ಲಿರದ ಕಾಲದಲ್ಲಿ ಉಳ್ಳವರಿಗೆ ಮಾತ್ರ ಶಿಕ್ಷಣ ಸಿಗುತ್ತಿದ್ದು ಅಲೆಮಾರಿ ಕುಟುಂಬದ ಮಕ್ಕಳಿಗೆ ಅದು ಕನಸಿನ ಮಾತಾಗಿತ್ತು. ಈ ಮಕ್ಕಳು ಹೆಚ್ಚುಕಾಲವನ್ನು ತಂದೆ ತಾಯಿಯರ ಜೊತೆ ಕಳೆಯುತ್ತಿದ್ದರು.

ಇದರಿಂದಾಗಿ ಕಲಾವಿದರಾದ ತಂದೆ ತಾಯಿಯರ ಕಲೆಯು ಮಕ್ಕಳಿಗೆ ಕಸುಬಾಗಿ, ಕಲಿಕಾ ಸಾಮಾಗ್ರಿಯಾಗಿ ವರ್ಗಾಯಿಸಲ್ಪಡುತ್ತಿತ್ತು. ಇದರ ಇನ್ನೊಂದು ತಾತ್ವಿಕತೆಯ ಭಾಗವಾಗಿ ನೋಡುವುದಾದರೆ ವಸತಿ, ಜಮೀನು ರಹಿತವಾಗಿ ಬದುಕುತ್ತಿದ್ದ ಈ ತಳಮಟ್ಟದ ಸಮುದಾಯಗಳು ತಮ್ಮ ಮಕ್ಕಳ ಮುಂದಿನ ಭವಿಷ್ಯಕ್ಕಾಗಿ ತಮ್ಮ ವೃತ್ತಿಯನ್ನೇ ಅವಲಂಭಿಸುವ ಸಲುವಾಗಿ ಮಕ್ಕಳಿಗೆ ಶಿಕ್ಷಣ ರೂಪದಲ್ಲಿ ಗೀತಾಕಥನ ಕಲೆಯನ್ನು ಕಲಿಸುತ್ತಿದ್ದರು. ಪರಂಪರೆ ಮತ್ತು ಸಂಸ್ಕೃತಿಯ ವರ್ಗಾವಣೆಯ ಹಿನ್ನೆಲೆಯಲ್ಲಿಯು ತಮ್ಮ ಮಕ್ಕಳಿಗೆ ಈ ಕಲೆಯನ್ನು ಕಲಿಸಿರುವುದನ್ನು ನೋಡಬಹುದು. ಉದ್ದೇಶ ಏನೇ ಇದ್ದರೂ ಒಂದಲ್ಲ ಒಂದು ದೃಷ್ಟಿಯಿಂದ ಮಕ್ಕಳಿಗಾಗಿ ಈ ಪ್ರಕಾರವು ಜನಪದದ ಹಿನ್ನೆಲೆಯ ಕತೆಗಳನ್ನು ನೀಡಿ ತನ್ನ ಅಗತ್ಯ ಕಾರ್ಯವನ್ನು ಮಾಡಿದೆ. ಮಕ್ಕಳ ಬಾಲ್ಯದ ದಿನಗಳಲ್ಲಿನ ಕುತೂಹಲ, ಆಸಕ್ತಿಗಳಿಗನುಸಾರ ದೊರೆಯದೇ ಇದ್ದರೂ ದೊಡ್ಡವರ ಅಭಿರುಚಿಯಂತೆಯೆ ಮಕ್ಕಳು ಗ್ರಹಿಸಿಕೊಳ್ಳಲು ನೆರವಾಗಿದೆ. ಗೀತಾಕಥನದಲ್ಲಿ ಮೂಡಿಬರುವ ರಸಭಾವಗಳು, ಹಾಡಿನ ಏರಿಳಿತಗಳು, ಆಂಗಿಕ ಅಭಿನಯದೊಂದಿಗೆ ಕಲಾವಿದನ ಕಂಠದಲ್ಲಿ ನೇರವಾಗಿ ತುಂಬಿ ಬರುವುದರಿಂದ ರೋಷ, ಕೆಚ್ಚು, ಕರುಣೆ, ದುಃಖ, ಪ್ರೇಮ, ಹಾಸ್ಯ, ವಾತ್ಸಲ್ಯದಂತಹ ರಸಭಾವಗಳ ಆಸ್ವಾದನೆಯು ಮಗುವಿನ ಭಾವನಾತ್ಮಕ ವಿಕಾಸಕ್ಕೆ ನೆರವಾಗುತ್ತವೆ.

## ಕಥನಾ ಕಾವ್ಯ

ಮೌಖಿಕ ಪರಂಪರೆಯ ಗೀತಾ ಕಥನದಂತೆಯೆ ಲಿಖಿತ ಪರಂಪರೆಯಲ್ಲಿ ಕಾಣಿಸಿಕೊಂಡಿರುವುದು 'ಕಥನ ಕಾವ್ಯ' ಪ್ರಕಾರ. ಇಂಗ್ಲೀಷಿನ Ballad ಗೆ ಸಂವಾದಿಯಾಗಿ ಕಾಣಿಸಿಕೊಂಡಿತು. 'ರಾಗಕ್ಕೆ ಹೊಂದುವ ಪದಗಳ ಜೋಡಣೆ' ಎಂಬ ಅರ್ಥವನ್ನು ಹೊಂದಿದೆ.[೪] ಗದ್ಯಕ್ಕಿಂತ ಪದ್ಯವನ್ನು ಹೆಚ್ಚು ಪರಿಣಾಮಕಾರಿಯಾಗಿದೆ ಎಂದು ಬಿಂಬಿಸುವ ಸಲುವಾಗಿ ಕವಿಗಳು ಕಂಡುಕೊಂಡ ವಿಧಾನವಿದು. ಲಯಬದ್ಧವಾದ ಭಾಷೆಯನ್ನು ಬಳಸಿಕೊಂಡು ಕತೆಯನ್ನು ಕಾವ್ಯದ ಮೂಲಕ ಹೇಳುವ ಪ್ರಯತ್ನವನ್ನು ಇಲ್ಲಿ ಕಾಣುತ್ತೇವೆ. ಛಂದಸ್ಸಿಗಿಂತ ಕತೆಗೆ ಮಹತ್ತ ವನ್ನು ನೀಡಿ, ಕತೆಯ ಪ್ರಕಾರವನ್ನೂ, ಕಾವ್ಯಪ್ರಕಾರವನ್ನೂ ಬೆಳಸುವ ತಂತ್ರಗಾರಿಕೆಯನ್ನು ಇಲ್ಲಿ ಅಳವಡಿಸಿಕೊಂಡಿದ್ದಾರೆ. ಕತೆಗೆ ತಕ್ಕ ಶೈಲಿ, ಭಾಷೆ, ಕಥಾನಿರೂಪಣ ತಂತ್ರಗಾರಿಕೆ ಎಲ್ಲವೂ ಇಲ್ಲ ಕಾಣಿಸಿಕೊಂಡಿದ್ದು ಇದರ ಜನಪ್ರಿಯತೆಯನ್ನು ಇನ್ನಷ್ಟು ಹೆಚ್ಚಿಸುವಂತಾಯಿತು. ಕನ್ನಡದಲ್ಲಿ ಕಥನಾಕಾವ್ಯ ಪ್ರಕಾರವನ್ನು ಹರಿಹರನ ರಗಳೆಗಳಿಂದ ಕಾಣಬಹುದು.[೫] ನಂತರ ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶರಲ್ಲಿಯೂ ಕಾಣುವಂತಾಯಿತು. ಜನಪದದಲ್ಲಿಯೂ ಈ ತರದ ಲಕ್ಷಣಗಳನ್ನು ಗಮನಿಸುವುದಾದರೆ ಗೋವಿನಹಾಡು ಕಾವ್ಯದಲ್ಲಿ ಸಿಗುತ್ತದೆ. ಇವು ಸಾಮಾನ್ಯವಾಗಿ ಭಕ್ತಿ, ಶೃಂಗಾರ, ನೀತಿ, ಸಾಹಸ, ವೀರರ ಕತೆಗಳಿಗೆ ಬಳಸಲಾಗುತ್ತಿತ್ತು. ನವೋದಯದಲ್ಲಿ ಇದು ಹೆಚ್ಚು ಬೆಳವಣಿಗೆಯನ್ನು ಹೊಂದಿತು. ಗೋವಿಂದ ಪೈ, ಕಡೆಗೊಂಡ್ಲು ಶಂಕರಭಟ್ಟ,

---

[೪] ಕನ್ನಡ ಸಾಹಿತ್ಯ ಕೋಶ, ಸಂ. ರಾಜಪ್ಪ ದಳವಾಯಿ, ಪುಟ ೮೯. ೨೦೧೦
[೫] ಅದೇ ಪುಟ

ಪು.ತಿ.ನ. ಮಾಸ್ತಿಯವರ 'ಮದಲಿಂಗನ ಕಣಿವೆ', 'ನವರಾತ್ರಿ,' ಕುವೆಂಪು ರವರ ಮೀನಾಕ್ಷಿ ಮನೆ ಮೇಸ್ಟ್ರು', 'ನಾಗಿ',ಯಂತಹ ಕತೆಗಳು ಕಾಣಿಸಿಕೊಂಡ ಮೇಲೆ ಸು.ರಂ.ಎಕ್ಕುಂಡಿ ಯವರ 'ಋಣದ ಹುಂಜ' ಮುಂತಾದ ಕತೆಗಳು ಕಾವ್ಯವಾಗಿ ಹರಿದಾಡಿದಂತೆ ಮಕ್ಕಳಗಾಗಿಯು ಕಥನ ಕಾವ್ಯಗಳು ಬರಹ ರೂಪದಲ್ಲಿ ಬಂದವು. ಕುವೆಂಪು ಅವರ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಈ ತರಹದ ಪ್ರಕಾರದಲ್ಲಿ ಮಕ್ಕಳಿಗೆ ಹಿಡಿಸಿತು. ಇವುಗಳ ಪ್ರಭಾವ ಮತ್ತು ಪ್ರೇರಣೆಯಿಂದಾಗಿ ಮಕ್ಕಳ ಸಾಹಿತ್ಯದಲ್ಲಿಯು ಕತೆಗಳು ಕಥನಾ ಕಾವ್ಯದ ರೂಪದಲ್ಲಿ ಮೂಡಿಬಂದವು. ನಂತರ ಅನೇಕ ಲೇಖಕರು ಈ ಪ್ರಕಾರವನ್ನು ಬೆಳಸಿದರು. ಹೊಯಿಸಳ, ಲಕ್ಷ್ಮಣ ರಾವ್, ಹೆಚ್. ಎಸ್ ವಿ, ಆನಂದ ಪಾಟೀಲ, ಶ್ರೀನಿವಾಸ ಉಡುಪರು ಈ ಪರಂಪರೆಯನ್ನು ಉಚಿತವಾಗಿ ಮುಂದುವರೆಸಿದರು. ಇಲ್ಲಿಯು ಕತೆಗಳು ಕಾಣಿಸಿಕೊಂಡು ಕಾವ್ಯದ ಮೂಲಕ ಮಕ್ಕಳನ್ನು ರಂಜಿಸಿದವು.

## ಇತರ ಜನಪದ ಪ್ರಕಾರಗಳಲ್ಲಿನ ಕತೆಗಳು

ಮೌಖಿಕ ಪರಂಪರೆಯಲ್ಲಿ ಸಂಸ್ಕೃತಿಯ ಭಾಗವಾಗಿ ಕತೆಗಳು ಹರಡಿಕೊಂಡಿರುವುದನ್ನು ಕಾಣುತ್ತೇವೆ. ಸಂಸ್ಕೃತಿಯು ಭಾರತದಲ್ಲಿ ಬಹು ವೈವಿಧ್ಯದಿಂದ ಕೂಡಿದ್ದು ಅದು ಬದುಕಿನ ಭಾಗವಾಗಿಯೂ ಕಾಣಿಸಿಕೊಂಡಿರುವುದರಿಂದ ಕತೆ, ಸಂಸ್ಕೃತಿ, ಬದುಕು ಒಂದಕೊಂದು ಬೆರೆತುಕೊಂಡಿರುವ ಎಲ್ಲೆಡೆಯು ಮಕ್ಕಳ ಪರಿಸರ ಕಾಣಸಿಗುತ್ತದೆ. ಆದುದರಿಂದ ಮಕ್ಕಳ ಮೇಲೆ ಕತೆಗಳು ಗಾಢವಾದ ಪರಿಣಾಮವನ್ನು ಬೀರಿರುವುದನ್ನು ಅಲ್ಲಗಳೆಯುವಂತಿಲ್ಲ. ವಿವಿಧಬಗೆಯ ಸಂಸ್ಕೃತಿಯ ವಾತಾವರಣವು ನಮ್ಮ ಜನಪದದ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಸಾಮಾನ್ಯವಾಗಿ ಜನಪದದ ಕಲೆಗಳು ಸಹ ಅನೇಕ ಸ್ವರೂಪಗಳಲ್ಲಿದ್ದವು. ಅವು ಕತೆಗಳನ್ನು ತಮ್ಮ ಮಾಧ್ಯಮಗಳನ್ನಾಗಿಸಿಕೊಂಡು ಬೆಳೆದು ಬಂದಿವೆ. ಮೈಸೂರು ಪ್ರಾಂತ್ಯದಲ್ಲಿ ಮಲೆಮಾದೇಶ್ವರನ ಕತೆಗಳು, ಸಿದ್ದಪ್ಪಾಜಿಯ ಪವಾಡಗಳು, ಚಾಮುಂಡಿಯ ಕತೆಗಳು, ಸೋಲಿಗ ರಂಗಯ್ಯನ ಕತೆಗಳು, ನಂಜನಗೂಡು ನಂಜುಂಡನ ಸಂಸಾರಿಕ ಕತೆಗಳು, ನೀಲಗಾರರ, ಕಂಸಾಳೆಯವರ, ಕೋಲಾಟದ ಕಲೆಯ ಜೀವಾಳವೆಲ್ಲಾ ಕತೆಗಳೇ ಆಗಿವೆ. ದಕ್ಷಿಣ ಕನ್ನಡದ ಇತರ ಜನಪದ ಪ್ರಕಾರಗಳಾದ ಬಯಲಾಟಗಳು, ಯಕ್ಷಗಾನಗಳು, ಕೃಷ್ಣ ಪರಿಜಾತ, ರಾಮಾಯಣ ಮಹಾಭಾರತ ಆಧಾರಿತ ನಾಟಕಗಳು, ಅಂಟಿಕೆ-ಪಿಂಟಿಕೆ, ಹಗಲುವೇಷದ ಪಾತ್ರಗಳು, ಬುರ್ರಾ ಕಥಾ, ದೊಂಬಿದಾಸರ ನಾಟಕಗಳು, ಮಾಸ್ತಿಕಲ್ಲು ವೀರಗಲ್ಲುಗಳ ಪ್ರಶಂಸೆಗಳು, ಸ್ಥಳೀಯ ನಾಯಕರ ಗುಣಗಾನಗಳು, ಅಲೆಮಾರಿಗಳ ವೃತ್ತಿ ಕಲೆಗಳು, ಸುಗ್ಗಿಪದ, ಗೀಗೀ ಪದ ಮುಂತಾದವುಗಳಲ್ಲಿ ಅಡಕವಾಗಿರುವ ಕತೆಗಳನ್ನು ಕಾಣಬಹುದು. ಉತ್ತರ ಕರ್ನಾಟಕ ಸೀಮೆಯ ಸವದತ್ತಿ ಎಲ್ಲಮ್ಮನ ಪವಾಡಗಳು, ಸಂತರ, ಋಷಿಗಳ, ಪರಶುರಾಮನ ಕತೆಗಳು, ಸ್ಥಳೀಯ ಸ್ಥಳಪುರಾಣಗಳು, ಐತಿಹಾಸಿಕ ನೆಲೆಗಳು, ರಾಜರ ವೀರ ಪರಂಪರೆ, ಉತ್ತರಾಜಿ ಕತೆ ಮುಂತಾದವುಗಳು ಜನಪದದ ಅನೇಕ ರೀತಿಯ ಸ್ವರೂಪಗಳಲ್ಲಿ ಮೈದುಂಬಿ ಕಲೆಯಾಗಿ, ವೃತ್ತಿಯಾಗಿ, ಸಂಸ್ಕೃತಿ, ಆಚರಣೆ ವಿವಿಧ ಕಾರಣಗಳಿಂದಾಗಿ ಜನರಲ್ಲಿ ಕತೆಗಳು ದೊಡ್ಡವರಿಗಾಗಿ ಮೂಡಿಬರುವಾಗ

ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಮಕ್ಕಳನ್ನು ತಲುಪುತ್ತಿದ್ದರಿಂದ ಕೆಲವು ಸಂದರ್ಭಗಳಲ್ಲಿ ಇವು ಸಹಾ ಮಕ್ಕಳ ಕತೆಗಳ ಅಗತ್ಯವನ್ನು ಸ್ವಲ್ಪಪ್ರಮಾಣದಲ್ಲಿ ಪೂರೈಸಿರುವುದನ್ನು ಕಾಣುತ್ತೇವೆ.

## ೨.೨ ಮಕ್ಕಳ ಕಥಾ ಸಾಹಿತ್ಯದ ಅರ್ಥ

ಮಕ್ಕಳ ಸಾಹಿತ್ಯವನ್ನು ಪ್ರಬುದ್ಧರ ಸಾಹಿತ್ಯದ ಸಾಲಿನಲ್ಲಿ ನಿಲ್ಲಿಸಿ ನೋಡುವ, ತುಲನೆ ಮಾಡಿನೋಡುವ, ಪ್ರತ್ಯೇಕಿಸಿ ನೋಡುವ ಪರಿಪಾಠ ಭಾರತೀಯರಲ್ಲಿ ಕಾಣಸಿಗುವುದಿಲ್ಲ. ಆದುದರಿಂದ ಇದೊಂದು ಪ್ರತ್ಯೇಕ ಸಾಹಿತ್ಯದ ಶಾಖೆಯಾಗಿ ಕಾಣಿಸಿಕೊಳ್ಳಲಿಲ್ಲ. ಭಾರತೀಯರಲ್ಲಿ ಪಾಶ್ಚಾತ್ಯ ಸಾಹಿತ್ಯದ ದಟ್ಟವಾದ ಪ್ರಭಾವ ಉಂಟಾದ ಮೇಲೆ ಸಾಹಿತ್ಯದಲ್ಲಿ ನವೋದಯತೆ ಕಾಣಿಸಿಕೊಂಡು ವಿವಿಧ ತೆರನಾದ ಸಾಹಿತ್ಯ ಪ್ರಕಾರಗಳು ಕಾಣಿಸಿಕೊಂಡವು. ಕನ್ನಡದಲ್ಲಿಯೂ ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ ಸ್ವರೂಪಗಳಲ್ಲಿ ಪ್ರಬುದ್ಧರ ಸಾಹಿತ್ಯವು ತೆರೆದು ಕೊಂಡಿತು. ಇದೇ ರೀತಿಯಲ್ಲಿ ಶಿಕ್ಷಣವು ಸಹ ಭಾರತೀಯರಲ್ಲಿ ಪಾಶ್ಚಾತ್ಯರ ಪ್ರಭಾವವನ್ನು ಅನುಭವಿಸುವಂತಾಯಿತು. ಸಾರ್ವತ್ರಿಕ ಶಿಕ್ಷಣದ ತುಡಿತ ಮತ್ತು ಅದರ ನೆಲೆಯಿಂದಾಗಿ ಆ ಕಾಲದ ಲೇಖಕರಲ್ಲಿ ಶಿಕ್ಷಣದ ಭಾಗವಾಗಿ ಮಕ್ಕಳ ಸಾಹಿತ್ಯವ್ಯ ನಿವಾರ್ಯವಾಗಿ ಕಾಣಿಸಿಕೊಂಡಿತು. ಶಿಕ್ಷಣವನ್ನು ಪಡೆದ ಅನೇಕರು ಮಕ್ಕಳಿಗೂ ಶಿಕ್ಷಣವನ್ನು ನೀಡುವಲ್ಲಿ ಆಸ್ಥೆ ವಹಿಸಿದರು. ಶಿಕ್ಷಣ ವ್ಯವಸ್ಥೆಯ ಭಾಗವಾಗಿ ಅವರು ಮಕ್ಕಳಿಗೆ ಅಗತ್ಯವಾದ ಸಾಹಿತ್ಯದ ಅನಿವಾರ್ಯತೆಯನ್ನು ಕಂಡುಕೊಂಡರು. ಇದರಿಂದಾಗಿ ಕನ್ನಡದಲ್ಲಿಯೂ ಮಕ್ಕಳ ಸಾಹಿತ್ಯವನ್ನು ಪ್ರಬುದ್ಧರಿಂದ ಪ್ರತ್ಯೇಕಿಸಿ ನೋಡುವ ಅಗತ್ಯವು ಕಾಣಿಸಿತು. ಇದು ಪಾಶ್ಚಾತ್ಯರಲ್ಲಿ ಆಗಲೇ ಕಾಣಿಸಿಕೊಂಡಿದ್ದು ನಿಧಾನವಾಗಿ ನಮ್ಮವರಲ್ಲಿಯೂ ಕಾಣಿಸಿಕೊಳ್ಳ ತೊಡಗಿತು. ಆದರೆ ಅವರಂತೆ ನಮ್ಮಲ್ಲಿ ಮಕ್ಕಳ ಸಾಹಿತ್ಯವನ್ನು ಪ್ರಮುಖವಾದ ಅಂಶವೆಂದು ಪರಿಗಣಿಸಿ ಅರ್ಥೈಸಿ, ವ್ಯಾಖ್ಯಾನಿಸಿರುವುದು ಕಂಡುಬರುವುದಿಲ್ಲ. ಹಿರಿಯ ಲೇಖಕರು ತಮ್ಮ ಭಾಷಣಗಳಲ್ಲಿ, ಬಿಡಿ ಬರೆಹಗಳಲ್ಲಿ, ವಿವಿಧ ಪುಸ್ತಕಗಳ ಮುನ್ನುಡಿಯಲ್ಲಿ ಹೇಳಿರುವ ಅಂಶಗಳನ್ನು ಆಧರಿಸಿಕೊಂಡು ಮಕ್ಕಳ ಸಾಹಿತ್ಯದ ಅರ್ಥ, ವ್ಯಾಖ್ಯಾನಗಳನ್ನು ಅನುಸರಿಸಿ ಅವುಗಳ ಹಿನ್ನೆಲೆಯಿಂದ ಮಕ್ಕಳ ಕತೆ ಯ ಅರ್ಥ, ವ್ಯಾಖ್ಯಾನಗಳನ್ನು ತಿಳಿಯಬಹುದಾಗಿದೆ.

ಭಾರತದ ಹಿಂದಿ ಭಾಷೆಯಲ್ಲಿ ಮೊದಲಿಗೆ ಇಂತಹ ಪ್ರಯೋಗಗಳು ನಡೆದಿವೆ. ಅಲ್ಲಿ ಮಕ್ಕಳ ಸಾಹಿತ್ಯವನ್ನು ವಿಶೇಷವಾಗಿ ಅವರ ವಯಸ್ಸಿನ, ಮನೋಗ್ರಹಿಕೆಯ ಸಾಮರ್ಥ್ಯದ ಆಧಾರದ ಮೇಲೆ ಶಿಶು ಸಾಹಿತ್ಯ, ಬಾಲ ಸಾಹಿತ್ಯ, ಕಿಶೋರ ಸಾಹಿತ್ಯ ಎಂದು ಮೂರು ಸ್ತರಗಳಲ್ಲಿ ವಿಂಗಡಿಸಿಕೊಂಡಿರುವುದನ್ನು ಕಾಣುತ್ತೇವೆ. ಮೊದಲಿಗೆ ಕನ್ನಡದಲ್ಲಿ ಪಂಜೆಯವರು ತಮ್ಮ ಅಧ್ಯಕ್ಷೀಯ ಭಾಷಣದ ಭಾಗವಾಗಿ ರಾಯಚೂರಿನ ಸಾಹಿತ್ಯ ಸಮ್ಮೇಳನದಲ್ಲಿ ಈ ವಿವಿಧತೆಯನ್ನು ಕುರಿತು ಮಾತನಾಡಿರುವುದನ್ನು ಗಮನಿಸಬಹುದಾಗಿದೆ. ಇವೆಲ್ಲವೂ ಮಕ್ಕಳ ಸಾಹಿತ್ಯವನ್ನು ಒಟ್ಟಾಗಿ ಪರಿಗಣಿಸಿರುವುದನ್ನು ಹೇಳುತ್ತವೆ. ಮಕ್ಕಳ ಸಾಹಿತ್ಯದ ಪ್ರಮುಖವಾದ ಭಾಗವೆಂದರೆ ಗದ್ಯಸ್ವರೂಪದಲ್ಲಿರುವ ಕತೆಗಳು. ವೈವಿಧ್ಯದ ಮೇರು ಪಾತ್ರವಹಿಸುವುದು ಇವೆ. ಆದುದರಿಂದ ಇವುಗಳ ಅರ್ಥವನ್ನು ಕಂಡುಕೊಳ್ಳುವುದು ಅಗತ್ಯವಾಗಿದೆ. ಮಕ್ಕಳು

ಎಂದರೆ ಯಾರು? ಕತೆಗಳೆಂದರೆ ಏನು? ಎಂಬ ಪ್ರಶ್ನೆಗಳಗೆ ಪ್ರತೇಕವಾಗಿ ಅರ್ಥ ತಿಳಯುವುದರಿಂದ ಮಕ್ಕಳ ಕತೆಗಳೆಂದರೆ ಏನು? ಎಂಬುದನ್ನು ಅರಿಯಬಹುದಾಗಿದೆ.

## ಬಾಲ್ಯದ ಗ್ರಹಿಕೆ

ಭಾರತ ದೇಶದಲ್ಲಿ ಮಕ್ಕಳಿಗೆ ಸರಿಯಾಗಿ ನಿರ್ದಿಷ್ಟವಾದ ವಯಸ್ಸನ್ನು ನಿರ್ಧರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪ್ರಾಥಮಿಕ ಶಾಲೆಯಲ್ಲಿ ಕಲಿಯುವವರನ್ನು ಮಕ್ಕಳೆಂದು ಕರೆದಂತೆ ಪದವಿಪೂರ್ವ ಕಾಲೇಜುಗಳಲ್ಲಿ ಕಲಿಯುವವರೂ ಮಕ್ಕಳಾಗಿಯೇ ಕಾಣಿಸಿಕೊಳ್ಳುತ್ತಾರೆ. ಆದರೆ ಅವರ ಅಭಿರುಚಿ, ಅಗತ್ಯತೆಗಳು ಬೇರೆ ಬೇರೆಯಾಗಿವೆ. ಎಲ್ಲರನ್ನು ಮಕ್ಕಳೆಂದು ಒಟ್ಟಾಗಿ ಗ್ರಹಿಸುವುದು ಸಹ ಒಂದು ರೀತಿಯಲ್ಲಿ ಸರಿಯಾದ ಕ್ರಮವಲ್ಲ. ಇಲ್ಲಿ ವಿವಿಧ ವಯೋಮಾನದಿಂದ ಕೂಡಿರುವ ಮಕ್ಕಳು ಕಂಡುಬಂದಿರುವುದರಿಂದ ಮತ್ತು ಅವರ ಗ್ರಹಿಕಾಸಾಮರ್ಥ್ಯವೂ ಸಹ ವಯಸ್ಸಿಗೆ ಅನುಗುಣವಾಗಿ ಬೇರೆ ಬೇರೆಯಾಗಿರುವುದರಿಂದ ಮಕ್ಕಳನ್ನು ವಯಸ್ಸಿನ ಆಧಾರದಲ್ಲಿ ವಿಂಗಡಿಸಿ ನೋಡುವುದು ಅವಶ್ಯಕವಾಗಿದೆ. ವಿವಿಧ ಬಗೆಯ ಕಾರ್ಯಚಟುವಟಿಕೆಗಳಿಗಾಗಿ ಮಕ್ಕಳನ್ನು ವಿಂಗಡಿಸಿ ಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ಭಾರತದ 'ಬಾಲಕಾರ್ಮಿಕ ತಡೆ ಕಾಯ್ದೆ ೧೯೮೬' ರಂತೆ ಹದಿನಾಲ್ಕು ವರ್ಷದ ಒಳಗಿನವರನ್ನು ಮಕ್ಕಳು ಎಂದು ಕರೆಯಲಾಗುತ್ತದೆ. ಭಾರತ ಚುನಾವಣಾ ಆಯೋಗವು ಹದಿನೆಂಟು ವರ್ಷ ಮೇಲ್ಪಟ್ಟವರನ್ನು ವಯಸ್ಕರೆಂದು ಕರೆದು, ಅದಕ್ಕಿಂತ ಕಡಿಮೆ ವಯೋಮಾನದವರನ್ನು ಪರೋಕ್ಷವಾಗಿ ಮಕ್ಕಳೆಂದು ತಿಳಿಸುತ್ತದೆ. ಮಕ್ಕಳ ಹಕ್ಕುಗಳ ರಕ್ಷಣಾ ಕಾಯ್ದೆ ೨೦೦೯ ರಂತೆ ಮಕ್ಕಳೆಂದರೆ ಆರರಿಂದ ಹದಿನಾಲ್ಕು ವಯೋಮಾನದವರು ಎಂದು ಅರ್ಥೈಸುತ್ತದೆ. ಪೋಕ್ಸೋ (POCSO) ಕಾಯ್ದೆ ೨೦೧೨ ಹದಿನೆಂಟು ವರ್ಷ ವಯೋಮಾನದ ಒಳಗಿನವರನ್ನು ಬಾಲರು ಎಂದು ತಿಳಿಸುತ್ತದೆ. ಮಕ್ಕಳ ಅನೈತಿಕ ಸಾಗಣಿಕೆ ತಡೆ ಕಾಯ್ದೆ ೧೯೫೬ ರ ಪ್ರಕಾರ ಹದಿನೆಂಟು ವರ್ಷದ ಒಳಗಿನವರನ್ನು ಮಕ್ಕಳೆಂದು ಗ್ರಹಿಸುತ್ತದೆ.[೬] ಇವೆಲ್ಲವೂ ಸಮಾಜದ ವಿವಿಧ ಸ್ತರದ ಗ್ರಹಿಕೆಗಳಾಗಿವೆ.

ಶೈಕ್ಷಣಿಕ ಮನೋವಿಜ್ಞಾನವು ಮಕ್ಕಳನ್ನು ಅವರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯ ಆಧಾರದ ಮೇಲೆ ಕೆಳಕಂಡಂತೆ ವಯಸ್ಸಿನ ಅನುಸಾರ ವಿಂಗಡಿಸಿ ನೋಡುತ್ತದೆ.

೧ ಶೈಶವ ಮಕ್ಕಳು ( ಹುಟ್ಟಿನಿಂದ ಎರಡುವಾರ)

೨ ಹಸುಳೆತನ (ಮೂರನೇ ವಾರದಿಂದ ಎರಡುವರ್ಷ)

೩ ಪೂರ್ವ ಬಾಲ್ಯ (ಎರಡು ವರ್ಷದಿಂದ ಮೇಲ್ಪಟ್ಟು ಆರುವರ್ಷ)

೪ ಉತ್ತರ ಬಾಲ್ಯ (ಆರುವರ್ಷ ಮೇಲ್ಪಟ್ಟು ಹನ್ನೆರಡು ವರ್ಷ)

೫ ಹರೆಯ (ಹನ್ನೆರಡು ವರ್ಷ ಮೇಲ್ಪಟ್ಟು ಹದಿನಾಲ್ಕು ವರ್ಷ)

೬ ತಾರುಣ್ಯ (ಹದಿನಾಲ್ಕು ವರ್ಷ ಮೇಲ್ಪಟ್ಟು)

---

[೬] ಮಕ್ಕಳ ರಕ್ಷಣೆ, ಪಾಲನೆ ಮತ್ತು ಪೋಷಣೆ, ಪುಟ ೯, ಜಿಲ್ಲಾ ಮಕ್ಕಳ ರಕ್ಷಣಾ ಘಟಕ, ಮೈಸೂರು. ೨೦೧೬

ಮೇಲಿನ ಎಲ್ಲ ವರ್ಗೀಕರಣಗಳಿಂದ ಸಾಮಾನ್ಯವಾಗಿ 'ಹುಟ್ಟಿದಾಗಿನಿಂದ ಹದಿನೆಂಟು ವರ್ಷ ತುಂಬುವವರೆಗಿನ ವಯೋಮಾನದವರನ್ನು ಮಕ್ಕಳು' ಎಂದು ಗ್ರಹಿಸಲಾಗಿದೆ ಎನ್ನಬಹುದು.

ಮಕ್ಕಳ ಸಾಹಿತ್ಯದ ಹಿನ್ನೆಲೆಯಲ್ಲಿ ಮಕ್ಕಳನ್ನು ಗ್ರಹಿಸಿ ನೋಡುವುದು ಮೇಲಿನ ಅಂಶಗಳಗಿಂತ ಭಿನ್ನವಾಗಿದೆ. ಅವರನ್ನು ವಯಸ್ಸಿನ ಆಧಾರದಲ್ಲಿ ಮಾತ್ರ ನೋಡದೆ ಅವರ ಗ್ರಹಿಕಾ ಸಾಮರ್ಥ್ಯ, ಆಲಿಸುವ ಕೌಶಲ, ಮಾತನಾಡುವಿಕೆ, ಓದುವ, ಬರೆಯುವ, ಜೀವನಾನುಭವಗಳ ಪಡೆಯುವಿಕೆಯ ಸಾಮರ್ಥ್ಯವನ್ನು ಅನುಸರಿಸಿ ವಿಂಗಡಿಸಿ ನೋಡುವ ಪ್ರಯತ್ನಗಳು ನಡೆದಿವೆ. ಹಿಂದಿಯ ಮಕ್ಕಳ ಸಾಹಿತ್ಯವು ಪ್ರಧಾನವಾಗಿ ವಯಸ್ಸಿನ, ವಿಷಯ ವಸ್ತುವಿನ, ವಿದ್ಯೆಯ ಮಟ್ಟವನ್ನು ಆಧಾರಿಸಿ ಕೆಳಗಿನಂತೆ ಮಕ್ಕಳನ್ನು ವಿಂಗಡಿಸಿಕೊಂಡಿರುವುದನ್ನು ಕಾಣುತ್ತೇವೆ.[೭]

**ಶಿಶುವಿನ ಹಂತ**: (ಹುಟ್ಟಿದಾಗಿನಿಂದ ಆರು ವರ್ಷ) ಈ ವಯೋಮಾನದ ಮಕ್ಕಳ ಅನುಭವ, ಅವರ ಶಬ್ದಭಂಡಾರ, ಕಲ್ಪನಾ ಸಾಮರ್ಥ್ಯವನ್ನು ಆಧರಿಸಿ ರಚಿತವಾಗುವ ಸರಸ, ಸಹಜ ಭಾಷೆಯ ಗ್ರಹಿಕೆ, ವಿಷಯ ವಸ್ತುವಿನ ಗ್ರಹಿಕೆಯನ್ನು ಇಲ್ಲಿ ನಿರೀಕ್ಷಿಸಲಾಗುತ್ತದೆ. ಇವರು ಓದಲು ಬರೆಯಲು ಬಲ್ಲವರಲ್ಲ. ಇವರಿಗೆ ಶ್ರವ್ಯಹಿತವಾದ, ಕೇಳಿಸಿಕೊಳ್ಳುವ ಸಾಹಿತ್ಯದ ಅಗತ್ಯವಿದೆ.

**ಬಾಲ ಹಂತ**: (ಏಳರಿಂದ ಹನ್ನೆರಡು ವರ್ಷ) ಶಾಲಾ ವ್ಯವಸ್ಥೆಗೆ ಕಾಲಿರಿಸಿ ಕಲಿಯಲು ಆರಂಭಿಸಿದ ಮಕ್ಕಳು, ಅವರ ಅನುಭವ, ಓದಿನ ಗ್ರಹಿಕೆ, ಈ ಮಕ್ಕಳ ಭಾಷೆಯನೊಳಗೊಂಡ ಪರಿಸರ, ಶಬ್ದಭಂಡಾರ, ಆಲೋಚನ ಕ್ರಮಗಳು, ಇವರ ಮುಂದಿನ ಪರಿಸರವನ್ನು ಗಮನದಲ್ಲಿರಿಸಿಕೊಂಡು ನೋಡಲಾಗಿದೆ. ಇವರು ಕೇಳಿಸಿಕೊಳ್ಳುವುದರ ಜೊತೆಗೆ ಓದು ಬರೆಹದ ಮೂಲಕ ಗ್ರಹಿಸುವ ಸಾಮರ್ಥ್ಯವನ್ನು ಗಳಿಸಿಕೊಂಡಿರುತ್ತಾರೆ.

**ಕಿಶೋರ ಹಂತ**: (ಹದಿಮೂರು ವರ್ಷದಿಂದ ಮೇಲ್ಪಟ್ಟು) ಈ ಹಂತದಲ್ಲಿ ಹದಿಹರೆಯದ ಸಿದ್ಧತಾ ಪರಿಸರ, ಅವರ ಗ್ರಹಿಕೆಯ ಭಿನ್ನತೆಗಳು, ಆಲೋಚನಾ ಕ್ರಮ, ಓದಿನ ಪಕ್ವತೆ, ವಯಸ್ಕತನದ ತಯಾರಿಯ ಅವಶ್ಯಕತೆಗಳು, ಬದುಕಿನ ಸಿದ್ಧತೆಗಳು, ಜೀವನಾನುಭವಗಳು ಇತರರಿಗಿಂತ ಭಿನ್ನತೆ ಮುಂತಾದವುಗಳಿಗನುಗುಣವಾಗಿ ಗಮನಿಸಲಾಗಿದೆ. ಇವರಲ್ಲಿ ಓದು ಬರೆಹದ ಪಕ್ವತೆಯು ಕಾಣಿಸಿಕೊಂಡು, ಮಕ್ಕಳ ಸಹಜ ವಾತಾವರಣದಿಂದ ದೊಡ್ಡವರ ವಾತಾವರಣದತ್ತಾ ವಾಲಿಕೊಳ್ಳುವ, ಅವರ ಅಭಿರುಚಿಗಳನ್ನು ವಿಸ್ತರಿಸಿಕೊಳ್ಳುವ ಮನೋಭಾವವನ್ನು ಹೊಂದಿ ಮುಖ್ಯಧಾರೆಯ ಮಾನವ ಸೆಳೆತವನ್ನು ಅನುಭವಿಸುವ ತವಕವನ್ನು ಪ್ರಕಟಿಸುತ್ತಾರೆ.

ಈ ಎಲ್ಲ ಅಂಶಗಳಿಂದ ಸಾಮಾನ್ಯವಾಗಿ ತಿಳಿದು ಬರುವುದು 'ಮಕ್ಕಳು ಎಂದರೆ ಹುಟ್ಟಿನಿಂದ ಹದಿನೆಂಟು ವರ್ಷದ ವರೆಗಿನ ವಯೋಮಾನದವರು'. ವಿವಿಧ ಹಂತದ ಮಕ್ಕಳು ಕಂಡು ಬರುವುದರಿಂದ ಅವರ ದೈಹಿಕ, ಮಾನಸಿಕ, ಸಾಮಾಜಿಕವಾಗಿ ಭಿನ್ನವಾದ ಅಂಶಗಳು. ಕನ್ನಡದಲ್ಲಿ ಇಂತಹ

---

[೭] ಬಾಲ ಸಾಹಿತ್ಯ ಕೆ ಪ್ರತಿಮಾನ್, ( ಹಿಂದಿ ಭಾಷೆ) ಮಕ್ಕಳ ಸಾಹಿತ್ಯ ಕುರಿತು, ಲೇ: ನಾಗೇಶ ಪಾಂಡೆ 'ಸಂಜಯ' , ೩೧, ೨೦೦೯

ವರ್ಗೀಕರಣವನ್ನು ಮಕ್ಕಳ ಸಾಹಿತ್ಯದಲ್ಲಿ ಗುರ್ತಿಸಲಾಗಿಲ್ಲ. ಮಕ್ಕಳ ಸಾಹಿತ್ಯವೆಂದರೆ ಅದು ಇಡಿಯಾಗಿ ಕಾಣಿಸಿಕೊಂಡಿದೆ.

## ಕತೆ

ಕತೆ ಎಂಬ ಶಬ್ದವು ಸಂಸ್ಕೃತದ 'ಕಥ್' ಎಂಬ ಪದದಿಂದ ಬಂದುದಾಗಿದೆ. ಕಥ್ ಎಂದರೆ 'ಸಂಗತಿ' ಎಂಬ ಅರ್ಥವನ್ನು ನೀಡುತ್ತದೆ. ಕತೆ ಯೆಂದರೆ ನಡೆದ ಅಥವಾ ಕಲ್ಪಿತವಾದ ಸಂಗತಿ[೮] ಎಂಬ ಅರ್ಥವನ್ನು ಹೇಳುತ್ತದೆ. 'ಕಥಾ' ಎಂಬ ಶಬ್ದದ ಅರ್ಥವು ಸಂಗತಿಯನ್ನು ಹೇಳುವುದು, ನಿರೂಪಿಸುವುದು, ಪರಸ್ಪರ ಮಾತನಾಡುವುದು, ಸಂಭಾಷಿಸುವುದು, ಯುಕ್ತಿಗಳಿಂದ ಮಾತನಾಡುವುದು ಎಂಬ ಅರ್ಥವನ್ನು ಹೊಂದಿದೆ. ಕತೆ, ಕಲ್ಪಿತ ಕತೆ, ಕಟ್ಟುಕತೆ  ಎಂಬ ಗ್ರಹಿಕೆಯೂ ಇದೆ.

'ಕಥನೀಯ' ಎಂದರೆ ಅವಶ್ಯವಾಗಿ ಹೇಳಲ್ಪಡುವ, ಹೇಳಲು ಯೋಗ್ಯವೆನಿಸಿದ, ಶಕ್ಯವೆನಿಸಿದ್ದನ್ನು ಹೇಳುವುದು ಆಗಿದೆ. 'ಒಂದು ಆಶಯದ ಹಿನ್ನೆಲೆಯಿಂದ ಹೇಳುವ ಸಂಭ್ರಮ, ಗಡಿಬಿಡಿ, ಆಕಸ್ಮಿಕದಿಂದುಂಟಾದುದು, ಕಳವಳ, ನಿಂದೆ, ದೂಷಣೆ, ಆಶ್ಚರ್ಯ, ವಿಸ್ಮಯ, ಸಂಭಾವಿಕೆ, ಊಹೆ, ಹರ್ಷ, ಸಂತೋಷ, ದುಃಖ ಭಾವಗಳುಳ್ಳ ಸಂಗತಿಗಳನ್ನು ನಿರೂಪಿಸುವುದು' ಕತೆ  ಎನಿಸುತ್ತದೆ. ಕತೆಯು ಇತಿಹಾಸ, ವರ್ತಮಾನ, ಭವಿಷ್ಯದ ಸಂಗತಿಗಳ ವ್ಯಾಪ್ತಿಯೊಂದಿಗೆ ವಿಹರಿಸಿ ಆಲೋಚನ ಕ್ರಮಗಳನ್ನು ಎಣೆಯುವ ಕಾರ್ಯದಲ್ಲಿ ಕಾಣಬಹುದಾದುದಾಗಿದೆ.

## ಮಕ್ಕಳ ಕತೆ

ಸಾಮಾನ್ಯವಾಗಿ ಹದಿನೆಂಟು ವರ್ಷದ ಒಳಗಿನ ಎಲ್ಲಾ ವಯೋಮಾನದವರಿಗಾಗಿ ರಚನೆಯಾದ ಸಾಹಿತ್ಯ ಪ್ರಕಾರವನ್ನು 'ಮಕ್ಕಳ ಸಾಹಿತ್ಯ' ಎಂದು ಕರೆಯಲಾಗುತ್ತದೆ. 'ಮಕ್ಕಳ ಅಭಿರುಚಿಗನುಸಾರ ರಚಿತವಾದ, ಅವರಿಗಾಗಿ ಆರಿಸಿದ, ಅವರೇ ತಮಗಾಗಿ ರಚಿಸಿಕೊಂಡ ಕತೆಗಳನ್ನು ಮಕ್ಕಳ ಕತೆ ಗಳೆನ್ನುವರು'. ಮಕ್ಕಳಿಗಾಗಿ ಹೇಳಿದ, ಬರೆದ, ತೋರಿಸಿದ ಕತೆಗಳೂ ಮಕ್ಕಳ ಕತೆಗಳೆನಿಸುತ್ತವೆ. ಮಕ್ಕಳದೇ ಪಾತ್ರ, ಅವರದೇ ಸನ್ನಿವೇಶ, ಮಕ್ಕಳ ಬಳಕೆಯ ವಸ್ತುಗಳು, ಮುಗ್ಧತೆಯಿಂದ ಕೂಡಿದ ಭಾವನೆಗಳು, ಕಲ್ಪನೆ, ಆಲೋಚನೆಗಳು, ಎಳೆಯರ ಭಾಷೆ, ಮಕ್ಕಳ ಪರಿಸರ ಎಲ್ಲನ್ನು ಒಳಗೊಂಡವು ಮಕ್ಕಳ ಕತೆಗಳಾಗಿ ಕಾಣಿಸಿಕೊಳ್ಳುತ್ತವೆ. 'ಯಾವ ಕತೆಗಳು ಓದಿದೊಡನೆ ಮಕ್ಕಳನ್ನು ಆನಂದಗೊಳಿಸುವವೋ, ಅವರ ಸರ್ವಾಂಗೀಣ ವಿಕಾಸಗೊಳಿಸಲು ನೆರವಾಗಿ ನಿಲ್ಲುವುವೋ, ಅವರ ಆತ್ಮದ ಉದ್ಧಾರವನ್ನು ಮಾಡುವುವೋ, ಜೀವನ ಸಂಘರ್ಷದಿಂದ ಹೊರಬರಲು ಮಾರ್ಗದರ್ಶಿಯಾಗುವುವೋ, ಕ್ರಿಯಾಶೀಲಗೊಳಿಸುವುವೋ ಅವೆಲ್ಲಾ ಮಕ್ಕಳ ಕತೆಗಳೆನಿಸುತ್ತವೆ'.

'ಮಕ್ಕಳಲ್ಲಿರುವ ಸಹಜವಾದ ಕುತೂಹಲಗಳನ್ನು ಕೆರಳಿಸಿ, ಅವರ ಆಲೋಚನೆಗಳು ಗರಿಗೆದರುವಂತೆಮಾಡಿ, ಅವರನ್ನು ರಂಜನೆಯಿಂದ ಮುದಗೊಳಿಸಬಲ್ಲ ಮಕ್ಕಳದೇ ಪರಿಸರ, ವಸ್ತು, ಪಾತ್ರ,

---

[೮] ಸಂಕ್ಷಿಪ್ತ ಕನ್ನಡ ನಿಘಂಟು, ಪುಟ ೨೧೯, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೧೩.

ಭಾಷೆಯಿಂದ ಆವರಿಸಿರುವ ಕತೆಗಳು ಮಕ್ಕಳ ಕತೆಗಳೆನಿಸುತ್ತವೆ'. ಕತೆಯ ಬರಹಗಾರರು ಯಾರದರೂ ಸರಿಯೆ ಅನುಭವಿಸುವ ಸಹೃದಯಿಗಳು ಮಕ್ಕಳೆಂದು ಭಾವಿಸುವ, ಮಕ್ಕಳನ್ನು ಮುಂದಿರಿಸಿಕೊಂಡು ಬರೆದ ಎಲ್ಲಾ ಬರಹಗಳು 'ಮಕ್ಕಳ ಕತೆಗಳು' ಎನಿಸುತ್ತವೆ.

ಹಿಂದಿಯ ಭಗವತಿಪ್ರಸಾದ್ ವಾಜಪೇಯಿ ಯವರು ಅಭಿಪ್ರಾಯಿಸುವಂತೆ 'ಭಾಷೆಯ ಕ್ಲಿಷ್ಟತೆಯಿಲ್ಲದೆ ಸರಳತೆಯಿಂದ ಮಗುವಿನಲ್ಲಿ ನವನಿರ್ಮಾಣ ಭಾವವನ್ನು ಪರಂಪರೆಯೊಂದಿಗೆ ಕಟ್ಟಿಕೊಡುವುದು ಸಹ ಕತೆಯೇ ಆಗಿದೆ'. ರಾಷ್ಟ್ರಬಂಧುರವರು ಬಾಲಸಾಹಿತ್ಯವನ್ನು ಕುರಿತು ಹೇಳುವಾಗ 'ಬಾಲಸಾಹಿತ್ಯವು ರೋಚಕ ಮತ್ತು ಪ್ರೇರಕ' ಎಂದಿರುವುದನ್ನು ಅನುಸರಿಸಿ ಮಕ್ಕಳ ಕತೆಗಳು ರೋಚಕವೂ, ಪ್ರೇರಕವೂ ಆಗಿವೆ ಎನ್ನಬಹುದಾಗಿದೆ.

ಲಕ್ಷ್ಮಿನಾರಾಯಣ ದುಬೆ ರವರು ಅಭಿಪ್ರಾಯಿಸುವಂತೆ 'ಮಕ್ಕಳ ಜಗತ್ತು ಚತುರತೆಯಿಂದ ಕೂಡಿದ್ದು, ಅವರ ಸ್ವಾತಂತ್ರ ವ್ಯಕ್ತಿತ್ವದ ಅಭಿವ್ಯಕ್ತಿಯನ್ನು ಬಯಸುತ್ತದೆ. ಸಂಸ್ಕೃತಿ, ಜೀವನಮೌಲ್ಯಗಳನ್ನು ಅವರದೇ ಭಾಷೆಯಲ್ಲಿ ಸರಳವಾಗಿರಿಸಿ ಕೊಡುವುದು ಬಾಲ ಸಾಹಿತ್ಯ' ಎನ್ನುತ್ತಾರೆ. ಅಂದರೆ ಮಕ್ಕಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸುವ, ಮೌಲ್ಯಗಳಂದ ಜೀವನವನ್ನು ರೂಪಿಸುವ ಆಶಯವುಳ್ಳದ್ದು ಮಕ್ಕಳ ಕತೆಗಳಲ್ಲಿನ ವಸ್ತುವಾಗಿರಬೇಕು ಎನ್ನುವುದಾಗಿದೆ. ಈ ಎಲ್ಲರ ಅಭಿಪ್ರಾಯಗಳು ಬಾಲಸಾಹಿತ್ಯದ ಇಡಿಯಾದ ಹಿನ್ನೆಲೆಯಿಂದ ಬಂದವೇ ವಿನಹ ಮಕ್ಕಳ ಕತೆಗಳಗಾಗಿ ಪ್ರತ್ಯೇಕತೆಯಿಂದ ಆಡಿದ ಮಾತುಗಳಲ್ಲ. ಮಕ್ಕಳ ಕತೆಗಳಲ್ಲಿಯು ಸಹಜವಾಗಿ ಇಂತಹದೇ ಲಕ್ಷಣಗಳರುವುದರಿಂದ ಇವುಗಳನ್ನು ಇಲ್ಲಿ ಸ್ಮರಿಸಬಹುದು.

ಸಾಮಾನ್ಯರ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳರುವಂತೆ ಮಕ್ಕಳ ಸಾಹಿತ್ಯದಲ್ಲೂ ಅನೇಕ ಪ್ರಕಾರಗಳವೆ. ಮಕ್ಕಳ ಸಾಹಿತ್ಯದ ಸ್ವರೂಪವು ಅನೇಕ ಪ್ರಕಾರಗಳಂದ ತನ್ನ ಅಸ್ಮಿತೆಯನ್ನು ಉಳಸಿಕೊಂಡು, ಅಸ್ತಿತ್ವವನ್ನು ವಿಸ್ತರಿಸಿಕೊಳ್ಳುತ್ತಾ ಬೆಳೆದು ಬಂದಿದೆ.

ಮಕ್ಕಳ ಸಾಹಿತ್ಯದ ವಿವಿಧ ಸ್ವರೂಪಗಳಲ್ಲಿ ಕವಿತೆಗಳು ಹೇರಳವಾಗಿ ವ್ಯಾಪಿಸಿವೆ, ಕತೆಗಳದು ನಂತರದ ಸ್ಥಾನವಾದರೂ ಮಹತ್ತ ವೆನಿಸುವುದು ಕತೆಗಳೆ. ಈ ಪ್ರಕಾರವು ಮಕ್ಕಳಗೆ ಚೇತೋಹಾರಿಗಳಾಗಿ ಕುತೂಹಲ, ಚತುರತೆ, ಮುದ, ಆಹ್ಲಾದಕರದಂಥ ಭಾವಸ್ವಭಾವತೆಯನ್ನು ಹುಟ್ಟಿಸುತ್ತವೆ. ಕನ್ನಡದಲ್ಲಿ ಮಕ್ಕಳ ಕತೆಗಳಗೆ ಒಂದು ಚೌಕಟ್ಟು ಹಾಕಿ, ಅದರಾಚೆಗೆ ಆಲೋಚಿಸುವ ಪ್ರಯತ್ನಗಳು ನಡೆಯಲಿಲ್ಲವೆನ್ನಬಹುದು. ಇಂತಹ ಸಂದರ್ಭದಲ್ಲಿ ಹೊಸಬಗೆಯ ಆಶವಾದದೊಂದಿಗೆ ಕಾಣಿಸಿಕೊಂಡವರು ಎಚ್.ಎಸ್. ವೆಂಕಟೇಶಮೂರ್ತಿಯವರು. ಅವರು 'ಮಕ್ಕಳ ಭಾಷೆಯ ಸಾಮರ್ಥ್ಯ ಅರಿತು, ಭಾಷೆಯ ಅನುಭವ ವಿಸ್ತಾರ ಸಾಧಿಸಿ, ಅವರಿಗೆ ಕಲ್ಪನೆಯನ್ನು ಕಟ್ಟಿಕೊಡುವ, ಮಕ್ಕಳಗೆ ಪ್ರಿಯವಾಗುವ, ಮುಗ್ಧತೆಯ ಅನಾವರಣದೊಂದಿಗೆ ರಚಿತವಾಗುವ, ಪ್ರೌಢತೆಯನ್ನು ಬದಿಗಿಟ್ಟು ಬರೆಯುವ ಸಾಹಿತ್ಯವು ಮಕ್ಕಳ ಸಾಹಿತ್ಯವೆನಿಸುತ್ತದೆ. ಇವುಗಳ ಜೊತೆಗೆ ಶ್ರೇಷ್ಠಮಟ್ಟದ ಸಾಹಿತ್ಯದ ಕಸುಬುಗಾರಿಕೆಯು ಇರದೆ ಹೋದರೆ

ಮಕ್ಕಳ ಸಾಹಿತ್ಯವು ಉನ್ನತಿ ಸಾಧಿಸಲಾರದು.[೯] ಎಂಬ ಮಾತನ್ನು ಕನ್ನಡದ ಮಕ್ಕಳ ಸಾಹಿತ್ಯವನ್ನು ಒಟ್ಟಾರೆ ಗ್ರಹಿಸಿ ಹೇಳದ್ದಾಗಿದೆ. ಕತೆಗಳಗೂ ಇದೇ ಅರ್ಥವು ದನಿಸುತ್ತದೆ.

ಮಕ್ಕಳಗಾಗಿ ಮಕ್ಕಳೇ ಬರೆದುಕೊಳ್ಳುವ ಸಾಹಿತ್ಯವು ಮಕ್ಕಳ ಸಾಹಿತ್ಯವೆನಿಸುತ್ತದೆ. ದೊಡ್ಡವರು ಎಷ್ಟೇ ಪರಕಾಯ ಪ್ರವೇಶಮಾಡಿ ಬರೆದರೂ, ಮಕ್ಕಳ ಸಹಜವಾದ ಮುಗ್ಧತೆಯು ಬರಲಾರದು. ಮಕ್ಕಳ ಸಾಹಿತ್ಯವು ಮಕ್ಕಳಂದಲೇ ಬರಬೇಕು. ಆದರೆ ಅದಕ್ಕೆ ಸಾಹಿತ್ಯದ ಸಂಸ್ಕಾರವು, ಲಯದ ಸಹಜ ಸೊಬಗು, ಭಾಷೆಯ ಬೆಳಕು, ಕಲ್ಪನೆಯ ಜಿಗಿತ ಎಲ್ಲವನ್ನು ಮಕ್ಕಳಂದ ನಿರೀಕ್ಷಿಸಲಾಗದು. ಮಕ್ಕಳ ಕತೆಗಳಗೆ ಪ್ರಬುದ್ಧರ ಕತೆಗಳ ತಂತ್ರಗಾರಿಕೆಯೂ ಬೆರೆತು ಮಕ್ಕಳನ್ನು ಸೆಳೆಯುವಂತಿದ್ದರೆ ಅವೂ ಮಕ್ಕಳ ಕತೆಗಳೆನಿಸುತ್ತವೆ ಎಂದು ಹಿರಿಯ ಸಾಹಿತಿ ಎಚ್.ಎಸ್. ವೆಂಕಟೇಶಮೂರ್ತಿಯವರು ಅಭಿಪ್ರಾಯವನ್ನು ಇಲ್ಲಿ ಗ್ರಹಿಸಬಹುದು. ಸಾಹಿತ್ಯದ ಸಂಸ್ಕಾರವನ್ನು ಬಯಸಿ ಮಕ್ಕಳನ್ನು ಕಡೆಗಣಿಸಿ, ದೊಡ್ಡವರು ಬರೆದರೆ ಮಕ್ಕಳಗೆ ಈ ರೀತಿಯ ಕತೆಗಳಂದ ಹೆಚ್ಚು ಪ್ರಯೋಜನ ಲಭಿಸಲಾರದು. ದೊಡ್ಡವರು ಮಕ್ಕಳಗೆ ಬರೆದ ಸಾಹಿತ್ಯವೂ ಜಗತ್ತಿನಲ್ಲಿ ಹೇರಳವಾಗಿ ಸಿಗುತ್ತದೆ. ಆದರೆ ಇದು ಮಕ್ಕಳ ಸೃಜನಶೀಲತೆಯನ್ನು ಕೊಂದುಹಾಕುತ್ತದೆ. ಮಕ್ಕಳು ಎಂದಾಗ ಕೇವಲ ಪುಟಾಣಿಗಳೆಂದು ಭಾವಿಸುವುದಲ್ಲ. ವಿವಿಧ ವಯೋಮಾನವು ಅವರಲ್ಲಿದೆ ಎಂದಾಗ, ಆಲಿಸುವಿಕೆಯ ಚಿಣ್ಣರಿಗೆ ಶ್ರವ್ಯ ಕತೆಗಳು ಬೇಕು. ಅವು ಬಾಲಭಾಷೆಯಿಂದ ಕೂಡಿದ್ದು ರಂಜಿಸುವಂತಿರಬೇಕು, ಅವು ಚುಟುಕಾಗಿದ್ದು ನೆನಪಿನಲ್ಲಿ ಉಳಯುಂತಿರಬೇಕು. ಮಾತನಾಡುವಿಕೆಯ ಕಲೆ ಸಿದ್ಧಿಸಿದ ಎಳೆಯರಿಗೆ ಶ್ರವ್ಯ ಹಿತವೂ, ಚತುರತೆಯ ಪ್ರದರ್ಶನವೂ, ಸ್ಮರಣೆಯೋಗ್ಯವೂ ಆಗಿರುವುದನ್ನು ಬಯಸುವರು. ಓದಲುಕಲಿತ, ಶಿಕ್ಷಣವು ರುಚಿಸಿರುವ ಮಕ್ಕಳಗೆ ತಾವೇ ಓದಿಕೊಳ್ಳುವಂತಹ ಸ್ವಯಂ ಜ್ಞಾನ ಗಳಕೆಗೆ ದಕ್ಕುವ, ಸಾಹಿತ್ಯದ ಅಗತ್ಯವನ್ನು ಒದಗಿಸುವ ಗ್ರಹಿಕೆಗೆ ಯೋಗ್ಯ ಸರಕು ಅಗತ್ಯವೆನಿಸುತ್ತದೆ. ಬರೆಯಲು ಬಲ್ಲ ಮಕ್ಕಳು ತಮಗೆ ಬೇಕಾದ ಕತೆಗಳನ್ನು ತಮ್ಮದೇ ಆದ ಬಾಲ ಭಾಷೆಯಲ್ಲಿ ಬರೆದುಕೊಳ್ಳುವುದನ್ನು ಮಕ್ಕಳ ಕತೆಗಳೆಂದು ಪರಿಗಣಿತವಾಗುತ್ತವೆ. ಆದರೆ ಎಲ್ಲಾ ವರ್ಗದ ಮಕ್ಕಳಗೂ ಅಗತ್ಯವಾದ ಕತೆಗಳನ್ನು ಓದು ಬರಹ ಬಲ್ಲ ಮಕ್ಕಳೇ ಬರೆದು ಮಕ್ಕಳ ಕಥಾ ಸಾಹಿತ್ಯದ ಅಗತ್ಯವನ್ನು ನೀಗಿಸುವರು ಎಂದು ನಂಬಲಾಗದು. ಹಾಗಂತ ಮಕ್ಕಳ ಸೃಜನಶೀಲತೆಯನ್ನು ಭಂಗಗೊಳಸಲಾಗದು. ಮಕ್ಕಳೇ ಬರೆದುಕೊಂಡ ಕಥಾ ಸಾಹಿತ್ಯವನ್ನು ಹಿರಿಯರ ಕಥಾ ಸಾಹಿತ್ಯದ ಮುಂದೆ ಹೋಲಿಸಿ ಪ್ರಮಾಣೀಕರಿಸುವುದು ಮಕ್ಕಳಸಾಹಿತ್ಯಕ್ಕೆ ಅಗತ್ಯವೆನಿಸುವುದಿಲ್ಲ. ಮಕ್ಕಳ ಗ್ರಹಿಕೆಯು ಹಿರಿಯರ ಗ್ರಹಿಕೆಗಿಂತ ತೀರಭಿನ್ನತೆಯನ್ನು ಹೊಂದಿದೆ ಎಂಬ ಹೊಸ ತುಡಿತವೇ ಆಧುನಿಕ ಮಕ್ಕಳ ಕಥಾ ಸಾಹಿತ್ಯದ ಹೊಸ ನಿರೀಕ್ಷೆಯ ಅರ್ಥವೆನಿಸುತ್ತದೆ.

'ಮಕ್ಕಳು ಕತೆಗಳನ್ನು ಕೇಳ ಮೈ ಮರೆಯುವಂತಾಗುವ, ಪರಿಚಿತ ಶಬ್ದಗಳಂದ ಕೂಡಿ ಶ್ರವ್ಯಹಿತವೆನಿಸುವ ನಗರ ಮತ್ತು ಹಳ್ಳಗಳೆರಡನ್ನೂ ಸಮೀಕರಿಸಿ ಗುಂಗು ಹಿಡಿಸುವ ಸಾಹಿತ್ಯದಿಂದ ಕೂಡಿದ, ಶಬ್ದವನ್ನು ಗದ್ಯ ಸಂಗೀತವಾಗಿಸುವ ಸಾಹಿತ್ಯವು ಮಕ್ಕಳ ಕತೆಗಳೆನಿಸುತ್ತವೆ'.[೧೦] ಮಕ್ಕಳ ಕತೆಗಳೆಂದರೆ ಕೇಳಲು

---

[೯] ಪಕ್ವತೆಯ ಹೆಗಲಮೇಲೆ ಮುಗ್ಧತೆಯ ಮೆರವಣಿಗೆ. ಹೆಚ್.ಎಸ್.ವೆಂಕಟೇಶ ಮೂರ್ತಿ, ಸಾಪ್ತಾಹಿಕ ವಿಜಯ, ೧೧-೧೧-೨೦೦೭

[೧೦] ಮಕ್ಕಳ ಸಾಹಿತ್ಯ : ಒಂದು ಮರುಚಿಂತನೆ, . ನ. ರಘುನಾಥ, ಲೇ. ಆನಂದಪಾಟೀಲ. (ಮಕ್ಕಳ ಸಾಹಿತ್ಯ ಮಾತುಕತೆ, ಲೇಖನ ಮಾಲಿಕೆ)

ಹಿತವೆನಿಸುವ, ಪುನರುಚ್ಚಾರಗೊಳ್ಳುವ ದ್ವಿರುಕ್ತಿಮಯ ಪದಗಳಿಂದ ರಚಿತವಾದ ವಾಕ್ಯಸರಣಿಯ ಗದ್ಯದಿಂದ ಕೂಡಿರುವ ಕಥಾ ಹಂದರವನ್ನು ಮಕ್ಕಳಕಥಾ ಸಾಹಿತ್ಯ ಹೊಂದಿರಬೇಕೆಂದು ಸ.ರಘುನಾಥರು ಅಪೇಕ್ಷಿಸುತ್ತಾರೆ. ಮಕ್ಕಳ ಮಟ್ಟಕ್ಕೆ ಇಳಿದು ಬರೆಯುವುದಲ್ಲ ಮಕ್ಕಳು ಮುಟ್ಟುವಂತೆ ಬರೆಯಬೇಕು. ಅಂದರೆ ಅವರ ಅಗತ್ಯವನ್ನು ಅರಿತು ಬರೆಯುವಂತಾದದು ಮಕ್ಕಳ ಕತೆಯೇ ಆಗಿದೆ. ಹೀಗೆ ವಿವಿಧ ಗ್ರಹಿಕೆಗಳಿಂದ ಮಕ್ಕಳ ಕತೆಯ ಅರ್ಥವನ್ನು ತಿಳಿದಾಗ ಸಾಮಾನ್ಯವಾಗಿ ಕಾಣಸಿಗುವ ಅಂಶ 'ಸಹೃದಯ ಸಮೂದಾಯವೆಂದು ಮಕ್ಕಳನ್ನು ಭಾವಿಸಿಕೊಂಡು, ಅವರ ಅಭಿರುಚಿಯನುಸಾರ ಅವರಿಗಾಗಿ ರಚನೆಯಾದ ಕತೆಗಳು 'ಮಕ್ಕಳ ಕತೆಗಳು' ಎನಿಸಿಕೊಳ್ಳುತ್ತವೆ ಎಂಬುದು.

## ೨.೩ ಮಕ್ಕಳ ಕಥಾ ಸಾಹಿತ್ಯದ ಸ್ವರೂಪ

ಜನಪದದಿಂದ ತೆಗೆದುಕೊಂಡ ಕತೆಗಳಿಗೆ ಅವುಗಳದೇ ಆದ ವಸ್ತು, ರಚನಾಬಗೆಗಳು ಇದ್ದವು. ಅವನ್ನೇ ಬರಹಕ್ಕೆ ಅಳವಡಿಸಿಕೊಂಡು ಬಂದುದು ಮಕ್ಕಳ ಸಾಹಿತ್ಯದ ಮೊದಲ ಘಟ್ಟವೆನ್ನಬಹುದು. ಅಲ್ಲಿ ಕತೆ ಪ್ರಾರಂಭವಾಗುವುದು ನಮ್ಮ ವಾಸ್ತವದ ಕಾಲದಿಂದ ಬೇರೆಯಾಗಿ, ಬಹು ಅಂತರದಲ್ಲಿ ಹಿಂದೆ ನಡೆದುದಾಗಿ ಕತೆ ಸಂಭವಿಸುತ್ತದೆ. ಅಲ್ಲಿ ಕಾಲದಂತೆ ಸ್ಥಳವೂ ಹೀಗೆಯೇ ಅನಿರ್ದಿಷ್ಟವಾಗಿ ಸೂಚಿತವಾಗುತ್ತಿರುತ್ತದೆ. ಕತೆ ರಾಜ ಮಹಾರಾಜರದಾಗಿರುವಂತೆ ಸಾಮಾನ್ಯರದ್ದೂ ಆಗಿರಬಲ್ಲದು. ಅಲ್ಲಿ ತೀರ ಸಾಮಾನ್ಯವಾಗಿ ಸಂಭವಿಸುವ ದಿನನಿತ್ಯದ ಸಂಗತಿಯೆ ಕತೆಯಾಗುವುದು ಬಹುವಿರಳ. ಅದಕ್ಕೆ ಒಂದಿಷ್ಟೆಲ್ಲ ಅಸಹಜ ಎನ್ನಿಸುವ ಗುಣ ಬೇಕೇಬೇಕು. ಹಾಗಾಗಿಯೇ ಕತೆಗಳು ಕೆಲವೆಲ್ಲ ಅತಿಶಯಗಳ ಸುತ್ತ ರಚನೆಗೊಳ್ಳುತ್ತಿರುತ್ತವೆ. ಮಲತಾಯಿ ಯಾವಾಗಲೂ ಕೆಟ್ಟವಳೇ ಆಗಿರುವವಳು, ಪೆದ್ದರು, ಅಶಕ್ತರು, ಕಿರಿಯರು, ಅನುಕೂಲವಿಲ್ಲದವರು, ಅಸಹಾಯಕರು ನಿರೀಕ್ಷಿತವಾಗಿ ಯಾವು ಯಾವುದೋ ಸಹಾಯ ಒದಗಿ ತಮ್ಮ ಗುರಿಯನ್ನು ತಲುಪುವುದು, ಇಲ್ಲವೆ ಸುಖದ ದಡವನ್ನು ಮುಟ್ಟುವುದನ್ನು ಕಾಣುತ್ತೇವೆ. ಒಬ್ಬರಿಗೆ ಸಿಗುವ ಭಾಗ್ಯವನ್ನು ವ್ಯಸನದಿಂದ, ಲಾಲಸೆಯಿಂದ ಅವರಂತೆಯೇ ಪ್ರಯತ್ನಿಸಲು ಹೋಗಿ ಪಡಿಪಾಟಲು ಪಡುವುದು ಕಾಣುತ್ತದೆ. ಅಳಿಯ ಅತ್ತೆಯ ನಡುವಿನ ಹಾಸ್ಯಾಸ್ಪದವೇ ಆದ ಪ್ರಸಂಗಗಳು ಸಿಗುತ್ತವೆ. ಹೀಗೆ ಈ ಕತೆಗಳು ಕೆಲವೆಲ್ಲ ನಿಗದಿತವಾದ ಸಂಗತಿಗಳನ್ನಿಟುಕೊಂಡೇ ರಚನೆಗೊಳ್ಳುತ್ತಿರುತ್ತವೆ. ಜನಪದದ ಅಧ್ಯಯನದಲ್ಲಿ 'ಆಶಯ' (Motif) ಎಂದು ಈ ಬಗೆಯ ಸಂಗತಿಗಳನ್ನಿಟ್ಟುಕೊಂಡು ಕತೆಗಳ ಅಧ್ಯಯನ, ಅವುಗಳ ಮೂಲ ಹುಡುಕುವುದು ಕಾಣಿಸಿಕೊಂಡುದು ಇದೇ ಕಾರಣಕ್ಕೆ. ಇಂತಹ ಕತೆಗಳಲ್ಲಿ ಸುಖಾಂತ್ಯ ಸಾಮಾನ್ಯವಾಗಿ ಇರುತ್ತದೆ. ಈ ಬಗೆಯ ಕತೆಗಳು ಬಹಳಷ್ಟು ಸಲ ದೊಡ್ಡವರ ಬದುಕನ್ನೇ ಕತೆಯ ಹಂದರವಾಗಿ ಹೊಂದಿರುತ್ತವೆ. ಅಲ್ಲಿ ದೊಡ್ಡವರ ಬದುಕಿನ ಹಂಬಲಗಳೇ ಉದ್ದಕ್ಕೂ ಕಾಣುವುದು. ಮದುವೆ ಯಾಗುವುದು, ಸಂಸಾರ ನಡೆಸುವುದು, ರಾಜ್ಯ ಗಳಿಸುವುದು, ಸುಖದ ಬದುಕಿನ ಗುರಿಯನ್ನು ತಲುಪುವುದು, ದ್ವೇಷ, ಲಾಲಸೆಗಳು ಹಣಕ್ಕಾಗಿ, ಸಂಪತ್ತಿಗಾಗಿ ನಡೆಯುವುದು, ಹೆಣ್ಣುಮಕ್ಕಳ ಮದುವೆಗಾಗಿ ಸರಿಸಮಾನ ಸಾಮಾಜಿಕ ಸ್ತರದಲ್ಲಿಯೇ ಗಂಡನ್ನು ನೋಡುವುದು, ಅದಕ್ಕಾಗಿ ಸ್ಪರ್ಧೆ ಮೊದಲಾದ

ಉಪಾಯಗಳನ್ನು ಹುಡುಕುವುದು ಮುಂತಾದ ಎಲ್ಲವೂ ವಯಸ್ಕರ ಜೀವನದ ಸುತ್ತಲೇ ಕತೆಗಳು ಇರುತ್ತವೆ. ಬಾಲಕ, ಬಾಲಕಿಯರು ಬಂದರೂ ಅವರು ದೊಡ್ಡವರ ಜಗತ್ತಿನ ಭಾಗವಾಗಿಯೇ ಬರುತ್ತಾರೆಯೇ ಹೊರತು ಪ್ರಧಾನವಾಗಿ ಕಾಣಸಿಗುವುದಿಲ್ಲ.

ಆದರೆ ಈ ಜನಪದ ಕತೆಗಳ ಸ್ವೀಕರಿಸುವಿಕೆಯ ನಂತರದ ಘಟ್ಟವಾಗಿ ಹೊಸಗಾಲದಲ್ಲಿ ವಿರಳವಾಗಿಯಾದರೂ ಕಾಣಿಸಿಕೊಂಡಿರುವ ಕತೆಗಳಲ್ಲಿ ನಮ್ಮದೇ ಅದ ಸುತ್ತಮುತ್ತಲಿನ ಮಕ್ಕಳ ಸಂಗತಿಗಳು ಕಾಣಿಸತೊಡಗಿರುವುದು ಇದೆ. ಮಕ್ಕಳು ಎದುರಿಸುವ ಸಮಸ್ಯೆಗಳು, ಸಾಮಾನ್ಯವಾಗಿ ಅವರಿಗೆ ಬೇಕಾಗುವ ನೀತಿ ಪಾಠ, ಶಾಲೆ, ಅಭ್ಯಾಸದ ಸುತ್ತಮುತ್ತಲಿನ ಸ್ಪರ್ಧೆ, ಶಾಲೆಯ ಪರಿಸದರಲ್ಲಿ ಪ್ರಾಮಾಣಿಕತೆ ತೋರುವುದು, ಗುರು ಹಿರಿಯರಲ್ಲಿ ಗೌರವ ತೋರುವುದು ಮುಂತಾಗಿ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯನ್ನು ಗಮನದಲ್ಲಿರಸಿಕೊಂಡಿರುವ ಬರವಣಿಗೆಯ ಒಂದು ಹಂತ ಎನ್ನಬಹುದು. ಇವು ಈಗಾಗಲೇ ಕಾಣಿಸಿಕೊಂಡಿದ್ದ ಇಸೋಪನ ನೀತಿಕತೆಗಳ ಮುಂದುವರಿದ ಹೊಸಗಾಲದ, ಹೊಸರೂಪದ ಬಗೆಗಳು ಎನ್ನಬಹುದು. ನಮ್ಮಲ್ಲಿನ ಬಹಳಷ್ಟು ಲೇಖಕರು ಈ ಬಗೆಯ ಬರವಣಿಗೆಯಿಂದ ಇನ್ನೂ ಬಿಡುಗಡೆ ಹೊಂದಿಲ್ಲ. ನೀತಿಕತೆಗಳಾಗಿ ಬಹುಕಾಲದ ವರೆಗೆ ನಮ್ಮ ನಡುವೆ ಬಳಕೆಯಾದ ಕತೆಗಳು ಒಂದಾವುದೋ ನೀತಿ ವಾಕ್ಯಕ್ಕೆ ಅಂಟಿಕೊಳ್ಳುತ್ತಿವೆ, ಮಿತವಾಗುತ್ತಿವೆ ಎನ್ನುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇದು ಜನಪದದ ಗುಣವಲ್ಲ, ನಮ್ಮ ನಡವಿನ ಪರಂಪರೆಯಲ್ಲಿ ಹುಟ್ಟಿಕೊಂಡ ಶಿಷ್ಟ ಮನಸ್ಸುಗಳುಳ್ಳ ಲೇಖಕರ ಕೃಷಿಯಿದು. ಹಾಗಾಗಿ ನೀತಿಕತೆ ಎನ್ನುವುದು ಬರಹದ ಕತೆಗಳಲ್ಲಿಯೇ ಕಾಣಿಸಿಕೊಂಡುಬಂದದ್ದು ಎನ್ನುತ್ತೇವೆ.

ರಾಮಾಯಣ, ಮಹಾಭಾರತದಿಂದ ಆಯ್ದ ಪ್ರಸಂಗಗಳು, ಪುರಾಣಗಳ ಬಾಲಕರಿಂದ ಆಯ್ದ ಪ್ರಸಂಗಗಳು, ಈ ಬಗೆಯ ಇನ್ನೂ ಹಲವು ವಿಧದ ಕತೆಗಳು ನಮ್ಮ ನಡುವೆ ಶಿಷ್ಟ ಸಮುದಾಯದಿಂದಲೇ ಉದ್ಯುಕ್ತವಾದುವುಗಳು. ಇಲ್ಲಿ ಬಾಲಕರು ಕಾಣಿಸಿಕೊಂಡರೂ ಅವರೆಲ್ಲ ತೀರ ಸಾಹಸಮಯವಾದ, ಅಧ್ಯಾತ್ಮದಂಥ ಗುರಿಯೆಡೆಗೆ ತುಡಿದವರು, ಗುರುಗಳಲ್ಲಿ ಅತ್ಯಂತ ಶ್ರದ್ಧೆಯಿಂದ ಶ್ರಮವಹಿಸಿ ಗುರುಕುಲಗಳಲ್ಲಿ ನಡೆದುಕೊಂಡವರು ಮುಂತಾದ ನಮ್ಮ ನಡುವೆ ನಡೆವ ಕತೆಗಳು ಅಲ್ಲಲ್ಲಿ ಕಾಣಿಸಿಕೊಂಡಿವೆ. ಇವು ಜನಪದದ ರಚನಾ ಬಗೆಗಳನ್ನು ಸ್ವೀಕರಿಸದೆ ಲೇಖಕರು ತಮ್ಮ ನಿರ್ದಿಷ್ಟ ಉದ್ದೇಶಕ್ಕೆ ತುಡಿದಂತಹವುಗಳಾಗಿವೆ. ಆದರ್ಶಗಳೇ ಈ ಎಲ್ಲ ಬಗೆಯ ಕತೆಗಳ ಹಿಂದೆ ಕಂಡುಬಂದಿದೆ. ಮಹಾಭಾರತದ ಕತೆಯ ಪ್ರಸಂಗಗಳು ಈ ಕಾವ್ಯವೇ, ಈ ಕತೆಯೇ ನಮಗೆಲ್ಲಾ ಆದರ್ಶ ಎನ್ನುವಷ್ಟು ಅಭಿಪ್ರಾಯದಲ್ಲ ಬಹಳಷ್ಟು ಸಲ ಮಕ್ಕಳಿಗೆ ನೀಡುತ್ತಾ ಬಂದವಾಗಿವೆ. ಅಲ್ಲಿಯು ದೊಡ್ಡವರ ಬದುಕಿನ ಮಜಲುಗಳೇ ಕಾಣಿಸಿಕೊಳ್ಳುತ್ತವೆ. ರಾಜರು, ಅವರ ಪರಿವಾರ, ಅವರ ನಡುವಿನ ತಾಕಲಾಟಗಳು, ಹಂಬಲಗಳು, ಬಯಕೆಗಳು ಕಾಣಿಸಿಕೊಳ್ಳುತ್ತವೆ. ಇವೆಲ್ಲವನ್ನು ಮಕ್ಕಳಿಗಾಗಿ ನೀಡುವಾಗ ಲೇಖಕರು ಹೇಗೆಲ್ಲ ಇವನ್ನು ಮಕ್ಕಳಿಗಾಗಿ ವಿಸ್ತರಿಸಿಕೊಳ್ಳುತ್ತಾರೆಯೋ ಅದರ ಮೇಲೆ ಅವಲಂಬಿಸಿ ನಿರೂಪಣೆ ನಡೆಯುತ್ತಿರುತ್ತದೆ.

ಇದರ ನಡುವೆ 'ಪಂಚತಂತ್ರ'ದ ಕತೆಗಳು ಪ್ರತ್ಯೇಕವಾಗಿ ಕಾಣಸಿಗುತ್ತವೆ. ಇವನ್ನು ವಿಷ್ಣುಶರ್ಮ ಆಗಲಿ, ವಸುಭಾಗಭಟ್ಟನಾಗಲಿ ರಚಿಸಿದುದು ರಾಜಪರಿವಾರದಲ್ಲಿ ದಾರಿತಪ್ಪಿದ ಮಕ್ಕಳನ್ನು ಸರಿಗೊಳಿಸುವ ಉದ್ದೇಶದಿಂದ. ಹಾಗಾಗಿ ಅಲ್ಲಿನ ಅವರ ಅಗತ್ಯಗಳಿಗಾಗಿ ತುಡಿದ ಕತೆಗಳೇ ಇವುಗಳು. ಇವು ಬಹು ಮುಖ್ಯವಾಗಿ ಅವರು ಅನುಸರಿಸಿದ ತಂತ್ರಗಳಾಗಿವೆ. ಅನುಭವದಿಂದ, ಚಾಣಾಕ್ಷತೆಯಿಂದ, ಚಾಕಚಕ್ಯತೆಯಿಂದ, ಕುಟಿಲ ನೀತಿಯಿಂದ, ಭೇದಗಳಿಂದ ಉಪಾಯವಾಗಿ ಕಾರ್ಯಸಾಧಿಸುವುದೇ ಇಲ್ಲಿ ಹರಡಿಕೊಂಡಿರುವುದು. ಇಲ್ಲಿನ ಪ್ರಾಣಿ ಪಾತ್ರಗಳ ಕತೆಗಳು ಮಕ್ಕಳಿಗಾಗಿ ಕುತೂಹಲ ಮೂಡಿಸುತ್ತವೆ ಎನ್ನುವ ಕಾರಣಕ್ಕೆ ಆಯ್ದು ಮಕ್ಕಳಿಗಾಗಿ ಮುದ್ರಿಸುತ್ತಾ ಸಂಗ್ರಹವಾಗಿಸಿ, ವಿವರಗಳನ್ನು ಬಿಟ್ಟುಕೊಟ್ಟು, ರೋಚಕವಾಗುವಂತೆ ಕಟ್ಟಿಕೊಡುತ್ತಾ ಮಕ್ಕಳ ನಡುವೆ ಪ್ರಚಾರಗೊಳಿಸಿದುದನ್ನು ಕಾಣುತ್ತೇವೆ. ಪ್ರಕಾಶಕರಿಗೆ ಇವು ಬಹು ಸುಲಭವಾದ ಸಾಮಗ್ರಿಯಾದುದರಿಂದ ಪದೇ ಪದೆ ಮುದ್ರಣಗೊಂಡು ಬಳಕೆಯಾಗುತ್ತ ನಮ್ಮ ಪರಂಪರೆಯ ಕತೆಗಳು ಎಂದು ಪ್ರಚಾರ ಪಡೆಯುತ್ತಾ ಬಂದವುಗಳಾಗಿವೆ. ಇವು ಕೂಡ ತಮ್ಮದೇ ಆದ ವಿಭಿನ್ನ ರಚನೆಯ ಅಗತ್ಯಗಳನ್ನು ಕಂಡುಕೊಂಡವುಗಳಾಗಿವೆ.

ಬಾಲ್ಯವನ್ನು ಹರವಿಕೊಂಡು ಕತೆಗಳಲ್ಲಿ ಆದಷ್ಟು ಸೃಜನಶೀಲತೆಗೆ ಹಂಬಲಿಸುವ ಬರಹಗಳು ಇತ್ತೀಚೆಗೆ ತೀರ ವಿರಳವಾಗಿಯಾದರೂ ಕಾಣಿಸಿಕೊಳ್ಳತೊಡಗಿವೆ. ಇವುಗಳಲ್ಲಿ ಫ್ಯಾಂಟಸಿಯೂ ಅಗತ್ಯವಾಗಿ ಕಾಣಿಸಿಕೊಳ್ಳುತ್ತಿದೆ. ಬೇರೆ ಭಾಷೆಯಿಂದ ಬಂದ ಅನುವಾದಗಳು ಸಹ ಕಾಣಿಸಿಕೊಳ್ಳತೊಡಗಿವೆ. ಸಾಮಾಜಿಕ ಬದುಕಿನ ವಿಭಿನ್ನ ಮಗ್ಗಲುಗಳು, ಲೇಖಕರ ಬದುಕಿನ ನಾನಾ ಬಗೆಯ ಹಿನ್ನೆಲೆಗಳು ಕತೆಗಳ ಹಿಂದೆ ಮೂಡಿಬರತೊಡಗಿವೆ. ಲೇಖಕರಿಗೆ ತಮ್ಮವೇ ಆದ ಕತೆಗಳಾಗಿ ಇವು ಅರಳತೊಡಗಿವೆ. ಕಥನ ಕವಿತೆಗಳೂ ಕಾಣಿಸಿಕೊಳ್ಳುವಾಗ ಜನಪದ ಸರಕನ್ನು ಉಪಯೋಗಿಸಿಕೊಂಡರೂ ಹೊಸಗಾಲದ ಅಗತ್ಯಕ್ಕಾಗಿ ಅವನ್ನು ಬಳಸಿಕೊಳ್ಳುತ್ತಿರುವುದು ಕಾಣುತ್ತಿದೆ.

ಈ ಬಗೆಯ ಹೊಸಗಾಲದ ಕತೆ ತನ್ನ ಪ್ರಸ್ತುತಿ, ರಚನೆಯಲಿ ವಿಭಿನ್ನ ಬಗೆಯ ಸ್ವರೂಪವನ್ನು ಅಗತ್ಯವಾಗಿ ಪಡೆಯತೊಡಗಿದೆ. ಕತೆ ಯಾವುದೋ ಕಾಲಕ್ಕೆ, ಯಾವುದೋ ಪ್ರದೇಶಕ್ಕೆ ಹೊಂದಿಕೊಂಡಿರದೆ, ನಮ್ಮ ನಡುವೆ, ನಮ್ಮವೇ ಆದ ವಿಭಿನ್ನ ಪರಿಸರದಲ್ಲಿ ಹುಟ್ಟಿಕೊಳ್ಳುತ್ತಿವೆ. ಹಾಗಾಗಿ ಕತೆ ಪ್ರಾರಂಭವಾಗುವುದು, ಅದು ತಿರುವುಗಳನ್ನು ಪಡೆಯುವುದು, ಬೆಳವಣಿಗೆ ಹೊಂದುವುದು, ಕೊನೆಯನ್ನು ಕಾಣುವುದು ಎಲ್ಲ ಲೇಖಕರ ಅಗತ್ಯಗಳಾಗಿ ಕಾಣಿಸಿಕೊಳ್ಳುತ್ತವೆ. ಈಗ ಆಧುನಿಕವಾಗಿ ಬರುವ ಕತೆಗಳಲ್ಲಿ ತೊಡಗಿಸುವಿಕೆ ಸುಖಾಂತ್ಯವನ್ನೇ ಕಾಣುವುದು ಇಲ್ಲಿ ಅನಿವಾರ್ಯ ವಾಗುತ್ತಿಲ್ಲ. ಸೂಚ್ಯವಾಗಿ, ಹಲವಾರು ತಿರುವುಗಳಿಗೆ ಸ್ಪಂದಿಸುತ್ತಾ ಕತೆಯು ತನ್ನ ಮುಕ್ತಾಯವನ್ನು ಕಾಣಬಹುದಾಗಿದೆ. ಕತೆ ಯಾವುದೊಂದು ನೀತಿಗೆ ಸೀಮಿತವಾಗದೆ ಹಲವು ಮುಖಗಳಿಗೆ ತೆರದುಕೊಳ್ಳುತ್ತಿದೆ.

ಹೀಗೆ ಕತೆಯ ಸ್ವರೂಪ ಹಿರಿಯರ ಕಥಾಲೋಕದದಲ್ಲಿಯಂತೆ ಇಲ್ಲಿಯೂ ಈಗೀಗ ಸೃಜಶೀಲವಾಗಿ ತೆರೆದುಕೊಳ್ಳತೊಡಗಿದೆ. ಕನ್ನಡದಂಥ ಪರಿಸರದಲ್ಲಿ ಮಕ್ಕಳ ಕಥಾಸಾಹಿತ್ಯವೂ ಪ್ರಬುದ್ಧರ ಕಥಾ ಸಾಹಿತ್ಯದಂತೆ ತೀವ್ರವಾದ ಸೃಜನಶೀಲ ನಡೆಯನ್ನು ಅನುಭವಿಸದಿದ್ದರೂ, ನಿಧಾನವಾಗಿಯಾಸಸದರೂ ತನ್ನ ಸ್ವರೂಪದ ಭಿನ್ನತೆಯನ್ನು, ವೈವಿಧ್ಯತೆಯನ್ನು ತಳೆಯುತ್ತಾ ಬೆಳೆದುದನ್ನು ಗುರುತಿಸಬಹುದು.

ನೀಳ್ಗತೆಗಳು, ಕಾದಂಬರಿಗಳು, ಸಣ್ಣಕತೆಗಳು, ಕಿರುಕತೆಗಳು ಮುಂತಾದವುಗಳಲ್ಲಿ ಈಗ ವಿರಳವಾಗಿಯಾದರೂ ಕೃಷಿ ನೋಡಲು ಸಾಧ್ಯವಾಗುತ್ತಿದೆ. ಕಾಮಿಕ್ಸ್‌ನಂತಹ ಪ್ರಕಾರಗಳು ಮಕ್ಕಳ ಲೋಕದಲ್ಲಿಯೇ ಆಪ್ಯಾಯಮಾನವಾಗಿ ಕಂಡುಕೊಂಡಂಥವು. ಕನ್ನಡದಲ್ಲಿ ಇವುಗಳ ಬೆಳವಣಿಗೆ ಅಷ್ಟಾಗಿ ಕಂಡಿಲ್ಲವಾದರೂ ಪ್ರಯತ್ನಗಳು ಕಾಣಿಸುತ್ತಿವೆ.

ಮಕ್ಕಳ ಸಾಹಿತ್ಯವೆಂದರೆ ಹೆಚ್ಚಿನ ಪಾಲು ಪದ್ಯಗಳಿಂದಲೇ ಕೂಡಿದೆ. ಹೆಚ್ಚಿನ ಸಾಹಿತಿಗಳು ಕೂಡ ಮಕ್ಕಳ ಸಾಹಿತ್ಯದಲ್ಲಿ ಕವಿತೆಗಳಿಗೆ ಒಲವು ತೋರಿಸಿ ಬರೆದಂತೆಯೇ ತೋರುತ್ತದೆ. ಇವೆಲ್ಲವುಗಳ ನಡುವೆಯು ಮತ್ತೊಂದು ಸ್ವರೂಪವಾದ ಕಥಾಸಾಹಿತ್ಯವು ಚಿಗುರೊಡೆದು ಹಸನಾಗಿ ಪಸರಿಸಿ, ಹೊಸತನದೊಂದಿಗೆ ತನ್ನದೇ ಆದ ರೀತಿಯಲ್ಲಿ ಮಕ್ಕಳ ಸಾಹಿತ್ಯವನ್ನು ಸಮೃದ್ಧಿಗೊಳಿಸುತ್ತಿರುವುದು ಮಕ್ಕಳ ಸಾಹಿತ್ಯಕ್ಕೆ ಆಶಾದಾಯಕ ಬೆಳವಣಿಗೆಯಾಗಿದೆ.

ನವೋದಯದ ಕಾಲದಲ್ಲಿ ಕನ್ನಡದ ಸಾಮಾನ್ಯ ಸಾಹಿತ್ಯದ ಮೇಲೆ ಬೀಸಿದ ಪಾಶ್ಚಾತ್ಯರ ಸಾಹಿತ್ಯದ ಗಾಳಿಯಲ್ಲಿ ಕನ್ನಡ ಸಾಹಿತ್ಯ ಹೊಸತನವನ್ನು ಅನುಭವಿಸಿದಂತೆಯೇ ಮಕ್ಕಳ ಸಾಹಿತ್ಯವೂ ಅನುಭವಿಸಿತೇನೋ ನಿಜ, ಆದರೆ ಹಿರಿಯರ ಸಾಹಿತ್ಯ ಪಡೆದುಕೊಂಡು ಸಮೃದ್ಧವಾಗಿ ಬೆಳೆದಂತೆ ಮಕ್ಕಳಸಾಹಿತ್ಯ ಪಡೆದುಕೊಳ್ಳಲಿಲ್ಲ, ಯಾವ ಹೊಸ ಪ್ರಭಾವಕ್ಕೂ ಒಳಗಾಗಲಿಲ್ಲ. ಅದು ಶಾಲಾವ್ಯವಸ್ಥೆಯ ಅನಿವಾರ್ಯದ ಅಂಗವಾಗಿ, ಅಗತ್ಯವಾಗಿ ರೂಪಿತಗೊಳ್ಳುತ್ತಲೇ ಬಂದುದು. ಹೀಗಿರುವಾಗಲೇ ಕೆಲವೆಲ್ಲ ಸೃಜನಶೀಲ ಮನಸ್ಸುಗಳು ಒಂದಿಷ್ಟೆಲ್ಲ ಆಸಕ್ತಿಯಿಂದ ತೊಡಗಿಕೊಂಡುದರಿಂದ ಹೊಸ ಚಾಚುಗಳಿಗೆ ಕಾರಣವಾಗತೊಡಗಿತು. ನಿಧಾನವಾಗಿ ತನ್ನ ಪಥವನ್ನು ಕಂಡುಕೊಂಡು ಜನಪದದಿಂದ ಭಿನ್ನತೆಯನ್ನು ಕಾಣುವಂತಾಯಿತು. ಇದರ ಹಿನ್ನೆಯಲ್ಲಿ ಮಕ್ಕಳ ಕತೆಗಳಬಗೆಗೆ ನಾಡಿನಾದ್ಯಾಂತ ಚರ್ಚೆಗಳಾಗಿ ಮಕ್ಕಳು ಎಂದರೆ ಯಾರು? ಅವರ ಕತೆಗಳ ಅಗತ್ಯತೆ ಏನು? ಅದರ ವ್ಯಾಪ್ತಿ, ವಿಸ್ತಾರಗಳ ಬಗ್ಗೆ ಕಿಂಚಿತ್ತು ಯೋಚಿಸುವಂತಾಯಿತು.

ಮಕ್ಕಳ ಸಾಹಿತ್ಯವು ಜಾಗತಿಕವಾಗಿ ಪಾಶ್ಚಾತ್ಯರಲ್ಲಿ ನೆಲೆ ನಿಂತಷ್ಟು ಭಾರತೀಯರಲ್ಲಿ ಆಳವಾಗಿ ಬೇರೂರಲು ಸಾಧ್ಯವಾಗದಿದ್ದರೂ ನಿರಂತರವಾಗಿ ಪ್ರವಹಿಸುತ್ತಾ, ನಿಧಾನವಾಗಿಯಾದರೂ ಪ್ರಗತಿಯನ್ನು ಹೊಂದುತ್ತಿದೆ. ಇದು ಕನ್ನಡದ ಮಟ್ಟಿಗೆ ಆಶಾದಾಯಕವಾದ ಬೆಳವಣಿಗೆ ಎನ್ನಬಹುದಾಗಿದೆ. ಕನ್ನಡದಲ್ಲಂತೂ ಇತ್ತೀಚಿಗೆ ಮಕ್ಕಳ ಸಾಹಿತ್ಯ ತನ್ನ ಬೆಳವಣಿಗೆಯನ್ನು ಕಾಣುತ್ತಿದೆ ಅನ್ನುವಷ್ಟು ಹೊಸ ಬಗೆಯದಾಗಿ ನೆಲೆಸುವ ಪ್ರಯತ್ನಗಳನ್ನು ಮಾಡುವ ಮೂಲಕ ಮಕ್ಕಳ ಕಥಾಸಾಹಿತ್ಯವು ಹಂಬಲಿಸುತ್ತಿರುವುದನ್ನು ಗುರ್ತಿಸಬಹುದಾಗಿದೆ. ಹೀಗೆ ಮಕ್ಕಳಸಾಹಿತ್ಯವು ನಮಗೆ ಅನೇಕ ಸ್ವರೂಪಗಳಲ್ಲಿ ಕಾಣಿಸಿಕೊಂಡು ತನ್ನ ಹರಿವನ್ನು ಹೊರ ಜಗತ್ತಿಗೆ ಪ್ರದರ್ಶಿಸಿಕೊಳ್ಳುತ್ತಿದೆ.

ಮಕ್ಕಳ ಕಲ್ಪನಾ ಜಗತ್ತಿಗೆ ಸೀಮಿತವಾದ ವ್ಯಾಪ್ತಿಯಿಲ್ಲ, ಅದು ಪಸರಿಸಿದಷ್ಟು ವಿಸ್ತಾರವಾಗುತ್ತಾ ಸಾಗುತ್ತದೆ. ಅವರ ಕತೆಗಳೂ ಅಷ್ಟೇ ವಸ್ತುವಿನ ಪರಿಮಿತಿಯನ್ನು ಅನುಭವಿಸುವುದಿಲ್ಲ, ಎಲ್ಲಿಯವರೆಗಾದರೂ

ಕೈಚಾಚಬಲ್ಲವು. ಊಹೆಗಳು, ಕಲ್ಪನೆಗಳು, ಕುತೂಹಲ, ಚತುರತೆ, ವಾಸ್ತವತೆ ಎಲ್ಲವೂ ಇಲ್ಲಿ ಸಾಧ್ಯವಾಗುತ್ತವೆ. ಮಕ್ಕಳಲ್ಲಿ ಸೃಷ್ಟಿಶೀಲತೆಯನ್ನು ಪ್ರೋತ್ಸಾಹಿಸುವ ಸಲುವಾಗಿ ಮಕ್ಕಳ ಕಲ್ಪನೆಗೆ ಮೆರಗು ನೀಡುವ ರಚನೆಗಳು ಮಕ್ಕಳ ಭಾಷೆಯನ್ನು ಮೈಗೂಡಿಸಿಕೊಂಡು ಮಕ್ಕಳ ಮುಗ್ಧತೆಯನ್ನು ಲೇಪಿಸಿಕೊಂಡು ಮಕ್ಕಳ ಆಲೋಚನ ಲಹರಿಗಳು ಗರಿಗೆದರುವಂತೆ ರಚನೆಗೊಳ್ಳುವ ಕತೆಗಳು ಮಕ್ಕಳ ಕತೆಗಳೆನಿಸುತ್ತವೆ. ಮಕ್ಕಳನ್ನೆ ಉದ್ದೇಶಿಸಿ ಅಸ್ತಿತ್ವ ತಳೆಯುವ ಸಾಹಿತ್ಯ ಸ್ವರೂಪ ಇದಾಗಿದ್ದು, ಅನುಭವದ ಆಯ್ಕೆಯೂ ಮಕ್ಕಳದೇ ಆಗಿದ್ದಾಗ ಅನುಭವದ ಭಾಷೆಯೂ ಮಕ್ಕಳ ಭಾವಕ್ಕೆ ಲೇಪನಗೊಂಡು ಕಲೆತಾಗ ಉದ್ಭವಿಸುವ ಕತೆಗಳು ಮಕ್ಕಳ ಕತೆಗಳಾಗಿ ನಿಲ್ಲಬಲ್ಲವು. ಮಕ್ಕಳ ಕತೆಗಳಿಗೆ ಮುಗ್ಧತೆಯೇ ಘನತೆ, ಮಕ್ಕಳ ನಡಿಗೆ ನಡಿಗೆಯಲ್ಲ ಅದು ಕುಣಿತ, ಮಕ್ಕಳಿಗೆ ಪ್ರಿಯವಾಗುವಂತೆ ಮಕ್ಕಳತನವನ್ನು ಬಳಸಿಕೊಂಡು ದೊಡ್ಡವರು ತಮ್ಮ ಪ್ರೌಢಿಮೆಯನ್ನು ಬಿಟ್ಟು, ಮುಗ್ದತೆಯನ್ನು ಅನಾವರಣ ಮಾಡಿಕೊಂಡು ಬರೆಯುವುದು ಮಕ್ಕಳಿಗೆ ಹಿತವೆನಿಸುತ್ತದೆ.

ನಮ್ಮಲ್ಲಿ ಒಟ್ಟಾರೆ ಸಾಮಾನ್ಯ ಸಾಹಿತ್ಯವನ್ನು ಗ್ರಹಿಸುವ ಹಿನ್ನೆಲೆಯಲ್ಲಿಯೇ ಮಕ್ಕಳ ಸಾಹಿತ್ಯವನ್ನೂ ಗ್ರಹಿಸುವ ಪದ್ಧತಿ ಬೆಳೆದು ಬಂದಿದೆ, ಬಹಳಷ್ಟು ಸಲ ಅಭಿವ್ಯಕಿಯ ಬಗೆಗಳು, ಭಾಷೆಯ ಬಳಕೆಯಂತಹವುಗಳನ್ನೇ ಮುಂದಿಟ್ಟುಕೊಂಡು ಮಕ್ಕಳ ಸಾಹಿತ್ಯವನ್ನು ಕಂಡುಕೊಳ್ಳಲು ನೋಡಲಾಗುತ್ತದೆ. ಮಕ್ಕಳು ಎಂದಾಕ್ಷಣ ಎದುರಿಗೆ ಕಾಣುವುದು ಪುಟ್ಟ ಮಕ್ಕಳು ಮಾತ್ರವೆ ಎಂದು ತಿಳಿಯಲಾಗಿದೆ. ಇವರಿಗೆ ಕೇಳಲು ಮೋಜೆನಿಸುವ ಶ್ರವ್ಯ ಸಾಹಿತ್ಯವನ್ನು ಕೊಟ್ಟರೆ ಸಾಕೆಂದು ಪ್ರತಿಪಾದಿಸುವವರು ನಮ್ಮಲ್ಲಿ ಬೆಳೆದ ಮಕ್ಕಳ ಬಗೆಗೆ ತಲೆ ಕೆಡಿಸಿಕೊಂಡಂತೆ ಕಾಣಲೇ ಇಲ್ಲ. ಆದರೆ ಮಕ್ಕಳು ಎಂದಾಗ ತುಸು ಬೆಳೆದ; ಪ್ರಬುದ್ಧತೆಗೆ ತೆರೆದುಕೊಳ್ಳುತ್ತಿರುವ ವಯೋವರ್ಗವೂ ಓದುಗರಾಗಿರಬಲ್ಲರು ಎನ್ನುವುದನ್ನು ಗಮನಿಸುವುದಿಲ್ಲ. ಶಿಶು, ಬಾಲ, ಕಿಶೋರ ಎಂಬ ವಿವಿಧ ವಯೋಮಾನದ ಮಕ್ಕಳಿಗೆ ತಕ್ಕನಾದ ಕತೆಗಳ ಅಗತ್ಯತೆಯಿರುವುದನ್ನು ಮನಗಾಣಬೇಕಿದೆ. ಎಲ್ಲಾ ಮಕ್ಕಳಿಗೂ ಒಂದೇ ತೆರನಾದ ಕತೆಗಳು ಪ್ರಿಯವಾಗುವುದಿಲ್ಲ. ತೀರ ಎಳೆಯರಿಗೆ ಲಾಲಿತ್ಯಮಯವಾದ ಲಯದಿಂದ ಕೂಡಿದ ಹಾಡು, ಕತೆ ರಂಜಿಸಿದರೆ. ಮತ್ತೆ ಕೆಲವರಿಗೆ ರೋಚಕತೆ, ಸಾಹಸ, ಶೋಧ, ಯುದ್ಧ, ಯಾನ, ಹಾಸ್ಯಗಳು ರುಚಿಸುತ್ತವೆ. ಪ್ರೌಢಹಂತಕ್ಕೆ ಕಾಲಿಡುತ್ತಿರುವ ಮಕ್ಕಳಿಗೆ ಸಾಹಸ, ಬದುಕು, ಶಿಕ್ಷಣ ಮುಂದಿನ ಜೀವನಕ್ಕೆ ತಳಹದಿಯಾಗುವ ಭಾವನಾತ್ಮಕ ಸಂಬಂಧಗಳಾದ ಪ್ರೀತಿ, ಮಮಕಾರ ಮಾತೃಪ್ರೇಮ, ಪರೋಪಕಾರ, ಮೌಲ್ಯಗಳು, ರಾಷ್ಟ್ರಪ್ರೇಮ, ಸಾಧನೆ, ಕ್ರೀಡೆಗಳು ತುಂಬಿರುವ ವಾಸ್ತವದ ಕತೆಗಳು ಇಷ್ಟವೆನಿಸುತ್ತವೆಯಾದ್ದರಿಂದ ಮಗುವಿನ ವಯಸ್ಸು ಮತ್ತು ವಯಸ್ಸಿಗೆ ತಕ್ಕ ಮನಸ್ಥಿತಿಯನ್ನು ಆಧರಿಸಿ ಪಾಶ್ಚಾತ್ಯರು ಕತೆಗಳನ್ನು ಕಂಡುಕೊಂಡಂತೆ ಭಾರತೀಯರಲ್ಲಿ ಮುಕ್ತವಾದ ಪರಿಸರ ನಿರ್ಮಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ದಿಕ್ಕಿನಲ್ಲಿ ಪ್ರಯೋಗಗಳು ನಡೆಯುತ್ತಿರುವುದು ಸ್ವಾಗತಾರ್ಹವಾದ ಬೆಳವಣಿಗೆಯಾಗಿದೆ. ಪಾಶ್ಚಾತ್ಯರಂತೆ ತೀರವಲ್ಲದಿದ್ದರೂ ಅಲ್ಲಲ್ಲಿ ವಾಸ್ತವ ಅನುಭವ ಆಧರಿಸಿದ ಕತೆಗಳು ಕನ್ನಡದಲ್ಲೂ ಬರತೊಡಗಿವೆ. ಇಂಗ್ಲಿಷಿನಲ್ಲಿ ಸಮೃದ್ಧವಾಗಿ ಈ ಸಾಹಿತ್ಯ ಬೆಳೆದುದರಿಂದ ಅಲ್ಲಿ ಸಾಕಷ್ಟು ವಿಭಿನ್ನತೆಗಳನ್ನು ವೈವಿಧ್ಯತೆಯನ್ನು ಕಾಣುತ್ತೇವೆ.

ಬಹುಮುಖ್ಯವಾಗಿ ಮಕ್ಕಳಸಾಹಿತ್ಯಕ್ಕೆ ಬರುವ ಅನೇಕ ಲೇಖಕರ ಹಿನ್ನೆಲೆಗಳೇ ಬಗೆಬಗೆಯವಾಗಿವೆ. ಅವರವರ ಮಕ್ಕಳ ಸಾಹಿತ್ಯದ ಗ್ರಹಿಕೆಗಳನ್ನು ಅವಲಂಬಿಸಿವೆ. ಅವರೊಳಗಿನ ಮನೋಲೋಕವನ್ನು ಆಧರಿಸಿವೆ. ಫ್ಯಾಂಟಸಿಯನ್ನು ಹೊಸ ಯುಗಕ್ಕಾಗಿ ಮತ್ತೆ ಮತ್ತೆ ಹೊಸದಾಗಿ ಕಂಡುಕೊಂಡ ಹಲವಾರು ಲೇಖಕರ ತುರ್ತು ಈ ಬಗೆಗಿನ ಮಕ್ಕಳಗಾಗುವ ಬರಹದ ಹಿಂದಿದೆ. ಹಾಗಾಗಿ ಮಕ್ಕಳ ಸಾಹಿತ್ಯವನ್ನು, ಅವರ ಕಥಾ ಜಗತ್ತನ್ನು ಅನೇಕ ವಿಭಿನ್ನ ಗ್ರಹಿಕೆಯ ಹಿನ್ನೆಲೆಯಲ್ಲಿ ಗ್ರಹಿಸವುದೂ ಅಗತ್ಯ ಎನಿಸುತ್ತದೆ. ಕನ್ನಡದಂಥ ಪರಿಸರದಲ್ಲಿ ಈ ವೈವಿಧ್ಯಗಳಿಲ್ಲದ ಕಾರಣ ನಾವು ಒಂದು ಸಾಮಾನ್ಯರೇಖೆ ಹಾಕಿ ನೋಡುವುದೇ ಆಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಒಂದಿಷ್ಟು ಬದಲಾವಣೆ ಕಾಣತೊಡಗಿದೆ. ಲೇಖಕರು ಸಹ ವಿವಿಧ ಪ್ರಯೋಗಗಳಿಗೆ ತಮ್ಮನ್ನು ಒಳಗೊಳಸುತ್ತಿದ್ದಾರೆ.

ಮಕ್ಕಳ ಕಥಾ ಸಾಹಿತ್ಯವೂ ಪ್ರಬುದ್ಧರ ಕಥಾ ಸಾಹಿತ್ಯದಂತೆಯೇ ಕಾಲಕಾಲಕ್ಕೆ ಅಗತ್ಯತೆಯ ಅನುಸಾರವಾಗಿ ತನ್ನ ಸ್ವರೂಪದ ಭಿನ್ನತೆಯನ್ನು, ವೈವಿಧ್ಯವನ್ನು ತಳೆಯುತ್ತಾ ಬೆಳೆದು ಬಂದಿದೆ. ಕತೆಗಳು, ದೀರ್ಘಕತೆಗಳು, ನೀಳ್ಗತೆಗಳು, ಕಾದಂಬರಿಗಳು ಸಣ್ಣಕತೆಗಳು, ಕಿರುಕತೆಗಳಾಗಿ ಬದಲಾದಂತೆ ಮಕ್ಕಳ ಕತೆಗಳಲ್ಲಿಯೂ ಇಂತಹುದೇ ಭಿನ್ನತೆಯ ಸ್ವರೂಪಗಳು ಮೈದಳೆದುದನ್ನು ಗಮನಿಸಬಹುದಾಗಿದೆ. ಮಕ್ಕಳ ಕತೆಗಳು ವೈವಿಧ್ಯತೆಯ ಸಲುವಾಗಿ ಮಕ್ಕಳ ನೀಳ್ಗತೆಗಳು, ಕಥನ ಕವನಗಳೂ, ಕಾಮಿಕ್ಸ್, ಫ್ಯಾಂಟಸಿ, ವಾಸ್ತವ, ಕಾದಂಬರಿಗಳಾಗಿ ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡು ಬೆಳೆದು ಬಂದುದನ್ನು ಕಾಣಬಹುದಾಗಿದೆ. ನಮ್ಮ ಜನತೆಯಲ್ಲಿ ಶಿಕ್ಷಣ ವ್ಯವಸ್ಥೆ ಬರುವ ಮುನ್ನ ಜನಪದದ ಸ್ವರೂಪದಲ್ಲಿದ್ದ ಮಕ್ಕಳ ಕತೆಗಳು ಶಿಕ್ಷಣ ವ್ಯವಸ್ಥೆಯು ಹುಟ್ಟಿಕೊಂಡ ಮೇಲೆ ಲಿಖಿತ ರೂಪದ ಕತೆಗಳಾಗಿ ಮಾರ್ಪಟ್ಟು ಶೈಕ್ಷಣಿಕ ವ್ಯವಸ್ಥೆಯ ಭಾಗವಾಗಿ ಕಾಣಿಸಿಕೊಂಡವು. ದ್ರಾವಿಡ ಭಾಷಾವರ್ಗದ ಕನ್ನಡ ಭಾಷೆಯು ಹೇರಳವಾದ ಜನಪದದ ಸಂಪತ್ತನ್ನು ಹೊಂದಿರುವುದರಿಂದ ಮಕ್ಕಳ ಸಾಹಿತ್ಯಕ್ಕೂ ಇದನ್ನೇ ಬಳಸಲಾಯಿತು. ನಂತರ ಭಾರತ ದೇಶವು ಸಾಂಪ್ರದಾಯಬದ್ಧ ದೇಶವಾದುದರಿಂದ ಶೈಕ್ಷಣಿಕ ವ್ಯವಸ್ಥೆಯೊಳಗೂ ಧಾರ್ಮಿಕ ಸ್ವರೂಪದಲ್ಲಿ ರಾಮಾಯಣ ಮಹಾಭಾರತ ಪಾತ್ರಾಧಾರಿತ ಕತೆಗಳು ಪ್ರವೇಶ ಪಡೆದು ನೀತಿ ಸ್ವರೂಪದ ಕತೆಗಳಾಗಿ ಮಾರ್ಪಾಡಾದವು. ನವೋದಯದ ಕಾಲದವರೆಗೂ ಇದೇ ಸ್ವರೂಪದಲ್ಲಿ ಬೆಳೆದು ಬಂದ ಮಕ್ಕಳ ಕಥಾ ಸಾಹಿತ್ಯವೂ ಪಂಜೆ ಮಂಗೇಶರಾಯರಂಥ ಸೃಜನಶೀಲ ಸಾಹಿತ್ಯದಿಂದ ಹೊಸ ತಲೆಮಾರಿನ ಮಕ್ಕಳ ಕಥಾಸಾಹಿತ್ಯಕ್ಕೆ ಹೊಸ ಹೊರಳಿನ ಆಯಾಮ ದೊರೆಯಿತು. ಅದಾದ ನಂತರ ಪಾಶ್ಚಾತ್ಯ ಶಿಕ್ಷಣವೂ ನಮ್ಮ ಶಿಕ್ಷಣದ ಒಂದು ಭಾಗವಾದ ಮೇಲೆ ಪಾಶ್ಚಾತ್ಯರ ಮಕ್ಕಳ ಸಾಹಿತ್ಯದ ಭಾಗವಾಗಿ ಕಾಮಿಕ್ಸ್‌ಗಳು ಭಾರತವನ್ನು ಪ್ರವೇಶಿಸಿದವು. ಈ ಕಾಮಿಕ್ಸ್‌ಗಳು ಭಾರತಕ್ಕೆ ಬಂದ ಮೇಲೂ ಪುರಾಣ ಪುಣ್ಯಕತೆಗಳ ಪ್ರಭಾವಳಿಗಳು ಉಂಟಾಗಿ ಸಂಪ್ರದಾಯ ಮನಸ್ಥಿತಿಯ ಭಾರತೀಯರಲ್ಲಿ ದೈವ ಸ್ವರೂಪಿಗಳಾದ ಕೃಷ್ಣ, ಶಿವ ಮುಂತಾದ ದೇವತೆಗಳ ಚಿತ್ರಸರಣಿಯು ಆರಂಭವಾಯಿತು. ಇದರಿಂದ ಭಾರತದಲ್ಲಿ ವೈಷ್ಣವ ಮತ್ತು ಶೈವ ಪರಂಪರೆ ಎಂಬ ವಿಚಾರಗಳು ತಲೆದೋರಿದ ಮೇಲೆ ಅಸುರ ಮತ್ತು ಸುರ ಎಂಬ ದ್ರಾವಿಡರ ಕಲ್ಪನೆಯ ಕಾಮಿಕ್ಸ್‌ಗಳು ಬರಲು ಆರಂಭವಾದುವು. ಮಕ್ಕಳ ಅಭಿರುಚಿಗಿಂತ ಭಾರತೀಯ ಮನಸ್ಸುಗಳು ಧರ್ಮ, ದೈವಿಕತೆ, ನೀತಿ, ಮುಂತಾದ ವಿಚಾರಗಳನ್ನು ಮಕ್ಕಳ ಸಾಹಿತ್ಯದಲ್ಲಿ ತುರುಕಲು ಪ್ರಯತ್ನಿಸಿದವೆ ವಿನಃ

ನಿಜವಾಗಿ ಪಾಶ್ಚಾತ್ಯರಂತೆ ಮಕ್ಕಳಿಗೆ ಬೇಕಾದ ವಾಸ್ತವ, ಅವಾಸ್ತವ ಕಲ್ಪನೆಗಳ ಕತೆಗಳು ಮುಕ್ತವಾಗಿ ರಚನೆಯಾಗಲಿಲ್ಲ ಎನ್ನಬಹುದು. ಫ್ಯಾಂಟಸಿ ಪ್ರಭು ರವರು ಭಾರತಕ್ಕೆ ಫ್ಯಾಂಟಸಿಯನ್ನು ಪರಿಚಯಿಸಿದ ಮೇಲೆ ಮಕ್ಕಳ ಕಥಾಸಾಹಿತ್ಯದ ಸ್ವರೂಪವು ಹೊಸದಾದ ಹೊಳವಿನೊಂದಿಗೆ ತನ್ನ ಅಸ್ತಿತ್ವವನ್ನು ಆರಂಭಿಸಿತು. ಪಾಶ್ಚಾತ್ಯರಷ್ಟು ಪ್ರಭಾವಶಾಲಿಯಾಗಿ ಇವು ಮೂಡಿ ಬರದಿದ್ದರೂ, ಭಾರತದ ಮಾರುಕಟ್ಟೆಯಲ್ಲಿ ಒಂದಷ್ಟು ಸಂಚಲನವನ್ನುಂಟು ಮಾಡಿ, ಮಕ್ಕಳಿಗೆ ಏನು ಬೇಕು ಎಂಬುದನ್ನು ಕಂಡು ಕೊಳ್ಳಲು ಭೂಮಿಕೆಯಾದವು. ಇತ್ತೀಚಿನ ದಿನಗಳಲ್ಲಿ ಸಾಮಾನ್ಯರ ಸಾಹಿತ್ಯವು ಬದಲಾದ ಸ್ವರೂಪವನ್ನು ಪಡೆದಂತೆ ಮಕ್ಕಳಸಾಹಿತ್ಯವೂ ತನ್ನ ಅಗತ್ಯತೆಯನ್ನು ವಿವಿಧ ಸ್ವರೂಪಗಳಲ್ಲಿ ಬದಲಿಸಿಕೊಂಡು ತನ್ನ ಅಸ್ಮಿತೆಯನ್ನು ಕಂಡುಕೊಂಡಿತು.

## ೨.೪ ಮಕ್ಕಳ ಕಥಾ ಸಾಹಿತ್ಯದ ಅಗತ್ಯ

ಬಾಲ ಭಾಷೆಯ ಸ್ತರವಿಲ್ಲದೆ ಭಾಷೆಗೆ ಭವಿಷ್ಯವಿರುವುದಿಲ್ಲ ಎನ್ನುವುದು ಎಷ್ಟು ನಿಜಸಂಗತಿಯೋ, ಅಷ್ಟೆ ಸತ್ಯವಾದುದು ಬಾಲಕತೆ ಗಳನ್ನು ಒಳಗೊಳ್ಳದ ಪ್ರಬುದ್ಧರ ಕಥಾಲೋಕವೂ ಭವಿಷ್ಯವನ್ನು ಹೊಂದಲಾರದು. ಮಕ್ಕಳ ಕತೆಗಳು ಪ್ರಬುದ್ಧರ ಸಾಹಿತ್ಯವನ್ನು ಓದುವ ಸಹೃದಯಿಗಳಿಗೆ ಅಡಿಪಾಯಗಳಾಗುತ್ತವೆ. ಎಲ್ಲರೂ ಚಿಕ್ಕವರಿದ್ದಾಗ ಮಕ್ಕಳ ಕತೆಗಳನ್ನು ಕೇಳಿ, ಓದಿದ ನಂತರವೇ ದೊಡ್ಡ ದೊಡ್ಡ ಕತೆಗಳು, ಕಾದಂಬರಿಗಳನ್ನು ಓದಲು ಆರಂಭಿಸಿದುದು ಎನ್ನುವುದನ್ನು ಮರೆಯುವಂತಿಲ್ಲ. ನೀತಿಯ ವಿಷಯದಲ್ಲಂತು ಮಕ್ಕಳ ಕತೆಗಳು ಮಕ್ಕಳಿಗೆ ಒಳಿತು, ಕೆಡಕು, ಸತ್ಯ ಅಸತ್ಯ, ನ್ಯಾಯ, ಅನ್ಯಾಯ, ಗುರುಭಕ್ತಿ, ಮಾತೃಪ್ರೇಮ, ಪ್ರೀತಿ, ಸ್ನೇಹ, ಜೀವದಯೆ ಪರಿಸರ ಪ್ರೇಮ ಮುಂತಾದ ಮೌಲ್ಯಗಳನ್ನು ಬಿತ್ತುವ ಸರಕುಗಳಂತೆ ಬಳಸಿಕೊಂಡಿರುವುದನ್ನು ಮಕ್ಕಳ ಕಥಾಜಗತ್ತಿನ ಅಗತ್ಯತೆಯನ್ನು ಸಾರಿ ಹೇಳುತ್ತದೆ. ಶಿಕ್ಷಣದ ಭಾಗವಾಗಿಯೂ ಮಕ್ಕಳಿಗೆ ಕತೆಗಳು ಕಾಣಿಸುವುದರಿಂದ ಪಂಚತಂತ್ರವು ಈ ಕಾರ್ಯವನ್ನು ಹಿಂದಿನಿಂದ ಇಂದಿನವರೆಗೂ ಮಾಡುತ್ತಲೇ ಬಂದಿದೆ. ಮೌಲ್ಯಗಳಿಗಷ್ಟೆ ಸೀಮಿತವಾಗದೆ ಮಕ್ಕಳಿಗೆ ರಂಜನೆಯ ಭಾಗವಾಗಿಯೂ ಕತೆಗಳು ಮಕ್ಕಳಿಗೆ ಇಂದು ಕಾಣಸಿಗುತ್ತಿರುವುದು ಅಗತ್ಯತೆಯನ್ನು ತಿಳಿಯಲು ಸಹಕಾರಿಯಾಗಿದೆ. ಲೋಕದ ಜನರ ಭಾವವನ್ನು ಮಾನವನ ವ್ಯವಹಾರಿಕ, ಭಾವನಾತ್ಮಕ, ಸಂಬಂಧಗಳನ್ನು ಆರಂಭದಲ್ಲಿಯೇ ಮಕ್ಕಳಿಗೆ ವಿವರವಾಗಿ ತಿಳಿಯಲು ಮಕ್ಕಳ ಕತೆಗಳಷ್ಟು ಸುಲಭವಾದ ಮಾರ್ಗ ಇನ್ನೊಂದಿಲ್ಲವೆನ್ನುವಷ್ಟು ಮಕ್ಕಳ ಕತೆಗಳನ್ನು ಬಳಸಿಕೊಳ್ಳಲಾಗಿದೆ.

ಹಿಂದೆ ಪಾಶ್ಚಾತ್ಯರು ಮತ ಪ್ರಸಾರದ ಮೂಲ ಉದ್ದೇಶದಿಂದ ಶಿಕ್ಷಣದ ಭಾಗವಾಗಿ ಕರ್ತವ್ಯಾಸಕ್ತಿಯಿಂದ ಕತೆಗಳನ್ನು ಅಗತ್ಯಗಳಾಗಿ ಕಂಡುಕೊಂಡಿದ್ದರು. ಇದೇ ಶಿಕ್ಷಣ ಹಾಗೂ ಸಾಹಿತ್ಯಕ್ಕೆ ಬುಡಪಾಯವಾಯಿತು. ಇದರ ಹಿನ್ನಲೆಯಲ್ಲಿಯೇ ಮಕ್ಕಳ ಸಾಹಿತ್ಯ ರಚನೆ, ಅನುವಾದ, ಸಂಕಲನ, ಕೆಲಸಗಳೂ ನಡೆದವು. ಇದರ ಫಲಶ್ರುತಿಯಿಂದ ಮಹತ್ತ್ವದ ಕೃತಿಗಳು ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೊಸದಾರಿಯನ್ನು ಕಂಡು ಕೊಳ್ಳಲು ಸಹಾಯಕವಾದುವು. ಮಕ್ಕಳ ಕಥಾ ಸಾಹಿತ್ಯದ ಅಗತ್ಯ ಮೊದಲು ಕಂಡು ಬಂದುದು ಶಾಲೆಗಳಲ್ಲಿ ಶೈಕ್ಷಣಿಕ ಭಾಗವಾಗಿ ರಚನಾ ಕಾರ್ಯ ಆರಂಭಗೊಂಡಿತು.

೧೮೬೩ರಲ್ಲಿ 'ಕನ್ನಡ ಪಾಠಗಳ ಮೊದಲನೆ ಪುಸ್ತಕ' ಎಂಬ ಪುಸ್ತಿಕೆಯೊಂದು ಪ್ರಕಟವಾಗಿತ್ತು. ಶಿಕ್ಷಣದ ಅಗತ್ಯದ ಭಾಗವಾಗಿ ಮೈಸೂರಿನ ಸರ್ಕಾರಿ ಮುದ್ರಣಾಲಯವು ೧೮೯೦ರಲ್ಲಿ 'ಕನ್ನಡ ಬಾಲಬೋಧೆ' ಎಂಬ ಪುಸ್ತಕವನ್ನು ಹೊರ ತಂದಿತ್ತು.[೧೧] ಇದರಲ್ಲಿ ೬೩ ಪಾಠ ಗಳಿದ್ದು, ಗದ್ಯರೂಪದ ಸರಳ ಜನಪ್ರಿಯವಾದ ಕತೆ ಗಳು ಕಂಡು ಬಂದುವು. ಇದರಿಂದ ಕಲಿಯಲು ಶಾಲೆಗೆ ಹೋದ ಮಕ್ಕಳಿಗೆ ವಿಜ್ಞಾನ ವಿಷಯಗಳ ಅಪರಚಿತ ಶಬ್ದಗಳ ಹೊರೆಯನ್ನು ತುರುಕಿ, ನೀತಿ ಬೋಧೆಯಲ್ಲಿ ಆಧ್ಯಾತ್ಮವನ್ನು ಕಂಠಪಾಠದ ಯಾಂತ್ರಿಕ ಸಾಧನವಾಗಿ ಬಳಸಲಾಯಿತು[೧೨]. ಚ. ವಾಸುದೇವಯ್ಯನವರು 'ಬಾಲ ಬೋಧೆ' ಪ್ರಕಟಿಸಿದ ನಂತರ ಮಕ್ಕಳಿಗೆ ಆಕರ್ಷಕ ಭಾಷೆ, ವಸ್ತು, ಶೈಲಿ ಮುಂತಾದುವುಗಳನ್ನೊಳಗೊಂಡ ಅಭಿರುಚಿಯುಳ್ಳ ಕಥಾಸಾಹಿತ್ಯದ ತಿರುಳು ಅಗತ್ಯವಾಗಿ ಸಿಕ್ಕಿತು. ಆದರೆ ಇಲ್ಲಿ ಸ್ವಲ್ಪ ಮಟ್ಟಿಗೆ ಮಕ್ಕಳ ಸಾಹಿತ್ಯದ ಪರಿಕಲ್ಪನೆಯ ಬಗೆಗೆ ಗೊಂದಲವಿದ್ದುದರಿಂದ ನೀತಿಯುಕ್ತವಾದ ಕಾವ್ಯಭಾಗವನ್ನೇ ಮಕ್ಕಳಿಗೆ ಸಾಹಿತ್ಯವೆಂದು ನೀಡಲಾಗುತ್ತಿತ್ತು. ಬಾಲಬೋಧೆಯು ಸರಳವಾದ ಗದ್ಯ ನಿರೂಪಣೆ ಮತ್ತು ಭಾಷಾ ಶೈಲಿಯಿಂದ ಅನೇಕ ವರ್ಷಗಳ ಕಾಲ ಕಥಾಸಾಹಿತ್ಯವೆಂದು ಪರಿಗಣಿತವಾಯಿತು. ನಂತರದ ದಿನಗಳಲ್ಲಿ ಮಕ್ಕಳಿಗೆ ತಿಳುವಳಿಕೆ ನೀಡುವ, ಸುಲಭವಾಗಿ ಅರ್ಥೈಸಲಾಗುವ ಶ್ರವ್ಯ ಪ್ರಧಾನವಾದ ಕವಿತೆಗಳನ್ನು ನೀಡಲಾಗುತ್ತಿತ್ತು. ಮಕ್ಕಳಿಗೆ ಕತೆ ಹೇಳಲೆಂದೇ ನೀತಿ ಚಿಂತಾಮಣಿಯಂತಹದ ಪುಸ್ತಕದ ಅಗತ್ಯತೆಯನ್ನು ಎಂ.ಎಸ್. ಪುಟ್ಟಣ್ಣನವರು ಕಂಡುಕೊಂಡರು. ಇದರಲ್ಲಿಯೂ ಹಿಂದಿನಂತೆಯೇ ಪುರಾಣದ, ಇತಿಹಾಸದ ಆದರ್ಶ ಬದುಕಿನ ಪರಿಚಯ ಮುಂತಾದುವುಗಳು ವಸ್ತುವಾಗಿ ಬಂದು ಜೊತೆಗೆ ಒಂದಷ್ಟು ರಂಜನೆಯನ್ನು ಸೇರಿಸಿಕೊಂಡು ಮಕ್ಕಳ ಸಾಹಿತ್ಯದ ಅಗತ್ಯತೆಗಳಲ್ಲಿ ರಂಜನೆಯ ಪ್ರಧಾನತೆಯನ್ನು ಕಂಡುಕೊಂಡರು. ಮುಂದುವರಿದು ಮಕ್ಕಳಿಗೆ ಪುಣ್ಯ ಪುರಾಣದ ಕತೆಗಳು ಭೂಲೋಕ, ಯಮಲೋಕ ಮುಂತಾದ ಕಾಲ್ಪನಿಕ ಕತೆಗಳು, ಭಕ್ತಿ ಪಾಠ ಬುದ್ಧಿವಂತರ ಕತೆಗಳನ್ನು ನೀಡುತ್ತಿದ್ದ ಕನ್ನಡ ಮಕ್ಕಳ ಕಥಾ ಸಾಹಿತ್ಯವೂ ಕಿತ್ತೂರು ರಾಣಿ, ಸಂಗೊಳ್ಳಿ ರಾಯಣ್ಣ, ಕೃಷ್ಣದೇವರಾಯ ಮುಂತಾದ ಐತಿಹಾಸಿಕ ವ್ಯಕ್ತಿಗಳನ್ನು ಪರಿಚಯಿಸಲು ಅಗತ್ಯವಾಗಿ ಕಂಡುಕೊಳ್ಳಲಾಯಿತು. ಶಿಕ್ಷೆ, ಪುರಸ್ಕಾರ, ಪಾಪ-ಪಶ್ಚಾತ್ತಾಪ, ಸಂಕೀರ್ಣ ವ್ಯಕ್ತಿತ್ವ ಮುಂತಾದುವುಗಳ ಗ್ರಹಿಕೆಗಳನ್ನು ಸಹ ಮಕ್ಕಳಿಗೆ ಕತೆಗಳೇ ಹೇಳಿ ಉತ್ತಮ ಪ್ರಜೆಯನ್ನಾಗಿ ರೂಪಿಸುವ ಕಾರ್ಯವನ್ನು ಮಾಡಿವೆ.

ಅದ್ಭುತ ರಮ್ಯ ಸಂಗತಿಗಳು, ಮಾಯಾವಿಗಳು, ಮಾಂತ್ರಿಕರು, ವೈದ್ಯರು, ವ್ಯಾಪಾರಿಗಳು, ಎಲ್ಲವೂ ಛದ್ಮವೇಷದ ರೂಪದಲ್ಲಿ ಕತೆಗಳಲ್ಲಿ ವಿಹರಿಸಿ ಮಕ್ಕಳಿಗೆ ವೃತ್ತಿಪರತೆಯನ್ನು ವ್ಯಂಗ್ಯತೆಯನ್ನು ನಿಷ್ಠೂರವಾಗಿ ಹೇಳುವ ಕಾರ್ಯವನ್ನು ಅಗತ್ಯವಾಗಿ ನಿರ್ವಹಿಸುತ್ತಾ ಬಂದಿರುವುದಿದೆ. ಮಕ್ಕಳ ಮನೋಭೂಮಿಕೆಯನ್ನು ಇತಿಹಾಸ, ವಿಜ್ಞಾನ, ಮುಂತಾದ ವಿಚಾರಗಳಿಗೆ ಸೀಮಿತಗೊಳಿಸಿದ್ದ ಕಥಾಸಾಹಿತ್ಯವೂ ಹೊಸತನಕ್ಕಾಗಿ ಹಂಬಲಿಸಿ, ಮಕ್ಕಳ ಮನಸ್ಥಿತಿಯನ್ನು ಅರ್ಥಮಾಡಿಕೊಂಡು ಭಾವಪ್ರಫುಲ್ಲಗೊಳಿಸುವ ಸಲುವಾಗಿ ರಸವತ್ತಾದ ಹಾಸ್ಯ, ವಿಡಂಬನೆ, ರಂಜನೆ ಮುಂತಾದ ಪುಟ್ಟಪುಟ್ಟ ಕತೆಗಳ ಅಗತ್ಯತೆಯನ್ನು ಮಕ್ಕಳ ಸಾಹಿತ್ಯವು ಅನುಭವಿಸಿತು.



---

[೧೧] ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಸಂ: ಬೆಳವಾಡಿ ಮಂಜುನಾಥ, ಪುಟ ೯. ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮಂಟಪ ಮಾಲೆ.
[೧೨] ಅದೇ ಪುಟ.

ಪಂಜೆ ಮಂಗೇಶರಾಯರಂಥ ಸೃಜನಶೀಲ ಸಾಹಿತಿಗಳು ಹೊಸ ದೃಷ್ಟಿ ಕೋನಗಳಿಂದ ಕನ್ನಡದ ಮಕ್ಕಳ ಸಾಹಿತ್ಯವನ್ನು ಕಂಡುಕೊಂಡುದುದರ ಜೊತೆಗೆ ಮಕ್ಕಳ ಕತೆಗಳಿಗೆ ಬೇಕಾಗುವ ವಸ್ತುಗಳಲ್ಲಿನ ಹೊಸಹೊಳಹನ್ನು ಹುಟ್ಟು ಹಾಕಿದರು. ಸಣ್ಣಕತೆ , ಮಕ್ಕಳ ಕತೆ , ಪ್ರಬಂಧ ಮುಂತಾದ ಪ್ರಕಾರಗಳಲ್ಲಿ ಮಕ್ಕಳ ಕಥಾ ಸಾಹಿತ್ಯವನ್ನು ವಿಸ್ತರಿಸಿ ನೋಡಿ, ಅದುವರೆಗೂ ಇದ್ದ ಹಿಂದಿನ ತಲೆಮಾರಿನ ಸಂಪ್ರದಾಯವನ್ನು ಮುರಿದು ಹೊಸಹಾದಿಯೊಂದನ್ನು ಕಂಡುಕೊಂಡರು. ಪುರಾಣ, ನೀತಿಕತೆಗಳಿಗೆ ಸೀಮಿತವಾಗಿದ್ದ ಮಕ್ಕಳ ಕಥಾ ಸಾಹಿತ್ಯವೂ ಸಸ್ಯ ಜಗತ್ತು , ಪ್ರಾಣಿ ಜಗತ್ತು , ಪ್ರಕೃತಿ ಶಾಸ್ತ್ರ , ಕುಟುಂಬ, ವಾಸ್ತವ ಬದುಕು ಮಾನವೀಯ ಸಂಬಂಧಗಳು ಮುಂತಾದ ವಸ್ತುಗಳೊಂದಿಗೆ ಬೆಳೆಯುತ್ತಾ ಬಂದಿತು. ಮುಂದುವರೆದು ಸ್ವತಂತ್ರ ಹೋರಾಟದ ಸಂದರ್ಭದಲ್ಲಿನ ಹೋರಾಟಗಳು, ರಾಷ್ಟ್ರ ಪ್ರೇಮ, ಮುಂತಾದ ವಿಚಾರಗಳಿಗಾಗಿ ಮಕ್ಕಳ ಸಾಹಿತ್ಯವನ್ನು ಅಗತ್ಯ ವಸ್ತುವಾಗಿ ಬಳಸಿಕೊಳ್ಳಲಾಯಿತು. ಏಕಲವ್ಯನ ಕತೆ , ಬಸವಣ್ಣನ ಕತೆ ಮುಂತಾದ ವಿಚಾರಗಳು ಕಥಾ ಸಾಹಿತ್ಯದ ಅಗತ್ಯ ಭಾಗಗಳ ಒಳಗೆ ಸೇರಿ ಹೋದವು. ನಡುವೆಯೇ ರಾಷ್ಟ್ರ ಪ್ರೇಮ, ಭಾಷಾ ಪ್ರೇಮ, ನಾಡಿನ ಏಕೀಕರಣ ಮುಂತಾದ ಭೌಗೋಳಿಕ ಸಮಸ್ಯೆಗಳು, ನದಿ, ಜಲ, ಗಡಿ ಮುಂತಾದ ವಿಚಾರಗಳಲ್ಲಿ ವಸ್ತು ವಿಸ್ತಾರಗೊಂಡು ಇವೆಲ್ಲವುಗಳ ಅಪೇಕ್ಷಿತ ಬದಲಾವಣೆಗಳಿಗಾಗಿ, ಐಚ್ಚಿಕ ವಸ್ತುವಾಗಿ ಸಾಮಾಜಿಕ ಸ್ಪಂದನೆಯತ್ತ ಮಕ್ಕಳನ್ನು ಸೆಳೆಯಲು ಸಾಧನವಾಗಿ ಮಕ್ಕಳ ಸಾಹಿತ್ಯವು ಅಗತ್ಯವಾಗಿ ಕಂಡುಬಂದಿತು. ಅತಾರ್ಕಿಕ ಕಲ್ಪನೆ, ತಾರ್ಕಿಕ ಚಿಂತನೆ, ಊಹೆ, ಮಾಟಮಂತ್ರ, ಭೂತ ಚೇಷ್ಟೆ, ಹಾಸ್ಯ, ವಿಡಂಬನೆಯಂತಹ ಭಾವನಾತ್ಮಕತೆಯನ್ನು ಹೇಳುವುದರ ಜೊತೆಗೆ ಲಿಂಗ ತಾರತಮ್ಯ ವರ್ಣದ್ವೇಷ, ಮಂಕು ಮರುಳು, ಮಾಡುವ ಮೂಢನಂಬಿಕೆಗಳಂತಹ ಸಾಮಾಜಿಕ ಅನಿಷ್ಟಗಳನ್ನು ತಿದ್ದಿ ಹೇಳುವ ಕಾರ್ಯವನ್ನು ಕತೆಗಳೇ ನಿರ್ವಹಿಸಿರುವುದನ್ನು ಕಾಣಬಹುದಾಗಿದೆ. ಈ ಅಂಶಗಳು ಭಾರತದ ಮಕ್ಕಳ ಕಥಾಸಾಹಿತ್ಯದ ಅಗತ್ಯತೆಯನ್ನು ಹೇಳಿದರೆ ಪಾಶ್ಚಾತ್ಯರ ಮಕ್ಕಳ ಸಾಹಿತ್ಯದ ಅಗತ್ಯತೆಯು ಯಾವುದೇ ಚೌಕಟ್ಟಿನ ಒಳಗೆ ಬಂಧಿಯಾಗದೆ ಮಗುವಿನ ಬಾಲ್ಯತನದ ಅನಾವರಣಕ್ಕೆ ನಿಷ್ಠೂರವಾದ ಮುಕ್ತ ವೇದಿಕೆಯನ್ನು ಕಲ್ಪಿಸಿಕೊಡುವ ಕಾರ್ಯವನ್ನು ಮಾಡುತ್ತಾ, ಮಕ್ಕಳ ಕಥಾ ಸಾಹಿತ್ಯದ ಅಗತ್ಯತೆಯನ್ನು ಸಾರಿ ಹೇಳುತ್ತದೆ.

## ೨.೫ ಮಕ್ಕಳ ಕಥಾ ಸಾಹಿತ್ಯದ ವ್ಯಾಪ್ತಿ

ಮಕ್ಕಳ ಕಥಾ ಸಾಹಿತ್ಯವನ್ನು ವಿಂಗಡಿಸಿ ನೋಡುವ ಕಲ್ಪನೆಯು ಇತ್ತೀಚಿನದಾಗಿ ಕಾಣಸಿಗುತ್ತದೆ. ಭಾರತದ ಪರಿಸರಕ್ಕೆ ಇದು ಅತ್ಯಂತ ನೂತನವೆನಿಸಿದರೂ ಸರಿಯೆ. ಇಂತಹ ಪ್ರಯೋಗಗಳು ನಡೆಯುತ್ತಿರುವುದು ಮಕ್ಕಳ ಕಥಾಸಾಹಿತ್ಯದ ಪರಿವರ್ತನೆಗೆ ಆಶಾದಾಯಕವೆನಿಸುತ್ತದೆ. ಮಕ್ಕಳ ಕಥಾಸಾಹಿತ್ಯವನ್ನು ಪ್ರಮುಖವಾಗಿ ಈ ರೀತಿಯ ತಾತ್ವಿಕಾಂಶಗಳಿಂದ ಗಮನಿಸಬಹುದಾಗಿದೆ. ಮಕ್ಕಳ ಕಥಾಸಾಹಿತ್ಯದ ಆಯ್ಕೆಯಾನುಸಾರ ಕೆಳಗಿನಂತೆ ವ್ಯಾಪ್ತಿಯನ್ನು ವಿಸ್ತರಿಸಿ ನೋಡಬಹುದಾಗಿದೆ.

## ೧ ಮಕ್ಕಳೇ ಬರೆದ ಕತೆಗಳು

ಮಕ್ಕಳ ಕತೆಗಳು ಎನ್ನುವ ಪದದಲ್ಲಿನ ಷಷ್ಠಿ ವಿಭಕ್ತಿಯ ಪ್ರತ್ಯಯವು ಹಿರಿಯರು ಮಕ್ಕಳಗಾಗಿ ಬರೆದುದು ಹಾಗೂ ಮಕ್ಕಳು ತಾವೇ ಬರೆದುದು ಎರಡನ್ನೂ ಒಳಗೊಳ್ಳುವಂತೆ ಇರುವುದರಿಂದ ಇದನ್ನೇ ಬಳಸಿಕೊಂಡು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಮುಂದಾಗಿಬಿಡುತ್ತಾರೆ. ಉಳಿದ ಭಾರತೀಯ ಭಾಷಾ ಪರಿಸರದಲ್ಲೂ ನಡೆದಿರುವಂತೆ ಕನ್ನಡದಲ್ಲಿಯೂ ಈ ಬಗೆಯ ದ್ವಂದ್ವಗಳು ಕಾಣಿಸಿಕೊಂಡಿವೆ. ನಮ್ಮ ನಡುವೆ ಮಕ್ಕಳ ಸಾಹಿತ್ಯದ ಕುರಿತು ಗಂಭೀರ ಅಧ್ಯಯನಗಳು, ವಿಸ್ತಾರವಾದ ಅಧ್ಯಯನಗಳು ನಡೆಯದುದರಿಂದ, ಅಲ್ಲಲ್ಲಿ ಆಸಕ್ತಿಯಿಂದ ನಡೆಯುತ್ತಿರುವ ಪ್ರಯತ್ನಗಳನ್ನೂ ಯಾರೂ ಗಮನಿಸುವ ವಾತಾವರಣವಿಲ್ಲದಿರುವುದರಿಂದ ಕೇವಲ ಅಲ್ಲಲ್ಲಿ ವ್ಯಕ್ತ ಪಡಿಸುವ ಅಭಿಪ್ರಾಯಗಳೇ ಮುಂದಾಗಿ ಬಂದು ನಿಲ್ಲುತ್ತವೆ. ಸಾಹಿತ್ಯಪರಿಷತ್ತು, ಅಕಾಡೆಮಿಯಂತಹ ಹಿರಿಯ ಸಂಸ್ಥೆಗಳೂ ಕೂಡ ಈ ವಿಷಯದಲ್ಲಿ ಹೆಚ್ಚಿನ ಒಳನೋಟಗಳಿಗೆ ತೆರೆದುಕೊಳ್ಳುವುದಿಲ್ಲ. ಅವರೂ ಹಾಗೆಯೇ ಮೇಲೆ ಮೇಲು ನೋಟದಿಂದ ಎರಡೂ ಬಗೆಗಳನ್ನು ಪರಿಗಣಿಸಿಬಿಡುತ್ತಾರೆ. ಇದಕ್ಕೆ ನಮ್ಮಲ್ಲಿ ನಡೆಯುತ್ತಿರುವ ವಿದ್ಯಮಾನಗಳ ಹಲವಾರು ಉದಾಹರಣೆಗಳನ್ನು ಕೊಡಬಹುದು. ಆದರೆ ಮಕ್ಕಳ ಸಾಹಿತ್ಯವನ್ನು ಗಂಭೀರವಾಗಿ, ಅದೊಂದು ನಿರ್ದಿಷ್ಟ ಪ್ರಕಾರವಾಗಿ ಗುರುತಿಸಿರುವ ಇಂಗ್ಲಿಷ್ ವಾತಾವರಣದಲ್ಲಿ ಮಕ್ಕಳು ಬರೆದ ಬರವಣಿಗೆಯನ್ನು ಯಾವತ್ತೂ ಪ್ರಬುದ್ಧರು ಬರೆದಿರುವ ಸಾಹಿತ್ಯದೊಡನೆ ಸಮೀಕರಿಸುವುದಿಲ್ಲ.

ನಮ್ಮಲ್ಲಿ ಕೆಲವು ಹಿರಿಯ ಸಾಹಿತಿಗಳು, ವಿದ್ವಾಂಸರು ಸಾಂದರ್ಭಿಕವಾಗಿ ಆಗಾಗ, ಅಲ್ಲಲ್ಲಿ ವ್ಯಕ್ತಪಡಿಸಿರು'ವ ಅಭಿಪ್ರಾಯಗಳೇ ಇಲ್ಲಿ ಕಾಣುವವೇ ಹೊರತು, ಅಧ್ಯಯಯನದ ಹಿನ್ನೆಲೆಯವಲ್ಲ. ಶಿವರಾಮ ಕಾರಂತರು ಅನೇಕರ ಪುಸ್ತಕಗಳಿಗೆ ಮುನ್ನುಡಿ ಬರೆಯುತ್ತ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡುದನ್ನು ಕಾಣಬಹುದಾಗಿದೆ. ಗೋಕಾಕರು ವಿ.ಜಿ.ಭಟ್ಟರ ಮಕ್ಕಳ ಕವಿತಾ ಸಂಕಲನಕ್ಕೆ ಮುನ್ನುಡಿ ಬರೆಯುತ್ತ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದುದು ಇದೆ. ಮುಖ್ಯಧಾರೆಯ ಖ್ಯಾತ ಕವಿ, ಮಕ್ಕಳಗಾಗಿಯೂ ವಿಶೇಷವಾಗಿ ಬರೆಯುತ್ತಿರುವ ಎಚ್.ಎಸ್.ವಿ ಅವರು ಈ ನಿಟ್ಟಿನಲ್ಲಿ ಪತ್ರಿಕೆಯಲ್ಲಿ ಬರೆದಿರುವ ತಮ್ಮದೊಂದು ಲೇಖನದಲ್ಲಿ (ಪ್ರಬುದ್ಧತೆಯ ಹೆಗಲಮೇಲೆ ಮುಗ್ಧತೆಯ ಸವಾರಿ) ಈ ಕುರಿತು ವಿವರವಾಗಿಯೇ ಬರೆದಿರುವುದನ್ನು ನೋಡಬಹುದು. ಇವೆಲ್ಲ ಒಟ್ಟಾರೆ ಸಾಹಿತ್ಯದ ಹಿನ್ನೆಲೆಯಲ್ಲಿ ಬರೆದಂತಹವಾಗಿದ್ದು, ಮಕ್ಕಳ ಸಾಹಿತ್ಯವನ್ನೇ ಅಧ್ಯಯನ ದೃಷ್ಟಿಯಿಂದ ನೋಡಿರುವುದಾಗಿರುವುದಿಲ್ಲ. ಪಂಜೆಮಂಗೇಶ ರಾಯರೂ ಮಕ್ಕಳ ಸಾಹಿತ್ಯದಲ್ಲಿ ಪ್ರಾರಂಭದಿಂದಲೂ ತೊಡಗಿಸಿಕೊಂಡವರೆಂದು ಎಲ್ಲರಿಗೂ ಗೊತ್ತು. ಅವರೂ ಈ ನಿಟ್ಟಿನಲ್ಲಿ ತಮ್ಮ ಅಭಿಪ್ರಾಯವನ್ನು ನಿರ್ದಿಷ್ಟ ಗೊಳಿಸಿಕೊಂಡರು. ಇವರ್ಯಾರೂ ಮಕ್ಕಳು ಬರೆದುದನ್ನು ಹಿರಿಯರು ಬರೆಯುವುದರ ಜೊತೆಗೆ ಸಮೀಕರಿಸಿರುವುದಿಲ್ಲ. ಇವರೆಲ್ಲರೂ ಒಟ್ಟಾರೆ ಸಾಹಿತ್ಯದ ಹಿನ್ನೆಲೆಯಲ್ಲಿ, ಅಥವಾ ಬಹಳಷ್ಟು ಸಲ ಕವಿತೆಯ ಹಿನ್ನೆಲೆಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದು, ಹಾಗಿದ್ದರೂ ಅವನ್ನೆಲ್ಲ ಕತೆಗಳ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಅದರಿಂದ ಏನೂ ವ್ಯತ್ಯಾಸವಾಗದು. ಈ ನಿಟ್ಟಿನಲ್ಲಿ ನೋಡಿದರೆ, ಎಚ್.ಎಸ್.ವಿ ಅವರೇ ಒಂದಷ್ಟು ವಿವರವಾಗಿ ಈ ದ್ವಂದ್ವವ ಕುರಿತೇ ಬರೆದ ಹಾಗಿರುವ ಮಾತುಗಳು ಗಮನಿಸುವಂತಿವೆ. ಅವರು ಪ್ರಬುದ್ಧತೆ ರಚನೆಯಲ್ಲಿ ತೊಡಗಿಕೊಳ್ಳುವುದರಿಂದ ಮಕ್ಕಳಗಾಗಿ

ಇರುವ ಸಾಹಿತ್ಯವೂ ಗಟ್ಟಿಯಾಗಿ ರೂಪಗೊಳ್ಳಬಲ್ಲದು. ಮಕ್ಕಳು ಬರೆದುದು ಇಂತಹ ಲೇಖಕರಿಗೆ ಕಚ್ಚಾ ವಸ್ತುವಾಗಬಲ್ಲದೇ ಹೊರತು, ಅಲ್ಲಿ ಬರೆಯುವಿಕೆಯ ನೈಪುಣತ್ಯೆ, ಭಾಷೆಯ ಪರಿಣತಿ, ಪ್ರಬುದ್ಧತೆಯಿಂದ ನಿರ್ವಹಿಸುವಿಕೆಗಳು ಕಾಣಲಾರವು ಎನ್ನುವ ಅಭಿಪ್ರಾಯ ಕಾಣುತ್ತೇವೆ.

ಎನ್.ಬಿ.ಟಿ ಸಂಸ್ಥೆ ಮತ್ತು ಸಿ.ಬಿ.ಟಿ ಅಂತಹ ಸಂಸ್ಥೆಗಳು ರಾಷ್ಟ್ರಮಟ್ಟದಲ್ಲಿ ಬಹು ಸಮಯದಿಂದ ಮಕ್ಕಳ ಸಾಹಿತ್ಯದಲ್ಲಿ ತೊಡಗಿಸಿಕೊಂಡಿರುವುದಿದೆ. ಅವು ಯಾವತ್ತೂ ಪ್ರಬುದ್ಧರನ್ನೇ ಇಲ್ಲಿ ಬರವಣಿಗೆಗಾಗಿ ಆಶ್ರಯಿಸಿವೆ ಎನ್ನುವುದನ್ನು ಗಮನಿಸಬೇಕು. ಈಗ ಕೇಂದ್ರ ಸಾಹಿತ್ಯ ಅಕಾಡೆಮಿಯು ಪ್ರಬುದ್ಧ ಲೇಖಕರನ್ನೇ ಬಾಲಸಾಹಿತ್ಯ ಪುರಸ್ಕಾರಕ್ಕಾಗಿ ಪರಿಗಣಿಸುತ್ತಿರುವುದನ್ನು ಗಮನಿಸಬೇಕು. ಹಾಗೆಯೇ ಭಾರತದಲ್ಲಿ ಕೆಲವರೆಲ್ಲ ಪ್ರಕಾಶಕರು ಮಕ್ಕಳ ಸಾಹಿತ್ಯಕ್ಕೇ ವಿಶೇಷವಾಗಿ ತೊಡಗಿಸಿಕೊಂಡಿರುವುದನ್ನು ನೋಡುತ್ತೇವೆ. ತಾರಾ, ಪ್ರಥಮ, ತೂಲಿಕಾ, ಕಥಾ ಮುಂತಾದ ಪ್ರಕಾಶಕರು ಸಹ ಮಕ್ಕಳ ಬರವಣಿಗೆಯನ್ನು ದೊಡ್ಡವರೊಡನೆ ಸಮೀಕರಿಸುವುದಿಲ್ಲ.

ಮಕ್ಕಳಿಗಾಗಿ ದೀರ್ಘ ಅವಧಿಯಿಂದ ಬರೆಯುತ್ತಿರುವ, ಹಾಗೆಯೇ ಗಂಭೀರವಾಗಿ ಅಧ್ಯಯನದಲ್ಲೂ ತೊಡಗಿಸಿಕೊಂಡಿರುವ ಆನಂದಪಾಟೀಲರು ಮಾತ್ರ ಈ ನಿಟ್ಟಿನಲ್ಲಿ ತಮ್ಮ ನಿಖರವಾದ ಅಭಿಪ್ರಾಯವನ್ನು ತಾತ್ವಿಕವಾಗಿ ಮುಂದಿಡುವುದನ್ನು ಕಾಣುತ್ತೇವೆ. ಅವರು 'ಸಂಧ್ಯಾ' ಎನ್ನುವ ಮಕ್ಕಳ ಸಾಹಿತ್ಯಕ್ಕೆ ಮೀಸಲಿದ್ದ ತ್ರೈಮಾಸಿಕದಲ್ಲಿ ಬರೆಯುತ್ತಾ 'ಮಕ್ಕಳಿಗಾಗಿ ಪ್ರಬುದ್ಧರು ಬರೆಯುವುದು ಒಂದು ಬಗೆಯ ಮನೋಧರ್ಮ, ಕೆಲವರು ಬಾಲ್ಯದ ಸೆಳೆತದಿಂದ ಈ ಬಗೆಯ ಬರವಣಿಗೆಗೆ ಇನ್ನಿಲ್ಲದಂತೆ ತುಡಿಯುತ್ತಾರೆ, ಅಂಥವರಿಂದ ಮಕ್ಕಳಿಗಾಗಿ ಬರವಣಿಗೆ ಸಿದ್ಧವಾಗುತ್ತದೆ' ಎನ್ನುತ್ತಾರೆ. ಈಚಿನ ಅವರ ಇಂಗ್ಲಿಷಿನ ಅಧ್ಯಯನದಲ್ಲಿ ಈ ಬಗೆಯ ಅಭಿಪ್ರಾಯವನ್ನು ಪುಷ್ಟೀಕರಿಸುವ, ಹಾಗೆಯೇ ಇನ್ನೂ ವಿಸ್ತಾರವಾಗಿ ಈ ಪ್ರತ್ಯೇಕತೆಯನ್ನು, ನಿರ್ದಿಷ್ಟತೆಯನ್ನು, ಗುರುತಿಸುವ ಅಧ್ಯಯನಗಳ ಬಗೆಗೆ ಅವರು ಬರೆದಿರುವುದು ಕಾಣಬಹುದಾಗಿದೆ. ಅದರಲ್ಲಿ ಪೆರ್ರಿ ನೋಡಲ್‌ಮನ್ ಅವರ ದೀರ್ಘ ಅವಧಿಯ ಅಧ್ಯಯನ ಮಕ್ಕಳ ಸಾಹಿತ್ಯವನ್ನು ಒಂದು ಪ್ರತ್ಯೇಕ ಪ್ರಕಾರವಾಗಿ ಗುರುತಿಸುವ ಸಾಹಿತ್ಯದ ಹಿನ್ನೆಲೆಯಲ್ಲಿ ಪ್ರಬುದ್ಧತೆಯು ತನ್ನದೇ ಆದ ಅಗತ್ಯಗಳಿಂದ ನೆಲೆ ನಿಂತುಕೊಳ್ಳುವ ಅಧ್ಯಯನಗಳನ್ನು ಅವರು ನೀಡಿರುವುದನ್ನು ಪಾಟೀಲರು ವಿವರವಾಗಿಯೇ ಮುಂದಿಟ್ಟಿದ್ದಾರೆ. ಇದು ಕನ್ನಡದಲ್ಲಿ ಹೊಸದು. ನಮ್ಮಲ್ಲಿ ಮಕ್ಕಳಿಗಾಗಿ ಬರೆಯುವುದು ಎಂದರೆ ಮಕ್ಕಳಸಾಹಿತ್ಯ ಎನ್ನುವ ತೀರ ಸಾಮಾನ್ಯದ ತಿಳುವಳಿಕೆಯೇ ಹಾಸಿಕೊಂಡಿದೆ. ಆದರೆ ಇಂಗ್ಲೀಷಿನ ಈ ಅಧ್ಯಯನಗಳು ಇದಕ್ಕಿಂತ ವಿಶೇಷವಾದ ಒಳನೋಟಗಳನ್ನು ನೀಡುತ್ತಿವೆ. ಇಂಗ್ಲೀಷಿನಲ್ಲಿ ವಿಭಿನ್ನವಾದ ಬಗೆ ಬಗೆಯ ಮನೋಸ್ಥಿತಿಯ ಹಿನ್ನೆಲೆಯಿಂದ ತಮ್ಮದೇ ಅಗತ್ಯಗಳಿಂದ ಮಕ್ಕಳ ಸಾಹಿತ್ಯಕ್ಕೆ ಬಂದಂತಹ ಲೇಖಕರು ಕಾಣಿಸಿಕೊಂಡಿದ್ದು ಅವರ ಬರವಣಿಗೆಗೆ ಅವರವರದೇ ತೀವ್ರತೆಯನ್ನು ನೀಡಿದ್ದಾರೆ. ಅಲ್ಲೆಲ್ಲ ಪ್ರಬುದ್ಧತೆಯೇ ಎದ್ದು ಕಾಣುತ್ತದೆ. ಇಂತಹ ಬರವಣಿಗೆಯ ಹಿನ್ನೆಲೆಯಲ್ಲಿ ನಿಂತಿರುವುದಕ್ಕೆ ಕಾರಣ ನಮ್ಮ ಸುತ್ತಲಿನ ಗಂಭೀರವಾದ ವಾತಾವರಣದ ಪರಿಣಾಮಗಳನ್ನು ನೋಡಬಹುದಾಗಿದೆ. ಪಾಟೀಲರು ಈ ಬಗೆಯ ಅಧ್ಯಯನಗಳನ್ನು ಕನ್ನಡದಲ್ಲಿ ಈಗ ಮುಂದಿಟ್ಟಿದ್ದು ಹೊಸ ವಿಚಾರಗಳಿಗೆ ತೆರೆದುಕೊಂಡಿರುವುದು ಗೋಚರಿಸುತ್ತದೆ. ಜೋಹರ್ ಸೆವಿತ್,

ಹಾಲಿಂಡೇಲ್ ನಂತಹ ಅನೇಕರ ಅವಿರತವಾದ ಅಧ್ಯಯನಗಳು ಇದರ ಹಿನ್ನೆಲೆಯಾಗಿವೆ. ಬಹು ಮುಖ್ಯವಾಗಿ ಬಾಲ್ಯವನ್ನು ಉಳಿಸಿಕೊಳ್ಳುವ, ಬಾಲ್ಯದ ಮುಗ್ಧತೆ, ಸ್ವಚ್ಛಂದತೆಗಳನ್ನು ಹಾಳಾಗದಂತೆ ಉಳಿಸಿಕೊಳ್ಳುವ ಹಿರಿಯರ ಕಾಳಜಿಯ, ಆತಂಕದ, ಹಂಬಲಿಕೆಯ ಮನಸ್ಸುಗಳು ಬಹು ಮುಖ್ಯವಾಗಿ ಇಲ್ಲಿ ಹಿನ್ನೆಲೆಯಲ್ಲಿ ನಿಲ್ಲುತ್ತವೆ. ಅಲ್ಲದೆ ಅನೇಕ ಲೇಖಕರು ಮಕ್ಕಳಿಗಾಗಿ ಬರೆಯುತ್ತ ಆ ಬರವಣಿಗೆಯು ಪ್ರಬುದ್ಧ ಓದುಗರಿಗೂ ಸಲ್ಲುವ ಕಾಳಜಿ ವಹಿಸುವುದನ್ನೂ ಕಾಣುತ್ತೇವೆ. ಇವರು ಮಕ್ಕಳು ಬರೆದುದನ್ನು ಈ ಪ್ರಬುದ್ಧರ ನಡುವೆ ಪರಿಗಣಿಸುವುದಿಲ್ಲ. ಮಕ್ಕಳು ಬರವಣಿಗೆಗೆ ತೊಡಗಿಕೊಳ್ಳುವುದು ಬೇರೆಯದೇ ಆದ ಮನೋಭೂಮಿಕೆಯಿಂದ, ಪ್ರಬುದ್ಧರ ಹಾಗಲ್ಲ. ಅಲ್ಲಿ ಪರಬುದ್ಧ ಮನಸ್ಥಿತಿ ತೊಡಗಿಸಿಕೊಳ್ಳುವ ಯಾವ ಅನಿವಾರ್ಯದ, ತೀವ್ರವಾದ ಕಾರಣಗಳಿರುವುದಿಲ್ಲ. ಬದಲಾಗಿ ಬರವಣಿಗೆಯ ಅಭಿಲಾಷೆ, ಸಹಜವಾದ ಬರಹಗಾರನಾಗುವ ಅಭಿಲಾಷೆಗಳು ಇರುತ್ತವೆ. ಇವು ಮುಂದೊಬ್ಬ ದೊಡ್ಡ ಲೇಖಕನಾಗುವ ಮೊದಲ ಹೆಜ್ಜೆಗಳಾಗಬಹುದೇ ವಿನಃ ಮಕ್ಕಳ ಸಾಹಿತಿಯನ್ನಾಗಿ ಮಾಡಬೇಕಾಗಿರುವುದಿಲ್ಲ. ಪುಟ್ಟ ಪ್ರಯತ್ನಗಳೇ, ಅವು ಒಟ್ಟಾರೆಯಾಗಿ ಒಬ್ಬ ಲೇಖಕನಾಗುವ ಬಯಕೆಗಳೆ ಆಗಿವೆ. ಮುಗ್ಧತೆಯನ್ನು ಹಂಬಲಿಸುವುದು, ಕಾಯ್ದುಕೊಳ್ಳುವುದು ಮಂತಾದ ಕಾಳಜಿಗಳು ಕಾಣಸಿಗುವುದಿಲ್ಲ.

ಮಕ್ಕಳು ತಮ್ಮ ಅನುಭವದ ವಸ್ತುಗಳನ್ನಾಧರಿಸಿ ತನ್ನ ಪರಿಸರದಲ್ಲಿ ನಡೆದ ಘಟನೆ, ಸನ್ನಿವೇಶ, ಕಲ್ಪನೆಗಳನ್ನು ವಾಸ್ತವವಾಗಿಯೋ, ವರ್ಣಿತವಾಗಿಯೋ, ತಮ್ಮದೇ ಆದ ಗ್ರಹಿಕೆಯಲ್ಲಿ, ದಕ್ಕುವ ಭಾಷೆಯಲ್ಲಿ ಬರೆದು ಅಭಿವ್ಯಕ್ತಿಸುವ ಪ್ರಕಾರಗಳಾಗಿವೆ. ಇಲ್ಲಿ ಯಾವುದೇ ತತ್ತ್ವ ಸಿದ್ಧಾಂತಗಳ ಕಟ್ಟುಪಾಡುಗಳಿರುವುದಿಲ್ಲ. ಛಂದೋಬದ್ಧ ಭಾಷೆಯ ಹಂಗಿರುವುದಿಲ್ಲ. ಈ ಪ್ರಯತ್ನಗಳು ಎಲ್ಲ ಮಕ್ಕಳಿಂದ ಸಾಧ್ಯವಾಗದಿದ್ದರೂ ಎಂಟು ಒಂಭತ್ತು ವರ್ಷದ ಕಲಿಕೆಯಲ್ಲಿ ಅರಿತು ನುರಿತ ಕ್ರಿಯಾಶೀಲ ಮಕ್ಕಳಿಂದ ನಡೆದಿವೆ. ತೀರ ವಿರಳವಾದರು ಇಂತಹ ಪ್ರಯತ್ನಗಳು ನಡೆಯುತ್ತಲೇ ಇವೆ. ಕನ್ನಡದಲ್ಲಿ ಮುದ್ದು ತೀರ್ಥಹಳ್ಳಿ, ಸೋನಿಯಾ, ಅಂತಃಕರಣ ನಂತಹ ಕಿರಿಯ ಲೇಖಕರನೇಕರು ಇಂತಹ ಪ್ರಕಾರದ ಸಾಹಿತ್ಯವನ್ನು ರಚಿಸಿ ತಮ್ಮ ಅಗತ್ಯತೆಯ ಕಥಾ ಸಾಹಿತ್ಯವನ್ನು ಕಂಡುಕೊಂಡು ಬೆಳೆಸುತ್ತಿದ್ದಾರೆ ಎನ್ನಬಹುದು.

## ೨ ಮಕ್ಕಳಿಗಾಗಿ ದೊಡ್ಡದವರು ಬರೆದ ಕತೆಗಳು

ಮಕ್ಕಳ ಬೇಕು ಬೇಡಗಳನ್ನು ನಿರ್ಣಯಿಸಿಕೊಂಡು ಮಕ್ಕಳಿಗೆ ಹಿತವೆನಿಸುವ ಭಾಷೆಯಲ್ಲಿ ಮಕ್ಕಳ ಭಾವ ಪ್ರಪಂಚಕ್ಕೆ ತಮ್ಮನ್ನು ಒಗ್ಗಿಸಿಕೊಂಡು ಪರಕಾಯ ಪ್ರವೇಶ ಮಾಡಿ ಮಕ್ಕಳಿಗಾಗಿ ದೊಡ್ಡವರು ರಚನೆಯಲ್ಲಿ ತೊಡಗಿರುವ ಕಥಾಸಾಹಿತ್ಯ ಪ್ರಕಾರವು ಈ ಗುಂಪಿಗೆ ಸೇರುತ್ತದೆ. ಜಗತ್ತಿನ ಬಹುತೇಕ ಮಕ್ಕಳ ಸಾಹಿತ್ಯವು ಈ ಪ್ರಕಾರದ ಗುಂಪಿನಲ್ಲಿ ಹೇರಳವಾಗಿ ಸೇರಿದೆ. ಇಂತಹ ಕತೆಗಳ ಆಯ್ಕೆಯಲ್ಲಿ ದೊಡ್ಡವರೇ ನಿರ್ಣಯಕರಾಗಿ ಪರಿಣಮಿಸುವಾಗ ಹಿರಿಯರಿಗೆ ದ್ವೇಷ, ಕ್ರೋಧ, ಅಶ್ಲೀಲ, ಅಹಿತಕರವೆನಿಸುವ ಮುಜುಗರ ಸಂಗತಿಗಳನ್ನು ತೆಗೆದುಹಾಕಿ ಮಕ್ಕಳಿಂದ ಸಮಾಜವು ನಿರೀಕ್ಷಿಸುವ ಮೌಲ್ಯಭರಿತವಾದ ಆಶಯಗಳನ್ನು ಸೇರಿಸಿ ಕಥಾಸಾಹಿತ್ಯವನ್ನು ಸಮೃದ್ಧಗೊಳಿಸಿರುವುದನ್ನು ಕಾಣಬಹುದು. ಇದು ಭಾರತದಂತಹ

ಸಂಪ್ರದಾಯಬದ್ಧವಾದ ದೇಶದಲ್ಲಿ ಜನಪದ ರಾಮಾಯಣ, ಮಹಾಭಾರತ, ನೀತಿಕತೆಗಳು, ಪಂಚತಂತ್ರ ಮುಂತಾದ ಸ್ವರೂಪದಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ.

## ೩. ಮಕ್ಕಳಿಗಾಗಿ ಆರಿಸುವ ಕತೆಗಳು

ಈ ಪ್ರಕಾರದ ರಚನೆಗಳು ಸೃಜನಶೀಲತೆಯಿಂದ ಕೂಡಿದ ವಿವಿಧ ಬಗೆಯ ಸಾಹಿತ್ಯ ಪ್ರಕಾರಗಳಿಂದ ಮಕ್ಕಳಿಗಾಗಿ ಆರಿಸಿ ನೀಡುವ ಕತೆಗಳಾಗಿವೆ. ಈ ಕತೆಗಳು ಮಕ್ಕಳಿಗಾಗಿ ರಚನೆಗೊಳ್ಳದಿದ್ದರೂ, ಅವರ ಬೌದ್ಧಿಕ ಮಟ್ಟ, ವಯಸ್ಸು, ಅಭಿರುಚಿ, ಸಾಮಾಜಿಕ ಅಪೇಕ್ಷಿತ ಮೌಲ್ಯ ಮುಂತಾದುವುಗಳ ದೂರಾಲೋಚನೆಯಿಂದ ಮಕ್ಕಳಿಗಾಗಿ ಆರಿಸಿಕೊಳ್ಳುವಂತಹವುಗಳಾಗಿವೆ. ಈ ಆಯ್ಕೆಯು ಶಿಕ್ಷಣದ ಒಂದು ಔಪಚಾರಿಕ ಭಾಗವಾಗಿಯೂ, ಸಾಮಾಜಿಕ ಅಪೇಕ್ಷಣೀಯ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸಿ ಪೋಷಿಸುವ ಸಲುವಾಗಿಯೂ ನಡೆದ ಕಾರ್ಯದ ಮಧ್ಯವರ್ತಿಗಳಾಗಿ ಈ ಕತೆಗಳನ್ನು ಆರಿಸಲಾಗುತ್ತದೆ. ಸಮಾಜದ ಹಾನಿಕಾರಕ ಅಂಶಗಳನ್ನು ಸಂಸ್ಕರಿಸಿ, ಬೇಡವಾದುದನ್ನು ತೆಗೆದು ಪ್ರಬುದ್ಧರ ಕತೆಗಳನ್ನು ಪರಿಷ್ಕರಿಸಿ, ನೀಡುವ ಸಂಪ್ರದಾಯಕ ಕಥಾವಿಧಾನಗಳಲ್ಲಿ ಇದು ಒಂದಾಗಿರುವುದರಿಂದ ಇಲ್ಲಿ ಮಕ್ಕಳ ಮನೋವಿಕಾಸ, ಗ್ರಹಿಕೆ, ಬೆಳವಣಿಗೆ, ಬುದ್ಧಿಶಕ್ತಿ ಎಲ್ಲವೂ ಇಲ್ಲಿ ಊಹಿತವಾಗಿರುತ್ತವೆಯೇ ವಿನಹಃ ಮಕ್ಕಳಿಗೆ ಆಯ್ಕೆಯ ಸ್ವಾತಂತ್ರ್ಯವಾಗಲಿ, ಅವರು ಅನುಭವಿಸಿದ ವಾಸ್ತವ ಜಗತ್ತಿನ ವಸ್ತುಸ್ವರೂಪದ ಆಯ್ಕೆಯು ಅವರಿಗೆ ದಕ್ಕುವುದಿಲ್ಲ. ಭಾರತದಂತಹ ದೇಶದಲ್ಲಿ ಇಂತಹ ಪ್ರಕಾರದ ಸಾಹಿತ್ಯವು ಶಿಕ್ಷಣದ ಉದ್ದೇಶವನ್ನು ಈಡೇರಿಸುತ್ತದೆ ಎಂದು ನಂಬಲಾಗಿರುವ ವಿಶ್ವಾಸನೀಯ ಪ್ರಕಾರವಿದಾಗಿದೆ. ಪಾಶ್ಚಾತ್ಯರಲ್ಲಿ ಇಂತಹ ಸರಕುಗಳನ್ನು ಆರಿಸಿಕೊಳ್ಳುವಾಗ ಮಕ್ಕಳಿಗೆ ಸ್ವತಂತ್ರ ಅನುಭವಿಸುವ, ತಮ್ಮ ಆಯ್ಕೆಯನ್ನು ತಾವೇ ಮಾಡಿಕೊಳ್ಳುವ ಅವಕಾಶವನ್ನು ಕಲ್ಪಿಸುವುದನ್ನು ಕಾಣಬಹುದಾಗಿದೆ. ನಮ್ಮ ಶೈಕ್ಷಣಿಕ ವ್ಯವಸ್ಥೆಯ ಇಂತಹವುಗಳನ್ನು ತಜ್ಞರಿಂದ ನಿರ್ವಹಿಸಲ್ಪಡುತ್ತದೆ.

## ೪ ಮಕ್ಕಳೇ ಆರಿಸಿಕೊಳ್ಳುವ ಕತೆಗಳು

ಮಕ್ಕಳು ತಮ್ಮ ಓದಿಗೆ ದಕ್ಕಬಲ್ಲ ತಮ್ಮ ಗ್ರಹಿಕೆಗೆ ನಿಲುಕುವ ತಮ್ಮನ್ನು ತಂತಾನೆ ರಂಜಿಸುವಂತಹ ಆಕರ್ಷಕ ಅಭಿರುಚಿಗೆ ತಕ್ಕಂತೆ ಸ್ವತಃ ತಾವೇ ಆರಿಸಿಕೊಳ್ಳುವ ಕತೆಗಳು ಈ ಪ್ರಕಾರದಲ್ಲಿ ಗಮನಿಸಬಹುದಾಗಿದೆ. ಇವುಗಳಲ್ಲಿ ಮಕ್ಕಳು ತೀರ ಇಷ್ಟಪಡುವುದು ಚಿತ್ರಸಹಿತವಾದ ಕಾಮಿಕ್ಸ್‌ಗಳನ್ನು ಎನ್ನಬಹುದಾದರೂ ಭಾರತೀಯ ಮಕ್ಕಳ ಕಥಾ ಸಾಹಿತ್ಯವು ಇನ್ನೂ ಕಾಮಿಕ್ಸ್‌ನಂತಹ ಸರಕನ್ನು ಮಕ್ಕಳ ಸಾಹಿತ್ಯವೆಂದು ಒಪ್ಪಿಕೊಳ್ಳುವ ಮನಸ್ಥಿತಿಗೆ ಬೆಳೆದಿಲ್ಲದಿರುವುದು ವಿಷಾದನೀಯವೆನಿಸಿದರೂ, ಪತ್ರಿಕೆಗಳು ತಮ್ಮಲ್ಲಿ ಅಂಕಣಗಳನ್ನು ನೀಡಿ ಪೋಷಿಸಿಕೊಂಡು ಬರುತ್ತಿರುವುದು ಆಶಾದಾಯಕವೆನಿಸುತ್ತದೆ. ಇಂತಹವುಗಳ ಸಾಲಿನಲ್ಲಿ ಹೆಚ್ಚಾಗಿ ಮಕ್ಕಳು ಆರಿಸಿಕೊಳ್ಳುತ್ತಿರುವುದು ತೆನಾಲಿರಾಮನ ಕತೆ, ಪಂಚತಂತ್ರ, ವಿಕ್ರಮಬೇತಾಳ, ರಾಮಾಯಣ, ಮಹಾಭಾರತದ ಪಾತ್ರಧಾರಿತ ಕತೆಗಳೇ ಹಿರಿಯದಾಗಿವೆ. ವಾಸ್ತವ ಸ್ಪಂದನೆಯ ಕತೆಗಳು ರಚನೆಯಾಗುತ್ತಿರುವುದು ವಿರಳವೆನಿಸುವುದರಿಂದಾಗಿ ಸಾಂಪ್ರದಾಯಿಕ ಕತೆಗಳು ಅನಿವಾರ್ಯವಾಗಿವೆ.

## ೨.೬ ಮಕ್ಕಳ ಕತೆಗಳಲ್ಲಿ ಪ್ರಮುಖವಾದ ಲಕ್ಷಣಗಳು

ಇಡೀ ಮಕ್ಕಳ ಕಥಾಸಾಹಿತ್ಯವನ್ನು ಇದುವರೆಗೆ ಅವಲೋಕಿಸಿ ನೋಡಿದಾಗ ನಮಗೆ ಕಂಡುಬರುವ ಸಾಮಾನ್ಯವಾದ ತಾತ್ವಿಕ ಅಂಶಗಳ ಆಧಾರದ ಮೇಲೆ ಮಕ್ಕಳ ಕತೆಗಳ ಲಕ್ಷಣಗಳನ್ನು ಮುಖ್ಯವಾಗಿ ಕೆಳಗಿನಂತೆ ಸಂಕ್ಷೇಪಿಸಬಹುದಾಗಿದೆ.

- ಮಕ್ಕಳೇ ಪಾತ್ರಗಳಾಗಿರುವ ಕತೆಗಳಿಂದ ಕೂಡಿರುತ್ತವೆ. ಇಲ್ಲಿ ಮಕ್ಕಳೇ ಪಾತ್ರಗಳಾಗಿದ್ದು, ಅವರದೇ ಆದ ಬಾಲ್ಯತನವನ್ನು ಸೊಗಸಾಗಿ ವರ್ಣಿಸಿರುತ್ತಾರೆ. ಅಭಿವ್ಯಕ್ತವಾಗುವ ಅಂಶಗಳು ಬಾಲ್ಯದ ಬದುಕಿನಿಂದ ಕೂಡಿರುತ್ತವೆ. ಇಲ್ಲಿ ಎಳೆಯರದೇ ಪ್ರಪಂಚ ತೆರೆದುಕೊಳ್ಳುತ್ತದೆ. ಬಾಲಜಗತ್ತು ಸಾಮಾನ್ಯವಾಗಿ ತೆರೆದುಕೊಳ್ಳುತ್ತದೆ.
- ಮಕ್ಕಳ ಕತೆಗಳ ವಸ್ತುವು ಮಕ್ಕಳದೇ ಅಪೇಕ್ಷತೆಯಿಂದ ಕೂಡಿರುವುದಾಗಿರುತ್ತದೆ. ಅವರ ಮನೋಲೋಕವೇ ಆಗಿರುತ್ತದೆ ಹಾಗೂ ಅವರ ಊಹೆ, ಕಲ್ಪನೆಗಳು, ನಿರೀಕ್ಷೆಗಳು, ಕೆಲವೊಮ್ಮೆ ಸಹಜವಾಗಿಯು, ಕೆಲವೊಮ್ಮೆ ಎಲ್ಲೆ ಮೀರಿಯೂ ಕಾಣಿಸಿಕೊಳ್ಳುತ್ತವೆ.
- ಕೃತಿಯ ಗಾತ್ರವೂ ಚಿಕ್ಕದಾಗಿದ್ದು, ಕಡಿಮೆ ಪುಟಗಳಿಂದ ವೈವಿಧ್ಯಮಯವಾದ ಆಕರ್ಷಕ ಬಣ್ಣಗಳಿಂದ ಮನಸೆಳೆಯುತ್ತವೆ ಮತ್ತು ಅಕ್ಷರ ಗಾತ್ರವೂ ಓದಲು ಅನುಕೂಲವಾಗುವಂತೆ ದಪ್ಪವೂ, ಸ್ಪುಟವೂ, ಆಗಿರುತ್ತದೆ. ಭಾಷೆಯು ಮಕ್ಕಳ ಬೌದ್ಧಿಕಮಟ್ಟವನ್ನು ಆಧರಿಸಿರುತ್ತದೆ.
- ಪುಸ್ತಕದಲ್ಲಿ ಆರ್ಷಣೀಯವಾದ ಚಿತ್ರಗಳೂ, ಕತೆಗೆ ಪೂರಕವಾಗಿ ಚಿತ್ರಿತವಾಗಿರುತ್ತವೆ. ಕೆಲವು ಸಲ ಕತೆಯ ಆಶಯವನ್ನು ಚಿತ್ರಗಳೇ ಹೇಳುವಂತಿರುತ್ತವೆ. ಇವುಗಳಲ್ಲಿ ಮಕ್ಕಳ ಆಕರ್ಷಣೀಯ ಗುಣ ಸಹಜವಾಗಿರುತ್ತದೆ. ಬಣ್ಣಗಳಿಂದ ಕೂಡಿದ ಚಿತ್ರಗಳಿಗೆ ಮೂಕವಿಸ್ಮಿತರಾಗಿ ಸೆಳೆಯುವ ಲಕ್ಷಣಗಳಿರುತ್ತವೆ.
- ಕತೆಯಲ್ಲಿ ಬಳಕೆಯಾಗಿರುವ ಭಾಷೆಯು ಎಳೆಯರ ಓದಿಗೆ ಸಾಧ್ಯವಾಗುವಂತೆಯೂ, ಲಯ, ಛಂದ ನಿಯಮಗಳಿಲ್ಲದೆ, ನಿರರ್ಗಳತೆಯ ಸ್ವಾದವನ್ನು ಉಂಟು ಮಾಡುವ ರಸರಂಜನೀಯವಾದ ಬಾಲಭಾಷೆಯಾಗಿರುತ್ತದೆ. ಮಕ್ಕಳ ಸ್ವಂತ ಓದಿಗೆ ಸಹಕಾರಿಯಾಗಿರುತ್ತದೆ.
- ಸಂಭಾಷಣೆಯಂತಹ ಶೈಲಿಯು ಮಕ್ಕಳಿಗೆ ಮುದ ನೀಡುತ್ತಾ ಘಟನೆ, ಸನ್ನಿವೇಶಗಳನ್ನು ಹೇಳುವಂತಿದ್ದು, ನಿರೂಪಣೆಯು ಮಾಧುರ್ಯವನ್ನು ನೀಡುತ್ತದೆ. ನಿರೂಪಕನ ಮೋಹಕ ತಂತ್ರಗಾರಿಕೆಯಿಂದ ಆಕರ್ಷಣೆಯುಂಟಾಗುತ್ತದೆ.
- ಪ್ರಾಣಿ, ಪಕ್ಷಿ, ಗಿಡ, ಮರ, ವಸ್ತುಗಳು, ನೀರು, ಕಡಲು ಮೋಡ, ಎಲ್ಲವೂ ಮನುಷ್ಯನರಂತೆ ಸಂಬಂಧಗಳನ್ನು ಹೊಂದಿದ್ದು, ಹುಟ್ಟು, ಬೆಳವಣಿಗೆ, ಸಾವು ಜೀವನವನ್ನು ಅನುಭವಿಸುತ್ತವೆ. ಇಲ್ಲಿ ಎಲ್ಲವೂ ಮಾತನಾಡಬಲ್ಲವು ಹಾಗೂ ಚಲಿಸಬಲ್ಲವೂ. ಮಾನವ ಜೀವನದ ಸಹಜಕ್ರಿಯೆಗಳು ಇಲ್ಲಿ ಎಲ್ಲರಿಗೂ ಅನ್ವಯವಾಗುತ್ತವೆ.

- ಕತೆಗಳು ಜ್ಞಾನ, ರಂಜನೆ, ನೀತಿ, ಕುತೂಹಲ, ರಮ್ಯತೆ ಮೌಲ್ಯಗಳು ಪರಿಸರ ಪ್ರಜ್ಞೆಯಂತಹ ಸದುದ್ದೇಶಗಳನ್ನು ಬೆಳೆಸುವ ಮಾಧ್ಯಮಗಳಾಗಿ ಕಾಣಿಸುತ್ತವೆ.
- ಹರ್ಷಿಸುವ, ರೋಚಕತೆಗೆ ತುಡಿಯುವ, ದುಷ್ಟರ ನಾಶ, ಶಿಷ್ಟರ ರಕ್ಷಣೆ, ವಿಜಯ ಸಾಧಿಸುವ ಸಂಭ್ರಮಗಳು, ಅಂತ್ಯದಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಮಕ್ಕಳ ಕತೆಗಳು ಸಾಮಾನ್ಯವಾಗಿ ಸುಖಾಂತ್ಯವನ್ನು ಅನುಭವಿಸುತ್ತವೆ.
- ಮಕ್ಕಳನ್ನು ಸಮಾಜದ ಭಾವಿ ಪ್ರಜೆಗಳಾಗಿ ರೂಪಿಸುವ ಸಿದ್ಧತಾ ಕಾರ್ಯಗಳ ತಂತ್ರಗಾರಿಕೆಗಳು ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತವೆ.
- ಅವಾಸ್ತವ, ವಾಸ್ತವ ಬದುಕಿನ ವಸ್ತುಗಳೆಲ್ಲವೂ ಮಕ್ಕಳಿಗೆ ಪ್ರೇರಕ ಮತ್ತು ರೋಚಕವೆನಿಸುತ್ತವೆ. ಎಲ್ಲ ಸಾಮಗ್ರಿಗಳು ಕೈಗೆಟಕುವಂತಿದ್ದು, ಮಾನುಷ, ಅತಿಮಾನುಷರು ಪರಿಚಿತರಂತೆ ಕಾಣಿಸಿಕೊಳ್ಳುತ್ತಾರೆ. ಆಕಾಶ, ನಭೋಮಂಡಲ, ಪರಲೋಕ ಎಲ್ಲೆಡೆಯೂ ಅವಾಸ್ತವವಾಗಿ ಜೀವಿಗಳು ಗೋಚರಿಸಿದರೂ ವಾಸ್ತವವಾಗಿಯೂ ಮಕ್ಕಳಿಗೆ ಸಹಜತೆಯಿರುತ್ತದೆ.

ಅಧ್ಯಾಯ: ೩

ಮೌಖಿಕ ಸಂಪ್ರದಾಯದ ಕತೆಗಳ ಸ್ವರೂಪ ಹಾಗೂ ಲಿಖಿತ ಕತೆಗಳ ಮಿತಿಗಳು, ಸಾಧ್ಯತೆಗಳು

೩.೧ ಜನಪದ ಮೌಖಿಕ ಪರಂಪರೆಯ ಮಕ್ಕಳಕತೆಗಳ ಸ್ವರೂಪ

೩.೨ ಮೌಖಿಕ ಕತೆಗಳ ವ್ಯಾಪ್ತಿ, ವಸ್ತುವಿನ ಹರವು, ಮಿತಿಗಳು

೩.೩ ಲಿಖಿತ ಕತೆಗಳ ಸ್ವರೂಪ, ವ್ಯಾಪ್ತಿ, ವಸ್ತುವಿನ ಹರವು, ಮಿತಿಗಳು

೩.೪ ಅನುಭವಿಸಿದ ವಸ್ತುವಿನ ಸಾಧ್ಯತೆಗಳು, ಮಿತಿಗಳು

# ಅಧ್ಯಾಯ : ೩

# ಮೌಖಿಕ ಸಂಪ್ರದಾಯ ಕತೆಗಳ ಸ್ವರೂಪ ಹಾಗೂ ಲಿಖಿತ ಕತೆಗಳ ಸ್ವರೂಪ, ಮಿತಿಗಳು, ಸಾಧ್ಯತೆಗಳು

ಭಾರತದಲ್ಲಿ ವಿವಿಧ ರೂಪದಲ್ಲಿದ್ದ ಜನಪದದ ಕತೆಗಳು ಮಕ್ಕಳ ಕತೆಗಳ ಅಗತ್ಯವನ್ನು ನೀಗಿಸುವ ಕೆಲಸವನ್ನು ಮಾಡಿವೆ. ಜೊತೆಗೆ ಅನೌಪಚಾರಿಕ ಶಿಕ್ಷಣದ ಭಾಗವಾಗಿಯೂ ಅವು ಕಾಣಿಸಿಕೊಂಡಿವೆ. ಮೌಖಿಕವಾಗಿ ಜನರ ಬಾಯಿಯಿಂದ ಬಾಯಿಗೆ ಹರಿದಾಡುತ್ತಿದ್ದ ಕತೆಗಳು ಮಕ್ಕಳಿಗಾಗಿ ಪರಿಷ್ಕರಣೆಯನ್ನು ಕಾಣುವಾಗ ಕೆಲವು ಮಿತಿಯನ್ನು ಅನುಭವಿಸಿದಂತೆ ಸ್ವಾತಂತ್ರ್ಯವನ್ನು ಸಹ ಅನುಭವಿಸಿವೆ. ಕಾರಣ ಯಾವುದಾದರೂ ಸರಿಯೆ ಮಕ್ಕಳಿಗೆ ಕತೆಗಳು ತಲುಪಿರುವುದನ್ನು ಮಾತ್ರ ಲಕ್ಷ್ಯವಹಿಸಿ ನೋಡಬೇಕಾದುದಾಗಿದೆ. ಅಜ್ಜಿಕತೆ, ಅಡಗೂಲಜ್ಜಿಯಕತೆ, ಗೀತಕಥನಾ, ನಾಟಕ, ಯಕ್ಷಗಾನ, ಬಯಲಾಟಗಳಲ್ಲಿ ಮೌಖಿಕವಾಗಿ ಹರಿದಾಡಿದ ಪರಂಪರೆಯ ಕತೆಗಳು ಮಕ್ಕಳನ್ನು ತಲುಪುವಾಗ ಅನುಭವಿಸಿದ ಸ್ವಾತಂತ್ರ್ಯ, ಮಿತಿಗಳು ಉಂಟುಮಾಡಿದ ಪರಿಣಾಮವನ್ನು, ಅವುಗಳು ಕಾಣಿಸಿಕೊಂಡ ಸ್ವರೂಪವನ್ನು, ಮೌಖಿಕತೆಯಿಂದ ಲಿಖಿತ ರೂಪಕ್ಕೆ ಬದಲಾದಾಗ ಕಂಡುಕೊಂಡ ಸ್ವರೂಪವನ್ನು ಇಲ್ಲಿ ನೋಡಬಹುದಾಗಿದೆ. ಮೌಖಿಕ ಸ್ವರೂಪದಿಂದ ಬಂದಂತೆ ಕೆಲವು ಶಿಷ್ಟಪರಂಪರೆಯ ಲಿಖಿತ ಸಾಹಿತ್ಯದಿಂದಲು ಬಂದಿರುವುದಿದೆ. ಅವು ಲಿಖಿತವಾಗಿದ್ದರು ಮೌಖಿಕವಾಗಿಯೂ ಹರಿದಾಡಿರುವುದಿದೆ. ಜನಪದದ ಸಂಗ್ರಹ ಕಾರ್ಯದಿಂದ ಲಿಖಿತ ರೂಪ ಹೊಂದಿದ ಹಿರಿಯರ ಕತೆಗಳು ಮಕ್ಕಳ ಮುಂದೆ ಹರಿದಾಡುವಾಗ ಮೌಖಿಕವಾಗಿ ಹರಿದಾಡಿರುವುದಿದೆ. ಲಿಖಿತ ಪರಂಪರೆ ಆರಂಭವಾದ ಮೇಲೆಯೂ ಮಕ್ಕಳ ಕತೆಗಳಿಗೆ ಮೌಖಿಕ ಕತೆಗಳು ದಕ್ಕಿವೆ. ಹಾಗೆಯೇ ಮಕ್ಕಳ ಕತೆಗಳ ಮೇಲೆ ಲಿಖಿತ ಪರಂಪರೆಯ ಪರಿಣಾಮವು ಉಂಟಾಗಿರುವುದು ಇದೆ. ಇವೆಲ್ಲವುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ೩.೧ ಜನಪದದ ಮೌಖಿಕ ಪರಂಪರೆಯ ಮಕ್ಕಳ ಕತೆಗಳ ಸ್ವರೂಪ

ಜನಪದಲ್ಲಿ ಮಕ್ಕಳ ಕತೆ ಎನ್ನುವ ಪ್ರಕಾರವನ್ನು ನಿರ್ದಿಷ್ಟವಾಗಿ ಕಾಣಲು ಆಗುವುದಿಲ್ಲ. ದೊಡ್ಡವರಿಗಾಗಿ ಹೇಳುವ ಕತೆಗಳನ್ನೇ ಮಕ್ಕಳು ಆಲಿಸಿಕೊಳ್ಳುವ ಬಗೆಯು ಅಲ್ಲದೆ. ಕೆಲವು ಸಂದರ್ಭಗಳಲ್ಲಿ ಮಕ್ಕಳಿಗಾಗಿಯೂ ಪ್ರತ್ಯೇಕವಾಗಿ ಕತೆ ಹೇಳುವುದನ್ನು ಕಾಣಬಹುದಾಗಿತ್ತು. ಆದರೆ ಈ ಕತೆಗಳು ಮಕ್ಕಳಿಗಾಗಿ ಎಂದು ರಚಿತವಾದವುಗಳಲ್ಲ. ಹಿರಿಯರ ಕತೆಗಳನ್ನು ಪರಿಷ್ಕರಿಸಿ ಎಳೆಯರಿಗಾಗಿ ರಂಜನೀಯ ಗುಣಗಳನ್ನು ಬೆರಸಿ ಹೇಳಲಾಗುತ್ತಿದ್ದವುಗಳಾಗಿವೆ. ಮೌಖಿಕ ಸಂಪ್ರದಾಯದ ಕತೆಗಳಾದುದರಿಂದ ನೆನಪಿನ ಶಕ್ತಿಯನುಸಾರ, ಹೇಳುಗರ ಮನಸ್ಥಿತಿಯನ್ನು ಅವಲಂಬಿಸಿರುತ್ತಿದ್ದವು. ಕಾಲ ಕಾಲಕ್ಕೆ ಬದಲಾಗುವ ಸ್ವರೂಪನ್ನು ಈ ಕತೆಗಳು ಹೊಂದಿರುತ್ತಿದ್ದವು. ಕೆಲವು ವೇಳೆ ಅಸ್ಪಷ್ಟವಾದ ನಿರೂಪಣೆಯು ಕತೆಗೆ ತಡೆಯನ್ನುಂಟುಮಾಡಿ ಕೇಳುಗರಿಗೆ ನಿರಾಸೆಯನ್ನು ತಂದಿರುವುದು ಈ ಪ್ರಕಾರದ ಸ್ವರೂಪದಲ್ಲಿ

ಕಾಣಬಹುದಾಗಿದೆ. ಮಕ್ಕಳ ಹರಟೆ, ಚರ್ಚೆ, ಪ್ರಶ್ನೆ ಸಮಯದಲ್ಲಿ ಕುತೂಹಲಭರಿತರಾಗಿ ಕೇಳುವ ಹಂಬಲ ಪ್ರಕಟಿಸಿದಾಗ ಉತ್ತಮ ವಾತಾವರಣ ನಿರ್ಮಾಣ ಮಾಡಬೇಕಾಗಿರುವುದನ್ನು ಅರಿತ ಕಥನಕಲೆ ಇದಕ್ಕೆ ಒಳ್ಳೆಯ ಆಸರೆಯಾಗಿದೆ. ಹಳ್ಳಿಗರಲ್ಲಿಯೂ ಬಲು ಸೊಗಸಾದ ಮಾತುಗಾರಿಕೆಯ, ಕಥನಕಲೆಯ ಜನ ಇರುತ್ತಾರೆ. ಅನೇಕ ಸಲ ಇಂತಹವರ ಬಳಿ ಬಹಳಷ್ಟು ಕತೆಗಳು ತನಗೆ ತಾನೇ ಸಹಜವಾಗಿಯೇ ಸಂಗ್ರಹಗೊಳ್ಳುತ್ತಿರುತ್ತವೆ. ಈ ಬಗೆಯ ಪ್ರತಿಭೆಯಿಂದಲೇ ಕೆಲವರೆಲ್ಲ ಹೆಸರು ಮಾಡಿದವರಾಗಿರುತ್ತಾರೆ. ಅದರಲ್ಲೂ ವೃತ್ತಿಕಥನ ಕಲಾವಿದರು ಹಾಡಿನೊಂದಿಗೆ, ಸಂಭಾಷಣೆಗಳೊಂದಿಗೆ ಕಲಾತ್ಮಕವಾಗಿ ಪ್ರಸ್ತುತಿ ಪಡಿಸುವ ಕೌಶಲವನ್ನು ಹೊಂದಿರುತ್ತಾರೆ. ಅವರಿಗೆ ಅವರ ವಂಶದ, ಮನೆತನದ ಕಸುಬಾಗಿ ಇದು ಅನುಭವದಿಂದ ಆತ್ಮಗತವಾಗಿ ಬಂದಿರುತ್ತದೆ. ಆದರೆ ಈ ಬಗೆಯ ಕಥನ ಪರಂಪರೆಗಳು ಕರ್ನಾಟಕದಲ್ಲಿ ಅನೇಕ ಕಂಡುಬಂದರೂ ಅವು ಮಕ್ಕಳಿಗೆ ವಿಶೇಷವಾದ ಸಂದರ್ಭಗಳನ್ನು ಕಂಡುಕೊಂಡವುಗಳಾಗಿ ಸಿಗುವುದಿಲ್ಲ. ಹಬ್ಬ ಹರಿದಿನ, ಕೆಲವು ಮನೆತನಗಳ ಸಂಪ್ರದಾಯಗಳು, ಜಾತ್ರೆಗಳು, ದೇವರ ಆರಾಧನೆಗಳ ಭಾಗವಾಗಿ ಇಂತಹವು ನಡೆಯುತ್ತಾ ಬಂದಿರುವುದನ್ನು ಕಾಣುತ್ತೇವೆ. ಇಂತಹ ಕತೆಗಳು ಅನೇಕ ಜನಾಂಗೀಯ ಮೂಲದ ಸಂಗತಿಗಳನ್ನು, ನಾಯಕರ ಕತೆಗಳನ್ನು, ಸ್ಥಳೀಯ ಐತಿಹ್ಯ, ಪುರಾಣಗಳನ್ನು ಹೊಂದಿರುವವಾಗಿದ್ದು, ಸಾಂಸ್ಕೃತಿಕವಾದ ಮಹತ್ತ್ವವನ್ನು ಹೇಳುತ್ತಿರುತ್ತವೆ. ಭಾರತೀಯ ವಾತಾವರಣದಲ್ಲಿ ಅಲ್ಲಲ್ಲಿ ವಿಭಿನ್ನವಾಗಿ ಹಾಸು ಹೊಕ್ಕಾಗಿರುವ ಸ್ಥಳೀಯ, ಜನಾಂಗೀಯ ಸಾಂಸ್ಕೃತಿಕ ಹಿನ್ನೆಲೆಯನ್ನು ಅವು ನೀಡುವುವಾಗಿದ್ದು, ಮಹಾಭಾರತ, ರಾಮಾಯಣಗಳಂತಹ ಕಾವ್ಯಕತೆಗಳಿಂದ ವಿಭಿನ್ನವಾಗಿ ತಮ್ಮ ನೆಲೆಗಳನ್ನು ಹೇಳುತ್ತಿರುತ್ತವೆ. ಇಂತಹದರಲ್ಲಿ ಪುರುಷ ಪ್ರಾಧಾನ್ಯತೆಯ ಜೊತೆಗೆ ಸ್ತ್ರೀಧಾನ್ಯತೆಯ ಸಾಂಸ್ಕೃತಿಕ ಸಂಗತಿಗಳು ಸಿಗುತ್ತಲೇ ಇರುತ್ತವೆ. ಇವೆಲ್ಲಾ ಮಕ್ಕಳ ಲೋಕಕ್ಕೆ ಅಷ್ಟಾಗಿ ಆಪ್ತವಾದವುಗಳಲ್ಲ. ಆದರೆ ಮಕ್ಕಳು ಹಿರಿಯರೊಡನೆ ಕೂಡಿ ಇಂತಹವನ್ನು ತಮ್ಮ ಗ್ರಹಿಕೆಗನುಗುಣವಾಗಿ ಆಲಿಸುತ್ತಲೇ ಇರುತ್ತಾರೆ. ಅನೇಕ ಸಲ ಇದಕ್ಕೆ ಸಂಬಂಧಿಸಿದ ಆಚರಣೆಗಳಲ್ಲಿ ಭಾಗವಹಿಸುತ್ತಲೂ, ಎಲ್ಲವನ್ನು ತೆರೆದಗಣ್ಣಿಂದ ನೋಡುತ್ತಾ ಇರುತ್ತಾರೆ. ಇಂತಹದೆಲ್ಲ ಮಕ್ಕಳ ಮೇಲೆ ಹೇಗೆಲ್ಲ ಪರಿಣಾಮಬೀರುತ್ತದೆ ಎನ್ನುವುದೇ ಈ ಬಗೆಯ ಅಧ್ಯಯನವಾಗಿದೆ.

ರಾಮಾಯಣ, ಮಹಾಭಾರತದ ಕತೆಗಳು ಭಾರತದುದ್ದಕ್ಕೂ ಹಬ್ಬಿ ಜನರೊಡನೆ ಒಂದಾಗಿ, ಸ್ಥಳೀಯವಾಗಿಯೂ ತಮ್ಮ ಸ್ಥಿತ್ಯಂತರಗಳನ್ನು, ಪಾಠಾಂತರಗಳನ್ನು ಮಾಡಿಕೊಳ್ಳುತ್ತಾ, ಸ್ಥಳೀಯ ಪುರಾಣಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುತ್ತ, ಅನೇಕ ಬಗೆಯ ಹೊಸ ಹೊಸ ರೂಪಗಳನ್ನು ಪಡೆಯುತ್ತಾ ಹಬ್ಬಿ ಕೊಂಡಿರುವುದು ವೇದ್ಯವಾದ ಮಾತಾಗಿದೆ. ಹಾಗಾಗಿ ಜನಪದ ಕಥಾಪರಂಪರೆಯಲ್ಲಿ ಈ ಹಬ್ಬಿಹರಡಿರುವ ಮಹಾಕಾವ್ಯಕತೆಗಳದೇ ದೊಡ್ಡ ಪಾಲು. ಈ ಬಗೆಯ ಅಧ್ಯಯನ ಈಗೆಲ್ಲ ಅಲ್ಲಲ್ಲಿ ಕಾಣಿಸಿಕೊಂಡಿರುವುದನ್ನು ನೋಡುತ್ತಿದ್ದೇವೆ. ವಿರಳವಾಗಿ ಅಲ್ಲಲ್ಲಿ ಸಾಂದರ್ಭಿಕವಾಗಿ ತೀರ ಲೌಕಿಕದ ವಾತಾವರಣದ ಕತೆಗಳ ಸಂದರ್ಭಗಳು ಕಾಣಿಸುವುದಿದೆ. ಈ ಬಗೆಯ ಸಾಂಪ್ರದಾಯಿಕ ನಿಗದಿತ ಕಥನ ಪರಂಪರೆಯನ್ನು ಬಿಟ್ಟರೆ ಬಿಡಿಬಿಡಿಯಾಗಿ ಕತೆಗಳನ್ನು ಸಮಯಮಾಡಿಕೊಂಡು ಹೇಳುವ, ಕೇಳುವ ಬಗೆಗಳು ಜನರಲ್ಲಿ ಸರ್ವೆಸಾಮಾನ್ಯವಾಗಿ ಹುಟ್ಟಿಕೊಳ್ಳುತ್ತಲೇ ಇರುತ್ತವೆ. ಇವು ಆದಷ್ಟೂ ಲೌಕಿಕ ಬದುಕಿನ

ಸಂಗತಿಗಳಾಗಿಯೇ ಇರುವುದು ವಾಡಿಕೆಯಾಗಿದೆ. ಈ ಬಗೆಯ ಕತೆಗಳು ಆದಷ್ಟು ಮಾತುಗಳಲ್ಲಿ, ಗದ್ಯವೆನ್ನಬಹುದಾದ ಬಗೆಯಲ್ಲಿ ಹೊರ ಹೊಮ್ಮುವಂತಹವುಗಳಾಗಿವೆ. ಇಲ್ಲಿ ನುರಿತವರೂ ಇರಬಹುದು, ಬರಿ ಆಸಕ್ತಿಯಿಂದ ಹೇಳುವವರೂ ಆಗಿರಬಹುದು. ಅನೇಕ ಸಲ ಹೇಳುವಿಕೆಯ ಆಕರ್ಷಣೆಗಿಂತ ಕತೆಯ ವಸ್ತು, ವಿವರಗಳು ಮಹತ್ತ್ವವಾದವುಗಳಾಗಿ ಕೇಳಲು ಆಸಕ್ತಿದಾಯಕವಾಗಿರುತ್ತವೆ. ಇವು ಹಿರಿಯರೊಂದಿಗೆ ಮಕ್ಕಳನ್ನೂ ಒಟ್ಟಿಗೆ ಮುಟ್ಟುತ್ತಿರುತ್ತವೆ. ಅಲ್ಲದೇ ಹಿರಿಯರು ಮಕ್ಕಳಿಗೆ ಎಂದು ಬಿಡುವಿನ ಸಮಯ ಮಾಡಿಕೊಂಡು ಹೇಳುವಾಗ ಈ ಬಗೆಯ ಕತೆಗಳೆ ಅಲ್ಲಿ ಸಿಂಹಪಾಲಾಗಿ ಕಾಣಿಸಿಕೊಂಡಿವೆ. ಗೊಂದಲಿಗರು, ದೊಂಬಿದಾಸರು, ಅಂಟಿಗೆ ಪಿಂಟಿಗೆಯವರು, ಕರಡಿ ಕುಣಿತದವರು, ಅಲೆಮಾರಿ ಕಲಾ ಸಮುದಾಯಗಳು ಕಲೆಯನ್ನು ಹೊಟ್ಟೆಪಾಡಿಗಾಗಿಯೂ ಸಂಪ್ರದಾಯವಾಗಿಯೂ ರೂಢಿಸಿಕೊಂಡು ಮನೆ ಮನೆಗೆ ತಲುಪಿ, ಹಾಡು, ಕತೆಗಳನ್ನು ಹೇಳುವ ಮೂಲಕ ಕಥಾ ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿದ್ದು ದೊಡ್ಡ ಇತಿಹಾಸ. ಕನ್ನಡದ ಜನಪದ ಅಧ್ಯಯನ ಈ ಬಗೆಯ ವಿಶೇಷಗಳನ್ನು ಈಗ ಸಾಕಷ್ಟು ಕೈಗೆತ್ತುಕೊಂಡುದಾಗಿದೆ.

ಈ ಇಡೀ ಕಥಾಪರಂಪರೆ ಮಕ್ಕಳಿಗಾಗಿ ಎಂದು ಎಲ್ಲಿಯೂ ನಿಗದಿತವಾಗಿ ಕಾಣಿಸಿಕೊಂಡಿಲ್ಲ ಎನ್ನುವುದು ಸ್ಪಷ್ಟವಾದ ವಿಷಯವಾಗಿದೆ. ಮಕ್ಕಳು ಕೇಳುವುದೆಲ್ಲ ಹಿರಿಯರೊಡನೆ ಕಲೆತು ಕೇಳುವುದೇ ಆಗಿರುತ್ತದೆ. ಮಕ್ಕಳದೇ ಒಂದು ವಿಶಿಷ್ಟ ಜಗತ್ತು, ಅವರಿಗಾಗಿ ಪ್ರತ್ಯೇಕವಾಗಿ ತೊಡಗಬೇಕು ಎನ್ನುವುದು ಹೊಸಗಾಲದ ಪರಿಕಲ್ಪನೆಯೇ ಹೊರತು ಜನಪದದ್ದಲ್ಲ. ಹೀಗಾಗಿ ಇಲ್ಲೆಲ್ಲೂ ಮಕ್ಕಳಿಗಾಗಿ ಕಥಾಜಗತ್ತು ಕಾಣಿಸುವುದೇ ಇಲ್ಲ. ಮಕ್ಕಳಿಗೆ ಅಜ್ಜ ಅಜ್ಜಿಯರ ಮೂಲಕ, ಅಥವಾ, ಕೆಲವು ಆಸಕ್ತ ಹಿರಿಯ ಮನಸ್ಸುಗಳಿಂದ ಮಕ್ಕಳಿಗೆ ಪ್ರತ್ಯೇಕವಾದ ಸಮಯ ಮಾಡಿಕೊಂಡು ತಲುಪುವಾಗ ಈ ಬಗೆಯ ಕಥಾಜಗತ್ತೇ ಬಳಕೆಯಾಗುತ್ತ ಬಂದಿರುವುದು ನಮ್ಮ ಮುಂದಿದೆ. ಇಲ್ಲಿಯ ಈ ಕತೆಗಳು ಪರಿಷ್ಕಾರಗೊಳ್ಳುತ್ತ ಮಕ್ಕಳಿಗಾಗಿ ಆದಷ್ಟು ಸಿದ್ಧವಾಗುತ್ತಿತ್ತು. ಹೀಗೆಲ್ಲಾ ಮಾಡುವಾಗ ಈ ಮೂಲದ ವಿಸ್ತಾರವಾದ ಹರಹುವುಳ್ಳ ಕತೆಗಳು ಕುಬ್ಜವಾಗುತ್ತಿದ್ದವೆಯೆ? ಎನ್ನುವುದು ಪ್ರಶ್ನೆಯಾಗಿಕಾಣಿಸುತ್ತದೆ. ಖಂಡಿತವಾಗಿಯು ಅದು ಸತ್ಯವೆನಿಸುತ್ತದೆ. ಮಕ್ಕಳಿಗೆ ಎಲ್ಲವನ್ನೂ ಹೇಳುವಲ್ಲಿ ಹಿರಿಯರು ಮುಜುಗರವನ್ನು ಅನುಭವಿಸುತ್ತಲೇ ಇರುತ್ತಾರೆ. ಈ ಮುಜುಗರ ಹಳ್ಳಿಗಳ ಜನರಿಗೂ, ನಗರದ ಜನರಿಗೂ ನಾನಾ ಬಗೆಯಲ್ಲಿ ಅಂತರಗಳನ್ನು ತಂದೊಡ್ಡುತ್ತದೆ. ಹಳ್ಳಿಗಾಡಿನ ಮನಸ್ಸುಗಳು ತಮ್ಮದೇ ಆದ ಬಗೆಯಲ್ಲಿ ಸೂಕ್ತಗೊಳಿಸಿಕೊಂಡು ಈ ಕತೆಗಳನ್ನು ಹೊಸೆದಿರಲುಬಹುದು. ಈ ಬಗೆಯಲ್ಲಿ ಪ್ರಸ್ತುತಗೊಳಿಸಿದ ಕತೆಗಳು ಪ್ರತ್ಯೇಕವಾಗಿ ಸಂಗ್ರಹಗೊಳ್ಳುವ ಪ್ರಮೇಯ ನಮ್ಮ ನಡುವೆ ಆಗಲಿಲ್ಲವೆನ್ನಬಹುದು. ಈ ತರದ ಸಾದ್ಯತೆಗಳು ತುಂಬಾ ವಿರಳ. ಇಲ್ಲಿ ಕತೆಯು ತಾನು ಕಳೆದುಕೊಳ್ಳುವುದನ್ನು ಹೇಳುವುದರೊಂದಿಗೆ ತನ್ನ ಸಾಧ್ಯತೆಗಳನ್ನೂ ಹೇಳುತ್ತದೆ. ಮಕ್ಕಳ ವಿಭಿನ್ನ ವಯೋಗುಣದ ಮನಸ್ಥಿತಿಗೆ ಆಪ್ಯಾಯಮಾನವಾಗಿ, ಅವರ ಗ್ರಹಿಕೆಗೆ ಅಗತ್ಯವಾಗಿ ಒಂದು ಕತೆಯನ್ನು ಸಿದ್ಧಗೊಳಿಸುವ ಸಾಧ್ಯತೆಯತೆಯನ್ನು ಹೇಳುತ್ತದೆ. ಇದರಿಂದ ಮಕ್ಕಳದ್ದೇ ಆದ ಕಥಾಜಗತ್ತು ಹುಟ್ಟು ಪಡೆಯುತ್ತದೆ.

ದಾಂಪತ್ಯದ ಸರಸ, ವಿರಸಗಳಂತಹವುಗಳನ್ನು ಮಕ್ಕಳಿಗೆ ಅನಗತ್ಯವೆಂದು ಭಾವಿಸುವುದು ಸಹಜವಾಗಿದೆ. ಹಾಗೆಯೇ ಹಾಸ್ಯ ಮತ್ತು ರಂಜನೀಯ ಕತೆಗಳು ಮಕ್ಕಳಿಗೆ ಬಲು ಆಪ್ತವಾದವು

ಅನ್ನಿಸುವುದು ಸ್ವಾಭಾವಿಕ. ಪುಟಾಣಿ ಮಕ್ಕಳು, ತುಸು ಬೆಳೆದ ಮಕ್ಕಳು, ಆಗಲೆ ಕೆಲವೆಲ್ಲ ಹಿರಿಯರ ಬದುಕಿನ ಗಂಭೀರದ ಸಂಗತಿಗಳಿಗೆ ತೆರೆದುಕೊಳ್ಳುತ್ತಿರುವ ಮಕ್ಕಳು ಮುಂತಾದ ಈ ಮಕ್ಕಳ ಸಮುದಾಯದಲ್ಲಿ ಇದ್ದೇ ಇರುತ್ತವೆ. ಕತೆಯನ್ನು ಕೇಳುವಾಗ ನಿರ್ದಿಷ್ಟ ಸಮೂಹ ಕಲೆಯುವುದಿಲ್ಲ, ಎಲ್ಲ ಬಗೆಯ ವಯೋವರ್ಗವೂ ಸೇರುವುದು ಸಹಜ. ಆದುದರಿಂದ ನಗರದ, ಅದರಲ್ಲೂ ಮಧ್ಯಮ ವರ್ಗದ ಮಕ್ಕಳಿಗೂ ಹಳ್ಳಿಸೀಮೆಯ ಮಕ್ಕಳಿಗೂ ಬಹಳ ಅಂತರಗಳಿವೆ. ಹಳ್ಳಿಗಾಡಿನ ಮಕ್ಕಳು ಬದುಕಿನ ಬಹಳಷ್ಟು ಸಂಗತಿಗಳಿಗೆ ತೆರೆದುಕೊಂಡಿರುತ್ತವೆ. ಅವರು ಹಿರಿಯರೊಡನೆ ಹಲವಾರು ಬಗೆಯ ಕೆಲಸದ, ಮನೆತನದ ಸಾಂಪ್ರದಾಯಿಕ ಸಂದರ್ಭಗಳಲ್ಲಿ ಪಾಲ್ಗೊಳ್ಳುತ್ತಾ ಅನಿವಾರ್ಯವಾಗಿಯೂ, ಅಗತ್ಯವಾಗಿಯು ಎಷ್ಟೋ ಸಂಗತಿಗಳಿಗೆ ಕಣ್ಣು ಕಿವಿಗಳಾಗುತ್ತಲೇ ಇರುತ್ತಾರೆ. ಇದು ನಗರದ ಮಕ್ಕಳಿಗೆ ಲಭ್ಯವಾಗುವುದಿಲ್ಲ. ಇಲ್ಲಿ ಅನೇಕ ಬಗೆಯ ನಿರ್ಬಂಧಗಳನ್ನು ಕಾಣುತ್ತ, ಮಕ್ಕಳನ್ನು ಆದಷ್ಟೂ ಓದು, ಕ್ರೀಡೆಗೆ ಅನುವುಮಾಡಿಕೊಡುವಂತಹ ಸಂದರ್ಭಗಳಿರುತ್ತವೆ. ಹಾಗಾಗಿ ಹಳ್ಳಿಯ ಮಕ್ಕಳು ಎಷ್ಟೋ ಸಂಗತಿಗಳಿಗೆ ಯಾವ ಮುಜುಗರವಿಲ್ಲದೆ ತೆರೆದುಕೊಂಡವರಾಗಿರುತ್ತಾರೆ. ಇದು ಅವರ ಕಥಾಜಗತ್ತಿಗೂ ಅನ್ವಯಿಸುವ ಮಾತಾಗಿದೆ. ಕತೆ ಹಿರಿಯರಿಂದ ಅವರಿಗೆ ತಲುಪುವಲ್ಲಿಯೂ, ಅವು ಮಕ್ಕಳೊಳಗೆ ಅಡ್ಡಾಡುತ್ತಿರುವ ಸಂಗತಿಗಳಾಗಿಯೂ ಈ ಬಗೆಯ ಮುಕ್ತತೆಯನ್ನು ಹೊಂದಿರುತ್ತವೆ. ಅನೇಕ ಸಲ ಲೈಂಗಿಕ ಸಂಗತಿಗಳು ಅತಿರಂಜಿತವಾಗಿ ಇಲ್ಲೆಲ್ಲ ಕಾಣಿಸಿಕೊಂಡು ಹೆಚ್ಚು ಪ್ರಚಾರತೆ ಪಡೆಯುತ್ತಿರುತ್ತವೆ. ಆದರೆ ಈ ಬಗೆಯ ಜನಪದ ಕಥಾ ಪರಂಪರೆಯಲ್ಲಿ ಮಕ್ಕಳಿಗೆ ಆಪ್ತವಾದ, ಬಹು ಯೋಗ್ಯವೆನಿಸುವ ಅನೇಕ ಕತೆಗಳು ಇರಬಲ್ಲವು ಎನ್ನುವುದು ಮತ್ತೊಂದು ಸಂಗತಿ. ಆನಂದ ಪಾಟೀಲರು ತಮ್ಮ 'ಮಕ್ಕಳ ಸಾಹಿತ್ಯ ಓದು, ಒಲವು' ಪತ್ರಿಕೆಯ ೪ನೆಯ ಸಂಚಿಕೆಯಲ್ಲಿ ಈ ಕುರಿತು ವಿಷದವಾಗಿ ಚರ್ಚಿಸಿದ್ದು, ಈ ಬಗೆಯ ಹಲವು ಸೊಗಸಾದ ಕತೆಗಳು ಕಾಣಿಸಿಕೊಳ್ಳುವುದನ್ನು ಹೇಳುತ್ತಾರೆ. ಇದು ಜನಪದರದೇ ಆದ ಮಕ್ಕಳ ಲೋಕ. ಈ ಕುರಿತು ವಿವರವಾದ ಸಂಗ್ರಹಗಳು, ಪ್ರತ್ಯೇಕವಾದ ಸಂಗ್ರಹಗಳು ಬರಬೇಕಾಗಿದೆ.

ಮೌಖಿಕ ಪರಂಪರೆ ಎನ್ನುವಾಗ ಕೇವಲ ಹಳ್ಳಿಗಾಡಿನ, ಬುಡಕಟ್ಟು ಜನಾಂಗದ ಜನಪದವನ್ನು ಮಾತ್ರ ಪರಿಗಣಿಸುವುದಲ್ಲ. ಭಾರತದಲ್ಲಿ ಅತ್ಯಂತ ಶಿಷ್ಟ ಎಂದೆನಿಸಿಕೊಳ್ಳುವ ವೇದ ಸಾಹಿತ್ಯವೂ, ನಾನಾ ಬಗೆಯ ಮಂತ್ರ, ತಂತ್ರ, ತಾತ್ವಿಕ ಜಿಜ್ಞಾಸೆಗಳೂ ಮೌಖಿಕವಾಗಿಯೇ ಬಂದವುಗಳಾಗಿವೆ. ಇವು ನೀತಿಯ ಸಲುವಾಗಿಯೋ, ಬಾಯಿಪಾಠದ ಶಿಕ್ಷಣದ ಭಾಗವಾಗಿಯೋ ಕಾಣಿಸಿಕೊಂಡಿವೆ. ಹೀಗಾಗಿ ಈ ಶಿಷ್ಟ ಬಗೆಯದು ಕೂಡ ಮಕ್ಕಳಿಗಾಗಿ ಎಂದು ಬಂದುದು ಒಂದು ರೀತಿಯ ಹರಿವು. ಇಲ್ಲಿ ರಾಮಾಯಣ, ಮಹಾಭಾರತದಂತಹ ಕತೆಗಳು, ಅಲ್ಲಿನ ನಾನಾ ಬಗೆಯ ಪ್ರಸಂಗಗಳು, ಪುರಾಣದ ಅನೇಕ ಬಾಲಕರ ಸಾಹಸಗಾಥೆಗಳು, ಪಂಚತಂತ್ರದ ಕಥಾ ಬಗೆಗಳು, ಇವುಗಳೊಟ್ಟಿಗೆ ಐತಿಹಾಸಿಕ ಅನೇಕ ಸಾಹಸಿಗಳ ಕತೆಗಳನ್ನೂ ಇಲ್ಲಿ ಪರಿಗಣಿಸಬಹುದಾಗಿದೆ. ಮಕ್ಕಳಿಗೆ ಇವೆಲ್ಲ ಹರಿದು ಬಂದಿರುವುದೆ ಮೌಖಿಕ ಪರಂಪರೆಯಿಂದಾಗಿದೆ. ಮಕ್ಕಳಿಗಾಗಿ ಎಂದು ಮುದ್ರಣದಲ್ಲಿ, ಬರಹದಲ್ಲಿ ಕಾಣಿಸಿಕೊಳ್ಳುವಾಗ ಈ ಬಗೆಯ ಪರಂಪರೆಯೆ ಹಿನ್ನೆಲೆಯಾಗಿ ನಿಂತು ಬೆಳೆದು ಬಂದಿದೆ. ಈ ಬಗೆಯ ಪರಂಪರೆ ಆದಷ್ಟೂ ಮಕ್ಕಳನ್ನು ಉದ್ದೇಶಿಸಿ, ನಿಗದಿತ ಉದ್ದೇಶಕ್ಕಾಗಿ ತುಡಿದುದನ್ನು ಕಾಣುತ್ತದೆ. ಜನಪದರ ಕತೆಗಳಿಂದ ಬೇರೆಯಾಗಿ ಇವು

ನಿಲ್ಲುವುದೇ ಈ ಕಾರಣಕ್ಕಾಗಿ. ಇಲ್ಲಿ ಮನುಷ್ಯನ ಸಾಮಾನ್ಯ ಬದುಕು, ಲೌಕಿಕ ಬದುಕು ಮರೆಗೆ ಸರಿದು, ಆದರ್ಶಗಳೇ ಮುನ್ನೆಲೆಯಾಗಿ ನಿಲ್ಲುವುದು ಸರ್ವೇಸಾಮಾನ್ಯ. ಹಾಗೆ ನೋಡಿದರೆ ಪಂಚತಂತ್ರದಂತಹ ತೀರ ವ್ಯವಹಾರಿಕ ಕತೆಗಳೂ ಕೂಡ ನೀತಿಕತೆಗಳೆಂದು ನಮ್ಮಲ್ಲಿ ಹೆಚ್ಚು ಹೆಚ್ಚು ಪ್ರಚಾರವಾಗಿರುವುದನ್ನು ನೋಡುತ್ತೇವೆ. ಆದರೆ ನಗರದ ಕತೆಗಳು ಜನಪದೀಯರಲ್ಲಿ ಒಂದು ರೀತಿಯ ಶಿಸ್ತನ್ನು ಬಯಸಿ, ಮಕ್ಕಳಿಗೆ ಹೇಳುವಾಗ ಕೆಲವನ್ನು ತೇಲಿಸಿ, ಹೊಸದನ್ನು ನಾಗರಿಕತೆಗಾಗಿ ಸೇರಿಸಿ ಹೇಳಿರುವುದನ್ನು ಕಾಣುತ್ತೇವೆ. ಇದರಿಂದಾಗಿ ಜನಪದದ ಕತೆಗಳು ಶಿಷ್ಟತೆಯನ್ನು ಕಾಯ್ದುಕೊಂಡು ಮಕ್ಕಳೊಂದಿಗೆ ಕಾಣಿಸಿಕೊಂಡು ಮಡಿವಂತಿಕೆಯನ್ನು ಅನುಭವಿಸಿವೆ. ನಾಗರಿಕ ವರ್ಗದ ತಯಾರಿಯ ಕಾರ್ಯದಲ್ಲಿಯೂ ಇವು ಸಹಕಾರಿಯಾಗಿವೆ. ಇದರಿಂದಾಗಿ ಜನಪದ ಕತೆಗಳ ವ್ಯಾಪ್ತಿಯು ಸಂಕುಚಿತತೆಯನ್ನು ಅನುಭವಿಸಿ ಬೆಳೆದಿದೆ. ಹಳ್ಳಗಾಡಿನಲ್ಲಿ ತೆರೆದುಕೊಂಡಂತೆ ನಗರ ಸಂಸ್ಕೃತಿಯಲ್ಲಿ ತೆರೆದುಕೊಳ್ಳುವಾಗ ಸಂಕ್ಷಿಪ್ತಗೊಂಡು ಬಂದುದರಿಂದ ಇದು ಕೆಲವು ಕಾಲ ಉಪದೇಶಿಸುವ, ಮಂತ್ರಪಠಿಸುವ, ನೀತಿದಾರಿಯಲ್ಲಿ ಮಕ್ಕಳನ್ನು ನಡೆಯುವಂತೆ ಮಾಡುವ ಕೆಲಸದಲ್ಲಿಯು ನೆರವಾಗಿದೆ.

## ೩.೨ ಮೌಖಿಕ ಕತೆಗಳ ವ್ಯಾಪ್ತಿ ವಸ್ತುವಿನ ಹರವು, ಮಿತಿಗಳು

ಮೌಖಿಕ ಕಥಾ ಪರಂಪರೆಯ ವ್ಯಾಪ್ತಿಯು ಮೂಲವಾಗಿ ಜನಪದದಲ್ಲಿಂದ ಬಂದದ್ದಾಗಿದೆ. ಅದು ಭಾರತೀಯ ಪರಂಪರೆಯಲ್ಲೆಲ್ಲ ಶಿಷ್ಟಬಗೆಯಲ್ಲೂ ಹರಡಿರುವುದು ಮೊದಲೇ ಚರ್ಚಿಸಿದಂತೆ ಗೋಚರಿಸುತ್ತದೆ. ಈಗಾಗಲೇ ಸ್ಪಷ್ಟಪಡಿಸಿರುವಂತೆ ಮಕ್ಕಳ ಕತೆಗಳು ಪ್ರತ್ಯೇಕವಾದ ಅಸ್ತಿತ್ವವನ್ನು ಗುರ್ತಿಸಿಕೊಂಡು ಬಂದುದು ಜನಪದದಲ್ಲಿ ತೀರ ವಿರಳವಾಗಿಕಾಣುತ್ತದೆ. ಅಜ್ಜಿಕತೆಗಳಲ್ಲಿ ಈ ಲಕ್ಷಣವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆಯಾದರೂ ಅವು ಅಜ್ಜಿಯ ಬಾಯಲ್ಲಿ, ಅಥವಾ ಉಳಿದ ಹಿರಿಯರ ಬಾಯಲ್ಲಿ ಅಳವಡಿಸಿಕೊಂಡು ಬಂದವುಗಳಾಗಿರುತ್ತವೆ ಅಷ್ಟೆ. ಹಿರಿಯರಿಗಾಗಿನ ಕತೆಗಳಲ್ಲಿ ಇದ್ದ ತಂತ್ರಗಾರಿಕೆಯೇ ಮಕ್ಕಳ ಕತೆಗಳಲ್ಲು ಹಬ್ಬಿಕೊಂಡಿರುವುದನ್ನು ನೋಡುತ್ತೇವೆ. ಕತೆ ಹೇಳುವಾಗ ಮಕ್ಕಳಿಗೆ ಅನುಗುಣವಾಗಿ ಅನ್ವಯಿಸಿಕೊಂಡು ಹೇಳುವ ಬಗೆಗಳು ಕೆಲವು ಕಡೆ ಇರುತ್ತವೆ. ಹೀಗೆ ಪ್ರತ್ಯೇಕವಾಗಿ ಮಕ್ಕಳಿಗೇ ಅಂತ ತೊಡಗಿಸಿಕೊಳ್ಳದ ಹವ್ಯಾಸಿ ಕತೆಗಾರರಾಗಲಿ, ವೃತ್ತಿಕತೆಗಾರರಾಗಲಿ ಮಕ್ಕಳಿಗೇ ವಿಶೇಷವಾಗುವ ಕತೆಗಳನ್ನು ಪ್ರಯೋಗಿಸಿದುದು ಕಾಣಿಸುವುದಿಲ್ಲ.

ಜನಪದರ ಕಥಾಲೋಕ ಒಂದು ಬಗೆಯದಾದರೆ, ಶಿಷ್ಟ ಪರಂಪರೆಯಿಂದ ಬಂದ ಮೌಖಿಕ ಲೋಕ ಇನ್ನೊಂದು ಬಗೆಯದಾಗಿ ಕಾಣಿಸಿಕೊಳ್ಳುತ್ತದೆ. ಮಕ್ಕಳಿಗೆ ತಲುಪಿಸಿದ ಕತೆಗಳು ಆದರ್ಶದ ಬಾಲ್ಯಗಳನ್ನು ಆದಷ್ಟೂ ಮುಂದಿಟ್ಟಿವೆ. ಇವುಗಳ ರಚನೆ ಜನಪದಗಳಿಗಿಂತ ಖಂಡಿತವಾಗಿಯು ಬೇರೆಯಾದುದು. ಇವು ಕೂಡ ಕೇವಲ ಮಕ್ಕಳಿಗಾಗಿ ಎಂದಿರದೆ ಮೂಲದಲ್ಲಿ ಪುರಾಣಗಳಲ್ಲಿ, ಕಾವ್ಯಗಳಲ್ಲಿ ಇದ್ದವುಗಳು. ಇವನ್ನೇ ಅಯ್ದು ಮಕ್ಕಳಿಗಾಗಿ ತಂದಿರಿಸುದುವು ಕಾಣಸಿಗುತ್ತದೆ. ಕೃಷ್ಣನು ಬಾಲ್ಯದಲ್ಲಿ ರಾಕ್ಷಸರ ಸಂಹಾರ ಮಾಡಿದ್ದು, ಏಕಲವ್ಯನ ಭಕ್ತಿ, ದ್ರೋಣಚಾರ್ಯರ ಶಿಷ್ಯಂದಿರ ಅಸ್ತ್ರ ಪ್ರಯೋಗ ಪ್ರಸಂಗಗಳು ಮಕ್ಕಳ ಕತೆಗಳಂತೆ

ಬಂದವು. ಹೀಗೆಯೇ ಭೀಮನ ಬಾಲ್ಯದ ಸಾಹಸ ಕ್ರೀಡೆಗಳು, ಪೂತನಿಯ ವಧೆ, ಕೃಷ್ಣ ಬಲರಾಮರ ಬಾಲ್ಯದಕತೆ, ಲವ ಕುಶರ ಕಾಳಗಗಳಲ್ಲಿ ಬರುವ ಬಾಲ್ಯ ವಿನೋದಗಳನ್ನು, ಅಭಿಮನ್ಯುವಿನ ಪರಾಕ್ರಮ ಮುಂತಾದವು, ಧೃವ, ಮಾರ್ಕಂಡೇಯ, ಪ್ರಹ್ಲಾದ, ಉದ್ದಾಲಕ ಮುಂತಾದ ಅನೇಕ ಕಿರಿಯ ವಯೋಮಾನದ ನಾಯಕರು ಕತೆಗಳಾಗಿ ಮಕ್ಕಳಿಗೆ ಮುಟ್ಟುತ್ತ ಬಂದರು ಎನ್ನಬಹುದು. ರಾಮಾಯಣ ಮಹಾಭಾರತಗಳೇ ಪ್ರಸಂಗಗಳಾಗಿ, ಇಲ್ಲವೇ ಇಡಿಯಾಗಿ ಮಕ್ಕಳಿಗೆ ತಲುಪುವ ಬಗೆಗಳು ಪ್ರವರ್ಧಮಾನಕ್ಕೆ ಬಂದವು. ಈ ಕಾವ್ಯಗಳು ಆದರ್ಶ, ಧಾರ್ಮಿಕ ಮಹತ್ತರದವು ಎನ್ನುವ ಕಾರಣದಿಂದ ಒಬ್ಬರಿಂದೊಬ್ಬರಿಗೆ ರವಾನೆಗೊಳ್ಳುತ್ತ ಬಂದಿವೆ. ಮೌಖಿಕ ಎನ್ನುವುದರಿಂದ ಇವು ಹೇಗೆಲ್ಲ ನಡೆದು ಬಂದವು ಎನ್ನುವುದನ್ನು ನಿಖರವಾಗಿ ಹೇಳಲಾಗುವುದಿಲ್ಲ. ಇವು ಶಿಷ್ಟ ಸಮುದಾಯದ ಮಕ್ಕಳ ಲೋಕದಲ್ಲಿ ಮಾತ್ರವೇ ಹೆಚ್ಚು ಪ್ರಚಾರವಾಗಿ ಬಂದವೇ? ಹಳ್ಳಿಗಾಡಿನ ಮಕ್ಕಳಿಗೂ ವಿಸ್ತರಿಸಿದವೆ ಎಂದು ಹೇಳಲು ನಿಖರವಾದ ದಾಖಲೆಗಳು ಸಿಗುವುದಿಲ್ಲ. ಜನಪದದ ಪಾಠಾಂತರಗಳಾಗಿ ಮಹಾಭಾರತದ, ರಾಮಾಯಣದ ಪ್ರಸಂಗಗಳು ಬಂದಿವೆ ಎನ್ನುವುದನ್ನು ನಾವು ಗುರುಕುಲ ಶಿಕ್ಷಣದಲ್ಲಿಯೂ ಕಾಣುತ್ತೇವೆ. ಅವು ಮಕ್ಕಳಿಗೆ ಮೌಖಿಕವಾಗಿ ತಲುಪುತ್ತ ಬಂದಿವೆ. ಇಂದು ಲಿಖಿತವಾಗಿ, ಮುದ್ರಣದಲ್ಲಿ ಲಭ್ಯವಾಗುತ್ತಿರುವ ಈ ಬಗೆಯ ಬರಹಗಳನ್ನು ನೋಡಿದಾಗ ಈ ರೀತಿಯಾಗಿ ಊಹಿಸಿಕೊಳ್ಳಬಹುದು. ಆದರೆ ಶಿಕ್ಷಣದ ಹಂಗಿಲ್ಲದೆ ಬೆಳೆದ ಗ್ರಾಮೀಣ ಪರಿಸರದ ಮಕ್ಕಳಿಗೆ ಜನಪದದ, ಹಳ್ಳಿಗಾಡಿನ ಸಹಜವಾದ ಪರಂಪರೆಯಿಂದ ಬೇರೆಯಾಗಿಯೆ ಕಾಣುತ್ತದೆ. ಧೈರ್ಯ, ಸಾಹಸ, ಎಳೆಯದರಲ್ಲಿಯೇ ಅಧ್ಯಾತ್ಮದ ಹಂಬಲ, ಲೀಲಾ ಪ್ರಸಂಗಗಳು ಇವೆಲ್ಲಾ ಬೇದವಿಲ್ಲದೆ ಕಂಡುಬರುತ್ತವೆ. ಸತ್ಯಕಾಮ, ಜಾಬಾಲಿಯಂತಹ ಪ್ರಸಂಗಗಳು, ಏಕಲವ್ಯನ ಕತೆಗಳಂತಹವು ಅಂದಿನ ಸಾಮಾಜಿಕ ವ್ಯವಸ್ಥೆಯ ತಾರತಮ್ಯಗಳಿಗೆ ಕನ್ನಡಿ ಹಿಡಿಯುತ್ತಲೂ ಕತೆಗಳಾಗಿ ಹರಿದಿರುವುದನ್ನು ನೋಡುತ್ತೇವೆ.

ನಮ್ಮ ಸಮಾಜದ ಸಾರ್ವಜನಿಕವಾದ, ಬಹುಜನಕ್ಕೆ ತಲುಪುತ್ತಿದ್ದ ಕಲಾಪ್ರಕಾರಗಳಲ್ಲಿಯೂ ಈ ಬಗೆಯ ತಾರತಮ್ಯಗಳು ಇದ್ದೇ ಇವೆ. ಹರಿಕತೆ, ಶಿವಕತೆ, ಯಕ್ಷಗಾನದಂತಹವುದು ಆದಷ್ಟೂ ಶಿಷ್ಟ ಸಂಸ್ಕೃತಿಯ ಸಂಗತಿಗಳನ್ನೇ ಅವಲಂಭಿಸಿಕೊಂಡು ಜನರ ನಡುವೆ ಹರಿದಾಡಿವೆ. ಇವು ರಾಮಾಯಣ, ಮಹಾಭಾರತ, ಮುಖ್ಯಧಾರೆಯ ಪುರಾಣದ ಪ್ರಸಂಗಗಳನ್ನೆ ತಮ್ಮ ವಸ್ತುಗಳನ್ನಾಗಿ ಕಂಡುಕೊಳ್ಳುತ್ತಿದ್ದುನ್ನು ಕಾಣುತ್ತೇವೆ. ಇವೆಲ್ಲ ಜನಪದರ ಕಥಾಲೋಕದಿಂದ, ಅಲ್ಲಲ್ಲಿನ ಸ್ಥಳ ಪುರಾಣಗಳಿಂದ, ಸ್ಥಳೀಯ ನಾಯಕರ ಕತೆಗಳಿಂದ ಬೇರೆಯಾಗಿಯೆ ಇದ್ದಂತಹವು. ಇವು ಕೂಡ ಒಟ್ಟು ಸಮುದಾಯವನ್ನು ತಲುಪುತ್ತಾ ಮಕ್ಕಳನ್ನೂ ಸೇರಿಸಿಕೊಂಡಂತೆಯೆ ದೊರೆತಿವೆ.

ನಮ್ಮ ಬಯಲಾಟ ಪರಂಪರೆಗಳೂ ಕೂಡ ಹೀಗೆಯೆ ನೋಡಬೇಕಾದಂತಹವು ಎನಿಸುತ್ತದೆ. ಸಾರಾಸಗಟಾಗಿ ಜನಪದ ಎಂದು ನೋಡುವುದಲ್ಲ. ದೊಡ್ಡಾಟಗಳು ಉತ್ತರ ಕರ್ನಾಟಕದಲ್ಲಿ ಅವಲಂಬಿಸಿದುದು ರಾಮಾಯಣ, ವಿಶೇಷವಾಗಿ ಮಹಭಾರತದ ಕತೆಗಳನ್ನು, ಜನಪದರ ಕಥಾಹಂದರಗಳನ್ನಲ್ಲ. ಶ್ರಿಕೃಷ್ಣ ಪಾರಿಜಾತದಂತಹ ಅತ್ಯಂತ ಪ್ರಚಾರವಾದ, ಯಶಸ್ವಿ ರಂಗ ಪರಂಪರೆ ಕೂಡ ಶಿಷ್ಟ ಕಥಾ ಪರಂಪರೆಯನ್ನು ಮೂಲವಾಗಿ ಇರಿಸಿಕೊಂಡುಬಂದಿದೆ. ಅವನ್ನು ಬಿಟ್ಟರೆ ಶಿವಭಕ್ತರ ಕತೆಗಳು ಸಣ್ಣಾಟಗಳಾಗಿ ಕಾಣಿಸಿಕೊಂಡವು. ಉಳಿದಂತೆ ಸಂಗ್ಯಾಬಾಳ್ಯಾ, ಕಡ್ಲಿಮಟ್ಟಿ ಕಾಶಿಬಾಯಿಯಂತಹ ತೀರ

ಲೌಕಿಕವಾದ, ಕಾಮಕೇಂದ್ರಿತವಾದ ಪ್ರಸಂಗಗಳು. ಇವನ್ನೆಲ್ಲ ನಮ್ಮ ಮಕ್ಕಳೂ ಕೂಡಹಿರಿಯರೊಂದಿಗೆ ನೋಡುತ್ತಲೆ ಬಂದಿದ್ದಾರೆ. ವಿಕ್ರಮಬೇತಾಳ ಕತೆಗಳು, ಬತ್ತೀಸಪುತ್ಥಳಕತೆ, ಕಥಾಸರಿತ್ ಸಾಗರದಲ್ಲಿ ಸಂಗ್ರಹಿತವಾಗಿರುವಂತಹ ಕತೆಗಳು ತಮ್ಮದೇ ಆದ ಜನಪದ ಮೂಲದಿಂದ ರೂಪುಗೊಂಡ ಬಗೆಗಳನ್ನು ಹೇಳುತ್ತವೆ. ಇವು ಬರಹಕ್ಕೆ ಇಳಿಯುವುದಕ್ಕೆ ಮೂಲದಲ್ಲಿ ಮೌಖಿಕ ಸಂಪ್ರದಾಯದಲ್ಲಿ ಇದ್ದವುಗಳಾಗಿವೆ. ಇಂತಹ ಕತೆಗಳ ದೊಡ್ಡದೊಂದು ಬಂಡವಾಳವೆ ನಮ್ಮ ನಡುವೆ ಆವರಿಸಿಕೊಂಡಿದೆ. ಮಕ್ಕಳ ಕತೆಗಳ ತುಂಬೆಲ್ಲಾ ಇಂತಹದೇ ಸರಕು ಆವರಿಸಿಕೊಂಡಿದೆ. ಇವು ನಮ್ಮ ಪುರಾಣ, ಮಹಾಕಾವ್ಯಗಳಿಂದ, ಅಧ್ಯಾತ್ಮ ಪರಂಪರೆಯಿಂದ ಬೇರೆಯಾಗಿ ಎಷ್ಟೋ ಬದುಕಿನ ಮುಖಗಳನ್ನು ಮುಂದಿಡುತ್ತ ಹಬ್ಬಿಕೊಂಡಂತಹವು ಸಹ ಸಿಗುತ್ತವೆ. ಇಲ್ಲಿನ ಬದುಕಿನ ಸಂಗತಿಗಳು, ಜೀವನ ಮೌಲ್ಯಗಳು, ಜೀವನದ ಹಂಚಿಕೆಗಳು, ಜಾಣತನಗಳು, ವ್ಯಾವಹಾರಿಕ ಲೆಕ್ಕಗಳು ಸಾಮಾಜಿಕ ಬದುಕಿನ ಉಪಕಾರಗಳು, ಕೃತಜ್ಞತೆಯ ಹೇಳುವ ಪ್ರಶಂಸೆಗಳು ತಮ್ಮದೇ ಆದ ಬಗೆಯಲ್ಲಿ ವಿಸ್ತಾರವಾಗಿವೆ. ಇವೆಲ್ಲವು ಚಂದಮಾಮದಂತಹ ಪತ್ರಿಕೆಯ ಮೂಲಕ ಸಂಗ್ರಹವಾಗಿ ರೋಚಕವಾಗಿ, ಕುತೂಹಲದ ವಸ್ತುವಾಗಿ ಪ್ರಚಾರವಾಗಿದೆ ಎಂಬುದು ನಮಗೆಲ್ಲ ಹೆಚ್ಚಾಗಿ ಗೊತ್ತಿದೆ. ಆದರೆ ಇಂತಹದೊಂದು ವಿಸ್ತಾರವಾದ ಪರಂಪರೆಯು ನಮ್ಮನಡುವೆ ಮೌಖಿಕವಾಗಿ ಕಾಣಿಸಿಕೊಂಡಿತ್ತು, ನಂತರ ಸಂಪ್ರದಾಯವಾಗಿ ಸಂಸ್ಕೃತಿಯ ಭಾಗವೂ ಆಗಿ ಹರಿದು ಬಂದಿದೆ ಎನ್ನುವುದರ ಅರಿವು ಅಗತ್ಯವಾಗಿ ಆಗಬೇಕಿದೆ. ಹಳ್ಳಿಗಾಡಿನಲ್ಲಿ ಅಜ್ಜಿಯಂತಹ ಹಿರಿಯರಿಂದ ಹರಿದು ಬಂದ ಕತೆಗಳು, ಶಿಷ್ಟಪರಂಪರೆಯಿಂದ ಹರಿದು ಬಂದ ಕತೆಗಳು, ದೇಶದುದ್ದಕ್ಕೂ ಹರಡಿ ಬರಹಕ್ಕೂ ಸೇರಿ, ಮತ್ತೆ ಮತ್ತೆ ಜನರ ನಡುವೆ ಹರಿದು ಬಂದಿರುವ ಕಥಾ ಬಗೆಗಳು ನಾನಾ ಬಗೆಯ ವಸ್ತುಗಳ ವಿಸ್ತಾರವನ್ನು, ಜನಪದದ ಕತೆಗಳ ವ್ಯಾಪ್ತಿಯನ್ನು ಹೇಳುತ್ತವೆ.

ಇವುಗಳ ಬಗೆಗೆ ಧ್ವನಿಮುದ್ರಿತ ದಾಖಲೆಗಳನ್ನು ಒದಗಿಸುವುದು ಕಷ್ಟದ ಕೆಲಸ. ಅಂತಹ ಯಾವ ವ್ಯವಸ್ಥೆಯೂ ನಮ್ಮ ನಡುವಿಲ್ಲ. ಜನಪದ ಅಧ್ಯಯನ ವಿಶ್ವವಿದ್ಯಾಲಯಗಳಲ್ಲಿ ನಡೆಯುತ್ತ ಬಂದಿರುವಾಗಲೂ ಪಠ್ಯಕ್ಕೆ ಸೀಮಿತವಾಗಿ, ಬರವಣಿಗೆಗೆ, ಮುದ್ರಣಕ್ಕೆ ತಂದು ಕೊಳ್ಳುವ ಉದ್ದೇಶದಿಂದಲೇ ಸಂಗ್ರಹಗಳನ್ನು, ಸಾಧ್ಯವಾದಲ್ಲೆಲ್ಲ ಧ್ವನಿಮುದ್ರಣಗಳನ್ನು ಮಾಡಿಕೊಂಡಿರುವುದು ಕಂಡುಬರುತ್ತದೆ. ಹೀಗೆ ಧ್ವನಿಮುದ್ರಣ ಮಾಡಿಕೊಳ್ಳುವಾಗ ಆ ಸಂದರ್ಭಗಳನ್ನು ಇರುವ ಹಾಗೆಯೇ ಹಿಡಿದಿಡುವ ಕಾರ್ಯವು ನಮ್ಮ ನಡುವೆ ಅಷ್ಟು ಮಹತ್ತ ದ್ದಾಗಿ ನಡೆಯಲಿಲ್ಲ. ಸಂಗ್ರಹಿತ ಕತೆಗಳು ಅನೇಕ ಸಲ ಆಡುಭಾಷೆಯ ಸೊಗಡಿನೊಂದಿಗೆ ಬರಹಕ್ಕೆ ತಂದುಕೊಂಡುದಾಗಿದೆ. ಆಗಲೂ ಪಠ್ಯಕ್ಕೆ ಹೆಚ್ಚು ಮಹತ್ತ್ವವನ್ನು ನೀಡಿ, ಜೊತೆಗೆ ಹೇಳುಗನ ಶೈಲಿ, ಅಲ್ಲಲ್ಲಿಯ ಭಾಷೆಯ ವೈವಿಧ್ಯಗಳನ್ನು ಪರಿಷ್ಕರಿಸಿ ಹಿಡಿದಿಡುವ ಕೆಲಸ ನಡೆದಿರುವುದಿದೆ. ಕಾವ್ಯದ ವಿಷಯದಲ್ಲಿ ಇದು ಬಹಳವಾಗಿಯೇ ನಡೆದಿದೆ. ಕಥನ ಕಾವ್ಯಗಳು ಹೀಗೆ ಸಂಗ್ರಹವಾದುದೆ ಜಾಸ್ತಿ ಸಿಗುತ್ತದೆ. ಆದರೆ ಮಕ್ಕಳಿಗೆ ವಿಶೇಷವಾಗಿ ಸಂಭವಿಸಿದ ಸಂದರ್ಭಗಳನ್ನು ಇಲ್ಲೆಲ್ಲಿಯೂ ಗಮನಿಸಿ ಸಂಗ್ರಹಿಸಿರುವುದಿಲ್ಲ. ಕೆಲವೇ ಕೆಲವು ಕವಿತೆಯ ಸಂಗ್ರಹಗಳು ಬಂದಿದ್ದರೂ ಅವು ಬರಹಕ್ಕೆ ತಂದುಕೊಂಡು ಮುದ್ರಣಕ್ಕೆ ಇಳಿದಿವೆ. ಮಕ್ಕಳಿಗಾಗಿರುವ ಈ ಬಗೆಯ ಮೂಲದ ವಾಕ್‌ಪರಂಪರೆಯನ್ನು ಇದ್ದ ಹಾಗೆಯೇ ಹಿಡಿದಿಟ್ಟಿರುವ ಉದಾಹರಣೆಗಳು ನಮ್ಮ ನಡುವೆ

ಕಂಡುಬರುವುದಿಲ್ಲ. ಹಾಗಾಗಿ ನಾವೆಲ್ಲ ಈ ಪರಂಪರೆಯ ಭಾಗವೇ ಆಗಿದ್ದು, ಇದನ್ನೆಲ್ಲ ಕೇಳ ತಿಳದು ಬಲ್ಲವರಾದುದರಿಂದ ಒಂದಿಷ್ಟೆಲ್ಲ ಸಂಗತಿಗಳನ್ನು ವ್ಯಕ್ತ ಪಡಿಸಬಹುದಾಗಿದೆ. ಈ ಬಗೆಯ ಕತೆಗಳು ಮಕ್ಕಳಗಾಗಿ ಎಂದು ನಮ್ಮ ಅನೇಕ ಲೇಖಕರಿಂದ ಸಂಗ್ರಹಗೊಂಡು ಬರಹಕ್ಕೆ ಬಂದಿಳದಿವೆ. ಆದರೆ ಶಿಷ್ಟರ ಸಾಹಿತ್ಯಕ್ಕಾಗಿ ನಡೆದ ಸಂಗ್ರಹ ಪ್ರಯೋಗಗಳು ಮಕ್ಕಳ ಸಾಹಿತ್ಯ ಸಂಗ್ರಹ ಕಾರ್ಯದಲ್ಲಿ ನೆರವಾಗಿರುವುದನ್ನು ನಾವು ಮರೆಯುವಂತಿಲ್ಲ. ಅವು ಪ್ರತ್ಯಕ್ಷವಾಗಿ ನೆರವಾಗದಿದ್ದರು ಪರೋಕ್ಷವಾಗಿ ತಮ್ಮ ನೆರಳನ್ನು ಇಲ್ಲಿಯು ಚೆಲ್ಲಿವೆ. ಈ ರೀತಿಯ ಪ್ರಯೋಗದ ಫಲವನ್ನು ಆದರಿಸಿಯೇ ಮಕ್ಕಳಗಾಗಿ ದುಡಿದ ಲೇಖಕರು ಸಂಗ್ರಹಕಾರ್ಯವನ್ನು ಮಾಡಿದ್ದಾರೆ ಎಂದು ತಿಳಯಬೇಕಿದೆ.

### ಮಿತಿಗಳು

ಜನಪದದ ಸಂಗ್ರಹ ಕಾರ್ಯದಲ್ಲಿ ನಿರತರಾದ ವಿಶ್ವವಿದ್ಯಾಲಯಗಳು ಸಹ ಮಕ್ಕಳ ಸಾಹಿತ್ಯದ ಕುರುಹುಗಳನ್ನು ಅರಸಿ ನಡೆದುದಿಲ್ಲ. ಕಾರಣ ಅವೆಲ್ಲವೂ ಪ್ರಬುದ್ಧರಿಗಾಗಿ ಉಳದಿರುವ ಪರಂಪರೆಯ ಅಸ್ಮಿತೆಯನ್ನು ಹುಡುಕಾಡಿವೆ. ಹಿರಿಯರ ಜನಪದ ಜಾಣ್ಮೆತನವನ್ನು, ಅದರೊಳಗಿನ ಸಂಸ್ಕೃತಿಯ ಹಿನ್ನೆಲೆಗಳನ್ನು ಕಟ್ಟಿಕೊಡುವ ಭರಾಟೆಯಲ್ಲಿ ಮಕ್ಕಳ ಲಾಲಿತ್ಯಮಯವಾದ, ಆದರ್ಶ ಪ್ರೇರಣೆಯ, ಪರಿಷ್ಕೃತಗೊಂಡ ಮಕ್ಕಳಕತೆಗಳ ಬಗೆಗೆ ಅವು ಗಮನ ಹರಿಸಿರುವುದಿಲ್ಲ. ಮಕ್ಕಳ ಜನಪದ ಲೋಕವು ಸಂಶೋಧಕರ ಕಣ್ಣಿಗೆ ಅದೃಶ್ಯವಾದಂತೆಯು, ಅಧ್ಯನಕ್ಕೆ ಇಂದಿಗೂ ಆಸಕ್ತಿ ವಸ್ತುವಾಗದೆ ಇರುವುದನ್ನು ಕಂಡಾಗ ಅದರ ದಿವ್ಯನಿರ್ಲಕ್ಷ್ಯತೆಯು ಎಷ್ಟೆಂದು ತಿಳಯಬಹುದು. ಇದು ಮಕ್ಕಳ ಕಥಾಸಾಹಿತ್ಯದ ಅಧ್ಯಯನದ ವಸ್ತುವಿನ ಕೊರತೆಗೆ ಕಾರಣವಾಗಿಯು ನಿಲ್ಲುತ್ತದೆ. ಮೌಖಿಕ ಪರಂಪರೆಯಲ್ಲಿ ಪಾಠದ ಸ್ವರೂಪದಲ್ಲಿ ಕಾಣಿಸಿಕೊಂಡ ಶಿಷ್ಠಪರಂಪರೆಯ ಭಾಗವಾಗಿ ಆರಿಸಿಕೊಂಡು ಬಂದ ಕತೆಗಳು ಕೂಡ ಇಂದು ನಮ್ಮಲ್ಲಿ ಸಂಗ್ರಹಿತವಾಗಿರದೆ ಅವು ಸಹ ಯಥಾವತ್ತು ದೊಡ್ಡವರ ಜನಪದದ ಸಾಹಿತ್ಯ ಸಂಗ್ರಹದೊಳಗೆ ಸೇರಿ ಹೋಗಿವೆ. ಇದರಿಂದಾಗಿ ಮಕ್ಕಳ ಕತೆ ಗಳೆನಿಸುವ ಜನಪದದ ಮೌಖಿಕ ಪರಂಪರೆಯು ಪ್ರತ್ಯೇಕವಾಗಿ ಕಾಣಸಿಗುವುದಿಲ್ಲ. ಜನಪದ ಪರಂಪರೆಯು ಸಹ ಪ್ರತ್ಯೇಕತೆಯಿಂದ ಮಕ್ಕಳ ಕತೆಗಳನ್ನು ಕಾಣದುದರಿಂದ ಅವುಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಲು ಸಾಧ್ಯವಾಗುತ್ತಿಲ್ಲ. ತಲೆಮಾರಿನ ಪರಂಪರೆಯ ಭಾಗವಾಗಿ ಉಳದಿರುವ ಊರಿನ ಹಿರಿಯರಂತೆ, ವೃತ್ತಿ ಕಲಾವಿದರಂತೆ ತಮ್ಮ ಮೌಖಿಕ ಕಲೆಯನ್ನು ಪ್ರಸ್ತುತಿ ಪಡಿಸಬಲ್ಲವರು ಮಕ್ಕಳ ಕತೆಗಳ ವಿಷಯದಲ್ಲಿ ದೊರೆಯುವುದಿಲ್ಲ. ಇದು ಸಹ ಮಕ್ಕಳ ಕತೆಗಳ ಸಂಗ್ರಹಿಸುವಲ್ಲಿ ತೊಡಕೆಂದು ಭಾವಿಸಬಹುದು. ಇವೆಲ್ಲವುಗಳ ಮಿತಿಯ ನಡುವೆಯು ಮಕ್ಕಳ ಜನಪದ ಪರಂಪರೆ ಉಳದು ಬಂದಿರುವುದು ಒಂದು ಸಾಧನೆಯೆ ಸರಿ.

### ೩.೩ ಲಿಖಿತ ಕತೆಗಳ ಸ್ವರೂಪ, ವ್ಯಾಪ್ತಿ, ಹರವು ಮತ್ತು ಮಿತಿಗಳು

ಮಕ್ಕಳ ಸುತ್ತಮುತ್ತಲಿನ ವಾತಾವರಣ ಬದಲಾಗತೊಡಗಿದಂತೆ ಓದಿನ ಹಂಬಲವು ಕಾಣಿಸಿಕೊಂಡು, ಶಾಲಾ ವ್ಯವಸ್ಥೆಯೂ ಉಂಟಾಗುತ್ತಾ ಓದಿನ ಸಾಮಗ್ರಿಯಾಗಿ, ಪಠ್ಯಗಳ ಅಗತ್ಯವು

ಕಾಣಿಸಿಕೊಂಡ ಮೇಲೆ ಮಕ್ಕಳಿಗಾಗಿಯೇ ಪ್ರತ್ಯೇಕವಾಗಿ ಸಾಹಿತ್ಯ ಕಾಣಿಸಿಕೊಂಡ ಇತಿಹಾಸವನ್ನು ಜಗತ್ತಿನಾದ್ಯಂತ ನಾವು ಕಾಣುತ್ತೇವೆ. ಇಂಗ್ಲೀಷಿನವರು ಈ ನಿಟ್ಟಿನಲ್ಲಿ ಬಹು ದಿನಗಳ ಹಿಂದೆಯೇ ಹೆಜ್ಜೆಯಿಟ್ಟವರು. ಅಲ್ಲಿಯು ಸಹ ಮೊದಲ ಪ್ರಯತ್ನಗಳು ಜನಪದದಿಂದ ಸ್ಫೂರ್ತಿ ಪಡೆದವುಗಳಾಗಿವೆ. ಮೊದಲಿಗೆ ಚಾಪ್ ಪುಸ್ತಕಗಳಾಗಿ ಬೀದಿಬದಿಯಲ್ಲಿ ಕಾಣಿಸಿಕೊಂಡ ಇಂತಹವು ಮುಕ್ತವಾಗಿ ಓದುಗರಿಗೆ ಲಭ್ಯವಾಗುತ್ತಾ, ಸಾಮಾನ್ಯ ಜನರಿಗೆ ಸುಲಭವಾಗಿ ಎಟುಕತೊಡಗಿದವು. ಇದರೊಂದಿಗೆ ಜನಪದ ಕತೆಗಳನ್ನು ಗ್ರಿಮ್ಸ್ ಸಹೋದರಂತಹವರು ಆಸ್ಥೆಯಿಂದ ಸಂಗ್ರಹಿಸತೊಡಗಿದರು. ಹ್ಯಾನ್ಸ್ ಕ್ರಿಶ್ಚಿಯನ್ ಆ್ಯಂಡರ್‌ಸನ್ ಅಂತಹವರು ಇವಕ್ಕೆ ಜನಪ್ರಿಯವಾದ ಸ್ವರೂಪವನ್ನು ನೀಡಿ, ಇವು ಜನರಲ್ಲಿ ಓದಿನ ಹುಚ್ಚನ್ನು ಹುಟ್ಟಿಸುವಂತೆ ಮಾಡಿದರು. ಇವುಗಳ ಪ್ರಭಾವದಲ್ಲಿಯೇ ಮಕ್ಕಳ ಕಥಾಜಗತ್ತು ಪ್ರಾರಂಭಗೊಂಡಿರುವುದನ್ನು ಕಾಣಬಹುದಾಗಿದೆ.[೧೩] ಇಂತಹ ಉದ್ದೇಶದಿಂದ ನಿರ್ದಿಷ್ಟತೆಯನ್ನು ಸೃಷ್ಟಿಸಿಕೊಂಡು ಪಠ್ಯಗಳ ಓದು ಆರಂಭವಾಯಿತು. ಮಕ್ಕಳ ಓದಿನಲ್ಲಿ ಹೊಸ ದೃಷ್ಟಿ ತಂದ ಶಿಕ್ಷಣ ತಜ್ಞ, ತತ್ವಜ್ಞ ಜಾನ್‌ಲೋಕೆ ಯು ಗ್ರಾಮೀಣದ ಕತೆಗಳು ಮಕ್ಕಳಿಗೆ ತಲುಪುವುದು ಬೇಡವೆಂದು ನಿರ್ಬಂಧಿಸಿದ್ದನು ವಿರೋಧಿಸುವ ನಿಟ್ಟಿನಲ್ಲಿ ತುಡಿದ ಜಾನ್‌ಲೋಕೆಯಂತಹ ಕವಿಗಳಿಂದ, ರೂಸೊ ಅಂತಹ ತತ್ವಜ್ಞರಿಂದ ಈ ವಾತಾವರಣ ಬದಲಾಗತೊಡಗಿತು. ಮಕ್ಕಳ ಓದು, ಅದರೊಡನೆ ಮಕ್ಕಳ ಸಾಹಿತ್ಯದ ಸೊಗಸಾದ ಬೆಳಸು ಕಾಣಿಸತೊಡಗಿತು. ವಿಕ್ಟೋರಿಯನ್, ರೋಮ್ಯಾಂಟಿಕ್ ಸಮಯ ಎನ್ನುವ ಹಂತದಲ್ಲಿಯೇ ಅಪರೂಪದ ಮಕ್ಕಳ ಕಥಾ ಸಾಹಿತ್ಯ ಕಾಣಿಸಿಕೊಂಡು ಅಚ್ಚರಿಗೊಳಿಸಿತು. ಇವತ್ತಿಗೂ ಕ್ಲಾಸಿಕ್ ಎಂದು ಅಚ್ಚರಿ ಉಳಿಸಿಕೊಂಡಿರುವ ಪೀಟರ್ ಪ್ಯಾನ್, ವಿನಿ ಪೂಹ, ಆಲೀಸ್ ಇನ್ ವಂಡರ್ ಲ್ಯಾಂಡ್, ವಿಂಡ್ ಇನ್ ದ ವಿಲ್ಲೊನಂತಹ ಹೊಸದಾದ ಫ್ಯಾಂಟಸಿಯ ಕೃತಿಗಳು ಹುಟ್ಟಿಕೊಂಡವು. ಇಂಗ್ಲಿಷ್ ನಲ್ಲಿ ಹೊಸಗಾಲದಾದ ಹೊಸ ಬೆಳಸು ಅಧಿಕವಾಗಿ ಕಾಣಿಸಿಕೊಂಡು ಒಂದು ಬಗೆಯ ಆರಂಭಿಕ ವಾತಾವರಣ ಕಾಣಿಸಿಕೊಂಡಿತು. 'ಮಕ್ಕಳ ಸಾಹಿತ್ಯದ ಸುವರ್ಣಯುಗ' ಎಂದೂ ಇದನ್ನು ಕರೆಯಲಾಯಿತು.[೧೪] ನವೋದಯದ ಕಾಲವಾಗಿ ಕನ್ನಡದ ಸಾಹಿತ್ಯ ಪರಿಸರದ ಮೇಲೆ ಈ ಸಮಯದ ಪ್ರಮುಖ ಪ್ರಭಾವವಾದರೂ ಅಲ್ಲಿನ ಮಕ್ಕಳ ಸಾಹಿತ್ಯದ ಕೃಷಿಯ ಪ್ರಭಾವ ಆಗಲಿಲ್ಲ. ನಾ. ಕಸ್ತೂರಿ ಅವರು 'ಆಲೀಸ'ಳ ಕತೆಯನ್ನು ಪಾತಾಳದಲ್ಲಿ ಪಾಪಚ್ಚಿ ಎಂದು ತಂದರು, ಇದರೊಂದಿಗೆ ಹಲವಾರು ಕೃತಿಗಳು ಕನ್ನಡಕ್ಕೆ ಬಂದಿವೆ. ಆದರೆ ಪಾಶ್ಚಾತ್ಯರ ಪ್ರಭಾವದಿಂದ ಹೊಸ ಕೃತಿಗಳ ಹುಟ್ಟು ಮಾತ್ರ ಕಾಣಿಸಲಿಲ್ಲ.

ಬ್ರಿಟೀಷರ ಪ್ರಭಾವದಿಂದ ಭಾರತದಲ್ಲಿ ಶಾಲಾವ್ಯವಸ್ಥೆ ಶುರುವಾದ ಮೇಲೆ, ಎಲ್ಲ ಮಕ್ಕಳಿಗೂ ಓದು ಲಭ್ಯವಾಗತೊಡಗಿತು. ಅದಕ್ಕಾಗಿ ಅಗತ್ಯವಾದ ಪಠ್ಯಗಳು ಸಿದ್ಧವಾಗತೊಡಗಿದವು. ಇದು ಕನ್ನಡದ ಪರಿಸರದಲ್ಲೂ ನಡೆಯಿತು. ಶಿಕ್ಷಣವು ಸಮಾಜದ ಎಲ್ಲಾ ವರ್ಗಕ್ಕೂ ಹಿಂದೆ ಲಭಿಸದಿದ್ದರೂ, ಈಗ ಎಲ್ಲರಿಗೂ ಸಿಗತೊಡಗಿತು. ಶಿಕ್ಷಣ ಮಕ್ಕಳ ಹಕ್ಕು ಎನ್ನುವ ವಾತಾವರಣ ಉಂಟಾಗತೊಡಗಿತು. ಶ್ರೇಣೀಕೃತ ಸಮಾಜದ ವಾತಾವರಣ ಮೂಡಿದಾಗ ಶಿಕ್ಷಣದಿಂದ ವಂಚಿತವಾಗಿದ್ದ ಸಮುದಾಯಗಳ ಮಕ್ಕಳಿಗೂ

---

[೧೩] ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ : ಸಂಪುಟ ೯, ಸಂ: ಬ. ಸು ಬೇವಿನಗಿಡದ, ಲೇ; ಮಕ್ಕಳ ಬರೆವಣಿಗೆಯ ಉತ್ಕರ್ಷಕಾಲ, ಆನಂದ ಪಾಟೀಲ, ಪುಟ ೫೨, ೨೦೧೫.

[೧೪] ಅದೇ ಪುಟ.

ಆಶಾದಾಯಕವಾದ ವಾತಾವರಣ ಕಾಣಿಸಿಕೊಂಡಿತು. ಶ್ರೇಣಿಕೃತ ಸಮಾಜ ಮೂಡುವುದಕ್ಕಿಂತ ಮೊದಲಾಗಲಿ, ನಂತರದಲ್ಲಾಗಲಿ ಋಷ್ಯಾಶ್ರಮಗಳಲ್ಲಿ, ವಿದ್ಯಾಕೇಂದ್ರಗಳಲ್ಲಿ ಕೆಲವು ಮಕ್ಕಳಿಗಾದರೂ ದೊರಕುತ್ತಿದ್ದ ಓದು, ಪಾಠದ ಸಾಮಗ್ರಿಯು ಬದುಕಿನ ಗಂಭೀರವಾದ ತಯಾರಿಗಾಗಿಯೆ ಹುಟ್ಟಿಕೊಂಡಂತಿತ್ತು. ಬದುಕಿಗೆ ಅಗತ್ಯವಾದ ಆದರ್ಶಗಳ ಸಿದ್ಧತೆಯೆ ಶಿಕ್ಷಣವಾಗಿತ್ತು. ಶಿಕ್ಷಣದ ವ್ಯವಸ್ಥೆಗೆ ಸಿಲುಕದೆ ಬಾಲ್ಯವನ್ನು ಸ್ವಚ್ಛಂದವಾಗಿ ಕಾಣುತ್ತಾ ಬೆಳೆದ ಉಲ್ಲಾಸದ ಮಕ್ಕಳಿಗೆ ಪ್ರತ್ಯೇಕವಾದ ಓದು ಕಾಣಿಸಿಕೊಂಡಿರಲಿಲ್ಲ. ಉಳಿದಂತೆ ಬಹು ಸಂಖ್ಯೆಯ ಮಕ್ಕಳು ತಮ್ಮ ತಮ್ಮ ಮನೆಯ ಉದ್ಯೋಗವನ್ನೆ ಹಿರಿಯರಿಂದ ಕಲಿಯುತ್ತಾ ಬದುಕನ್ನು ರೂಪಿಸಿಕೊಳ್ಳುತ್ತಿದ್ದರು. ಇದೇ ಅವರಿಗೆ ಶಿಕ್ಷಣವಾಗಿ ಕಾಣಿಸಿಕೊಳ್ಳುತಿತ್ತು. ಹಾಗೂ ಜೀವನೋಪಾಯದ ಹಾದಿಯಾಗಿಯು ಕಸುಬುಗಳನ್ನು ಹೇಳಿಕೊಡಲಾಗುತಿತ್ತು. ಬಹುಪಾಲು ಮಕ್ಕಳು ಈ ವ್ಯವಸ್ಥೆಯೊಳಗೆಯೆ ತಮ್ಮ ಬಾಲ್ಯವನ್ನು ಕಳೆಯುತ್ತಿದ್ದರು. ಆದರೆ ಇವರೆಲ್ಲರು ಶಿಕ್ಷಣದ ಭಾಗವಾಗಿಯಲ್ಲದ ಅನೌಪಚಾರಿಕವಾದ ಜನಪದದ ಪರಂಪರೆಯಿಂದ ಬಂದ ಕತೆಗಳನ್ನು ಅನುಭವಿಸುತ್ತಿದ್ದುದ್ದನ್ನು ಕಾಣಬಹುದಾಗಿದೆ. ಇವರಿಗೆ ಶಿಕ್ಷಣ ವ್ಯವಸ್ಥೆಯು ಕಡ್ಡಾಯವಾಗಿ ಕಾಣಿಸಿಕೊಂಡ ಮೇಲೆ ಹೊಸದಾದ ವಾತಾವರಣದ ಗಾಳಿಯು ಬೀಸತೊಡಗಿತು. ಇದು ಸಮಾಜವನ್ನು ಏಕರೂಪದ ಶಿಕ್ಷಣವ್ಯವಸ್ಥೆಯ ಅಡಿಯಲ್ಲಿ ಕಾಣಲು ಹಂಬಲಿಸಿತು. ಇಂತಹ ಬದಲಾದ ವಾತಾವರಣದಲ್ಲಿ ಲಿಖಿತ ಸಾಮಗ್ರಿಯೊಂದಿಗಿನ ಓದು ಶುರುವಾಯಿತು. ಅದಕ್ಕಾಗಿ ಎನ್ನುವಂತೆ ಮೌಖಿಕ ಸಾಂಪ್ರದಾಯದಿಂದ ಲಿಖಿತರೂಪದಲ್ಲಿ ಮಕ್ಕಳ ಕತೆಗಳು ಕಾಣಿಸಿಕೊಂಡವು. ಮೌಖಿಕ ರೂಪದಲ್ಲಿದ್ದ ಕತೆಗಳು ಲಿಖಿತ ಸ್ವರೂಪಕ್ಕೆ ಬದಲಾದುದ್ದು ಹತ್ತೊಂಭತ್ತನೆಯ ಶತಮಾನದಲ್ಲಿ. ಇದರೊಂದಿಗೆ ಮಕ್ಕಳ ಸಾಹಿತ್ಯದ ಕಲ್ಪನೆಯು ಚಿಗುರೊಡೆಯಿತು, ಸಾಹಿತಿಗಳ ತುಡಿತವು ಗಮನಾರ್ಹವಾಗಿ ಕಂಡುಬಂದುದು ಈ ಸಮಯದಲ್ಲಿಯೆ ಆಗಿದೆ. ಕನ್ನಡದ ಮಕ್ಕಳ ಲಿಖಿತ ಸಾಹಿತ್ಯಕ್ಕೆ ಹಾದಿಮಾಡಿ ಕೊಟ್ಟವರಲ್ಲಿ ಪಂಜೆ ಮಂಗೇಶರಾಯರು, ಕುವೆಂಪು, ರಾಜರತ್ನಂ, ದಿನಕರ ದೇಸಾಯಿ, ಉಗ್ರಾಣ ಮಂಗೇಶರಾಯರು, ಹೊಯ್ಸಳ, ಮೇವುಂಡಿ ಮಲ್ಲಾರಿ, ಕೊರಡ್ಕಲ್ ಶ್ರೀನಿವಾಸರಾಯರು, ದೇವುಡು ನರಸಿಂಹ ಶಾಸ್ತ್ರಿ, ನಾ.ಕಸ್ತೂರಿ, ಬೆಟಗೇರಿ ಕೃಷ್ಣಶರ್ಮ, ಶಿವರಾಮ ಕಾರಂತ, ಭಾರತೀಸುತರು ಮೊದಲಾದ ಅನೇಕರು. ಇವರೆಲ್ಲರು ಈಗಾಗಲೇ ಪ್ರಬುದ್ಧರ ಸಾಹಿತ್ಯವಲಯದಲ್ಲಿ ಶ್ರೇಷ್ಠಮಟ್ಟದಲ್ಲಿ ಗುರ್ತಿಸಿಕೊಂಡಿದ್ದರೂ ಮಕ್ಕಳ ಸಾಹಿತ್ಯದ ಅಗತ್ಯತೆಯನ್ನು ಅರಿತುಕೊಂಡು ಬರೆದವರಾಗಿದ್ದಾರೆ. ಇವರಲ್ಲಿ ವಿಶೇಷವಾಗಿ ಕೆಲವರು ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಗಮನಹರಿಸಿದವರೂ ಕಾಣಿಸುತ್ತಾರೆ. ಹೊಯ್ಸಳ, ಮೇವುಂಡಿ ಮಲ್ಲಾರಿ ಮೊದಲಾದವರನ್ನು ಈ ಸಾಲಿಗೆ ಸೇರಿಸಬಹುದು.

ಕನ್ನಡದ ಪ್ರಾಚೀನ ಸಾಹಿತ್ಯ, ಸಂಸ್ಕೃತದ ಸಾಹಿತ್ಯ, ಪಾಶ್ಚಾತ್ಯರ ಸಾಹಿತ್ಯದ ಅರಿವುಳ್ಳವರಾಗಿದ್ದ ಹಿರಿಯ ತಲೆಮಾರಿನ ಲೇಖಕರು ನವೋದಯವನ್ನು ಸ್ವಾಗತಿಸಿದರು. ಇದು ಮಕ್ಕಳಸಾಹಿತ್ಯದ ಬರವಣಿಗೆಗೂ ದಾರಿ ಮಾಡಿಕೊಟ್ಟಿತು. ಇಂಗ್ಲಿಷ್ ಸಾಹಿತ್ಯದ ಓದಿನ ಹಿನ್ನೆಲೆಯಿಂದ ಬಂದ ಲೇಖಕರಿಗೆ ವಿಶೇಷವಾಗಿ ನವೋದಯದ ಬದಲಾವಣೆಯ ಬಯಕೆಯುಂಟಾಯಿತು. ಪ್ರಬುದ್ಧರಿಗಾಗಿ ಸಾಹಿತ್ಯದ ವಿಸ್ತಾರವಾದ ಓದು ನಡೆಯಿತು. ಅದು ಮಕ್ಕಳ ಸಾಹಿತ್ಯಕ್ಕೂ ಪದಾರ್ಪಣೆ ಮಾಡಿತು. ಇದೇ ಸಮಯದಲ್ಲಿ

ಭಾರತದ ಶಿಕ್ಷಣವ್ಯವಸ್ಥೆಯು ತನ್ನ ಅಸ್ಥಿತ್ವದ ಬೇರುಗಳನ್ನು ಊರಲು ತವಕಿಸುತ್ತಿತ್ತು. ಶಾಲಾ ಪಠ್ಯದ ಸಲುವಾಗಿ ಮಕ್ಕಳ ಸಾಹಿತ್ಯವು ಅಗತ್ಯವಾಗಿ ಕಾಣಿಸಿಕೊಂಡಿತು. ಆದುದರಿಂದ ಲೇಖಕರು ಮಕ್ಕಳ ಕತೆಗಳಗಾಗಿ ಬರೆವಣಿಗೆ ಕಂಡುಕೊಳ್ಳಲು ಇದು ಸಕಾಲವಾಗಿ ಕಾಣಿಸಿತು. ಇಂತಹ ಆಸಕ್ತಿದಾಯಕವಾದ ತುಡಿತವೇ ಕನ್ನಡದಲ್ಲಿ ಮಕ್ಕಳಗಾಗಿ ಎಂದು ಕತೆಗಳು ಸೃಷ್ಟಿಗೊಳ್ಳಲು ಕಾರಣವಾಯಿತು[೧೫]. ನವೋದಯ ಸಾಹಿತ್ಯವು ಪ್ರಬುದ್ಧರ ಸಾಹಿತ್ಯಕ್ಕಷ್ಟೆ ಅಲ್ಲದೆ ಮಕ್ಕಳ ಸಾಹಿತ್ಯಕ್ಕೂ ಉತ್ತಮವಾದ ಬೆಳಸನ್ನು ತಂದು ಚಿಣ್ಣರ ವಿಸ್ಮಯಗಳಗೆ ಸಾಕ್ಷಿಯಾಯಿತು. ಇದು ಎಳೆಯರಿಗೆ ಹೊಸಬಗೆಯ ಲೋಕವನ್ನು ಪರಿಚಯಿಸುವ ಮೂಲಕ ಕನ್ನಡವನ್ನು ಕಟ್ಟುವ, ಬೆಳೆಸುವ, ಭಾವ ಜಾಗೃತಗೊಳಸುವ ಕೆಲಸ ಮಾಡಿತು. ಭಾಷೆಯ ಕಲಿಕೆಯು ಸಹ ಚಿಗುರೊಡೆದು ಭಾಷಾಭಿಮಾನ ಬೆಳೆಸುವ ಆಶಯವು ಗರಿಗೆದರಿತು. ನವೋದಯವು ಪ್ರಬುದ್ಧರಿಗಾಗಿ ವಿವಿಧ ಮಜಲುಗಳಲ್ಲಿ ಹರಡಿಕೊಂಡಂತೆ ಕತೆ, ಸಣ್ಣಕತೆ, ಕಾದಂಬರಿಗಳು, ಪ್ರವಾಸಕಥನಗಳು ಹುಟ್ಟಿದವು. ಈ ಬಗೆಯ ಹೊಸತು, ಕ್ರಿಯಾತ್ಮಕ ತುಡಿತ ಮಕ್ಕಳಕಥಾ ಜಗತ್ತಿನಲ್ಲಿ ಅಷ್ಟಾಗಿ ಕಾಣಿಸಿಕೊಳ್ಳಲಿಲ್ಲ.

ನವೋದಯದ ಹಿರಿಯರು ಅಲ್ಲಲ್ಲಿ ಸಾಂದರ್ಭಿಕವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ಕಾಣಿಸುತ್ತದೆ. ಪಂಜೆ ಮಂಗೇಶರಾಯರು ಬಹಳಷ್ಟು ಆಸ್ಥೆಯಿಂದ ಮಾತನಾಡಿದರು. 'ಬಾಲಸಾಹಿತ್ಯ' ಎಂದು ಪ್ರತ್ಯೇಕತೆಯಿಂದ ನೋಡಿದರು. ಅವರಂತೆ ಅನೇಕರು ಈ ನಿಟ್ಟಿನಲ್ಲಿ ತುಡಿದುದು ಇದೆ. ಭಾಷೆಯು ಸುಲಭವಾದರೆ ಕಠಿಣವಾದ ವಿಷಯಗಳನ್ನು ಸಹ ಮಕ್ಕಳು ಅರಗಿಸಿಕೊಳ್ಳಬಲ್ಲರು ಎಂಬುದನ್ನು ವಿ.ಕೃ.ಗೋಕಾಕರು ಅಭಿಪ್ರಾಯಿಸಿ, ಬಾಲಸಾಹಿತ್ಯಕ್ಕೆ ವಿವಿಧ ಸ್ತರಗಳನ್ನು ಕಟ್ಟಿಕೊಡುವ ಅಗತ್ಯವಿದೆಯೆಂದು ತಿಳಸಿ ಹೇಳದರು. ಅವರು ರೂಪಕತೆ, ಪ್ರಸಾದಗುಣ ಅವಶ್ಯವೆಂದು ವಿ.ಜಿ.ಭಟ್ಟರ ಪುಸ್ತಕದಲ್ಲಿ ವಿವರಿಸಿ ಬರೆದರು.[೧೬] ಶಿವರಾಮ ಕಾರಂತರು ಮಕ್ಕಳಗಾಗಿ ವೈವಿಧ್ಯಮಯವಾದ ವಸ್ತುಗಳನ್ನು ಮುಂದಿಟ್ಟುಕೊಂಡು ವಿಶಾಲವಾದ ದೃಷ್ಟಿಕೋನಗಳೊಂದಿಗೆ ಸ್ಥಳೀಯ ಪರಿಸರವನ್ನು ಪರಿಚಯಿಸಿ, ಸಂಸ್ಕೃತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿಕೊಟ್ಟರು. ಸ್ವತಃ ತಾವೇ ಪುತ್ತೂರಿನಲ್ಲಿ ಬಾಲವನ ನಿರ್ಮಿಸಿ, ಮಕ್ಕಳ ಒಡನಾಟದೊಂದಿಗೆ ಆಟದ ಮೂಲಕ ಪಾಠವನ್ನು ಹೇಳುವ ಪ್ರಯೋಗಗುಣಗಳನ್ನು ಕಂಡುಕೊಂಡರು. ಊಟ ಮತ್ತು ವಸತಿಯೊಂದಿಗೆ ನಡೆಯುತ್ತಿದ್ದ ಈ ಸಂಸ್ಥೆಯು ಶಿಕ್ಷಣದ ಭಾಗವಾಗಿಯೂ, ನಿಸರ್ಗರಮ್ಯತೆಯ ಜೊತೆಗೆ ಪ್ರಾಣಿಸಾಕಣಿಕೆಯು ಮಕ್ಕಳಗೆ ನೂತನವಾದ ಅನುಭವವನ್ನು ಒದಗಿಸಿತು. ರಾಜರತ್ನಂರವರು ತಮ್ಮ ಕೃತಿಗಳ ಮುನ್ನುಡಿಯಲ್ಲಿ ತಮ್ಮ ಅಭಿಪ್ರಾಯಗಳನ್ನು ಮುಂದಿಡುತ್ತಾ ಬಂದರು. ಆದರೆ ಯಾರೂ ಇಂಗ್ಲಿಷಿನಲ್ಲಿ ನಡೆದ ಹಾಗೆ ಗಮನ ಹರಿಸುವಲ್ಲಿ ತೊಡಗಲಿಲ್ಲ ಎನ್ನುವುದನ್ನು ಕಾಣುತ್ತೇವೆ. ಇವರೆಲ್ಲರ ತೊಡಗಿಸಿಕೊಳ್ಳುವಿಕೆಯು ಅವರವರು ಕಂಡುಕೊಂಡ ನೆಲೆಯಲ್ಲಿ ನಡೆದು ಬಂದಿರುವುದನ್ನು ಕಾಣುತ್ತೇವೆ. ಹಾಗಾಗಿ ವಿಭಿನ್ನವಾದ ಬಗೆಯಲ್ಲಿ ಇವರ ತೊಡಗಿಸಿಕೊಳ್ಳುವಿಕೆ ಕಾಣಿಸಿಕೊಂಡಿತು. ಆದರೆ ಇವರೆಲ್ಲರು ಪ್ರಬುದ್ಧರ ಸಾಹಿತ್ಯವನ್ನು

[೧೫] ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ : ಸಂಪುಟ ೯, ಸಂ: ಬ. ಸು ಬೇವಿನಗಿಡದ, ಲೇ; ಮಕ್ಕಳ ಬರೆವಣಿಗೆಯ ಉತ್ಕರ್ಷಕಾಲ, ಆನಂದ ಪಾಟೀಲ, ಪುಟ ೫೨ ೨೦೧೫.
[೧೬] ಅದೇ, ಪುಟ ೪೩.

ಗಂಭೀರವಾಗಿ, ಮಹತ್ತ್ವದ ಅಭಿವ್ಯಕ್ತಿಯ ಮಾಧ್ಯಮವಾಗಿ ಪರಿಗಣಿಸಿದಂತೆ ಮಕ್ಕಳ ಸಾಹಿತ್ಯವನ್ನು ಕಾಣಲಿಲ್ಲ ಎಂಬುದು ಅದರ ಬೆಳವಣಿಗೆಯ ನಿಧಾನಗತಿಗೆ ಕಾರಣವಾಯಿತು.

ಶಿಕ್ಷಣದ ಕಾರಣಕ್ಕಾಗಿಯೇ ಕನ್ನಡದ ಮಕ್ಕಳ ಕಥಾ ಸಾಹಿತ್ಯಕ್ಕೆ ತೀರ ಅನಿವಾರ್ಯವಾಗಿದ್ದ ಸಂದರ್ಭದಲ್ಲಿ ಪಂಜೆಯವರು ಮಕ್ಕಳಿಗಾಗಿ ಸೃಜನಶೀಲವಾದ ಬರೆವಣಿಗೆಯನ್ನು ತರಲು ತುಡಿದರು. ಆದರೆ ಅವರಿಗೆ ಆಸರೆಯಾದವು ಭಾರತೀಯ ಪರಂಪರೆಯ ಜನಪದ ಕತೆಗಳೇ ಎಂಬುದನ್ನು ತಿಳಿಯಬೇಕು. ಅವರು ಪಠ್ಯಕ್ಕಾಗಿ ಆರಿಸಿಕೊಂಡಿರುವುದು ಸಹ ಜನಪದರಲ್ಲಿ ಈಗಾಗಲೇ ಪ್ರಚಾರವಾಗಿರುವ ತಮ್ಮ ಪರಿಸರದಲ್ಲಿನ ಕತೆಗಳನ್ನು ಎನ್ನಬಹುದು. ಈ ಕತೆಗಳೆಲ್ಲ ಮೊದಲೇ ಜನಮಾನಸದಲ್ಲಿ ಬಳಕೆಯಲ್ಲಿದ್ದುದರಿಂದ ಅವು ಮಕ್ಕಳಿಗೂ ಮೌಖಿಕವಾಗಿ ಪರಿಚಯವಿದ್ದವು. ಆದುದರಿಂದ ಇವು ಕಲಿಕೆಗೆ ಪೂರಕವಾಗಿ ಮಕ್ಕಳಲ್ಲಿ ಕಾಣಿಸಿಕೊಂಡವು. ಆದರೆ ಪಂಜೆಯವರು ಪರಂಪರೆಯ ಕತೆಗಳನ್ನು ಹೇಗೆ ಪಠ್ಯಕ್ಕೆ ತಂದುಕೊಂಡರು ಎನ್ನುವುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವಾಗಿದೆ. ಅವರು ಆಯ್ದುಕೊಂಡ ಕತೆಗಳು ಬಹಳಷ್ಟು ಸಲ ಮನರಂಜನೆಯನ್ನು ಉದ್ದೇಶವಾಗಿಟ್ಟುಕೊಂಡರೂ, ಮಕ್ಕಳಿಗೆ ಒಂದು ಬಗೆಯ ಉಲ್ಲಾಸಮಯವಾದ ಓದನ್ನು ನೀಡುವಲ್ಲಿ ಯಶಸ್ವಿಯಾದವು. ಮುಂದುವರೆದು ಅವರು ಬೇರೆ ಬೇರೆ ಮೂಲದಿಂದಲೂ, ಪ್ರಭಾವದಿಂದಲೂ ಕತೆಗಳನ್ನು ಪಡೆದುಕೊಂಡಿದ್ದಾರೆ ಎಂಬುದನ್ನು ಗಮನಿಸಬೇಕು. ಅವರ 'ಮೂರು ಕರಡಿಗಳು' ಕತೆ ಜಗತ್ತಿನಲ್ಲಿ ಹೆಚ್ಚು ಪ್ರಚಾರಗೊಂಡಿರುವ ಇದು ರಷ್ಯನ್ ಮೂಲದಾಗಿದೆ. ಅವರ ಎಲ್ಲ ಕತೆಗಳಲ್ಲೂ ಮೋಜು, ಪುನರುಕ್ತಿಯ ಮಾತುಗಳು, ಜಾಣತನಗಳು ತುಂಬಿವೆ. ಇದರಿಂದಾಗಿ ಚಿಕ್ಕಮಕ್ಕಳಿಗೆ ಬಲು ಸೊಗಸಾಗಿ ಮನಮುಟ್ಟಬಲ್ಲವು. ಶಿಕ್ಷಣದಲ್ಲಿ ಪಾಠವಾಗಿ ಬಳಕೆಯಾಗುವಂತಹ ಸರಕಲ್ಲವಾದುದರಿಂದ ಮಕ್ಕಳ ಮನವನ್ನು ಸಂತಸದಿಂದ ಅರಳಿಸುವ ಗುಣವನ್ನು ಹೊಂದಿವೆ. 'ಗುಡು ಗುಡು ಗುಮ್ಮಟ ದೇವರು' ಕತೆಯಂತೆಯೇ ಇತರ ಕತೆಗಳಲ್ಲಿಯು ವ್ಯಾವಹಾರಿಕ ಜಾಣತನ, ಉಪಾಯಗಳು, ಚುರುಕುತನಗಳು ಎದ್ದು ಕಾಣುತ್ತವೆ. ನಿರೂಪಣೆಯಲ್ಲಿ ಕೆಲವೆಲ್ಲ ಸಂಗತಿಗಳ ವಿವರಗಳು ಬಂದರೂ ಅವು ಮಕ್ಕಳಿಗೆ ಸಂದರ್ಭವನ್ನು ಚಿತ್ರವತ್ತಾಗಿ ಹಿಡಿದುಕೊಡುವಲ್ಲಿ ರಮಿಸಿ ಮರೆಯಾಗುತ್ತವೆ. ಕಲಿಕೆಯ ಉದ್ದೇಶ ಅವರ ಕತೆಗಳಲ್ಲಿ ಮುಂಚೂಣಿಯಲ್ಲಿ ಎದ್ದು ಕಾಣಿಸುವುದಿಲ್ಲ. 'ಅರ್ಗಣೆ ಮುದ್ದೆ' ಎಂಬ ಕತೆಯಲ್ಲಿ ಕುಂಬಾರನು ಹೇಂಟೆಯನ್ನು ಜಾತ್ರೆಗೆ ತೆಗೆದು ಹೋಗುವಾಗಿನ ಸಂದರ್ಭವನ್ನು ಚಿತ್ರಿಸುತ್ತಾ, 'ಕುಂಬಾರನು ಜಾತ್ರೆಗೆ ಹೊರಟನು. ತಲೆಗೆ ವಲ್ಲಿ, ಕಾಲಿಗೆ ಮೆಟ್ಟು, ಹೆಗಲ ಮೇಲೆ ಒಂದು ವಸ್ತ್ರ, ವಸ್ತ್ರದ ಕೊನೆಯಲ್ಲಿ ಬೀಗದ ಕೈ, ಬಾಯಿತುಂಬ ವೀಳ್ಯ, ತೋಳು ತುಂಬ ಹುಂಜ' ಈ ಪ್ರಕಾರವಾಗಿ ಕುಂಬಾರನು ಜಾತ್ರೆಗೆ ಹೊರಟನು. ಎಂದು ಸನ್ನಿವೇಶವನ್ನು ಇಡಿಯಾಗಿ ಹೇಳುತ್ತಾರೆ.[೧೭] ಇದು ಜನಪದದ ಸರಕಾದರೂ, ದಿನನಿತ್ಯದ ವಸ್ತುಗಳನ್ನು, ಬದುಕನ್ನು ಒಳಗೊಂಡಿದ್ದರೂ ಪಂಜೆಯವರ ತಂತ್ರಗಾರಿಕೆಯ ನಯವಾದ ನಿರೂಪಣೆಯಿಂದ ಹೊಸತನವೆನಿಸಿ ಮಕ್ಕಳನ್ನು ಸೆಳೆಯುತ್ತದೆ.

---

೧೭ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ : ಸಂಪುಟ ೯, ಸಂ: ಬ. ಸು ಬೇವಿನಗಿಡದ, ಲೇ; ಮಕ್ಕಳ ಬರೆವಣಿಗೆಯ ಉತ್ಕರ್ಷಕಾಲ, ಆನಂದ ಪಾಟೀಲ, ಪುಟ ೫೧. ೨೦೧೫

ಉಚಿತವಾದ ಕತೆಗಳಲ್ಲಿ ಮಕ್ಕಳ ಸಾಂಸ್ಕೃತಿಕ ಪರಿಸರದ ಸಮೃದ್ಧತೆಯನ್ನು ತುಂಬಿಕೊಳ್ಳುತ್ತಲೆ ಸಾಧ್ಯವಾದಷ್ಟು ಸರಳ ಭಾಷೆಯಲ್ಲಿ ಗದ್ಯವಾಗಿ ಕತೆಗಳ ನಿರೂಪಣೆ ನಡೆಯುತ್ತದೆ. ಇದೆ ಕತೆಗಳನ್ನು ಮೌಖಿಕ ಸಂಪ್ರದಾಯದಲ್ಲಿ ತಂದುಕೊಂಡು ಮಕ್ಕಳ ಮುಂದೆ ಇರಿಸಿ ನೋಡಿದಾಗ ಅವು ಹಿಡಿಸುತ್ತವೆ. ಮಕ್ಕಳು ಓದಲು ಸಾಧ್ಯವಾಗದೆ ಬಲ್ಲವರು ಓದಿ ಹೇಳಿದಾಗ ಬೇಗನೆ ಅರ್ಥವಾಗುವಂತಹ ಸ್ವರೂಪದ ಕತೆಗಳಿಗೆ ಪಂಜೆಯವರು ಆಶಿಸಿರಬಹುದು. ಹಿರಿಯರು ಸುಲಭವಾಗಿ ಉಚ್ಚರಿಸಬಲ್ಲ, ಅನೇಕ ಶಬ್ದಗಳನ್ನು ಸುಲಭವಾಗಿ ಬಳಸಿಕೊಂಡು ಕತೆ ಹೇಳಬಹುದಾದ ಸರಕು ಇವರ ಕತೆಗಳಲ್ಲಿ ಸಿಗುತ್ತದೆ. ಮಕ್ಕಳು ಬರಿ ಕೇಳುವಿಕೆಯಿಂದ ಮಾತ್ರ ಅವನ್ನು ಆಲಿಸಬಹುದಾಗಿದೆ, ಗ್ರಹಿಸಬಹುದಾಗಿದೆ. ಅಕ್ಷರವು ತಂದು ನಿಲ್ಲಿಸುವ ಮಿತಿ ಇದು. ಕೆಲವು ಸಲ ಮೌಖಿಕವಾಗಿ ಸಾಧ್ಯವಾಗುವ ಹಲವಾರು ಸಂಗತಿಗಳು ಲಿಖಿತವಾಗಿ ಬರೆದು, ಓದಿಸಿ, ಹೇಳಲಾಗುವುದಿಲ್ಲ. ಮಕ್ಕಳಿಗೆ ತೀರ ಹತ್ತಿರವಾದ, ಅವರ ಮನೆ ಮಾತಾದ ಪ್ರಾದೇಶಿಕ, ಆಡು ಭಾಷೆಯಲ್ಲಿನ ಕತೆಗಳು ಬಲು ರುಚಿಸಿ ರವಾನೆಯಾಗಬಹುದು. ಇಂತಹ ಸ್ವಾದನೆಯು ಬರಹ ರೂಪದ ಸಂದರ್ಭದಲ್ಲಿ ಬಂದಾಗ ತಪ್ಪಿಹೋಗುವುದು. ಮೌಖಿಕವಾಗಿ ಆಡುವ ದೀರ್ಘಮಾತುಗಳು ಸಹ ಸಂಭಾಷಣೆಯಲ್ಲಿ ಮೊಟಕುಗೊಳ್ಳುವುದು ಸ್ವಾಭಾವಿಕವಾಗಿ ಕಾಣಿಸಿಕೊಳ್ಳತ್ತದೆ. ಮಕ್ಕಳು ಸುಲಭವಾಗಿಯೆ ಗ್ರಹಿಸಬಲ್ಲ, ಅನುಭವಿಸಬಲ್ಲ, ಆಸ್ವಾದಿಸಬಲ್ಲ ಭಾಷೆಯ ಸಂಗತಿ, ಕತೆಯ ಸಂಗತಿಗಳು ಬರಹದ ಸ್ವರೂಪದಲ್ಲಿ ತಪ್ಪಿಹೋಗುವುದನ್ನು ಅಲ್ಲಗಳೆಯಲಾಗದು.

ಪಂಜೆಯವರು ತಮ್ಮ ಕತೆಗಳಲ್ಲಿ ಸುಲಭವಾದ ಭಾಷೆಯನ್ನು ತರುವುದರ ಜೊತೆಗೆ ಕತೆಗೆ ಅಗತ್ಯವಾದ ಅನಿವಾರ್ಯವಾದ ಪ್ರಾದೇಶಿಕ ಭಾಷಾ ಬಳಕೆಯನ್ನು ತಂದಿದ್ದಾರೆ. ಕತೆಯು ವ್ಯಾಕರಣಬದ್ಧವಾಗಿ ಬರುವುದರ ಜೊತೆಗೆ ಶಿಷ್ಟತೆಯಲ್ಲಿ ಕಾಣಿಸಿಕೊಂಡರೂ, ಆಡು ಮಾತಿನ ಸಹಚರ್ಯವನ್ನು ಹೊಂದಲು ನೋಡುತ್ತದೆ. ಅನೇಕ ಕಡೆ ಅವರು ಜನರಲ್ಲಿ ಈಗಾಗಲೆ ಬಳಕೆಯಲ್ಲಿರುವ ಪದಗಳ ಅರ್ಥವನ್ನು ಇನ್ನೊಂದು ಪದದೊಂದಿಗೆ ವಿವರಿಸಲು ನೋಡಿರುವುದನ್ನು ಕಾಣುತ್ತೇವೆ. ಈ ತಂತ್ರಗಾರಿಕೆಯನ್ನು ಅವರ 'ಗುಡುಗುಡು ಗುಮ್ಮಟ ದೇವರು' ಕತೆಯಲ್ಲಿ ಕಾಣಬಹುದು. ಅವರ ಮತ್ತೊಂದು ತಂತ್ರಗಾರಿಕೆಯೆಂದರೆ ನೆಲದ ಭಾಷೆಯನ್ನು ಸೊಗಸಾಗಿ ಹೇಳಿ ರುಚಿಸುವಂತೆ ಮಾಡುವುದು. ದಕ್ಷಿಣ ಕನ್ನಡ ಜಿಲ್ಲೆಯ ಭಾಗದಲ್ಲಿನ ಭಾಷಾ ಬಳಕೆಯ ಸಂಗತಿಗಳು ಅಗತ್ಯವಾಗಿ ಹಾಸುಹೊಕ್ಕಾಗಿದ್ದು, ಕನ್ನಡದ ಇತರ ಕಡೆಗಿನ ಮಕ್ಕಳಿಗೆ ಅವು ಅಪರಿಚಿತವಾಗಿ ಕಾಣುವುದನ್ನು ಗಮನಿಸಬಹುದು. 'ಮೂಟೆಯ ಶಬ್ದವನ್ನು ಕೇಳಿ ಕಳ್ಳನಿಗೆ ಎಚ್ಚರವಾಯಿತು. ಅದು ಯಾರು ? ಯಾರು ?' ಎಂದು ಕಳ್ಳನು ಕೂಗಿದನು. ಅದಕ್ಕೆ ಯಾರೂ.... ಮಾತಾಡಲಿಲ್ಲ. ಕಳ್ಳನು ಚಾಪೆಯಿಂದ ಎದ್ದು, ಅಡುಗೆ ಕೋಣೆಗೆ ಓಡಿದನು. ಆಗ ಅವನ ಕಾಲು ನೆಲ್ಲಿಕಾಯಿಗಳ ಮೇಲೆ ಜಾರಿತು. ಅವನು ಡಬ್ಬದ ಮೇಲೆ ಬಿದ್ದನು. 'ಅಬ್ಬಬ್ಬ, ಇದೇನು ಮಾರಿ!' ಎಂದು ಹೇಳಿ, ದೀಪ ಹಚ್ಚುವುದಕ್ಕೆ ಹೋಗಿ ಹಲಗೆಯ ಮೇಲೆ ಬೆಂಕಿ ಪೆಟ್ಟಿಗೆಯನ್ನು ಹುಡುಕಿದನು.' ಹೀಗೆ ಅವರು ನೀಡಿರುವ ಕತೆಗಳೆಲ್ಲವೂ ಗ್ರಾಮೀಣ ಪ್ರದೇಶದ ಸರಕಿನಿಂದ ಆರಿಸಿಕೊಂಡವು. ಅವರು ಮಕ್ಕಳನ್ನು ತಮ್ಮ ಮುಂದಿರಿಸಿಕೊಂಡು ಅವರಿಗೆ ಸೂಕ್ತವಾದುವುಗಳನ್ನು ಕಂಡುಕೊಂಡು ನೀಡಿರುವುದಾಗಿ

ಕಾಣುತ್ತೇವೆ. ಅವರ ಕತೆಗಳ ಶೀರ್ಷಿಕೆಯೂ ಅಷ್ಟೇ ಗ್ರಾಮೀಣ ಭಾಗದ ಪರಿಚಿತ ವಸ್ತುಗಳಿಂದ ಕೂಡಿರುತ್ತವೆ. 'ಹೇನು ಸತ್ತು ಕಾಗೆ ಬಡವಾಯಿತು', 'ಇಲಿಗಳ ಥಕ ಥೈ', 'ಗುಡು ಗುಡು ಗುಮ್ಮಟ ದೇವರು', 'ಅರ್ಗಣಿ ಮುದ್ದೆ', 'ಸೀಗಡಿ ಯಾಕೆ ಒಣಗಲಿಲ್ಲ', 'ಹುಲಿಯೋ ಇಲಿಯೋ', 'ಅಂಗಳ ದುಗ್ಗ', ಮೆಣಸಿನ ಕಾಳಪ್ಪ', ಮುಂತಾಗಿವೆ. ಸನ್ನಿವೇಶಗಳ ಸೃಷ್ಟಿಯೂ ಅಷ್ಟೆ, ಸರಪಳಿಯಂತೆ ಒಂದೇ ಬಗೆಯ ಘಟನೆಗಳು ಪುನರಾವರ್ತನೆಯಾಗುವುದು. ಯಾವುದಾದರೂ ಒಂದು ಮಾತು ಮತ್ತೆ ಮತ್ತೆ ಬಳಕೆಯಾಗುತ್ತಾ ಹೋಗುವುದು. 'ಆಡು ಅಲ್ಲಿ ಆಡುತ್ತಿದೆ. ಡೋಲು ಇಲ್ಲಿ ಬಡಿಯುತ್ತಿದೆ. ದಾರಿ ಬಿಡಿ, ಗುಡುಗುಡು ಗುಮ್ಮಟ ದೇವರಿಗೆ.' ಎಂಬ ಮಾತು ಕತೆಯುದ್ದಕ್ಕೂ ಕಾಣಿಸುತ್ತದೆ. ತೀರ ಕ್ಷುದ್ರ ಅನ್ನಿಸುವ ಜೀವಿಯಿಂದ ಹಿಡಿದು, ದೊಡ್ಡ ಜೀವಿಗಳನ್ನು ಒಳಗೊಳ್ಳುತ್ತಾ ಸಾಗುವ ಕಥಾವಸ್ತುಗಳನ್ನು ಕಾಣಬಹುದು. ಪೆದ್ದು ಪೆದ್ದು ಆಗಿದ್ದವನು ಕೊನೆಗೆ ಜಯ ಹೊಂದುವನು. ಮುಂತಾದ ಜನಪದ ಕತೆಗಳ ಪ್ರಚಾರದಲ್ಲಿ ಸಿಗುವ ಆಶಯಗಳೆ ಇಲ್ಲಿಯೂ ಕತೆಯ ವಸ್ತುವಾಗಿ ಕಾಣಿಸಿಕೊಂಡಿವೆ. ಮಕ್ಕಳಿಗೆ ಈ ಸಂಗತಿಗಳು ರಂಜಿಸಲು ಬಲು ಸಹಕಾರಿಯೆಂದು ಅವರು ಪರಿಗಣಿಸಿದಂತಿದೆ. ಅದರಲ್ಲೂ ಪುನರಾವರ್ತನೆಯನ್ನು ಬಹು ಮುಖ್ಯವಾಗಿ ಗಮನಿಸಿರುವಂತಿದೆ. ಹೆಚ್ಚಿನ ವಿವರಣೆಗಳಿಗೆ ಅವಕಾಶವಿಲ್ಲದೆ, ಸಂಭಾಷಣೆಯ ರೂಪವನ್ನು ತರುವುದು ಅಗತ್ಯವೆಂದು ಅವರು ವ್ಯಕ್ತ ಪಡಿಸಿದ್ದಾರೆ.

ಅನೇಕ ಬಾರಿ ಇವರ ಕತೆಗಳಲ್ಲಿ ಕಾಣಿಸಿಕೊಳ್ಳುವುದು ಪ್ರಾಥಮಿಕ ಶಾಲೆಯ, ಅದರಲ್ಲೂ ಪ್ರಮುಖವಾಗಿ ಪೂರ್ವಪ್ರಾಥಮಿಕ ಹಂತದ ಮಕ್ಕಳು. ಅವರನ್ನೇ ಪ್ರಧಾನವಾಗಿಸಿಕೊಂಡಿದ್ದರು ಎನಿಸುತ್ತದೆ. ಆದರೆ ಅವರು ಬರೆದವು ಮೌಖಿಕವಾಗಿ ಮಕ್ಕಳಿಗೆ ದಕ್ಕುವಂತೆ ಬರೆಹ ರೂಪದಲ್ಲಿ ಸಾಧ್ಯವಾಗುವುದಿಲ್ಲ ಎನಿಸುತ್ತದೆ. ಇವು ಓದು ಬರಹ ಬಲ್ಲ ಮಕ್ಕಳಿಗೆ ಮಾತ್ರ ಓದಿನಿಂದ ದಕ್ಕಿಸಿಕೊಳ್ಳುವಂತಹವು. ಶಾಲೆಯನ್ನೇ ಸೇರದ ಪುಟಾಣಿಗಳಿಗೂ ಮೌಖಿಕವಾಗಿ ಅರ್ಥವಾಗುವಂತಹವು. ಕತೆಗಳು ಲಿಖಿತ ರೂಪದಲ್ಲಿ ಬಂದಾಗ ಮಿತಿಯನ್ನು ಅನುಭವಿಸುತ್ತವೆ. ಈ ಕೃತಿಗಳನ್ನು ಓದಬಲ್ಲ ವರ್ಗವು ಸಹ ನಿರ್ದಿಷ್ಟವಾಗಿ ಪಂಜೆಯವರೆದುರಿಗೆ ಸಿಕ್ಕಂತೆಯೂ ಕಾಣುತ್ತದೆ. ಶಾಲೆಯಲ್ಲಿ ಒಂದೊಂದು ಹಂತದ ಬೆಳವಣಿಗೆಯು ಅವುಗಳ ಭಾಷಾ ಸಾಮರ್ಥ್ಯದ, ಗ್ರಹಿಕೆಯ ಸಾಧ್ಯತೆಗಳ ಬಗೆಗೆ ಯೋಜಿತ ದೃಷ್ಟಿಕೋನವನ್ನು ಅವರು ಹೊಂದಿರುವಂತೆ ಅವರ ಬರೆವಣಿಗೆಯು ಕಾಣಿಸಿಕೊಳ್ಳುತ್ತದೆ. ಅವರು ಶಿಕ್ಷಕರಾಗಿ, ತರಬೇತಿ ಸಂಸ್ಥೆಯ ಪ್ರಾಧ್ಯಾಪಕರಾಗಿ, ಅಲ್ಲಿಯೇ ಮುಖ್ಯ ಅಧ್ಯಾಪಕರಾಗಿ, ಪ್ರೌಢಶಾಲಾಧ್ಯಾಪಕರಾಗಿ, ಅಧಿಕಾರಿಗಳಾಗಿ ಶಾಲಾ ಮಕ್ಕಳ ಸಹಚರ್ಯದಲ್ಲಿಯೇ ಸಾಹಿತ್ಯದ ರಚನೆಯನ್ನು ರೂಪಿಸಿಕೊಂಡವರು ಎನ್ನುವುದು ಬಹು ಮುಖ್ಯವಾದ ಸಂಗತಿಯಾಗಿದೆ. ಅವರ ಸೃಜನಶೀಲ ಮನಸ್ಸು ತನ್ನ ಪ್ರತಿಭೆಯಿಂದ ಪ್ರಫುಲ್ಲವಾಗಿ ಹೊರಹೊಮ್ಮಬಲ್ಲ ಸಾಧ್ಯತೆಗಳಿಗಾಗಿ ದಾರಿ ಮಾಡಿಕೊಂಡಿತ್ತು. ಕನ್ನಡದ ಕತೆಗಳ ಹೊಸದಾರಿಗಳು ಅಂದು ರೂಪುಗೊಳ್ಳುವ ಪ್ರಯತ್ನದಲ್ಲಿದ್ದುದರಿಂದ ಅವರ ಮಕ್ಕಳ ಸಾಹಿತ್ಯದಲ್ಲಿನ ಪ್ರಯತ್ನಗಳು ಗಮನಿಸಬಲ್ಲಂತಹವುಗಳು.

ಇದೆ ಸಮಯದಲ್ಲಿ ದೇಶದ ಬೇರೆ ಬೇರೆ ಕಡೆಗಳಲ್ಲಿ ನಡೆದ ವಿದ್ಯಮಾನಗಳನ್ನೂ ನೋಡುವುದು ಅನಿವಾರ್ಯವಾಗಿದೆ. ಕೇವಲ ಕನ್ನಡದ ಮಾಹಿತಿಯ ಆಧಾರದ ಮೇಲೆ ಮಕ್ಕಳ ಸಾಹಿತ್ಯದ ನಡೆಯನ್ನು

ಬಗೆಯನ್ನು ಊಹಿಸಿಕೊಳ್ಳಬೇಕಾಗುತ್ತದೆ ಎನ್ನುವುದು ಮಿತಿಯನ್ನು ಅನುಭವಿಸುತ್ತದೆ. ಇದೇ ಸಮಯದಲ್ಲಿ ಕ್ರಿಯಾಶೀಲರಾಗಿದ್ದ ಹಿಂದಿಯ ಖ್ಯಾತ ಲೇಖಕ ಪ್ರೇಮಚಂದರು ಮಕ್ಕಳ ಗ್ರಹಿಕೆಗೆ ನಿಲುಕಬಲ್ಲ ಕತೆಗಳನ್ನು ರಚಿಸಿದರು. ಮಕ್ಕಳಿಗಾಗಿಯೇ ಎಂದು ಇವು ಪಠ್ಯ ಪುಸ್ತಕಗಳಲ್ಲಿ ಕಾಣಿಸಿಕೊಂಡಿವೆ. ಅದಲ್ಲದೆ ಈಚೆಗೆ ಎನ್.ಬಿ.ಟಿ ಅವರಿಂದ ಮಕ್ಕಳಿಗಾಗಿಯೇ ಎಂದು ಅವರ ಹದಿಮೂರು ಕತೆಗಳನ್ನು ಸಂಕಲಿಸಿ ನೀಡಿರುವುದನ್ನು ಗಮನಿಸಬಹುದು. ವಾಸ್ತವದ ಸಂಗತಿಗಳನ್ನೆ ಆಯ್ದುಕೊಂಡು ಬರೆದಿರುವ ಅವರ ಕಥಾವಸ್ತುವು ಹಳ್ಳಿಪ್ರದೇಶದ ಬಡತನದ ಚಿತ್ರಣಗಳಾಗಿವೆ. ಅವರು ಕಲ್ಪನೆಯ ಕತೆಗಳಿಗೆ, ರಮ್ಯ, ರಂಜನೀಯ ಕತೆಗಳ ಕಡೆಗೆ ಹೊರಳದೆ ವಾಸ್ತವಕ್ಕೆ ಮಣಿದರು. ಇನ್ನೊಬ್ಬ ಹಿರಿಯ ಹಿಂದಿ ಲೇಖಕ, ಮಕ್ಕಳಿಗಾಗಿ ಆಸ್ಥೆಯಿಂದ ಬರೆದ ಅಮೃತಲಾಲ ಸಾಗರ ಅವರು ಹೇಳಿಕೊಂಡಿರುವ ಹಾಗೆ ಮಕ್ಕಳಿಗೆ ಬರೆಯುವಾಗ ವಾಸ್ತವವನ್ನು ಆಧರಿಸಿಯೇ ಬರೆಯಲು ಪ್ರೇಮಚಂದರು ಸಲಹೆ ನೀಡುತ್ತಿದ್ದರಂತೆ. ಬೆಂಗಾಲಿಯಲ್ಲಿ ಇದೇ ಸಮಯಕ್ಕೆ ಆಗಲೇ ಸಾಕಷ್ಟು ಪ್ರಭಾವಕಾರಿಯಾಗಿದ್ದ ರವೀಂದ್ರನಾಥರ ಸಾಂಸ್ಕೃತಿಕ ವಾತಾವರಣವು ಮಕ್ಕಳ ಜಗತ್ತನ್ನೂ ಆವರಿಸಿಕೊಂಡಿತ್ತು. ಅವರ ಪ್ರಭಾವ, ಪ್ರೋತ್ಸಾಹದಿಂದ ಅನೇಕರು ಮಕ್ಕಳ ಲೋಕದಲ್ಲಿ ಹಲವಾರು ಬಗೆಯ ಪ್ರಯೋಗಗಳನ್ನು ಮಾಡಿದರು. ಇದೇ ಸಮಯದಲ್ಲಿ ಬೆಂಗಾಲಿಯಲ್ಲಿ ಪ್ರಮುಖವಾದ ವಾಸ್ತವವಾದಿ, ಸಾಮಾಜಿಕ ತುಡಿತದ ಕಥಾ ಜಗತ್ತನ್ನು ಸೃಷ್ಟಿಸಿದ ಶರತ್ಚಂದ್ರ ಚಟರ್ಜಿಯವರು ಸಾಕಷ್ಟು ಪ್ರಭಾವವನ್ನು ಮೂಡಿಸಿದ್ದರು. ಅವರು ಮಕ್ಕಳಿಗಾಗಿಯೂ ಬರೆದಿದ್ದರು.[೧೮] ಮಕ್ಕಳಿಗಾಗಿ ಕಥಾ ಸರಣಿಗಳು, ಕಾದಂಬರಿಗಳನ್ನು ಅವರು ರಚಿಸಿರುವುದು ಗಮನಿಸಬಹುದಾದ ಸಂಗತಿ. 'ರಾಮೇರ್ ಶುಮತಿ' ಹಾಗೂ 'ಲಾಲೂ ಹಾಗೂ ಅವನ ಗೆಳೆಯರು' ಎಂಬ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿದ್ದವು ಎನ್ನಬಹುದು. ಮಕ್ಕಳ ಪತ್ರಿಕೆಯೊಂದರಿಂದಲೇ ಅವರ ಕಥಾಜಗತ್ತು ಅನಾವರಣಗೊಂಡಿದೆ. ಈ ಇಬ್ಬರೂ ಲೇಖಕರು ಕನ್ನಡದವರ ಮೇಲೆ ಮಾಡಿದ ಪ್ರಭಾವ ಹೇರಳವಾದುದು ಎನ್ನಬಹುದು.

ಕಲ್ಕತ್ತಾ ಪ್ರದೇಶದಲ್ಲಿ ವಾಸವಾಗಿದ್ದುಕೊಂಡು ಅಲ್ಲಿಯ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಯಿಂದ ಸ್ಫೂರ್ತಿಗೊಂಡು ಕನ್ನಡದ ಮಕ್ಕಳ ಸಾಹಿತ್ಯವನ್ನು ಅದರ ನೆರಳಿನಲ್ಲಿ ಕಟ್ಟಬಯಸಿದವರು ಎಂ. ಎನ್. ಕಾಮತರು. ಇವರಿಗೆ ಭಾರತೀಯ ಇತರ ಭಾಷೆಗಳ, ವಿಶೇಷವಾಗಿ ಹಿಂದಿಯ ಪರಿಸರದ ದಟ್ಟವಾದ ಪ್ರಭಾವವುಂಟಾಗಿತ್ತು ಎನಿಸುತ್ತದೆ. 'ಬಿಸಿಲಿನ ಕಾವನ್ನೂ, ನೀರಿನ ಅಭಾವವನ್ನು ತನಗಲ್ಲವೆಂದು ಈ ಬಟ್ಟ ಬೇಸಗೆಯಲ್ಲಿ ಹೂವು ತೋರಿದ ಸೊಂಪೂ, ಬೀರಿದ ತಂಪೂ ವಿಸ್ಮಯವೇ ಸೈ' ಎಂದು ಗೋವಿಂದ ಪೈ ಅವರು ಕೊಂಡಾಡಿರುವ ಎಮ್.ಎನ್. ಕಾಮತರು ಅತ್ಯಂತ ಬಡತನದಲ್ಲಿದ್ದೂ ಅವಿರತವಾಗಿ ಸಾಹಿತ್ಯ, ಸಾಂಸ್ಕೃತಿಕ ಲೋಕಕ್ಕಾಗಿ ತುಡಿದವರು[೧೯]. ಶಾಲಾಧ್ಯಾಪಕರಾಗಿದ್ದ ಅವರು ಮಕ್ಕಳ ಒಡನಾಟದಲ್ಲಿ ಸಾಕಷ್ಟು

[೧೮] ಆದುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ : ಸಂಪುಟ ೯, ಸಂ: ಬ. ಸು ಬೇವಿನಗಿಡದ, ಲೇ: ಮಕ್ಕಳ ಬರೆವಣಿಗೆಯ ಉತ್ಕರ್ಷಕಾಲ, ಆನಂದ ಪಾಟೀಲ, ಪುಟ ೫೩, ೨೦೧೫

[೧೯] ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ, ಸಂಪುಟ ೯. ಪ್ರ: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪುಟ ೫೪, ೨೦೧೫.

ಕೃಷಿಯನ್ನು ಮಾಡಿದರು. ಇವರು ರಚಿಸಿದ ಕೃತಿಗಳು ಜನಸಾಮಾನ್ಯರನ್ನೆಲ್ಲ ಒಟ್ಟಾಗಿ ರಂಜಿಸುವಂತಹವು. ಮಕ್ಕಳಿಗಾಗಿ ಕತೆಗಳನ್ನು ಅವರು ಬರೆದರು. 'ಬಾಲಕರ ಮಹಾಭಾರತ', 'ಯಾದವ ಕೃಷ್ಣ', 'ಕರ್ಣನ ಕತೆ', 'ಆರ್ಯಮತೋಖ್ಯಾನ' 'ಮಹಾರಾಷ್ಟ್ರ' ಇವು ಅವರು ಮಕ್ಕಳಿಗಾಗಿ ಬರೆದ ಗದ್ಯ ಕೃತಿಗಳು. ಇವು ಮೌಖಿಕ ಪರಂಪರೆಯಿಂದ ಬಂದವುಗಳಲ್ಲ. ಬದಲಾಗಿ ಮೊದಲೇ ಅನ್ಯಭಾಷಾ ಸಾಹಿತ್ಯದಲ್ಲಿ ಲಿಖಿತರೂಪದಲ್ಲಿದ್ದವುಗಳ ರಚನೆಗಳು. ಈ ಕಥಾ ಭಾಗಗಳು ಮಕ್ಕಳಿಗಾಗಿ ಎಷ್ಟರ ಮಟ್ಟಿಗೆ ಸೂಕ್ತವಾಗಿದ್ದವು ಎನ್ನುವುದನ್ನು ಮತ್ತು ಪರಂಪರೆಯ ಅಭಿಮಾನದಿಂದ ಸ್ಫೂರ್ತಿಗೊಂಡಿದ್ದವು ಎನ್ನುವುದು ಇಲ್ಲಿ ಕಾಣಿಸಿಕೊಳ್ಳುವ ತಾತ್ವಿಕತೆಯಾಗಿದೆ. ಇವರಂತೆಯೇ ತಮ್ಮನ್ನು ತಾವು ಅನೇಕ ಪ್ರಯೋಗಗಳಿಗೆ ಒಡ್ಡಿಕೊಂಡು ಮಕ್ಕಳ ಸಾಹಿತ್ಯಕ್ಕೆ ಹೊಸ ಒಳವುಗಳನ್ನು ನೀಡಬಯಸಿದವರು ಉಪೇಂದ್ರ ಕಿಶೋರ ರಾಯ್ ರವರು. ಸಂದೇಶ ಎಂಬ ಪತ್ರಿಕೆಯನ್ನು ತೆರೆದು ಮಕ್ಕಳ ಸಾಹಿತ್ಯವನ್ನು ಹೊಸ ದಿಕ್ಕಿನೆಡೆಗೆ ಸಾಗಿಸಿತಂದವರು. ಪಂಜೆಯವರ ಜೊತೆಯಲ್ಲಿಯೇ ಇದ್ದುಕೊಂಡು ಮಕ್ಕಳ ಕತೆಗಳಿಗೆ ಜೀವತುಂಬಿದವರು ಉಳ್ಳಾಲ ಮಂಗೇಶರಾಯರು. ಅವರ ಅಭಿಪ್ರಾಯಗಳು ಸಹ ಪಂಜೆಯವರಂತೆಯೇ ಒಂದು ಬಗೆಯಲ್ಲಿ ಪರಸ್ಪರ ಸಮ್ಮತವಾಗಿದ್ದವು. ಇವರು ಶಿಕ್ಷಣದಲ್ಲಿ ಕತೆಗಳ ಪಾತ್ರ ಮಹತ್ತ್ವವಾದುದು ಎಂದು ಖಚಿತವಾಗಿ ನಂಬಿದವರು. ಶಿಕ್ಷಕ ತರಬೇತಿ ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಗ್ರಾಮೀಣದ ಕತೆಗಳನ್ನು ಸಂಗ್ರಹಿಸಿ ತರಲು ಕಡ್ಡಾಯಗೊಳಿಸಿದ್ದರಂತೆ. ಅವರು ಬರೆದು ತಂದ ಕತೆಗಳನ್ನು ತಿದ್ದಿ ತೀಡಿ ಪುಸ್ತಕ ರಚನೆಗಳಿಗೆ ಬಳಸಿಕೊಳ್ಳುತ್ತಿದ್ದರಂತೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಇವರೂ ಪಂಜೆಯವರಂತೆಯೇ ಗ್ರಾಮೀಣ ಭಾಗದ ವಸ್ತುಗಳಿಗೆ ಮಾರುಹೋದದು. ಅತಿಮಾನುಷ, ಅವಾಸ್ತವದ ಕತೆಗಳನ್ನು ಇವರು ಬಳಸಲಿಲ್ಲ. ಬಾಲ ಸಾಹಿತ್ಯ ಮಂಡಲದ ಸಂಗ್ರಹಗಳ ಕಾರ್ಯದ ಹಿಂದೆ ಪಂಜೆಯವರ ಜೊತೆಗೆ ಉಳ್ಳಾಲರ ಸಹಚರ್ಯವು ಇತ್ತು. ಒಗಟು, ಗಾದೆಗಳ ಹಿಂದಿರುವ ಕತೆಗಳನ್ನು ಪಠ್ಯ ಪುಸ್ತಕಗಳಲ್ಲಿ ಮೊದಲಿಗೆ ಬಳಸಿದ್ದು ಉಳ್ಳಾಲ ಮಂಗೇಶರಾಯರು. ಅಲಂಕೃತವಾದ ಭಾಷೆಗೆ ಒತ್ತು ಕೊಡದೆ, ಸರಳತೆ, ಸ್ಪಷ್ಟತೆಗೆ ಆದ್ಯತೆ ನೀಡಿದ ಅವರು ತರಗತಿಯ ಶ್ರೇಣಿಗಳಿಗನುಗುಣವಾಗಿ ಭಾಷೆಯ ಪ್ರೌಢತೆಯನ್ನು ಬಳಸುತ್ತಾ ಬಂದರು. ಅನೇಕ ನಿತ್ಯ ಬಳಕೆಯ ನುಡಿಗಟ್ಟುಗಳನ್ನು ಅವರು ಬಳಸಿ ರುಚಿಕಟ್ಟುಗೊಳಿಸುತ್ತಿದ್ದರು. ಒಕ್ಕಲು ಹೋಗು, ಕಾಯ ಕಷ್ಟ ಮಾಡು, ಊರು ಬಿಡು, ಮನಸ್ಸು ಕರಗು, ದಡ್ಡು ಕಟ್ಟು ಮುಂತಾದ ನುಡಿಗಟ್ಟುಗಳನ್ನು ಉಳ್ಳಾಲರು ಪ್ರಚಲಿತಕ್ಕೆ ತಂದರು. ಗ್ರಾಮೀಣ ಬದುಕಿನ ಬಳಕೆಯ ಅನೇಕ ಪದಗಳನ್ನು ಆಪ್ತವಾಗಿ ಬಳಸಿದರು. ದಕ್ಷಿಣ. ಕನ್ನಡದ ಭಾಷೆಯಾದ ಪೂಕರೆ ಇಡು, ಪಡಿಮಂಚ, ಕೊಡಪಾನ, ತಪಲೆ, ಕವಳಿಗೆ, ನಿಶಾನಿ, ಮಜಲು, ಪಡಪು, ಬಂಡಸಾಲೆ, ಗೇಣಿಚೀಟು ಇತ್ಯಾದಿ ಪದಗಳನ್ನು ಪರಿಚಯಿಸಿ ಬರೆದರು. ಪಠ್ಯ ಪುಸ್ತಕಗಳ ಮೊದಲಿಗೆ 'ಉಪಾಧ್ಯಾಯರಿಗೆ ಸೂಚನೆಗಳು' ಎಂದು ನೀಡುತ್ತಿದ್ದ ಸೂಚನೆಗಳಲ್ಲಿ ಕತೆಗಳನ್ನು ಓದಿ ಹೇಳಿದರೆ ಅಥವಾ ನಿರೂಪಿಸಿದರೆ ಸಾಲದು, ನಟನೆಯ ಮೂಲಕ ಅಭ್ಯಾಸ ಮಾಡಿಸಬೇಕು, ಆಂಗಿಕಭಾವ ಕತೆಗಳಿಗೆ ಪೂರಕವಾಗಿ ನೀಡಬೇಕೆಂದು ಅಭಿಪ್ರಾಯಗಳು ನಿರೂಪಿಸಿದರು. ಇದು ಕತೆಗಳನ್ನು ಬೋಧಿಸುವ ಶಿಕ್ಷಕರಿಗೆ ಮಾರ್ಗದರ್ಶಿಯಾಯಿತು. ಕತೆಗಳು ಮಕ್ಕಳಿಗೆ ಮುದನೀಡಲು

ಬೇಕಾದವು. ಜೊತೆಗೆ ಆರೋಗ್ಯದ ವಿಷಯಗಳನ್ನು ಮನದಟ್ಟು ಮಾಡಲು, ಸನ್ನಡತೆಯನ್ನು ಕುರಿತು ತಿಳಿಹೇಳಲು ಕತೆಗಳನ್ನು ಬಳಸಿಕೊಳ್ಳುತ್ತಿದ್ದರು ಎಂಬುದು ಇವರ ಕತೆಗಳ ಹಿಂದಿನ ತಾತ್ವಿಕತೆಯಾಗಿದೆ.

ಶೈಕ್ಷಣಿಕ ವ್ಯವಸ್ಥೆಯ ಭಾಗವಾಗಿ ಮಕ್ಕಳ ಕತೆಗಳು ಕಾಣಿಸಿಕೊಳ್ಳಲು ಆರಂಭವಾದ ದಿನಗಳಲ್ಲಿ ಮಕ್ಕಳಿಗೆ ಎಂತಹ ಕಥಾಸಾಹಿತ್ಯವನ್ನು ನೀಡಬೇಕೆಂದು ಚಿಂತಿಸಿದ ಪ್ರಮುಖರು ಎಂ.ಎಸ್. ಪುಟ್ಟಣ್ಣನವರು. ಮೈಸೂರು ಸೀಮೆಯಲ್ಲಿ ಹೆಸರಾಗಿದ್ದ ಇವರು ಶಿಕ್ಷಣದ ವ್ಯವಸ್ಥೆಯಲ್ಲಿದ್ದು ಕೊಂಡು ಮಕ್ಕಳಿಗೆ ಸಂಸ್ಕೃತಿಯ ಪರಿಚಯದ ಅಗತ್ಯವಿದೆಯೆಂದು ಅರಿತು ಪರಂಪರೆಯನ್ನು ಕಟ್ಟಿಕೊಡುವ ಸಲುವಾಗಿ ಭಾರತದ ಪುರಾಣದ ಪರಂಪರೆಯನ್ನು ಒಳಗೊಂಡಂತೆ ಕತೆಗಳನ್ನು ಮಕ್ಕಳಿಗಾಗಿ ನೀಡಿದರು. ಆದರೆ ಇವರು ಮೌಖಿಕ ಪರಂಪರೆಯಿಂದ ಆರಿಸಿದ ಕತೆಗಳನ್ನು ಅನುಸರಿಸುವುದಕ್ಕಿಂತ ಈಗಾಗಲೇ ಬರೆಹ ರೂಪದಲ್ಲಿ ಕಾಣಿಸಿಕೊಂಡಿರುವ ವಸ್ತುಗಳಿಗೆ ಆದ್ಯತೆಯನ್ನು ನೀಡಿದರು. ಇವರ ಕತೆಗಳಲ್ಲಿಯೂ ಶಿಷ್ಟಪರಂಪರೆಯು ಮುಂದುವರೆದಿರುವುದನ್ನು ಕಾಣಬಹುದು. ಸ್ಥಳೀಯ ನಾಯಕರ ಇತಿಹಾಸದ ಪ್ರಜ್ಞೆಯಿಂದ ಐತಿಹಾಸಿಕ ಕತೆಗಳನ್ನು ಬರೆದರು. ಸಮಕಾಲೀನ ಸಮಾಜದ ಸಾಧಕ ಪುರುಷರ ಜೀವನದ ಘಟನೆಗಳನ್ನು ಸರಳವಾಗಿ ಪರಿಚಯಿಸುವ ಕತೆಗಳು ಇವರಿಂದ ಮೂಡಿಬಂದವು. ಸಾಮಾನ್ಯವಾಗಿ ಇವರು ಭಾರತೀಯ ಪರಂಪರೆಯ ಭಾಗವತಪುರಾಣ, ರಾಮಾಯಣ, ಭಗವದ್ಗೀತೆಗಳನ್ನು ವಿಶಿಷ್ಟವಾಗಿ ಪರಿಷ್ಕರಿಸಿ ಮಕ್ಕಳಿಗೆ ಕೊಟ್ಟರು. ಮುಂದುವರೆದು ದಾಸರಪದ, ತತ್ವಪದ, ಸರ್ವಜ್ಞನ ವಚನದ ಸಾಲುಗಳನ್ನು ಹಿಡಿದುಕೊಂಡು ಅದರ ಮೂಲಕ ನೀತಿಯನ್ನು ಹೇಳುವ ಪ್ರಯೋಗಗಳನ್ನು ಮಾಡಿದರು. ಕತೆಯ ಅಂತ್ಯದಲ್ಲಿ ನೀತಿಯನ್ನು ತಂದು ಮಕ್ಕಳು ನೀತಿವಂತರಾಗುವಂತೆ ತಿಳಿ ಹೇಳುವ ಕತೆಗಳಿರುತ್ತಿದ್ದವು. ಇವರ 'ನೀತಿ ಚಿಂತಾಮಣಿ' ಎಂಬ ಪುಸ್ತಕದ ಶೀರ್ಷಿಕೆಯೇ ಹೇಳುವಂತೆ ನೀತಿಗಳಿಗೆ ನಾಂದಿ ಹಾಡಿದರು. ಇದು ಹಲವಾರು ವರ್ಷಗಳು ಮಕ್ಕಳಿಗೆ ಪಠ್ಯವಾಗಿಯೂ ಕಾಣಿಸಿಕೊಂಡಿತು. ಇವರ ಸುಮತಿ ಮದನಕುಮಾರರ ಚರಿತೆಯಲ್ಲಿಯೂ ನೀತಿಕತೆಗಳನ್ನು ಕಾಣಬಹುದಾಗಿದ್ದು ಈ ಪ್ರಕಾರದ ಕತೆಗಳಿಗೆ ಇವರು ನಾಂದಿಯಾಡಿದರು. ಇವರ ಕತೆಗಳು ಮಕ್ಕಳಿಗೆ ಎನ್ನುವುದಾದರು ಹಿರಿಯರನ್ನು ತಲುಪುವಂತಿದ್ದವು.

ಚ.ವಾಸುದೇವಯ್ಯ ನವರು ಸಹ ನೀತಿಯ ಆಶಯವುಳ್ಳ ಸರಕುಗಳನ್ನು ಮಕ್ಕಳಿಗೆ ಪರಿಚಯಿಸಿದರು. ಕನ್ನಡ 'ಬಾಲ ಬೋಧೆ'ಯ ಮೂಲಕ ಮಕ್ಕಳಿಗೆ ಕತೆಗಳನ್ನು ರಚಿಸಿದ ಇವರು ಪರಂಪರೆಯ ಸರಕನ್ನು ಅನುಸರಿಸಿದರು. ಇವರು ಸಹ ಶಿಷ್ಟಸಾಹಿತ್ಯ ಪರಂಪರೆಯನ್ನು ಅನುಸರಿಸಿ ಬರೆದರು. ಮೌಖಿಕ ಪರಂಪರೆಯನ್ನು ಅಷ್ಟಾಗಿ ಸಂಗ್ರಹಿಸಿ ನೀಡಿದ ನಿದರ್ಶನಗಳಲ್ಲದಿದ್ದರು ಸಿದ್ಧಮಾದರಿಯ ಈಗಾಗಲೇ ಲಿಖಿತರೂಪದಲ್ಲಿ ಕಾಣಿಸಿಕೊಂಡಿರುವ ಪರಂಪರೆಯ ವಸ್ತುವನ್ನು ಮುಂದಿಟ್ಟುಕೊಂಡು ಬರೆದರು. ಆದರೆ ಸರಳ ಮಾತುಗಳನ್ನು ತಮ್ಮ ಕತೆಗಳಲ್ಲಿ ಮೂಡಿಸುವ ಮೂಲಕ ಮಕ್ಕಳಿಗೆ ಮುದ ನೀಡುವಂತಹ ಕತೆಗಳನ್ನು ನೀಡಿದರು. ಇವರ ಬಾಲ ಬೋಧೆಯು ಸುಮಾರು ಆರು ದಶಕಗಳ ಕಾಲ ಮಕ್ಕಳಿಗೆ ಪಠ್ಯದ ವಸ್ತುವಾಗಿ ಕಾಣಿಸಿಕೊಂಡಿತು. ಶಿಕ್ಷಣದ ವ್ಯವಸ್ಥೆಯ ಒಳಗಿದ್ದುಕೊಂಡು ಅದೊಂದು ಪವಿತ್ರವಾದ ಕಾರ್ಯವೆಂದು ಭಾವಿಸಿಕೊಂಡು ಬಹಳ ನಿಷ್ಠೆಯಿಂದ ಸಾಹಿತ್ಯದ ರಚನೆಯೊಂದಿಗೆ ತೊಡಗಿಸಿಕೊಂಡ ಶಿಕ್ಷಕ ಸಮುದಾಯವನ್ನು ಇಲ್ಲಿ ಕಾಣುವುದರ ಜೊತೆಗೆ ಅವರ ಕೃಷಿಯನ್ನು

ಗಮನಿಸುವುದಾದರೆ ಗಂಗಾಧರ ಮಡಿವಾಳೇಶ್ವರ ತುರಮುರಿ, ವೆಂಕಟರಂಗೋಕಟ್ಟಿ ಯವರನ್ನು ನೋಡಬಹುದಾಗಿದೆ. ಆಳವಾದ ಶಿಕ್ಷಣ ಜ್ಞಾನದೊಂದಿಗೆ ಬರೆದ ಇವರು ಶೈಕ್ಷಣಿಕ ಅಗತ್ಯಗಳನ್ನು ನೀಗಿಸುವ ಕತೆಗಳನ್ನು ಪಠ್ಯದ ಸಲುವಾಗಿ ನೀಡಿದರು.

ಇದೆ ಕಾಲದಲ್ಲಿ ಮತ್ತೋರ್ವರಾದ ಉಗ್ರಾಣ ಮಂಗೇಶರಾಯರು ಹಿರಿಯ ವಿದ್ವಾಂಸರಾಗಿ ಮಕ್ಕಳಿಗೆ ಪ್ರೀತಿಯ ಗುರುಗಳಾಗಿದ್ದರು. ಇವರ ಕೃಷಿಯಲ್ಲಿನ ಬಹುಭಾಗ ಗದ್ಯಪ್ರಕಾರವಾಗಿತ್ತು. 'ಕೋಳೂರು ಕೊಡಗೂಸಿನ ಕತೆ' , 'ಚೌತಿಯ ಚಂದ್ರ', 'ಓಲೆಯ ಬಣ್ಣ ಯಾವುದು'?, ಮುಂತಾದ ಸಂಗ್ರಹಿತ ಕತೆಗಳು ಇವರ ಹೆಸರಿನಲ್ಲಿ ಕಾಣಸಿಗುತ್ತವೆ. ಆಂಗ್ಲ ಸಾಹಿತ್ಯದ ಪ್ರಭಾವವಿದ್ದ ಇವರು 'ಕನಕಾಂಗಿ' ಎಂಬುದಾಗಿ ಇಂಗ್ಲಿಷಿನ ಕತೆಯನ್ನು ಕನ್ನಡದಲ್ಲಿ ನೀಡಿದ್ದಾರೆ. 'ಹುಟ್ಟುಗುಣ ಘಟ್ಟ ಹತ್ತಿದರೂ ಬಿಡದು' ಎಂಬ ಇಲಿಯ ಕತೆ, 'ಕಂಬಳಿಯ ಕತೆ ' ಒಬ್ಬ ಕುರುಬ ಹುಡುಗನಿಗೆ ಬಿದ್ದ ಕನಸಿನಲ್ಲಿ ಹೊದ್ದುಕೊಂಡ ಕಂಬಳಿಯೇ ತಾನು ಹೇಗೆಲ್ಲ ಸಿದ್ಧವಾಗುತ್ತೇನೆ ಎಂದು ತನ್ನ ಕತೆಯನ್ನೆಲ್ಲ ಹೇಳಿದುದು, 'ಹುಲಿ ಮಾದಣ್ಣ' ಎಂಬುದು, ತನಗರಿಯದೇ ಹುಲಿಯನ್ನು ಕೊಂದು ಶೂರನೆನಿಸಿಕೊಂಡ ಮಾದಣ್ಣನ ಕತೆ ಇಂತಹವುಗಳನ್ನು ಮಕ್ಕಳಿಗಾಗಿ ನೀಡಿದರು. ಜನಪದ ಕತೆಗಳನ್ನೇ ವಿಶೇಷವಾಗಿ ಅವಲಂಬಿಸಿದರೂ ಅದರಾಚೆಗೆ, ಮಕ್ಕಳಿಗೆ ಜ್ಞಾನ ನೀಡುವ ಉದ್ದೇಶದಿಂದ, ಮಾಹಿತಿ ನೀಡುವ ಉದ್ದೇಶದಿಂದ ಹಲವಾರು ತಂತ್ರಗಾರಿಕೆಯ ಹಂದರಗಳನ್ನು ಹೆಣೆದಿರುವುದಾಗಿ ಕಾಣಿಸುತ್ತದೆ.

ಕೊರಡ್ಕಲ್ ಶ್ರೀನಿವಾಸರಾಯರು ಬಾಲ ಸಾಹಿತ್ಯದಲ್ಲಿ ಗಮನಾರ್ಹ ಸಂಗತಿಗಳಿಂದ ಕಾಣಿಸಿಕೊಂಡವರು. ಇದುವರೆಗೂ ಜನಪದ ಸರಕಿನಿಂದ ಹೊರಬರಲಾರದ ಮಕ್ಕಳ ಕತೆಗಳನ್ನು ವಾಸ್ತವದ ವಸ್ತುಗಳಿಗೆ ತೆರೆದುಕೊಳ್ಳುವಂತೆ ಮಾಡಿದವರು. ಮೂಢನಂಬಿಕೆ, ಅನಿಷ್ಟ ಸಂಪ್ರದಾಯ, ವರ್ಗೀಯ ಅಂತರಗಳ ವಿರುದ್ಧ ವ್ಯಂಗ್ಯ, ವಿಡಂಬನೆಯನ್ನು ಅವಿರತವಾಗಿ ಬಳಸಿ ಜಾಗೃತಿ ಮೂಡಿಸಲು ಸೆಣಸಿದ ಶ್ರೀನಿವಾಸರು ಮಕ್ಕಳಿಗಾಗಿಯೂ ಅಷ್ಟೇ ಕಾಳಜಿಯಿಂದ ತುಡಿದವರು. ಕನ್ನಡದಲ್ಲಿ ಮೊದಲ ಗಟ್ಟಿಯಾದ ಕತೆಯಾಗಿ ಪರಿಗಣಿಸುವ 'ಧಣಿಯರ ಸತ್ಯನಾರಾಯಣ'ವನ್ನು ಇವರು ರಚಿಸಿದರೆಂಬುದನ್ನು ಗಮನಿಸಬೇಕಿದೆ. ಒಂದು ಹುಡುಗನ ಸುತ್ತಲಿನ ಅನುಭವವನ್ನು ಅತ್ಯಂತ ವಾಸ್ತವ ತಳಹದಿಯಾಗಿ ಚಿತ್ರಿಸಿದ್ದಾರೆ. ಅಂದಿನ ಶೋಷಣೆಯ ದಟ್ಟ ಚಿತ್ರಣವನ್ನು ನೀಡುತ್ತಿರುವುದನ್ನು ನೋಡಿದರೆ ಈ ಬಗೆಯ ಚಿಂತನೆಯು ಸಾಹಿತ್ಯಿಕ ವಲಯದಲ್ಲಿ ಮಾನ್ಯತೆ ಪಡೆಯುತ್ತಿದ್ದುದನ್ನು ಗುರುತಿಸಬಹುದು. ಕೊರಡ್ಕಲ್ ಶ್ರೀನಿವಾಸರಾಯರನ್ನೂ ಸೇರಿದಂತೆ ಯಾರೂ ಮಕ್ಕಳಿಗೆ ನೀಡುವಾಗ ಮಾತ್ರ ವಾಸ್ತವ ಕತೆಗಳನ್ನಿಡಲು ಯೋಚಿಸಲಿಲ್ಲ ಎನ್ನುವುದನ್ನು ಹೇಳಬಹುದು. ಅವರು ಶಾಲಾ ಮಕ್ಕಳಿಂದಲೆ ಬರೆಸಿ ತರುತ್ತಿದ್ದ ಅಚ್ಚುಕಟ್ಟಾದ ಪತ್ರಿಕೆ 'ಬಾಲನಂದಂ'.ಬಾಲ್ಯದಿಂದಲೆ ಮಕ್ಕಳಲ್ಲಿ ವಾಚನಾಭಿರುಚಿ ಹುಟ್ಟಲು, ಅವರ ಅನುಭವಕ್ಕೆ, ಅಭಿರುಚಿಗೆ ಸ್ಪಂದಿಸುವ, ಸರಳ, ಸುಲಭ ಸ್ವಾರಸ್ಯ ವಿಸಯಗಳನ್ನುಳ್ಳ 'ಬಾಲವಾಙ್ಮಯ' ವೆಂಬ ಕಿರುಹೊತ್ತಿಗೆಯನ್ನು ರಚಿಸಿದ್ದರು. ಮಗುವಿನ ಮನೋವೃತ್ತಿಯನ್ನು ಲಕ್ಷಿಸಿ ಬಾಲವಾಙ್ಮಯದ ಚೌಕಟ್ಟು ಹಾಕಬೇಕೆನ್ನುವುದು ಅವರ ಇಂಗಿತವಾಗಿತ್ತು. ಇದು ಮಕ್ಕಳ ಸಾಹಿತ್ಯದ ಕೈಪಿಡಿಯಂತೆ ಕಾಣಿಸಿಕೊಂಡಿತು ಎಂದು

ಹೇಳಬಹುದು. ನಂತರದ ದಿನಗಳಲ್ಲಿ ಮತ್ತೆ ಜನಪದ ಸಾಮಗ್ರಿಯನ್ನೆ ವಿಶೇಷವಾಗಿ ಅವಲಂಬಿಸಿಕೊಂಡು ಬರೆದರು.

'ನಾಳನ ಕಿಡಿಗಳನ್ನು ರೂಪಿಸಲಿರುವ ಸಿಡಿಮದ್ದು' ಎಂದು ತಿ. ತಾ. ಶರ್ಮರಿಂದ ಬಣ್ಣನೆಗೆ ಒಳಗಾದಂತಹ ಕೃತಿಗಳನ್ನು ಮಕ್ಕಳಿಗಾಗಿ ನೀಡಿದವರು ಬೇಕಲ ರಾಮರಾಯರು.[೨೦] 'ನಿರಕ್ಷರದ ಬಾಲಕರ ಮೃದು ಹೃದಯದ ಮೇಲೆ ಪರಿಣಾಮವನ್ನುಂಟುಮಾಡುವ ಬರಹಗಳ ಮೌಲ್ಯ ನಿರ್ಣಯ ಅಸಾಧ್ಯ' ಎಂದು ಶರ್ಮರು ಅಭಿಪ್ರಾಯ ಪಟ್ಟಮೇಲೆ ವೀರರಸ ಪ್ರಧಾನವಾದ ಶೈಲಿಯಲ್ಲಿ, ಆದರೆ ಆಡಂಬರವಿಲ್ಲದ, ಸಂಸ್ಕೃತಮಯವಿಲ್ಲದ, ಮಣ್ಣಿನ ದೇಸಿ ಗುಣವಿರುವ ಭಾಷೆಯಲ್ಲಿ ಅವರು ಬರೆದರು. ಚಾರಿತ್ರಿಕ ವಿಷಯಗಳನ್ನು ಅಧಿಕಾರ ವಾಣಿಯಿಂದ ಹೇಳಬಲ್ಲವರಾಗಿದ್ದ ಅವರು ಮಕ್ಕಳಿಗೂ ಅಂತಹದ್ದೇ ಆದ ಸಾಮಗ್ರಿಯನ್ನೇ ನೀಡಿದರು. 'ಪುಳ್ಳೂರು ಬಾಚ' ಅವರದೊಂದು ಪ್ರಸಿದ್ಧ ಕೃತಿ. ಮಾಯಿಪಾಡಿ ಅರಮನೆಯ ಸಮೀಪ ಪುಳ್ಳೂರಿನ ವಾಸುದೇವನ ಕತೆ ಇದಾಗಿತ್ತು. ಎಳ್ಳನ್ನು ಕೈಯಿಂದಲೆ ಹಿಂಡಿ ಎಣ್ಣೆಯನ್ನು ತೆಗೆಯುತ್ತಿದ್ದ ಪರಪಳ್ಳಿಯ ನಾಯಕನ ಪರಂಪರೆಗೆ ಸೇರಿದ ಕತೆ. 'ಅಗೋಳ ಮಂಜಣ್ಣ'ವು ಅವರ ಪ್ರಸಿದ್ಧ ಕತೆ. ಬಾಚನ ಕಲ್ಲು, ಬಾಚನ ಬಂಡಿ, ಬಾಚನ ಗೊಂಬೆಯಲ್ಲಿ ಆತನ ಮೆಚ್ಚಿನ ಹೆಸರು ಉಳಿದುಕೊಂಡಿದೆ. ಆ ಬಿರುದಿನ ಅರಮನೆ ಜಟ್ಟಿ ಹೊತ್ತು ತಂದ, ಆ ಭಾರೀ ಕಲ್ಲುಗಳು ಅವನ ಕೀರ್ತಿಯ ಶಾಸನ ಶಿಲೆಗಳಾಗಿ ಇಂದಿಗೂ ನಿಂತಿವೆ' ಎಂದು ಬರೆದಿದ್ದಾರೆ. ಅವರ ಬರೆವಣಿಗೆಯ ಶೈಲಿಗೆ ಈ ಕೆಲವು ಸಾಲುಗಳ ಉದಾಹರಣೆ ಯಾಗಿ ನೋಡಬಹುದು. 'ನಾನು ಹಸುಳೆಯಾದರೆ, ನನ್ನ ಕತ್ತಿಯೂ ಹಸುಳೆಯೇನಮ್ಮಾ?' 'ಅಟ್ಟ ಅನ್ನ ಉಂಡು, ಪಟ್ಟೆ ಸೀರೆ ಉಟ್ಟು, ಪಟ್ಟೆ ಮಂಚದ ಮೇಲೆ ಮಲಗು. ಆ ಪುಂಡರನ್ನು ಹಿಡಿದು ತಂದು ನಿನ್ನ ಕಾಲ ಮೇಲೆ ಕೆಡಹುತ್ತೇನೆ'. 'ಈ ಕಂಟಕವನ್ನು ಹೇಗೆ ಕಿತ್ತೊಗೆಯುವುದೆಂದು ಯೋಚಿಸುವುದಕ್ಕಾಗಿ ಹಲವು ಹದಿನೆಂಟು ಸೀಮೆಗಳ ಗುರಿಕಾರರು, ಗುತ್ತುಗಳ ಬಾರಗರು, ಏಣೂರಿನ ಬಯಲಿನಲ್ಲಿ ಕೂಟ ಕೂಡಿದರು. ಆಗ ಪೆರಂಜೆ ಗುತ್ತು ಹೆಸರಾದ ಬೀಡು. ಅಲ್ಲಿ ಸಂದ ಬಾರಗರೆಲ್ಲ ದಂಡು ಕಡಿದ ಕಡುಗಲಿಗಳು'. 'ನಾನು ಕನ್ನಡಿತಿಯೆಂಬುದನ್ನು ತಿಳಿ, ಕನ್ನಡನಾರಿಯ ಸತ್ವವನ್ನು ನೋಡು. ನನ್ನ ಆ ಖಡ್ಗವನ್ನಿತ್ತ ಕೊಡು' 'ನಮ್ಮ ಕಾಸರಗೋಡು ಮೂರು ಗೆಲ್ಗಂಬಗಳ ನಾಡು'[೨೧] ಎಂಬ ಭಾವಪ್ರೇರಕ ಮಾತುಗಳನ್ನು ರಾಮರಾಯರು ಬರೆದು ಮಕ್ಕಳ ಕತೆಗಳಲ್ಲಿ ಪ್ರೇರಕತೆ ಮತ್ತು ರೋಚಕತೆಯನ್ನು ಸೇರಿಸುವ ಮೂಲಕ ಕತೆಗಳ ವಸ್ತು ವೈವಿಧ್ಯತೆಯನ್ನು ಮತ್ತಷ್ಟು ವಿಸ್ತರಿಸಿ ನೋಡಿದರು. ಕಾಸರಗೋಡಿನ ಕನ್ನಡ-ಕೋಟೆಯವರ ಭಾಷೆಯನ್ನು ಬಳಸಿರುವ ಅವರು ವಿಶಿಷ್ಟ ಸಿದ್ಧಿಯನ್ನು ಪಡೆದಿದ್ದರು. ಚಾರಿತ್ರಿಕ ವಸ್ತಗಳನ್ನು, ಐತಿಹ್ಯಗಳನ್ನು ಆಧರಿಸಿದ ಕೃತಿಗಳಂತೆಯೇ ಜನಪದ ಕತೆಗಳನ್ನೂ ಇವರು ಸಂಗ್ರಹಿಸಿದರು.

ಭಾರತೀಸುತರು (ಎಸ್.ಆರ್.ಅನಂತನಾರಾಯಣ) ಹಾಗೂ ನವಗಿರಿನಂದರು ಭಾರತಿಸುತರು ಪಂಜೆಯವರ ಮಾರ್ಗದರ್ಶನದಲ್ಲಿಯೇ ಕತೆಗಳನ್ನು ಬರೆಯಲು ತೊಡಗಿದವರು. ಸುಮಾರು ೨೫ ಕಥಾ ಸಂಕಲನಗಳನ್ನು ನೀಡಿರುವ ಅವರು ಕೂಡ ಜನಪದದ ಸಾಮಗ್ರಿಯನ್ನೇ ವಸ್ತುವಾಗಿ

---

[೨೦] ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಮಕ್ಕಳ ಸಾಹಿತ್ಯ, ಸಂಪುಟ ೯. ಪ್ರ: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ. ೫೬
[೨೧] ಅದೇ ೫೬.

ಆರಿಸಿಕೊಂಡಿರುವುದನ್ನು ಕಾಣುತ್ತೇವೆ. 'ಹುಲಿಗಳ ದಿಬ್ಬಣ', 'ಕಾಣೆಯಾದ ಕಬ್ಬಿಣರಾಯ', 'ಹೋತನ ಬೆನ್ನೇರಿದ ತೋಳ', 'ಮಂತ್ರದ ಕೋಲು', 'ಕಳ್ಳರ ಫಜೀತಿ' ಮುಂತಾದ ಅವರ ಕತೆಗಳ ತಲೆಬರಹಗಳೇ ಇವು ಜನಪದದ ಸರಕು ಎಂದು ಹೇಳುತ್ತವೆ. ನವಗಿರಿನಂದ ಎಂಬ ಹೆಸರಿನಿಂದ ಬರೆದ ಹೊಸಬೆಟ್ಟು ರಂಗರಾಯರು ಚಂದಮಾಮದಲ್ಲಿ ಬಹುದೀರ್ಘಕಾಲದ ವರೆಗೆ ಕೆಲಸ ಮಾಡಿದವರು. ಅವಿರತವಾಗಿ ಕತೆಗಳನ್ನು ಬರೆಯುತ್ತಾ ಬಂದವರು. ಅವರು ಚಿತ್ರಕಾರರಾಗಿಯೂ ಕಾಣಿಸಿಕೊಂಡು ಚಂದಮಾಮದ ನಿಯತ ಕಾಲಿಕೆಗಳಿಗೆ, ಎಲ್ಲ ಬಗೆಯ ಕತೆಗಳನ್ನು ಬರೆದರು. ಇಲ್ಲಿಯೂ ಬಹು ಮುಖ್ಯವಾಗಿ ಜನಪದದ ಸರಕೇ ಪ್ರಧಾನವಾಗಿಕಾಣಿಸಿಕೊಂಡಿತ್ತು. ರಾಜರ ಕತೆಗಳು, ಹಳ್ಳಿಗಾಡಿನ ಚಿತ್ರಣವಿರುವ ಕತೆಗಳು, ಜಾಣತನದ, ಮೋಸಹೋಗುವ, ರಾಜರ ಸಮಯದ ಕತೆಗಳು, ಭೂತಬೇತಾಳಗಳ ಕತೆಗಳು ಎಲ್ಲವಕ್ಕೂ ತಮ್ಮ ಬರೆವಣಿಗೆಯಲ್ಲಿ ಅವಕಾಶ ಕಲ್ಪಿಸಿಕೊಟ್ಟಿದ್ದರು. ಸರಳವಾದ, ನೇರವಾಗಿ ಕತೆಯ ಸಂದರ್ಭವನ್ನು ಮುಂದಿಡುವ, ಸಿದ್ಧಮಾದರಿಯ ಬರವಣಿಗೆಯಲ್ಲಿ ಬಗೆ ಬಗೆಯ ಹದವನ್ನು ಕಂಡುಕೊಂಡಿದ್ದರು. ನಿರೂಪಣೆಯಿಂದ ಮಕ್ಕಳನ್ನು ಹಿಡಿದಿಡುವ, ಓದಿಗೆ ಆಕರ್ಷಿಸುವ, ಕಥಾವಸ್ತುವನ್ನು ಸ್ವಾರಸ್ಯಕರವಾಗಿ ತಂದುಕೊಳ್ಳುವ ಪ್ರಯತ್ನಗಳನೆಲ್ಲ ಅವರ ಬರವಣಿಗೆಗಳಲ್ಲಿ ಕಾಣುತ್ತೇವೆ. ಸಾಮಾನ್ಯವಾಗಿ ಮಕ್ಕಳಿಗೆ ಎಂದುಕೊಳ್ಳಬಹುದಾದರೂ ಚಂದಮಾಮ ಎಲ್ಲ ಬಗೆಯ ವಯೋಮಾನದ ಓದುಗರನ್ನು ಆಶ್ರಯಿಸಿತ್ತು ಎನ್ನುವುದನ್ನು ತಳ್ಳಿ ಹಾಕಲಾಗದು. ಕನ್ನಡದಲ್ಲಿ ಹೆಚ್ಚು ಕತೆಗಳನ್ನು ಬರೆದವರು ನವಗಿರಿನಂದರು ಎನ್ನಬಹುದಾಗಿದೆ. ಮಕ್ಕಳ ವಾಸ್ತವದ ಕಥಾ ಪ್ರಸಂಗಗಳು ನಾವೀನ್ಯವಾಗಿ ಕಾಣಿಸಿಕೊಂಡು ಪ್ರಯೋಗಕ್ಕೊಳಪಟ್ಟುದುದನ್ನು ಅಲ್ಲಗಳೆಯಲಾಗದು. 'ಕೆಂಪು ಚೆಂಡು'ವಿನಂತಹ ಕತೆಯನ್ನು ಗಮನಿಸಿದರೆ ಇದರಲ್ಲಿ ಬಡತನ, ಉಳ್ಳವರ ನಡುವಿನ ಅಂತರಗಳು ಮಕ್ಕಳ ನಡುವೆ ಏನೆಲ್ಲ ಸಂಗತಿಗಳಿಗೆ ಕಾರಣವಾಗುತ್ತವೆ ಎನ್ನುವುದರ ಒಂದು ಸೊಗಸಾದ ಚಿತ್ರಣವಿದೆ. ಮಕ್ಕಳಲ್ಲಿನ ಮುಗ್ಧತೆ ಹಿರಿಯರ ಮನಗಳನ್ನು ಬದಲಿಸುವಷ್ಟು ಪರಿಣಾಮ ಬೀರುವುದನ್ನು ಕತೆ ಹೇಳುತ್ತದೆ.

ದೇವುಡು ಅವರು ಮಕ್ಕಳಿಗಾಗಿ ಬರೆಯಲು ೧೯೩೬ ರಿಂದ ಪ್ರಾರಂಭಿಸಿ, ಸುಮಾರು ಮುವ್ವತ್ತು ವರುಷಗಳಕಾಲ 'ನಮ್ಮ ಪುಸ್ತಕ' ಎನ್ನುವ ಪತ್ರಿಕೆಯೊಂದನ್ನು ನಡೆಸಿದರು ಎನ್ನುವುದು ಗಮನಾರ್ಹ ಸಂಗತಿಯಾಗಿದೆ. ಮಕ್ಕಳಿಗಾಗಿ ಬಹು ಕಾಳಜಿಯಿಂದ ಮಾಹಿತಿಯನ್ನು ವಿವಿಧೆಡೆಯಿಂದ ಸಂಗ್ರಹಿಸಿ, ಅವುಗಳೊಡನೆ ಅಗತ್ಯವದ ಚಿತ್ರಗಳನ್ನು ಸೇರಿಸಿ ತರುತ್ತಿದ್ದ ಈ ಪತ್ರಿಕಗೆಳು ಅವರ ಆಸ್ಥೆಯ ಶ್ರಮವನ್ನು ತೋರುತ್ತವೆ. ಅವರು 'ಮುದುಕಿಯ ಮಕ್ಕಳು' ಎಂಬ ಸಂಗ್ರಹಕ್ಕಾಗಿ ಬರೆದ ಮುನ್ನುಡಿಯಲ್ಲಿನ ಕೆಲವು ಮಾತುಗಳನ್ನು ಗಮನಿಸಬಹುದು. 'ಈ ಪುಸ್ತಕವನ್ನು ಬರೆದಿರುವುದು ಏಳೆಂಟು ವರ್ಷದ ಹುಡುಗರಿಗಾಗಿ. ಅವರು ಸ್ವತಂತ್ರವಾಗಿ ಓದಬಲ್ಲವರು. ಶಾಲೆಯಿಂದ ಮನೆ, ಮನೆಯಿಂದ ಶಾಲೆಗೆ ಹೋಗಿ ಬರುವುದರ ಜೊತೆಗೆ ಕೊಂಚ ಹೊರಗೂ ತಿರುಗಿರಬಹುದಾದ ಸಂದರ್ಭಗಳುಂಟು. ಮುಂದುವರಿಯುತ್ತಿರುವ ಅವರ ಬುದ್ಧಿಯನ್ನು ಇನ್ನೂ ಅಷ್ಟು ದೂರ ಎಳೆದುಕೊಂಡು ಹೋಗುವುದು ಒಳ್ಳೆಯದು ಎಂಬ ಉದ್ದೇಶದಿಂದ ಕತೆಗಳನ್ನು ಕೊಂಚ ವಿಳಂಬಿಸಿ ಬರೆದರು. ಜೊತೆಗೆ ಹೊಸ ಹೊಸ ವಿಷಯಗಳನ್ನೂ ಮಕ್ಕಳಿಗೆ ಅಪ್ರಿಯವಾಗದ ರೀತಿಯಲ್ಲಿ ಸೇರಿಸಲು ಪ್ರಯತ್ನಿಸಿದೆ. ಈ ಪದ್ಧತಿಯು ಎಲ್ಲರಿಗೂ

ಸಮರ್ಪಕವಾಗಿರುವುದೆಂಬುದು ನನ್ನ ಭಾವನೆಯಾಗಿದೆ.[೨೨] ಎಂದು ಮಹತ್ತ್ವವಾದ ಸಂಗತಿಯ ಬಗೆಗೆ ಪ್ರಸ್ತಾಪಿಸಿರುವುದು ಮಕ್ಕಳ ಕಥಾಸಾಹಿತ್ಯದ ಲಕ್ಷಣವನ್ನು ಜೊತೆಗೆ ಮಗುವಿನ ಮನಸ್ಥಿತಿಯನ್ನು ಅವರು ತಿಳಿಸಿ ಹೇಳಿರುವುದು ಮಕ್ಕಳ ಕತೆಗಳ ಮಿತಿಯನ್ನು ಗೆರೆ ಎಳೆದಂತೆಯೂ ಹಾಗೂ ಎಳೆಯ ವಯೋಮಾನದ ಮಕ್ಕಳ ಅಗತ್ಯತೆಯನ್ನು ಸ್ಪಷ್ಟವಾಗಿ ಹೇಳಿರುವುದನ್ನು ಇಲ್ಲಿ ಗಮನಿಸಬೇಕು. ಮಕ್ಕಳ ಕತೆಯ ವಸ್ತುವನ್ನು ಆರಿಸಿಕೊಳ್ಳವಾಗ ಎಂತಹ ಅಂಶಗಳನ್ನಿರಿಸಿಕೊಂಡರೆ ಒಳಿತು. ಮಕ್ಕಳಿಗೆ ಮೇಲು ಕೀಳೆಂಬ ಭಾವನೆಯನ್ನು ಬಿತ್ತುವುದು ಮಕ್ಕಳ ಕತೆಗಳಲ್ಲಿ ಔಚಿತ್ಯವಲ್ಲ ಆದರೂ ಮಕ್ಕಳ ತಿಳಿವಳಿಕೆಗೆ ಅರಿಯುವಂತೆ ಸಾಮಾಜಿಕ ವ್ಯವಸ್ಥೆಯನ್ನು ಮನದಟ್ಟು ಮಾಡಿಕೊಡುವುದು ಸೂಕ್ತವೆಂಬುದನ್ನು ನಿಖರವಾಗಿ ತಿಳಿಸಿ ಅವರು ಬರೆಯುತ್ತಾರೆ. ಏಕೆಂದರೆ ಇಂದಿನ ಮಗುವು ನಾಳಿನ ಪ್ರಜೆಯಾದ ಮೇಲೆ ಅವನಿಗೆ ಈ ವ್ಯವಸ್ಥೆಯ ಅರಿವುಂಟಾಗುತ್ತದೆ ಎಂಬುದು ಅವರ ವಾದವಾಗಿತ್ತು. ಇದರಿಂದಾಗಿ ಇಷ್ಟೇ ಅಲ್ಲದೆ ಈ ಕತೆಗಳನ್ನು ಶಿಕ್ಷಣದ ಭಾಗವಾಗಿ ಉಪಾಧ್ಯಾಯರು ಮೊದಲು ಓದಿಸಿ ಅನಂತರ ಒಂದು ಸಲ ಹುಡುಗರನ್ನು ಕಥಾಪಾತ್ರಗಳನ್ನಾಗಿ ಮಾಡಿ, ನಾಟಕ ಮಾಡಲೂ ಕೂಡ ಸೂಚಿಸಿದ್ದಾರೆ. ನೀತಿಕತೆಗಳ ವಿಚಾರವಾಗಿ ದೇವುಡು ರವರು ಮಕ್ಕಳಿಗೆ ನೀತಿಯೆಂಬುದನ್ನು ಅಡಿಪಟ್ಟಿ ಹಾಕಿಕೊಂಡು ಹೇಳುವುದನ್ನು ಅಲ್ಲಗಳೆಯುತ್ತಾ ನೀತಿಯು ಕೇವಲ ಸೂಚ್ಯವಾಗಿ ಕಾಣಿಸಿಕೊಳ್ಳಬೇಕು ಬಲವಂತದ ಹೇರಿಕೆಯಾಗಬಾರದು, ಅದು ತಾನಾಗಿಯೇ ಮಕ್ಕಳ ಅರಿವಿಗೆ ಬರುವಂತೆ ಕತೆಯು ಪ್ರಚೋದಕ ಗುಣಹೊಂದಿರಬೇಕೆಂದು ತಿಳಿಸಿ ಹೇಳಿರುವುದನ್ನು ನೋಡುತ್ತೇವೆ. ಉಪಾಧ್ಯಾಯರು ರಸವತ್ತಾಗುವಂತೆ ಕತೆಯನ್ನು ಹೇಳುವುದು. ಮಕ್ಕಳಿಂದಲೇ ಹೇಳಿಸುವುದು. ಅದನ್ನು ನಾಟಕದಂತೆ ಆಡಿಸಿ ತೋರಿಸುವುದು. ಇದಿಷ್ಟೂ ಮಾಡಿದರೆ ಕತೆಯಲ್ಲಿರುವ ನೀತಿಯು ಹುಡುಗರ ಮನಸ್ಸಿಗೆ ಹಿಡಿಸಿರುತ್ತದೆ ಎಂದು ಕತೆ ಬೋಧಿಸುವ ವಿಧಾನವನ್ನು ಸಹ ಮುಂದಿಡುತ್ತಾರೆ. ನೀತಿಯೊಂದನ್ನು ಅಣೆಪಟ್ಟಿಯ ರೂಪದಲ್ಲಿ ಹುಡುಗರ ಮುಂದಿಟ್ಟು ಕತೆಯನ್ನು ಹೇಳಬಾರದೆನ್ನುತ್ತಾರೆ. ದೇವುಡು ಅವರು ಮಕ್ಕಳ ಓದಿನ ಬಗೆಗೆ, ಅವರ ಓದಿನಲ್ಲಿ ಈ ಬಗೆಯ ಕತೆಗಳ ಬಗೆಗೆ ಗಂಭೀರವಾಗಿ ತೊಡಗಿಸಿಕೊಂಡಿದ್ದರು ಎನ್ನುವುದು ಇಲ್ಲಿ ಗಮನಿಸಬೇಕಾದ ಸಂಗತಿ.[೨೩] ಅವರು ಜನಪದ ಕತೆಗಳನ್ನೆ ಮಕ್ಕಳಿಗೆ ನೀಡಿರುವುದನ್ನು ಈ ಎಲ್ಲಾ ಕಾರಣಗಳಿಗಿರಬೇಕು.

ಮೇವುಂಡಿ ಮಲ್ಲಾರಿ ಅವರು ಸೃಜನಶೀಲ ಗುಣದಿಂದ ಎದ್ದು ಕಾಣುವಂತಹ ಕೃತಿಗಳನು ನೀಡಿದವರು. 'ಕನ್ನಡ ಕಂದ' ಎನ್ನುವ ಪುಸ್ತಕ ಮಾಲೆಯನ್ನು ಹುಟ್ಟುಹಾಕಿ ಹೊರತಂದವರು. ಗದ್ಯ ಪ್ರಕಾರದಲ್ಲಿ ಅವರ ಕೃಷಿ ವಿಶೇಷವಾಗಿ ಕಾಣಸಿಗುತ್ತದೆ. ಧಾರವಾಡದ ಆಡು ಭಾಷೆಯಲ್ಲಿ, ಗ್ರಾಮೀಣ ವಾತಾವರಣದ ಸ್ಪರ್ಶವನ್ನು ಹೊಂದುವಂತೆ ಮಕ್ಕಳಿಗೆ ಕತೆಗಳನ್ನು ಹೇಳಿದರು. ಅವರ ಬರಹ ಶೈಲಿಯು ಗ್ರಾಮೀಣ ಪರಿಸರದ ಹಿನ್ನೆಲೆಯಲ್ಲೆ ನಿರೂಪಿತಗೊಂಡಿದೆ. ಜನಪದ ಕತೆಗಳನ್ನು ಇವರು ಹೇರಳವಾಗಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಅವನ್ನು ಬಲು ಸೊಗಸಾಗಿ ನಿರೂಪಿಸುವಲ್ಲಿ, ತಮಗೆ ಬೇಕಾದ ಹಾಗೆ ರುಚಿಕಟ್ಟಾಗಿ ಬರಹಕ್ಕೆ ಇಳಿಸಿಕೊಂಡುಬಂದಿರುವುದನ್ನು ಕಾಣುತ್ತೇವೆ. ಆಡುಭಾಷೆಯ ಬನಿಯನ್ನು ಬಹಳವಾಗಿ ಉಳಿಸಿಕೊಂಡು ಈ ಕತೆಗಳನ್ನು ಮುಂದಿಟ್ಟಿರುವುದು ಅವರು ಪರಂಪರೆಯನ್ನು ನೋಡುವ

---

[೨೨] ಆನಂದ ಪಾಟೀಲ. ಮಕ್ಕಳ ಸಾಹಿತ್ಯದಲ್ಲಿ ಕಥೆಗಳ ಬೆಳವಣಿಗೆ . ಅಂತರ್ಜಾಲ ಲೇಖನ ೨೦೧೭.
[೨೩] ಮಕ್ಕಳ ಸಾಹಿತ್ಯ ಮಾತುಕತೆ. ದೇವುಡು ನೆನಪು. ಡಿಸೆಂಬರ್ ಸಂಚಿಕೆ ೧೨. ೨೦೧೩. ಸಂ: ಆನಂದ ಪಾಟೀಲ.

ಸಂಗತಿಯಾಗಿದೆ. ಎಲ್ಲಿಯೂ ನೀತಿಯಂತಹ ಉದ್ದೇಶಗಳಿಗೆ ಸೀಮಿತಗೊಳಸದೆ, ಕತೆಯ ವಿಶೇಷಗಳನ್ನೇ ಆಧರಿಸಿ ಅವನ್ನು ಸೊಗಸಾಗಿ ನಿರೂಪಿಸುವುದು, ರೋಚಕವಾಗಿ ಕಟ್ಟಿಕೊಡುವುದು, ಹಾಸ್ಯವನ್ನು ಅಗತ್ಯವಾಗಿ ಬಳಸಿಕೊಳ್ಳುವುದು ಇವರ ಕತೆಯಲ್ಲಿ ಕಾಣುತ್ತದೆ. ಮಕ್ಕಳ ಕತೆಗಳಿಗೆ ಹೊಸತನದ ಸ್ಪರ್ಷವನ್ನು ಕೊಡಲು ಪ್ರಯತ್ನಿಸಿದರು. ಮಕ್ಕಳ ಕತೆ, ನಾಟಕ ಕೃತಿಗಳನ್ನು ರಚಿಸಿದ ಮಲ್ಲಾರಿಯವರು ಅನುಸರಿಸಿದ್ದು ಸಹ ಜನಪದದ ಸರಕನ್ನು ಎಂಬುದನ್ನು ಇಲ್ಲಿ ಗಮನಿಸಬೇಕು. ಮೇವುಂಡಿಯವರು ಬರೆದ ಮಕ್ಕಳ ಕತೆಗಳು ಎರಡು ರೀತಿಯವಾಗಿವೆ. ಅವು ಹಿತೋಪದೇಶ ಮಾಡುವ ಪಂಚತಂತ್ರಧಾರಿತ ಕತೆಗಳು, ಸ್ವತಂತ್ರವಾದ ನೀಳ್ಗತೆಗಳು. ಪಂಚತಂತ್ರ ಕತೆಗಳು ಹಿತೋಪದೇಶ ಹೇಳುವಂತಿದ್ದರು ಮೇವುಂಡಿಯವರ ರಚನೆಯಲ್ಲಿ ಸ್ವತಂತ್ರ್ಯ ರಚನೆಗಳಂತೆಯೆ ಬದಲಾವಣೆ ಮತ್ತು ಸಹಜ ಶೈಲಿಗಳನ್ನು ಒಳಗೊಂಡಿವೆ. 'ಮಂಗ ಎಂದರೆ ಮಂಗ' 'ನರಿಗಳ ತಂತ್ರ' 'ಗೆಳೆಯ' ಕತೆಗಳಲ್ಲಿ ಬರುವ ಪಾತ್ರಗಳಿಗೆ ವಿಕ್ರಮ, ಭೀಮ ಎಂಬ ಹೆಸರಿನಿಂದ ಪಾತ್ರಗಳನ್ನು ಚಿತ್ರಿಸಿ ಸರಸಮಯವಾದ ಸಂಭಾಷಣೆಯಿಂದ ಕತೆಯನ್ನು ನಿರೂಪಿಸಿರುವುದನ್ನು ಕಾಣುತ್ತೇವೆ. ತಮ್ಮದೆ ಆದ ಕಲ್ಪನೆಯ ಸೃಷ್ಟಿಯಲ್ಲಿ ರಚಿಸಿದ ಕೆಲವು ಕತೆಗಳಿಂದ ಹೆಸರಾಗಿರುವುದನ್ನು ಕಾಣುತ್ತೇವೆ. 'ಮುದ್ದಮ್ಮ' ಎನ್ನುವ ಗ್ರಾಮೀಣ ಪರಿಸರದ ತಾಯಿಯ ಸುತ್ತ ಅರಳಿರುವ ಅವರ ಈ ಸ್ವಂತದ ಕತೆಗಳು ಸರಳವಾದರೂ, ರಂಜನೀಯವಾಗಿ ಮಕ್ಕಳಿಗೆ ಬಲು ಹಿತವೆನಿಸುತ್ತವೆ. ಅವರ ಎಲ್ಲಾ ಕತೆಗಳು ತಾಯಿ ಭಾವದ ಬಲುದೊಡ್ಡ ಸಂಗತಿಯನ್ನು ತಮ್ಮೊಳಗಿಟ್ಟುಕೊಂಡಿವೆ ಎನ್ನಬಹುದು. ಇವು ನೇರವಾಗಿ ಜನದಪದಿಂದ ಪಡೆದುವಲ್ಲ, ಅವರೇ ಸೃಷ್ಟಿಸಿಕೊಂಡವು ಎನಿಸುತ್ತವೆ.

ಮೇವುಂಡಿ ಮಲ್ಲಾರಿಯವರು ಮಕ್ಕಳಿಗಾಗಿನ ತಮ್ಮ ಬರವಣಿಗೆಯಲ್ಲಿ ಅಸಂಗತವಾದ, ಪಾಶ್ಚ್ಯಾತ್ಯದ ಬಗೆಗಳನ್ನು ಅನುಸರಿಸಿದಂತಿರುವ 'ತಿರುವು ಮುರುವು' ಅನ್ನುವ ದೀರ್ಘವಾದ ಕತೆಯೊಂದನ್ನು ಅವರು ಬರೆದಿದ್ದಾರೆ. ಸಿ. ಎಸ್. ಲುಯಿಯ ನಾರ್ನಿಯಾ ಕೃತಿಯಲ್ಲಿನ ಹಾಗೆ ಮೇವುಂಡಿಯವರು ಅವಾಸ್ತವವನ್ನು ಸೃಷ್ಟಿಸಿ ಬರೆಯುತ್ತಾರೆ.[೨೪] ಇವುಗಳು ಮಕ್ಕಳಿಗೆ ಸಹಜವಾದ ಆಸಕ್ತಿಯನ್ನು ಕೆರಳಿಸಿಕೊಂಡು ಆಕರ್ಷಿಸುತ್ತವೆ. ಅವರ ಸ್ವತಂತ್ರವಾದ ರಚನೆಗಳಲ್ಲಿ ಬಹುತೇಕ ನೀಳ್ಗತೆಗಳು ಕಾಣಿಸಿಕೊಂಡು ದೀರ್ಘಕಾಲಿಕವಾಗಿ ಮಕ್ಕಳನ್ನು ಹಿಡಿದಿಟ್ಟುಕೊಳ್ಳುತ್ತವೆ. ಅವರು ಕತೆಗಳಿಗಿರಿಸಿರುವ ಹೆಸರುಗಳೇ ಆಕರ್ಷಣೀಯವಾಗಿದ್ದು ಸೆಳೆಯುವಂತಿರುತ್ತವೆ. 'ಜತಿಕಾಟನ ತಂಗಿ', 'ಗುಬ್ಬಚ್ಚಿ ಗೂಡು', 'ಮುದ್ದಮ್ಮನ ಸಂಸಾರ', 'ಹೊಟ್ಟೆ ಡುಮ್ಮ' 'ಜಾಣಗುಬ್ಬಿ' ಮುಂತಾಗಿಯು, ಅವಿವೇಕಿ ಅರಸು, ಕೆಂಪು ಮೂತಿ ಹಂಪಣ್ಣ, ಬಂಗಾರ ಕೂದಲಿನ ರಾಕ್ಷಸ ಮುಂತಾದ ಸ್ವಾರಸ್ಯಕವಾದ ಹೆಸರುಗಳಿಂದ ಬಂದ ಕತೆಗಳು ಇವರಲ್ಲಿನ ಕತೆಯ ಸತ್ವವನ್ನು ಹೇಳುತ್ತವೆ. ಅವರ ಕತೆಗಳಲ್ಲಿ ಆರಂಭಿಕ ತಂತ್ರಗಾರಿಕೆಯು ಸೊಗಸನ್ನು ಮೂಡಿಸಿಕೊಂಡು ಓದುಗನನ್ನು ಉತ್ಸಾಹಿಯನ್ನಾಗಿಸಿಕೊಂಡು ರುಚಿಸುತ್ತಾ ಸಾಗುವಂತೆ ಮಾಡುತ್ತದೆ. ಮಲ್ಲಾರಿಯವರ ಕತೆಗಳಲ್ಲಿ ನೀತಿಯಿದೆ. ಕುತೂಹಲ ಕೆರಳಿಸುವ ಹಂಬಲಗಳಿವೆ. ಆಗಾಗ ಓದುಗನ ಆಸಕ್ತಿಯನ್ನು, ಜಿಜ್ಞಾಸೆಯನ್ನು ತರುವ ಜಾಣತನದ ಮಾತುಗಳಿವೆ. ಕೊನೆಗೆ ಕತೆಯು ಒಂದು ಸಾಮಾಜಿಕ

---

೨೪ 'ಸಂಧ್ಯಾ' ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ-೪, ೧೯೯೫, ಲೇ: ಗುರುನಾಥ ಇನಾಮದಾರ, ಪುಟ, ೪೩

ಆಶಯವನ್ನು ನೀಡುವ ಮೂಲಕ ಕೊನೆಯಾಗುವುದಿದೆ. ಮಲ್ಲಾರಿಯವರು ವಿಷಯವಸ್ತು ಯಾವುದಾದರೂ ರಸವಾಗಿ ನಿರೂಪಿಸುವ ಕಥಾತಂತ್ರಗಾರಿಕೆಯನ್ನು ಅವರ ಬರಹದಲ್ಲಿ ಮೂಡಿಸುತ್ತಾರೆ. ಮಕ್ಕಳ ಸಹಜವಾದ ತುಂಟತನವನ್ನು ಸರಕನ್ನಾಗಿಸಿ ಬರೆದ ಇವರು ದೊಡ್ಡವರಲ್ಲಿರುವ ಮಕ್ಕಳ ಬಗೆಗಿನ ಧೋರಣೆಗಳನ್ನು ಸಹ ಚಿತ್ರಿಸಿರುವುದನ್ನು ನೋಡಬಹುದಾಗಿದೆ.[೨೫] ಇವರು ಮಯೂರವರ್ಮ ಎಂಬ ಐತಿಹಾಸಿಕ ವಸ್ತುವನ್ನೂ ಆಧರಿಸಿ ಮಕ್ಕಳಗಾಗಿ ನಾಟಕವನ್ನು ನೀಡಿದ್ದಾರೆ. ಜನಪದ ವಸ್ತುಗಳಗಷ್ಟೆ ಸೀಮಿತವಾಗಿರದೆ ಸಾಮಾಜಿಕವಾದ ಮತ್ತು ಇತಿಹಾಸದ ವಸ್ತುಗಳನ್ನು ಮಕ್ಕಳ ಮುಂದಿರಿಸಿರುವುದನ್ನು ಗಮನಿಸುವಂತಹದ್ದು. ನಂತರ ಅವರ ವಸ್ತು ವಿಸ್ತಾರವು ಮಕ್ಕಳನ್ನು ಹಾಸ್ಯದ ಮೂಲಕ ರಂಜಿಸಲು ಹರಿದಿರುವುದನ್ನು ಕಾಣುತ್ತೇವೆ. ಒಟ್ಟಾರೆ ಮೇವುಂಡಿಯವರು ಜನಪದದ ಸರಕನ್ನು ಅವಲಂಬಿಸಿದ್ದು ಅದನ್ನು ಹೊಸತನದಿಂದ ಕಾಣಬಯಸಿರುವುದನ್ನು ಇಲ್ಲಿ ಸ್ಪಷ್ಟವಾಗಿ ಗುರ್ತಿಸಿಕೊಳ್ಳಬಹುದು.

ಬೆಂಗಳೂರಿನಲ್ಲಿ ಆರ್. ಕಲ್ಯಾಣಮ್ಮನವರು ಮಕ್ಕಳ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಾ ಬಂದವರು. ಮಕ್ಕಳ ಸಾಹಿತ್ಯದ ಇನ್ನೊಂದು ತೆರನಾದ ಹಂಬಲ ವ್ಯಕ್ತವಾದ ಬಗೆಯನ್ನು ಇಲ್ಲಿ ಕಾಣಬಹುದು. 'ಮಕ್ಕಳ ಕೂಟ' ಎಂಬ ಸಂಸ್ಥೆಯೊಂದನ್ನು ಸ್ಥಾಪಿಸಿಕೊಂಡು ಟಿ.ಎಮ್.ಆರ್ ಸ್ವಾಮಿಯವರನ್ನು ಶಿಕ್ಷಕರನ್ನಾಗಿ ನೇಮಿಸಿಕೊಂಡು, ಮಕ್ಕಳ ಸಾಹಿತ್ಯಕ್ಕಾಗಿ ಬಹುದಿನಗಳ ಕಾಲ ಕೆಲಸಮಾಡುವಂತೆ ಮಾಡಿದರು. 'ಕನ್ನಡಿಗರ ಕಣಜ' ಎನ್ನುವ ಗ್ರಂಥಮಾಲೆಯ ಮೂಲಕ, ತಾವೇ ಪ್ರಕಾಶನ ಮಾಡಿಕೊಂಡು ಹಲವಾರು ಮಕ್ಕಳ ಪುಸ್ತಕಗಳನ್ನು ಪ್ರಕಟಿಸಿದರು. ಈ ಮಾಲೆಯಲ್ಲಿ ದೊಡ್ಡವರು ಮಕ್ಕಳಗಾಗಿ ಬರೆದ ಸಾಹಿತ್ಯದ ಜೊತೆಗೆ ಮಕ್ಕಳೂ ಬರೆದಿರುವ ಸಾಹಿತ್ಯವನ್ನು ಸೇರಿಸಿಕೊಂಡು ಪ್ರಕಟಿಸಿದರು. ಸ್ವಾಮಿಯವರು ನಾಟಕಗಳನ್ನು, ಕವಿತೆಗಳನ್ನು, ಕತೆಗಳನ್ನು ಸ್ವತಹ ಬರೆದು ಪ್ರಕಟಣೆಗೊಳಸಿದರು. ಮಕ್ಕಳ ಕೂಟದ ಸ್ಥಾಪನೆಗೆ ಕನ್ನಡಿಗರ ಕಣಜ ನೆರವಾಯಿತು. ಮಕ್ಕಳ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಗೆ ಇದು ವೇದಿಕೆಯನ್ನು ಒದಗಿಸಿತು. ಅವರ 'ಪಾಯಸದ ಪಟ್ಟಣ' ಎನ್ನುವ ನಾಟಕ ಜನಪದ ಕತೆಯನ್ನು ಆಧರಿಸಿದ್ದಾಗಿಯೆ ಮೂಡಿಬಂದಿತು. ಅದನ್ನು ಅವರು ನಾಟಕವಾಗಿಸಿ ಬಲು ಸ್ವಾರಸ್ಯಕರವಾಗಿ ಅಭಿನಯಕ್ಕಾಗಿಯು ಸಿದ್ಧಪಡಿಸಿದರು. ಇದು ಮಕ್ಕಳ ಸಾಹಿತ್ಯದ ವಿವಿಧ ಇಂಗಿತಗಳನ್ನು ಹಂಬಲಸಿತು ಎನ್ನಬಹುದು.

ಉತ್ತರ ಕರ್ನಾಟಕದ ಭಾಗದಲ್ಲಿಯು ಹೀಗೆಯೇ ತಮ್ಮದೇ ಆದ ಬಗೆಯಲ್ಲಿ ಅನೇಕರು ಮಕ್ಕಳಗಾಗಿ ಬರೆಯುವ ಆಸ್ಥೆಯನ್ನು ಹೊಂದಿ ಪ್ರಯೋಗಶೀಲತೆಯಿಂದ ತೊಡಗಿಸಿಕೊಂಡರು. ಶಿಕ್ಷಣದ ಭಾಗವಾಗಿಯೇ ಬರವಣಿಗೆ ವಿಶೇಷವಾಗಿ ಕಂಡರೂ ಕೆಲವೆಲ್ಲ ಸ್ವತಂತ್ರ ಪ್ರಯತ್ನಗಳಾಗಿ ಆಸಕ್ತಿಯನ್ನು ಮೂಡಿಸಿದವು. ಉತ್ಸಾಹದಿಂದ ಮಕ್ಕಳ ಕಥಾಲೋಕಕ್ಕಾಗಿ ಕೆಲಸ ಮಾಡಿದರು. ಗದಿಗೆಯ್ಯ ಹೊನ್ನಾಪುರಮಠ ಅವರ 'ನೀತಿ ಮಂಜರಿ' ಎನ್ನುವ ಕತೆಗಳ ಸಂಕಲನವು ಅನೇಕ ಬಾರಿ ಮುದ್ರಣ ಕಂಡು ಶಾಲೆಯಲ್ಲಿ ಪಠ್ಯವಾಗಿ ಬರುತ್ತಿತ್ತು. 'ಅಲ್ಲಾವುದ್ದೀನ್ ಮತ್ತು ಅದ್ಭುತ ದೀಪ'ವನ್ನು ಇವರು ಕನ್ನಡದಲ್ಲಿ ನೀಡಿದರು. ಜೀವನ ಚರಿತ್ರೆಗಳು, ಕತೆಗಳು ಮುಂತಾಗಿ ಬಹಳಷ್ಟು ಸಂಖ್ಯೆಯಲ್ಲಿ ಪುಸ್ತಕಗಳನ್ನು

---

[೨೫] ಅದೇ, ಪುಟ ೪೩

ಮಕ್ಕಳಿಗಾಗಿ ಅವರು ತಂದರು. ಇವರೂ ಜನಪದ ಕತೆಗಳನ್ನು ಸಾಕಷ್ಟು ಬಗೆಯಲ್ಲಿ ಬಳಸಿಕೊಂಡರು ಎಂಬುದು ಕಾಣುತ್ತದೆ. ಸಿದ್ಧ ಸರಕುಗಳು ಇಲ್ಲಿಯು ಬಳಕೆಯಾದವು ಇವು ಸಹ ಲಿಖಿತರೂಪದಿಂದ ಬಂದ ಸರಕುಗಳೆ ಆಗಿದ್ದವು.

'ಕರ್ನಾಟಕದ ಗಾಂಧಿ' ಎಂದೇ ಹೆಸರಾಗಿದ್ದ ಹರ್ಡೇಕರ ಮಂಜಪ್ಪರವರ 'ಬುದ್ಧಿಯ ಮಾತು' ಕೃತಿ ಅನೇಕ ಮುದ್ರಣವನ್ನು ಕಂಡಿತು. ಹೆಸರೇ ಹೇಳುವಂತೆ ಇದು ನೀತಿಕತೆಗಳನ್ನು ಒಳಗೊಂಡು ಪ್ರಕಟವಾಯಿತು. ಅವರು ನಿಗದಿತವಾಗಿ ಮಕ್ಕಳಿಗೆ ಬಹುಕಾಲ ಕಿರು ಪುಸ್ತಕಗಳನ್ನು ಹೊರ ತಂದರು. ಅವರು ಬಹಳಷ್ಟು ಸಲ ಜೀವನ ಚರಿತ್ರೆಗಳನ್ನು ಬಳಸಿಕೊಂಡರು.

ಪಂಡಿತ ಚೆನ್ನಪ್ಪ ಕವಲಿಯವರು ಇನ್ನೊಬ್ಬ ಆಸಕ್ತಿಯುತ ಮಕ್ಕಳ ಲೇಖಕರಾಗಿ ಕಾಣಿಸಿಕೊಂಡವರು. ಶಾಲಾ ಶಿಕ್ಷಕರಾಗಿದ್ದವರು ವಿದ್ವಾಂಸರಾಗಿ ಅವರು ಅನೇಕ ಮಕ್ಕಳ ಪುಸ್ತಕಗಳನ್ನು ಹೊರತಂದರು. 'ಪುಟ್ಟಣ್ಣನ ಪಂಚತಂತ್ರ' 'ಸುಸಂಸ್ಕೃತ ಶಿಶು ಸಾಹಿತ್ಯ ಸುಧಾ' 'ಸಚಿತ್ರ ಗಾಂಧಿ' ಮುಂತಾಗಿ ವಿಭಿನ್ನವಾದ ಬಗೆಗಳಲ್ಲಿ ಅವರು ಪುಸ್ತಕ ರಚಿಸಿದರು. ಇಂತಹ ಅನೇಕ ಲೇಖಕರ ಪ್ರಯತ್ನದಿಂದಾಗಿ ಮಕ್ಕಳಿಗಾಗಿನ ಬರೆಹವು ತನ್ನದೇ ಆದ ಸ್ವರೂಪದ ಮಾದರಿಗಳನ್ನು ರೂಪಿಸಿಕೊಳ್ಳತೊಡಗಿತು.

'ಹೊಯ್ಸಳ'ಎಂಬ ಹೆಸರಿನಿಂದ ಬರೆದ ಅರಗಂ ಲಕ್ಷ್ಮಣರಾಯರು ಮಕ್ಕಳಿಗಾಗಿ ಹನ್ನೆರಡು ಕಥಾ ಸಂಕಲನಗಳನ್ನು ನೀಡಿದ್ದು, ಕೆಲವು ಜನಪದದ ಮೂಲದಿಂದ, ಕೆಲವು ವಿದೇಶೀ ಮೂಲದಿಂದ, ಹಾಗೆಯೇ ಹಲವಾರು ಬೇರೆ ಬೇರೆ ಮೂಲದಿಂದ ಆಯ್ದ ಕತೆಗಳಾಗಿವೆ. ಮಕ್ಕಳಿಗೆ ಒಳ್ಳೆಯ ಸಂಗತಿಗಳನ್ನು ನೀಡುವ, ಸದ್ಭಾವವನ್ನು ಮೂಡಿಸುವ, ಯೋಗ್ಯ ವ್ಯಕ್ತಿಗಳನ್ನಾಗಿ ರೂಪಿಸುವ ಮನೋಭಾವವೆ ಇವರ ಕತೆಗಳಲ್ಲಿ ಕೆಲಸ ಮಾಡುತ್ತದೆ. ನೀತಿಯು ನೇರವಾಗಿ ಕಾಣಿಸಿಕೊಳ್ಳದೆ ಕತೆ ಹೇಳುವ ಪ್ರಕ್ರಿಯೆಯು ಲವಲವಿಕೆಯಿಂದ ಕೂಡಿರುತ್ತದೆ. ನಿರೂಪಣೆಯೇ ಎದ್ದು ಕಾಣುವ ಸಂಗತಿ. ಆಡುಭಾಷೆಯ ಮಾತಿನ ವರಸೆಗಳು ಇಲ್ಲಿ ಬಲುಸೊಗಸಾಗಿ ನಿರೂಪಣೆಯಲ್ಲಿ ಬಳಕೆಯಾಗುತ್ತ ಜೀವ ತುಂಬಿವೆ. ಲೇಖಕನೆ ಕತೆ ಹೇಳುವವನಾಗಿ ತನ್ನ ಮುಂದೆ ಕೇಳುವ ಮಕ್ಕಳಿದ್ದಾರೆ ಎಂದುಕೊಂಡು ಒಳ್ಳೆಯ ಆಸಕ್ತಿಯಿಂದ ಹೇಳುವಿಕೆಯು ಬರವಣಿಗೆಯ ಮೂಲಕ ನಡೆಯುತ್ತದೆ. ಇವು ಓದುವ ಕತೆಗಳೆ ಆದರೂ ಹೊಯ್ಸಳರು ಮಕ್ಕಳಿಗೆ ಕತೆ ಹೇಳುತ್ತಿರುತ್ತಾರೆ ಎನ್ನುವ ಭಾವನೆ ಮೂಡಿಸುವ ನಿರೂಪಣೆಯಿದೆ. ಗದ್ಯಕ್ಕೆ ಆಡುಭಾಷೆಯ ಸೊಗಡು, ಮಕ್ಕಳ ಮಾತುಗಾರಿಕೆಯ ಶೈಲಿ, ಹಾಸ್ಯದ ಲೇಪಗಳು, ಅಗತ್ಯ ತಿರುವುಗಳು, ಎಲ್ಲವನ್ನು ಸೇರಿಸಿಕೊಂಡು ಜೀವಂತಿಕೆಯ ಭಾವ ಭಾಸವಾಗುತ್ತದೆ. ಅವರ ಬರವಣಿಗೆಯಲ್ಲಿ ಮುಖ್ಯ ಲಕ್ಷಣವೆ ಈ ಕತೆಗಾರಿಕೆ. ಸಣ್ಣ ಸಣ್ಣ ವಾಕ್ಯಗಳು, ಸಣ್ಣ ಸಣ್ಣದಾಗಿ ವಿರಮಿಸಿಕೊಂಡು ಸಾಗುವ ದೀರ್ಘವಾದ ಸ್ವಾರಸ್ಯತೆಯು ಬೇಸರ ತರಿಸದೆ, ಆಸಕ್ತಿ ಕೆರಳಿಸುವ ದೀರ್ಘವಾದ ವಾಕ್ಯಗಳು, ಸಂಭಾಷಣೆಗಳು, ಕತೆಯ ಪರಿಸರಕ್ಕೆ ಹತ್ತಿರದ ಭಾಷೆಯ ಸೊಗಡು, ಎಲ್ಲಿಯದೇ ಕತೆಯಾಗಲಿ ಅದು ಹತ್ತಿರದ ವಾಸ್ತವ ಪರಿಸರದಲ್ಲಿ ಹುಟ್ಟಿಕೊಳ್ಳುವುದು. ಅದಕ್ಕೆ ಪೂರಕವೆನಿಸುವ ಕತೆ ಹೇಳುವಿಕೆಯ ಸೊಗಸುಗಾರಿಕೆಗಳು ಸಹಜವಾಗಿ ಗಮನ ಸೆಳೆಯುತ್ತವೆ.

ಜನಪದ ಕತೆಗಳನ್ನು ಇನ್ನೂ ಅನೇಕರು ಈಗಲೂ ಬಳಸಿಕೊಳ್ಳುತ್ತಿದ್ದಾರೆ. ಪ. ರಾಮಕೃಷ್ಣ ಅಂಥವರು ಇಂತಹದ್ದೇ ಆದ ಸರಕನ್ನು ವಿಶೇಷವಾಗಿ ನೆಚ್ಚಿಕೊಂಡಿರುವುದು ಕಾಣಿಸುತ್ತದೆ. ಆದರೆ ಇವರೆಲ್ಲ

ಲಿಖಿತವಾಗಿ ಬಂದಿರುವ ಈ ಬಗೆಯ ಕತೆಗಳನ್ನು ಆದರಿಸಿಕೊಳ್ಳುತ್ತಾರೆ ಎನಿಸುತ್ತದೆ. ಇನ್ನೂ ಅನೇಕರು ಈ ಬಗೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಪಾಂಡುರಂಗ ರಾಯರಂಥವರು ಇಡಿಯಾಗಿ ಕತೆಗಳನ್ನು ಜನಪದದಿಂದ ತೆಗೆದುಕೊಂಡು ನಿರೂಪಿಸಿದ್ದಾರೆ. ಇನ್ನೂ ಅಷ್ಟು ಪ್ರಚಾರದಲ್ಲಿರದ ಲೇಖಕರು ಈ ಬಗೆಯಲ್ಲಿ ಜನಪದ ಕತೆಗಳನ್ನು ಬಳಸಿಕೊಂಡಿದ್ದಾರೆ. ಇವರೆಲ್ಲರು ನೇರವಾಗಿ ಮೌಖಿಕ ಸಂಪ್ರದಾಯದಿಂದ ಪಡೆದುಕೊಂಡರೋ, ಅಥವಾ ಲಿಖಿತ ಸಂಪ್ರದಾಯದಿಂದ ಪಡೆದುಕೊಂಡರೋ ತಿಳಿಯಬೇಕಾಗಿದೆ.

## ೩.೪ ಅನುಭವಿಸಿದ ವಸ್ತುವಿನ ಸಾಧ್ಯತೆಗಳು, ಮಿತಿಗಳು

ಈ ಮೇಲಿನ ಎಲ್ಲ ಬಗೆಗಳನ್ನು ನೋಡಿದಾಗ ಸಾಮಾನ್ಯವಾಗಿ ಅನಿಸುವುದು ಜನಪದ ಕತೆಗಳು ಮಕ್ಕಳಿಗಾಗಿ ಬಲು ಆಸರೆಯಾಗುವ ಸಾಮಗ್ರಿ ಎಂದು ಇವರೆಲ್ಲರೂ ಭಾವಿಸಿದ ಹಾಗೆ ಕಾಣುತ್ತದೆ. ಮಕ್ಕಳಿಗಾಗಿ ಕತೆಗಳು ಬೇಕೆಂದುಕೊಂಡಾಗಿಯು ಈ ಬಗೆಯ ಕಥಾಸಾಮಗ್ರಿ ಎದುರಿಗಿದ್ದುದರಿಂದ ಬಹುಷಃ ಬಹುಶ ಸುಲಭವಾಗಿ ಬಳಸಿಕೊಂಡಿರಬಹುದು. ನಮ್ಮ ಜನಪದರೆ ಈ ಕತೆಗಳನ್ನು ಮಕ್ಕಳಿಗೆ ಹೇಳುತ್ತ ಬಂದಿರುವ ಪರಿಪಾಠ ಅಜ್ಜಅಜ್ಜಿಯರಿಂದ ಆಗುತ್ತಿದ್ದುದರಿಂದಲೂ ಇವರು ಪ್ರಭಾವಗೊಂಡಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಬಹುಮುಖ್ಯವಾಗಿ ಈ ಕತೆಗಳಲ್ಲಿನ ಅವಾಸ್ತವ ಸಂಗತಿಗಳು, ನಮ್ಮಕಾಲದಿಂದ ಅಂತರದಲ್ಲಿ ಘಟಿಸುತ್ತ ಫ್ಯಾಂಟಸಿಯ ಅವಾಂತರವನ್ನು ಸೃಷ್ಟಿಸುತ್ತಿದ್ದುದು ಬಹುದೊಡ್ಡ ಕಾರಣವೆನೆಂದರೆ ಈ ಬಗೆಯ ಕತೆಗಳು ಮಕ್ಕಳಿಗೂ ಇಷ್ಟವಾಗುತ್ತಿದ್ದುದ್ದರಿಂದಾಗಿದೆ. ಕುತೂಹಲ ಹುಟ್ಟಿಸುವ, ಗೂಢವಾದ, ಮಾಯಾ, ಜಾದೂ ನಡೆಯುವ ಪ್ರಸಂಗಗಳು ಖಂಡಿತವಾಗಿಯು ಹಿಡಿಸುತ್ತವೆ. ಈ ಬಗೆಯ ಸಾಮಗ್ರಿಯನ್ನು ಲೇಖಕರು ಬಳಸಿಕೊಳ್ಳಲು ಜನಪದ ಸಾಮಗ್ರಿಯು ಬಹುದೊಡ್ಡ ಆಸರೆಯಾದುದು ಗಮನಾರ್ಹ ಎನ್ನಬಹುದು. ಆದರೆ ಈ ಕತೆಗಳೆಲ್ಲ ದೊಡ್ಡವರ ನಡುವೆಯೇ ನಡೆಯುವ, ಅವರ ಬದುಕಿನ ಸಂಗತಿಗಳನ್ನೆ ಹೊತ್ತಿರುವಂತಹವಾಗಿರುವುದು ಕೂಡ ಅಷ್ಟೇ ಮುಖ್ಯವಾಗಿ ಗಮನಿಸುವ ಅಂಶವಾಗಿದೆ. ಈ ಬಗೆಯ ಹಿನ್ನೆಲೆಯನ್ನು ಕಳೆದು ಕೇವಲ ರೋಚಕವಾದ ಸಾಮಗ್ರಿಯಾಗಿ, ಕುತೂಹಲ ಮಾತ್ರ ಉಳಿಸಿಕೊಂಡು ಕತೆಗಳನ್ನು ಮಕ್ಕಳಿಗಾಗಿ ತಂದಿರಿಸಿದ್ದುದು ಈ ಲೇಖರು ಮಾಡಿಕೊಂಡ ದೊಡ್ಡ ಬದಲಾವಣೆ. ಜನಪದರಲ್ಲಿ ಸಮಗ್ರವಾಗಿ ಕಾಣಿಸಿಕೊಂಡ ಕತೆಗಳು ಮಕ್ಕಳಿಗೆ ಬರುಬರುತ್ತಾ ಪರಿವರ್ತನೆ ಹೊಂದಿದವು ಎನ್ನಬಹುದು. ಸೃಜನಶೀಲ ಮನಸ್ಸುಗಳು ಲೇಖಕರಲ್ಲಿ ಮೂಡಿ, ಇಂತಹವುಗಳನ್ನು ಕ್ರಿಯಾತ್ಮಕವಾಗಿ ಬಳಸಿಕೊಂಡು ಬರೆದುದನ್ನು ಕೆಲವರಲ್ಲಿ ಕಾಣಬಹುದಾಗಿದೆ. ಮಕ್ಕಳಿಗಾಗಿ ಆಪ್ಯಾಯಮಾನವಾದ ಕತೆಗಳನ್ನು ಆರಿಸಿಕೊಳ್ಳುವುದು, ಅವುಗಳನ್ನು ನಿರೂಪಿಸುವಾಗ ಮಕ್ಕಳಿಗೆ ತಕ್ಕದಾಗಿ ಸೊಗಸುಗೊಳಿಸುವುದು, ಆಡುಭಾಷೆಯ ಬನಿಯನ್ನು ತಂದುಕೊಳ್ಳುವುದು ಮುಂತಾಗಿ ಹಲವು ರೀತಿಯಲ್ಲಿ ಇವನ್ನು ಅವರು ಸೃಜನಶೀಲ ಸಾಮಗ್ರಿಯಾಗಿ ಪರಿವರ್ತಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಜನಪದ ಕತೆಯೆ ಹೊಸದಾಗಿ ಮಕ್ಕಳಿಗಾಗಿ ಅರಳದಂತೆ ಕಾಣುತ್ತದೆ. ಬರಹವಾದರೂ ಮೌಖಿಕ ಸಂಪ್ರದಾಯದ ಛಾಯೆಯು ಇಲ್ಲೆಲ್ಲ ಕಾಣಸಿಗುತ್ತದೆ.

**ಮಿತಿಗಳು**

ಇಲ್ಲಿನ ಉಚಿತ ಪರಂಪರೆಯು ಈಗಾಗಲೇ ಇರುವ ಜನಪದದ ಸರಕನ್ನು ಮೌಖಿಕವಾಗಿ ಅನುಭವಿಸಿದ್ದನ್ನೇ ಮತ್ತೆ ಮತ್ತೆ ತಂದಿರುವುದು ಮಕ್ಕಳ ಕತೆಗಳು ವಿಶಾಲವಾಗಿ ಹರಡಿಕೊಳ್ಳಲು ಸಾಧ್ಯವಾಗದೆ ಮಿತಿಯನ್ನು ಅನುಭವಿಸಿವೆ. ಹೊರಗಿನಿಂದ ತಂದಂತಹ ಕೃತಿಗಳು ಹೊರಗಿನ ಪರಿಸರವನ್ನು ಹೇಳದವೇ ವಿನಹ ನಮ್ಮಲ್ಲಿ ಅಂತಹ ಸೃಜನಶೀಲವಾದ ವಸ್ತುವಿನೆಡೆಗೆ ತುಡಿಯದಿರುವುದು ಕಾಣಿಸಿಕೊಂಡಿದೆ. ಜನಪದದ ಸರಕಿನ ಮೇಲೆಯೇ ಎಲ್ಲರೂ ಪ್ರಯೋಗಗಳನ್ನು ಮಾಡಿದಂತೆ ವಾಸ್ತವದ ಕತೆಗಳಗೆ ವಿಸ್ತಾರಗೊಳ್ಳಲಿಲ್ಲ. ಜನಪದದ ಕತೆಗಳಿಂದ ಹೊರ ಬಂದು ನೋಡಿದವರು ಸಹ ನೀತಿಯನ್ನು ಅವಲಂಬಿಸಿಕೊಂಡು ಬರೆದರು. ಅದರ ಚೌಕಟ್ಟನ್ನು ಮೀರದೆ ಉಳದುಕೊಂಡದ್ದು ಸಹ ಮಿತಿಯನ್ನು ಹೇರಿದಂತಾಯಿತು. ನೀತಿಯಿಂದ ಹೊರ ಬರಲು ಬಯಸಿದವರು ಸಹ ದೊಡ್ಡವರ ವಾಸ್ತವದ ಕತೆಗಳನ್ನು ಅನುಸರಿಸಿದರು. ಇಲ್ಲಿಯು ಸೃಜನಶೀಲತೆಯಿಂದ ಕನ್ನಡದ ಮಕ್ಕಳ ಸಾಹಿತ್ಯವು ಬರಲಾಗದೆ ಹಳೆತನವನ್ನು ಉಳಿಸಿಕೊಂಡಿತು. ಹೊರಗಿನ ಓದನ್ನು ದಕ್ಕಿಸಿಕೊಂಡವರು ಸಹ ನವೋದಯದ ಹಾದಿಯಲ್ಲಿ ಮಕ್ಕಳ ಕತೆಗಳನ್ನು ಕಟ್ಟಿಕೊಡಲಾಗಲಿಲ್ಲ. ಅವರೆಲ್ಲ ದೊಡ್ಡವರ ಸಾಹಿತ್ಯಕ್ಕೆ ತೊಡಗಿಸಿಕೊಂಡಷ್ಟು ಮಕ್ಕಳೆಡೆಗೆ ತಿರುಗಿ ನೋಡಲಿಲ್ಲ. ವಿದೇಶದಲ್ಲಿ ನಡೆದ ಪ್ರಯೋಗಗಳು ನಮ್ಮ ಮಕ್ಕಳನ್ನು ಸರಿಯಾಗಿ ತಲುಪದೆ ದೇಸಿಯತೆಯ ವ್ಯಾಮೋಹದಲ್ಲಿ ಮುಳುಗಿತು. ಇವೆಲ್ಲ ಅಂಶಗಳಿಂದಾಗಿ ಮಕ್ಕಳ ಕತೆಗಳು ಉಚಿತವಾಗಿ ವಿಸ್ತಾರವಾದ ಹರವನ್ನು ಅನುಭವಿಸಲಾಗಲಿಲ್ಲ.

ಅಧ್ಯಾಯಃ ೪

## ಮಕ್ಕಳ ಕಥಾ ಸಾಹಿತ್ಯದ ಸ್ವರೂಪಗಳ ಮೇಲೆ ಪ್ರಭಾವ, ಪ್ರೇರಣೆಗಳು

೪.೧ ವಿದೇಶದ ಕಥೆಗಳ ಪ್ರಭಾವ, ಪ್ರೇರಣೆ

೪.೨ ವಿದೇಶದಿಂದ ಕನ್ನಡಕ್ಕೆ ಬಂದ ಪ್ರಮುಖ ಕಥೆಗಳು

೪.೩ ಭಾರತೀಯ ಇತರ ಭಾಷೆಗಳ ಪ್ರಭಾವ, ಪ್ರೇರಣೆ

೪.೪ ಭಾರತೀಯ ಇತರೆ ಭಾಷೆಗಳಿಂದ ಕನ್ನಡಕ್ಕೆ ಬಂದ ಪ್ರಮುಖ ಕತೆಗಳು

## ಅಧ್ಯಾಯ : ೪

# ಮಕ್ಕಳ ಕಥಾ ಸಾಹಿತ್ಯದ ಸ್ವರೂಪಗಳ ಮೇಲೆ ಪ್ರಭಾವ, ಪ್ರೇರಣೆಗಳು

ಕನ್ನಡದ ಮಕ್ಕಳ ಕಥಾ ಜಗತ್ತು ಬಹುಕಾಲದ ವರೆಗೆ ಜನಪದದ ಸರಕನ್ನು ಬಳಸಿ, ಅದರ ಬೆಳಸನ್ನು ಅನುಭವಿಸಿದ ಮಕ್ಕಳಿಗೆ ವಿದೇಶಿ ಸಾಹಿತ್ಯದ ಸರಕನ್ನು ಅಗತ್ಯವಾಗಿ ಭಾವಿಸುವ ವಾತಾವರಣವನ್ನು ನಮ್ಮ ಲೇಖಕರು ಹೊಸತನದ ಹೆಸರಲ್ಲಿ ಕಂಡುಕೊಂಡರು. ಇದು ನಮ್ಮ ಲೇಖಕರಿಗೆ ಹೊಸ ಓದಿಗೂ ದಾರಿಮಾಡಿಕೊಟ್ಟಿತು. ಜಗತ್ತಿನ ಪ್ರಜೆಯಾಗಿ ಮಗುವನ್ನು ಕಾಣುವ ಹಂಬಲವು ನಮ್ಮವರಲ್ಲಿ ಕಾಣಿಸಿರಬೇಕು. ಇಂದಿನ ವಿಶ್ವಮಾನವ ಕಲ್ಪನೆಗೆ ಅದು ದಾರಿಯೂ ಆಗಿರಬಹುದು. ಪ್ರಪಂಚದ ಜ್ಞಾನವು ಮಗುವಿಗೆ ಅಗತ್ಯವಾದುದು ಎಂದು ಭಾವಿಸಿದ ಮೇಲೆಯೇ ದೇಶ ವಿದೇಶದ ಸರಕುಗಳು ಗಡಿದಾಟಿ ಪ್ರವೇಶಿಸಿದವು. ಇವೆಲ್ಲವುಗಳಿಗೂ ಪ್ರೇರಣೆಯಾದುದು ಇಂಗ್ಲಿಷ್‌ನ ಸಾಹಿತ್ಯ. ಇಂಗ್ಲೀಷರ ಸಾಮ್ರಾಜ್ಯ ಎಲ್ಲೆಲ್ಲಿ ವಿಸ್ತರಣೆಗೊಂಡತೋ ಅಲ್ಲೆಲ್ಲಾ ಅವರ ಸಂಸ್ಕೃತಿ, ಸಾಹಿತ್ಯ, ಜೀವನಶೈಲಿಗಳು ಪ್ರಭಾವವನ್ನು ಬೀರಿವೆ. ಇದು ಕೆಲವು ಸಲ ಇಚ್ಚೆಯು ಆಗಿರುವಂತೆ ಹೇರಿಕೆಯು ಆಗಿದೆ. ಸಾಹಿತ್ಯವು ಧರ್ಮದ ಪ್ರಸಾರದ ನೆಲೆಯಲ್ಲಿ ಕಾಲೂರಿತು. ಇದರಿಂದಾಗಿ ಭಾರತೀಯರಿಗೆ ಮುದ್ರಣ ವ್ಯವಸ್ಥೆಯ ಪರಿಚಯವಾಯಿತು. ಪತ್ರಿಕೆಗಳು ಹುಟ್ಟಿಕೊಂಡು ಜನರಿಗೆ ಓದುವ ಅಭಿರುಚಿಯುಂಟುಮಾಡಿದವು. ಅಷ್ಟೆಅಲ್ಲದೆ ಭಾರತದ ಘನ ಸಂಪತ್ತಾದ ಜನಪದವು ಮೌಖಿಕವಾಗಿದ್ದು ಲಿಖಿತ ರೂಪದ ಸಂಗ್ರಹದಲ್ಲಿ ಸಂಗ್ರಹಿಸಿಡಲು ಸಾಧ್ಯವಾಯಿತು. ಇದರೊಂದಿಗೆ ಅನೇಕ ಹೊಸತನಗಳು ಭಾರತದ ಪಾಲಿಗೆ ಉದಯವಾದವು. ಇಂತಹ ಕಾರಣದಿಂದ ತನ್ನ ಹುಟ್ಟನ್ನು ಪಡೆದುಕೊಂಡಿದ್ದು ಮಕ್ಕಳ ಸಾಹಿತ್ಯವು ಸಹ ಎನ್ನಬಹುದು. ಇದು ಒಂದು ಮುಖವಾದರೆ ನಮ್ಮಲ್ಲಿನ ಪ್ರತಿಭಾವಂತರು ಇಂಗ್ಲಿಷ್ ಶಿಕ್ಷಣವನ್ನು ಪಡೆದುಕೊಂಡು ಅದರ ಸಾಹಿತ್ಯದ ಒಲವನ್ನು ಬೆಳಸಿಕೊಂಡಿದ್ದು, ಅವರ ಸಾಹಿತ್ಯವನ್ನು ಕನ್ನಡದಲ್ಲಿ ಅನುವಾದಿಸಿ ಬರೆದರು. ಇದರ ಪರಿಣಾಮದಿಂದಾಗಿ ನಮ್ಮಲ್ಲಿ ಸಾಹಿತ್ಯದ ದಿಕ್ಕು ಬದಲಾಯಿತು, ಓದುಗರ ನಿರೀಕ್ಷೆಗಳು ಭಿನ್ನತೆಯನ್ನು ಬಯಸಿದವು. ಇಂತಹ ಪರಿಣಾಮವನ್ನು ಮಕ್ಕಳ ಕತೆಗಳು ಅನುಭವಿಸುವಂತಾಯಿತು. ಆದುದರಿಂದ ಬ್ರಿಟೀಷರ ಸರಕಿನೊಂದಿಗೆ ವಿದೇಶದ ಸರಕು ಸಹ ಭಾರತವನ್ನು ಪ್ರವೇಶಿಸಿತು. ಇದು ಕರ್ನಾಟಕದ ಮೇಲೆ ಮಾತ್ರ ಪರಿಣಾಮ ಬೀರದೆ ಭಾರತದ ಇತರ ಭಾಷೆಗಳ ಮೇಲೂ ಪ್ರಭಾವಿಸಿತು. ನಂತರ ಹಿಂದಿ, ಬೆಂಗಾಲಿಯಲ್ಲಿ, ಉಂಟಾದ ಬದಲಾವಣೆಗಳು ಕನ್ನಡದ ಮೇಲೂ ಬದಲಾವಣೆಗಳನ್ನು ತಂದಿತು. ಹೀಗೆ ಕನ್ನಡ ಮಕ್ಕಳ ಸಾಹಿತ್ಯವು ಎರಡು ರೀತಿಯ ಪ್ರಭಾಗಳಿಂದ ಮತ್ತು ತನ್ನಲ್ಲಿಯೇ ಹೊಸತನ ಕಂಡುಕೊಳ್ಳುವ ಮೂಲಕ ಮೂರು ಬಲಾವಣೆಗಳನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಸಾಗಿತು. ಅವುಗಳ ಬಗೆಗೆ ತಿಳಿಯುವುದು ಅಗತ್ಯವೆಂದು ಇಲ್ಲಿ ಭಾವಿಸಿದೆ.

## ೪.೧ ವಿದೇಶದ ಕತೆಗಳ ಪ್ರಭಾವ, ಪ್ರೇರಣೆ

ವಿದೇಶದ ಕತೆಗಳ ಪ್ರಭಾವ ಕನ್ನಡ ಮಕ್ಕಳ ಕತೆಗಳ ಮೇಲೆ ಉಂಟಾಗಿರುವುದು ನಮ್ಮ ಮುಂದಿದೆ. ನಮ್ಮ ಮಕ್ಕಳ ಕಥಾಲೋಕವು ಹಿಂದಿನ ಪರಂಪರೆಯ ನೆಲೆಯಲ್ಲಿ ಬಂದಿರುವುದೆ ಹೆಚ್ಚು. ಅದು ಹೊಸತನಕ್ಕಾಗಿ ಹಂಬಲಿಸಿ ಹೊಸಗಾಲದ ಬದಲಾವಣೆಗಳಿಗೆ ಸ್ಪಂದಿಸತೊಡಗಿತು. ಹೊರಗಿನ ಪ್ರೇರಣೆಗಳೆಡೆಗೆ ಹೊರಳತೊಡಗಿರುವುದು ಇತ್ತೀಚೆಗೆ ಎಂದು ಹೇಳಬೇಕು. ಇದು ಸಾಮಾನ್ಯವಾಗಿ ಭಾರತೀಯ ಎಲ್ಲ ಭಾಷೆಗಳಿಗೂ ಅನ್ವಯಿಸುವ ಮಾತಾಗಿದೆ. ಬೆಂಗಾಲಿಯಂತಹ ವಿರಳವಾದ ಕೆಲವು ಭಾಷೆಗಳಲ್ಲಿ ಕಾಣಿಸಿಕೊಂಡ ಕಾಳಜಿಗಳು, ಹೊಸತನಗಳು ಮೊದಮೊದಲು ಕಾಣಿಸಿರುವುದು ರವೀಂದ್ರರು ಮಕ್ಕಳ ಬರವಣಿಗೆಯಡೆಗೆ ವಿಶೇಷದವಾದ ಆಸಕ್ತಿ ತೋರಿಸಿದಾಗ, ಉಪೆಂದ್ರ ಕಿಶೋರ ರಾಯ್ ಅಂತಹ ಲೇಖಕರು ಬಹು ದೊಡ್ಡ ಪ್ರಮಾಣದಲ್ಲಿ ಮಕ್ಕಳ ಲೋಕಕ್ಕೆ ತೆರೆದುಕೊಂಡರು. ಕನ್ನಡದಲ್ಲಿ ಪ್ರಬುದ್ಧರ ಕಥಾ ಜಗತ್ತು ಎಷ್ಟೆಲ್ಲ ಹೊಸತಿಗೆ ಸ್ಪಂದಿಸುತ್ತ ಬದಲಾಗುತ್ತ, ಸೃಜನಶೀಲವಾಗಿ ನಳನಳಸಿತೋ, ಅದಕ್ಕೆ ಹೋಲಿಸಿದರೆ ಮಕ್ಕಳ ಕಥಾ ಜಗತ್ತು ಬೆಳೆಯಲಿಲ್ಲ. ಮಕ್ಕಳ ಜಗತ್ತು ಎಂದ ತಕ್ಷಣ ಜನಪದ ಕತೆಗಳಿಗೆ ಜೋತುಬಿದ್ದಿರುವುದು ಸರ್ವೇಸಾಮಾನ್ಯವಾಗಿ ನಡೆದು ಬಂದಿದೆ. ಇದೆ ಬೃಹತ್ ಪ್ರಮಾಣದಲ್ಲಿ ಕಾಣಿಸಿಕೊಂಡು ರೂಢಿಯಾಯಿತು. ಅದೊಂದು ಬಗೆಯಲ್ಲಿ ಸಿದ್ಧ ಮಾದರಿಯಾಗಿ ಕಾಣಿಸಿಕೊಂಡಿತು. ಕೆಲವರೆಲ್ಲ ಬಹಳ ವಿಸ್ತಾರವಾದ ಜನಪದ ಕತೆಗಳನ್ನು ಮಕ್ಕಳಿಗೆ ನೀಡಿದರು. ಇದು ಅದರೊಳಗೂ ಹೊಸತನವೆನಿಸಿತು.

ಆಳವಾದ ಮತ್ತು ವಿಸ್ತಾರವಾದ ಓದಿನ ಅಭಾವವು ಇದಕ್ಕೆ ಕಾರಣವಾಗಿ ಪರಿಣಮಿಸಿತು. ಬಹಳಷ್ಟು ಸಲ ಶಿಕ್ಷಕ ಸಮುದಾಯವು ಇಲ್ಲಿ ತೊಡಗಿಸಿಕೊಂಡು, ಭಾಗವಹಿಸಿದುದರಿಂದ ಇಂಗ್ಲಿಷಿನ ಕೊರತೆ ಅನುಭವಿಸಿದುದರಿಂದ ಹೆಚ್ಚಿನ ಸಾಧ್ಯತೆಗಳಿಗೆ ತೆರೆದುಕೊಳ್ಳಲಿಲ್ಲ. ಹಾಗಾಗಿ ಅದೇ ಹಳೆಯ ಮಾದರಿಯ ವಸ್ತುಗಳು, ಹಾಡಿನ ಬಗೆಗಳು ಪದೆ ಪದೆ ಕಾಣಿಸಿಕೊಂಡು ಏಕತಾನತೆ ಹಾಸಿಕೊಂಡಂತೆ ಕಾಣಿಸಿಕೊಂಡಿತು. ವಿಷಯದಲ್ಲು, ಭಾಷೆಯಲ್ಲಿ ಜನಪದ ಕತೆಗಳು ಎಷ್ಟರ ಮಟ್ಟಿಗೆ ಪ್ರಸ್ತುತ, ಅವನ್ನು ಬಳಸಿಕೊಳ್ಳುವುದು ಹೇಗೆ, ಮುಂತಾದ ಚಿಂತನೆಗಳ ನಡೆಸದೆ ಪ್ರಯೋಗಗಳನ್ನು ಮಾಡಲಾಯಿತು. ಪಂಚತಂತ್ರದ ಕತೆಗಳು ಮತ್ತೆ ಮತ್ತೆ ಪ್ರಕಟವಾಗುತ್ತ ಪ್ರಚಾರವಾದವು. ಇವನ್ನು ಬಿಟ್ಟರೆ ನೀತಿಕತೆಗಳು, ಸರಳ ಸಮೀಕರಣಗಳು, ಗಣಿತದ ಲೆಕ್ಕಗಳು, ಆದರ್ಶದ ಪಾಠಗಳು, ಮಾಹಿತಿ ಸಂಗ್ರಹಗಳು ಇಂತಹವೇ ನಮ್ಮ ಮುಂದೆ ಕಂಡುಬಂದವು. ಕತೆಯೆಂಬುದು ಒಂದು ಕ್ರಿಯಾತ್ಮಕ ಚಟುವಟಿಕೆ. ಸೃಜಶೀಲವಾಗಿ ಈ ಮಾಧ್ಯಮವನ್ನು ಮಕ್ಕಳ ಮುಂದೆ ಬಳಸಿಕೊಳ್ಳಬಹುದು ಎನ್ನುವುದರ ಕಡೆಗೆ ಚರ್ಚೆಗಳು, ಚಿಂತನೆಗಳು ನಡೆಯಲೇ ಇಲ್ಲ. ಒಟ್ಟಾರೆ ಸಾಹಿತ್ಯಿಕ ವಾತಾವರಣದಿಂದ ಕತೆಗಳನ್ನು ದೂರ ಉಳಿಸಿ ನೋಡುತ್ತಾ ಬಂದಿರುವುದು ಕಾಣಿಸುತ್ತದೆ. ಹೀಗೆ ಪ್ರತ್ಯೇಕವಾಗಿ ಉಳಿದುದರಿಂದ ಕೂಪಮಂಡೂಕ ವಾತಾವರಣವು ಕಾಣಿಸಿತು ಎನ್ನಬಹುದು. ನಮ್ಮಲ್ಲಿ ನವೋದಯದೊಡನೆ ಕನ್ನಡ ಸಾಹಿತ್ಯಕ್ಕೆ ಹೊಸಗಾಲದ ಹೊಸ ಉಸಿರು, ಹೊಸ ಗಾಳಿ ಸಾಧ್ಯವಾಯಿತು. ಅದು ಅನೇಕ ವಿಧವಾಗಿ ನಮ್ಮಲ್ಲಿ ತನ್ನನ್ನು ತೋರಿಸಿ ಕೊಂಡಿತು. ಇಂತಹ ಬದಲಾವಣೆಯು ನಮ್ಮ ಮುಂದಿದ್ದರು ನಮಗೆ ಮಕ್ಕಳ ಸಾಹಿತ್ಯದ ಒಲವು ಉಂಟಾಗಲಿಲ್ಲ.

ನವೋದಯವು ಇಂಗ್ಲೀಷಿನಿಂದ ಪ್ರಭಾವ, ಪ್ರೇರಣೆಯನ್ನು ಪಡೆಯುವುದಕ್ಕಿಂತ ಮೊದಲು ಇಂಗ್ಲಿಷಿನಲ್ಲಿ ಮಕ್ಕಳ ಸಾಹಿತ್ಯದ ಸುವರ್ಣಯುಗವನ್ನು ನಾವು ಕಂಡಾಗಿತ್ತು ಎನ್ನುವುದು ನಮ್ಮಲ್ಲಿ ಬಹಳಷ್ಟು ಮಕ್ಕಳ ಸಾಹಿತ್ಯ ವಲಯದ ಜನಕ್ಕೆ ತಿಳಿಯಲಿಲ್ಲ. ಅಲ್ಲಿ ಅಷ್ಟೊಂದು ಬಗೆಯಲ್ಲಿ ಹೊಸ ತುಡಿತ, ಸೃಜನಶೀಲ ಚಟುವಟಿಕೆ ನಡೆಯಿತು. ಅಪರೂಪದ ಕೃತಿಗಳು ಬಂದವು. ಅವುಗಳ ಪರಿಗಣನೆಯೂ ನಮ್ಮ ನಡುವೆ ನಡೆಯಲಿಲ್ಲ. ನವೋದಯದ ಪ್ರಭಾವ ಪ್ರೇರಣೆಗಳು ಕೇವಲ ಪ್ರಬುದ್ಧರ ಸಾಹಿತ್ಯದಲ್ಲಿಯಷ್ಟೇ ಆಯಿತು. ಮಕ್ಕಳ ಸಾಹಿತ್ಯದ ಮೇಲೆ ಪ್ರತ್ಯೇಕವಾಗಿ ಆಗಲಿಲ್ಲ. ನಮ್ಮಲ್ಲಿ ಮಕ್ಕಳ ಸಾಹಿತ್ಯ ನವೋದಯದ ಸಮಯದಲ್ಲಿಯೇ ಕಣ್ಣು ತೆರೆಯಿತು. ಅದು ಬಹಳಷ್ಟು ಸಲ ಶಾಲಾ ಪಠ್ಯಪುಸ್ತಕಗಳ ಅಂಗವಾಗಿ ಕಾಣಿಸಿಕೊಂಡಿದೆ. ಅದು ಸ್ವತಂತ್ರವಾಗಿ ಉಸಿರಾಡಿರುವುದು ಬಹು ಕಡಿಮೆ. ಇಂಗ್ಲಿಷಿನ ಪ್ರಭಾವ ನಮ್ಮ ಮಕ್ಕಳ ಸಾಹಿತ್ಯದ ಮೇಲೆ ಏಕೆ ಆಗಲಿಲ್ಲ ಎನ್ನುವುದು ದೊಡ್ಡದೊಂದು ಪ್ರಶ್ನೆಯಾಗಿ ಉಳಿಯಿತು. ನಮ್ಮ ಪ್ರಬುದ್ಧ ಸಾಹಿತಿಗಳು ಪ್ರಬುದ್ಧ ಸಾಹಿತ್ಯದಲ್ಲಿ ಅಷ್ಟೊಂದು ಮುಳುಗಿ ಹೋಗಿದ್ದರೂ ಮಕ್ಕಳ ಸಾಹಿತ್ಯದ ಕಡೆಗೆ ಕೆಲವರು ಸ್ವಲ್ಪ ಪ್ರಮಾಣದಲ್ಲಿ ಕಣ್ಣು ಹಾಯಿಸಿದರೂ, ಅವರು ಸರಿಯಾದ ಮಕ್ಕಳ ಸಾಹಿತ್ಯದ ಕಡೆಗೆ ಹೊರಳಲಿಲ್ಲ. ಆಗ ಗಮನಿಸದ ವಾತಾವರಣ ಹಾಗೆಯೇ ದೀರ್ಘ ಅವಧಿಯವರೆಗೆ ಮುಂದುವರೆಯುತ್ತಲೆ ಬಂತು. ಇದಕ್ಕೆ ಕಾರಣ ಜನಪದದ ಆಸರೆಯಲ್ಲಿ ಮುಳುಗಿ ಹೋಗಿದ್ದ ನಮ್ಮ ಲೇಖಕರ ಮನಸ್ಥಿತಿ ಎನ್ನಬಹುದು. ಕೆಲವು ತೀರ ವಿರಳವಾಗಿ ಹೊರಗಿನಿಂದ ಕೃತಿಗಳು ಕನ್ನಡಕ್ಕೆ ಬರಲಾರಂಭಿಸಿರುವುದನ್ನೂ ನೋಡುತ್ತೇವೆ. ನಾ ಕಸ್ತೂರಿ ಅವರು ಇಂಗ್ಲೀಷಿನ ಅತ್ಯಂತ ಪ್ರಸಿದ್ಧವಾದ, ಇಂದಿಗೂ ಓದಿನ ಜನಪ್ರಿಯತೆ ಉಳಿಸಿಕೊಂಡಿರುವ (ಲುಡ್ವಿಜ್ ಡಾಜ್‌ಸನ್) ಲುಯಿಸ್ ಕೆರೋಲ್‌ನ ‘ಆಲೀಸ್ ಇನ್ ವಂಡರ್ ಲ್ಯಾಂಡ್’ ಕೃತಿಯನ್ನು ‘ಪಾತಾಳದಲ್ಲಿ ಪಾಪಚ್ಚಿ’ ಯಾಗಿ ಕನ್ನಡಕ್ಕೆ ತರುವ ಕಾರ್ಯವನ್ನು ಮಾಡಿದರು. ಅಲ್ಲಿನ ಕತೆ ಕನ್ನಡಕ್ಕೆ ಕನ್ನಡದೇಎನ್ನುವಂತೆ ರೂಪಾಂತರವಾಗಿ ಬಂತು. ಆದರೆ ಅಂತಹ ಕೃತಿಯು ಬಂದಮೇಲಾದರು ಅದರ ಯಾವ ಪ್ರಭಾವವು ನಮ್ಮ ಮಕ್ಕಳ ಸಾಹಿತ್ಯದಲ್ಲಿ ಆಗಲಿಲ್ಲ. ಈಬಗೆಯ ಅಸಂಗತ, ವಿಚಿತ್ರ ಜಗತ್ತಿನ ಕಲ್ಪನೆಯನ್ನು ಇಟ್ಟುಕೊಂಡು ಲೇಖಕರು ಕತೆ ಬರೆದಿರುವುದನ್ನು ಕುತೂಹಲದಿಂದ, ಅಚ್ಚರಿಯಿಂದ, ದಿಗಿಲಿನಿಂದ ನೋಡಿದ ಬಗೆಗಳು ನಮ್ಮ ನಡುವೆ ನಡೆಯಲಿಲ್ಲ. ಆಲೀಸಳ ಕತೆ ಕೊನೆಯವರೆಗೂ ಅಸಂಗತ ಸಂಗತಿಗಳ ನಡುವೆಯೇ ನಡೆಯುತ್ತಾ ಹೋಗಿದೆ. ಅಲ್ಲಿ ಯಾವ ಸುಖಾಂತ್ಯವಾಗಲಿ, ಒಂದು ಪೂರ್ತಿಗೊಳ್ಳುವ ಕೊನೆಯಾಗಲಿ ಕಾಣಿಸುವುದಿಲ್ಲ. ಇಂತಹ ಕಲ್ಪನೆ ವಿದೇಶದ ನೆಲದ ಮಾತೆಂದು ಅಂದು ಬಿಡಲಾಯಿತು. ಲುಯಿಸ್ ಕೆರೊಲ್‌ನ ವ್ಯಕ್ತಿತ್ವದಿಂದಲೂ ಅದು ಹೊರಹೊಮ್ಮಿದ ವಿಶೇಷವೆಂದು ಸುಮ್ಮನಾದರು. ಅದು ಭಾರತೀಯರದಾದುದಲ್ಲ ಕನ್ನಡದ'ವಾತಾವರಣವಿಲ್ಲ ಎಂದು ನೆಪ ಹೇಳಿಸುಮ್ಮನಾದರು. ಈ ಕುರಿತು ಆನಂದ ಪಾಟೀಲರು ವಿವರವಾಗಿ ಚರ್ಚಿಸಿ, ವಿಮರ್ಶೆಗಣ್ಣಿನಿಂದ ನೋಡಿರುವುದಿದೆ.[26]ಅಮೇರಿಕದಲ್ಲಿ ನಡೆದ ಘಟನೆಯನ್ನು ಅನುಸರಿಸಿ ಅಲ್ಲಿಗೆ ವಲಸೆ ಬರುವ ಸಂಸಾರಗಳು ಬದುಕಿಗಾಗಿ ನಡೆಸುವ ಸಾಹಸಗಳನ್ನು ಹೇಳುವ ಕಥಾ ಹಂದರವುಳ್ಳ ಕೃತಿಗಳನ್ನು ಸರಣಿಯಾಗಿ ‘ಲಾರ ಇಂಗಲ್ಸ್ ವೈಲ್ಡ್’ ರು ಪ್ರಕಟಿಸಿದರು. ಇದನ್ನು ೧೯೬೫ ರಲ್ಲಿ ಎಸ್. ಅನಂತನಾರಾಯಣರು ಕನ್ನಡಕ್ಕೆ

೨೬ ಪಾತಾಳದಲ್ಲಿ ಪಾಪಚ್ಚಿ, (ಕೃತಿ ಕುರಿತು ಬರೆಹ) ಲೇ: ಆನಂದ ಪಾಟೀಲ, ಮಕ್ಕಳ ಸಾಹಿತ್ಯ: ಮಾತುಕತೆ (ಅಂತರ್ಜಾಲ ಪತ್ರಿಕೆಯ ಲೇಖನ.)

ತಂದರು. ಇವು ಪ್ರಸಿದ್ಧಿಯನ್ನು ಗಳಿಸುವ ಜೊತೆಗೆ ಮಕ್ಕಳಲ್ಲಿ ಓದಿನ ಅಭಿರುಚಿಯನ್ನು ಮೂಡಿಸಿದವು. ಇವುಗಳಲ್ಲಿ ಮೊದಲನೆಯ ಕೃತಿಯು ಇಂಗಲ್ಸನ ಬಾಲ್ಯವನ್ನು ಹೇಳುವುದರಿಂದ ಮಕ್ಕಳಿಗೆ ಹಿಡಿಸಿತು. ಮೊದಲ ಬಾರಿಗೆ ವಲಸೆ ಬರುವ ಜನಾಂಗಗಳು ಅನುಭವಿಸುವ ಯಾತನೆಯನ್ನು ರೋಮಾಂಚನವಾಗಿ ಹಿಡಿದಿಡುವ ಸನ್ನಿವೇಶಗಳಿದ್ದು ಅಲ್ಲಿನ ಮನಕಲಕುವಂತಹ ಸಂಗತಿಗಳು ಗಮನ ಸೆಳೆದವು.ಮೂಲನಿವಾಸಿ ಅಮೆರಿಕನ್‌ರ ನಡುವೆ ವಲಸಿಗರ ಸಂಘರ್ಷಗಳು ಇಲ್ಲಿ ಕಾಣಿಸಿಕೊಂಡು ಸಾಮಾಜಿಕತೆಗೆ ಕನ್ನಡಿ ಹಿಡಿಯುವಂತಾಯಿತು. ಹೀಗೆ ಮಕ್ಕಳ ಸಾಹಿತ್ಯವೆಂದು ಕಾಣಿಸಿಕೊಂಡ ಕೆಲವು ಕೃತಿಗಳನ್ನು ನಮ್ಮವರು ಕಾಳಜಿಯಿಂದ ತರುವಂತಹ ವಾತಾವರಣ ಸನ್ನಿಹಿತವಾಯಿತು. ಇದರ ಫಲವಾಗಿ ಇಂತಹ ಪ್ರಯತ್ನಗಳು ಆರಂಭವಾದವು. ನೀಲತ್ತಹಳ್ಳಿ ಕಸ್ತೂರಿಯವರು 'ಟಿನ್ ಸೋಲ್ಜರ್' ಕೃತಿಯನ್ನು ತಗಡಿನ ಸಿಪಾಯಿ ಎಂದು ಅನುವಾದಿಸಿದರು. ಜೆ. ಎಮ್. ಬೆರ್‍ರಿಯ 'ಪೀಟರ್ ಫ್ಯಾನ್' ಕೃತಿಯನ್ನು ಬಿ. ಜನಾರ್ಧನಭಟ್ಟರು ಅನುವಾದಿಸಿದರು. ಇದು ಫ್ಯಾಂಟಸಿ ಆದುದರಿಂದ ಮಕ್ಕಳಿಗೆ ಕುತೂಹಲವನ್ನು ಕೆರಳಿಸಿ ಮನಸೆಳೆಯಿತು. ಪೀಟರ್ ಫ್ಯಾನ್ ಜಲಕನ್ಯೆಯ ಪೊರೆಗಳನ್ನು ಅಂಟಿಸಿಕೊಳ್ಳುತ್ತಿದ್ದು, ಅವನು ನಕ್ಷತ್ರಗಳ ಜೊತೆ ಮಾತನಾಡಿ ಬರುತ್ತಿದ್ದದ್ದು, ಅವೆಲ್ಲವನ್ನು ತಕ್ಷಣ ಮರೆಯುತ್ತಿದ್ದ ಸಂಗತಿಗಳು ಮಕ್ಕಳ ಮುಂದೆ ತಮಾಷೆಯಾಗಿ ಕಾಣಿಸಿಕೊಂಡು ಇಷ್ಟವಾದವು. ಹೀಗೆ ಮಕ್ಕಳಿಗೆ ಹೊಸ ಬಗೆಯ ಓದು ರುಚಿಸುತ್ತಾ ಹೋಯಿತು. ಈ ಬಗೆಯ ವಾತಾವರಣವು ಹಿತವೆನಿಸಿದ ಲೇಖಕರು ಅನುವಾದದ ಜೊತೆಗೆ ರೂಪಾಂತರ, ಸಂಗ್ರಹಗಳ ರೂಪದಲ್ಲಿ ಕನ್ನಡ ಮಕ್ಕಳ ಸಾಹಿತ್ಯವನ್ನು ಕಂಡುಕೊಳ್ಳುವ ಚಿಂತನೆಗಳು ಉಂಟಾದವು. ವೆಂಕಟರಂಗೋ ಕಟ್ಟಿಯವರು ಅರಬ್ಬಿಯನ್ ನೈಟ್ಸ್ ಕತೆಗಳನ್ನು ಸಂಗ್ರಹಿಸಿದರು. ಗದಿಗೆಯ್ಯ ಹೊನ್ನಾಪುರ ಮಠರು 'ಅಲ್ಲಾವುದ್ದೀನನ ಅದ್ಭುತ ದೀಪ'ವನ್ನು ಕನ್ನಡದ ಮಕ್ಕಳಿಗಾಗಿ ತಂದಿತ್ತರು. ನಂತರ ಇಂತಹದೊಂದು ಕಾರ್ಯದಲ್ಲಿ ಲೇಖಕರು ಮುಂದಾದರು. ಜಿ. ಕೆ. ಅನಂತರಾಮು ಅವರು 'ಹಸಿರು ಭೂತ ಮತ್ತು ಇತರ ಸೂಫಿ ಕತೆಗಳು' ಎಂಬ ಕೃತಿಯನ್ನು ನೀಡಿದರು. ವಿದೇಶದ ಸರಕುಗಳ ಜೊತೆಗೆ ಭಾರತದ ಇತರ ಭಾಷೆಯ ಕತೆಗಳನ್ನು ತರುವುದರೊಂದಿಗೆ ಸಂಭ್ರಮಿಸಿದರು. ಅನಂತರಾಮು ಅವರಿಂದ ವಾಸವದತ್ತೆ, ಮಾತನಾಡುವ ಮಾವಿನ ಹಣ್ಣು ಇವು ಮರಾಠಿಯ ಮೂಲದಿಂದ ಕನ್ನಡಕ್ಕೆ ಬಂದವು. 'ಶ್ಯಾಮ ಮತ್ತು ಪುಟ್ಟಹಕ್ಕಿ'ಇಂಗ್ಲೀಷಿನಿಂದ ಬಂದಿತು. ಲೂಸಿಗೆ ಒಂದು ಅಂಗಿ' ಅಂತಹ ಕೃತಿಗಳನ್ನು ಐ.ಬಿ.ಎಚ್ ಪ್ರಕಾಶನವು ಹೊರತರುವಲ್ಲಿ ಶ್ರಮವಹಿಸಿತು. 'ಟ್ರೆಸರ್‌ಲ್ಯಾಂಡ್' ಕೃತಿಯು ಬಹಳ ಆಸಕ್ತಿಯಿಂದ ಅನೇಕ ಲೇಖಕರ ದೃಷ್ಟಿಕೋನಗಳಲ್ಲಿ ವಿವಿಧ ಹೆಸರಿಂದ ಕನ್ನಡಕ್ಕೆ ಪ್ರವೇಶಿಸಿತು. 'ದ್ರವ್ಯದ್ವೀಪ' ಎಂಬ ಹೆಸರಿಂದ ಚ. ನಾ. ಚಂದ್ರಪ್ರಭಾ ರವರು ಅನುವಾದಿಸಿದರು. ಇದನ್ನು ಸಾಹಿತ್ಯೋದಯ ಪ್ರಕಾಶನ ಮೈಸೂರು ಇವರು ಪ್ರಕಟಿಸಿದರು. 'ಗುಪ್ತ ಖಜಾನೆ' ಎಂಬ ಹೆಸರಿಂದ ಆರ್.ಎಸ್. ನಾಯಕರು ಇದೇ ಕೃತಿಯನ್ನು ಬರೆದರು. ಇದು ಅಭಿನವ ಪ್ರಕಾಶನ ಬೆಳಗಾವಿ ಇವರಿಂದ ಪ್ರಕಟವಾಯಿತು. 'ನಿಕ್ಷೇಪ ದ್ವೀಪ' ಎಂಬುದಾಗಿ ಬಿ.ಡಿ. ಮಾಧವ ಬಾಳಿಗರು ಇದನ್ನೆ ಬರೆದರು. ಅದನ್ನು ಮಂಗಳೂರಿನ ಶೆಣೈ ಸನ್ಸ್ ಪ್ರಕಾಶನವು ಹೊರತಂದಿತು. ಎಂ.ಎಸ್.ರಾವ್ ರವರು 'ನಿಧಿದ್ವೀಪ'ಎಂದು ಬರೆದುದನ್ನು ಡಿ.ವಿ.ಕೆ ಮೂರ್ತಿಯವರು ಮೈಸೂರಿಂದ ಪ್ರಕಟಿಸಿದರು. ಅಜ್ಜಂಪುರಸೂರಿ ಅವರು 'ಸಿರಿದ್ವೀಪ'' ಎಂದು ಬರೆದರು. ಇದರಿಂದ ಆ ಕೃತಿಯ ಮೌಲ್ಯ

ಮತ್ತು ಅಗತ್ಯವನ್ನು ಕಾಣಬಹುದು. ಕನ್ನಡದಲ್ಲಿ ಅದು ಉಂಟು ಮಾಡಿದ ಸಂಚಲನವನ್ನು ಪ್ರೇರಣೆಯ ಭಾಗವಾಗಿ ಕಾಣಬಹುದು. ಇದು ಸಮುದ್ರಯಾನದಂತಹ ರೋಚಕತೆಯನ್ನು, ಹೊಸಹೊಸ ಭೂ ಶೋಧಗಳನ್ನು, ಸಾಹಸದ ವರ್ಣನೆಯನ್ನು ಹೇಳುವುದರಿಂದ ಮಕ್ಕಳನ್ನು ಮನಸೂರೆಗೊಂಡಿತು. ಇದೇ ರೀತಿ ಕನ್ನಡದಲ್ಲಿ ಕಾಣಿಸಿಕೊಂಡ ಮತ್ತೊಂದು ಕೃತಿಯೆಂದರೆ 'ಗಲೀವರ್ಸ್ ಟ್ರಾವೆಲ್' ಸೇತುರಾಮ್‌ರಿಂದ ಅದು ಗಲಿವರನ ಪ್ರವಾಸ ಎಂದು ಕನ್ನಡದಲ್ಲಿ ಹೆಸರುವಾಸಿಯಾಯಿತು. ಹೀಗೆ ಕನ್ನಡದಲ್ಲಿ ಸದ್ದು ಮಾಡಿದ ಕೃತಿಗಳಲ್ಲಿ 'ಅಂಕಲ್ ಟಾಮ್ಸ್ ಕ್ಯಾಬಿನ್' ಕೂಡ ಮಹತ್ತ್ವವಾದುದು. ಎಲಿಜಬೆತ್ ಹ್ಯಾರಿಯಟ್ ಸ್ಟೋ ಇದನ್ನು ಬರೆದರು. ಕನ್ನಡದಲ್ಲಿ 'ಗುಲಾಮನ ಬಾಳು' ಎಂದು ಬಿ. ವಿ. ರಮಣ್ ಬರೆದರು. 'ಮಾವನ ಜೋಪಡಿ' ಎಂಬ ಹೆಸರಿಂದಲೂ ಅದು ಕನ್ನಡದಲ್ಲಿ ಬಂದಿದೆ. ಗುಲಾಮಗಿರಿಯನ್ನು ಕೇಂದ್ರವಾಗಿರಿಸಿಕೊಂಡು ಅದರ ಸುತ್ತಲೂ ತೆರೆದುಕೊಳ್ಳುವ ಘಟನೆಗಳು, ಹೋರಾಟಗಳು, ಸಂಗತಿಗಳನ್ನು ಚಿತ್ರಿಸಿರುವ ಕತೆ ಇದಾಗಿದ್ದು ಕನ್ನಡದ ಪರಿಸರವನ್ನು ಚೆನ್ನಾಗಿ ಹೊಂದಾಣಿಕೆ ಮಾಡಿಕೊಂಡು ನೋಡುವವರಿಗೆ ನಮ್ಮಲ್ಲಿಯ ವರ್ಗ ವ್ಯವಸ್ಥೆಯ ಮುಖಗಳನ್ನು ತೋರಿಸುವಂತಿರುವುದರಿಂದ ಇಷ್ಟವಾಯಿತು ಎನ್ನಬಹುದು. ಗೋಪಾಲ ಕೃಷ್ಣ ಅಡಿಗರು 'ದೆವ್ವದ ಕತೆಗಳು'ಎಂಬ ಹೆಸರಿಂದ ಕನ್ನಡಕ್ಕೆ ತಂದ ಕತೆಯು ಸಹ ನಮ್ಮ ನೆಲದಲ್ಲಿ ಮಕ್ಕಳಿಗೆ ಹೊಸತನವನ್ನು ಕಟ್ಟಿಕೊಡುವಲ್ಲಿ ನೆರವಾಗಿದೆ. ಅಲ್ಲಿವರೆಗಿನ ನಮ್ಮ ಕತೆಗಳು ಇಂತಹ ಭಯಪೀಡಕ ಅಂಶಗಳನ್ನು ಮಕ್ಕಳ ಮುಂದಿರಿಸುವಲ್ಲಿ ಆತಂಕವನ್ನು ಹೊಂದಿದ್ದವು. ಇತ್ತೀಚೆಗೆ ಶ್ರೀನಿವಾಸ ಉಡುಪರು 'ಹಿಡಂಬನ ತೋಟ'ಎಂಬ ಕೃತಿಯನ್ನು ಕನ್ನಡಕ್ಕೆ ತಂದರು ಅದು 'ಸೆಲ್ಫಿಸ್‌ಜೈಂಟ್ಸ್'ನ ಅನುವಾದವಾಗಿದೆ. ಇದರಿಂದ ಅತಿಮಾನುಷ ಕತೆಗಳನ್ನು ಹೊಸ ನೋಟದೊಂದಿಗೆ ಕಾಣುವಂತಾಯಿತು. ಇವರು ಸತ್ಯಜಿತ್‌ರೇ ಅವರ ಕತೆಗಳನ್ನು ಕನ್ನಡಕ್ಕೆ ತಂದು ಬೆಂಗಾಲಿಯ ವಾತಾವರಣವನ್ನು ನಮ್ಮ ಮಕ್ಕಳು ಅನುಭವಿಸುವಂತೆ ಮಾಡಿದರು. ಎ. ಎನ್. ಮೂರ್ತಿರಾವ್ ಕೂಡ ಕನ್ನಡಕ್ಕೆ ಕತೆಗಳನ್ನು ತಂದಿರುವುದು ಇದೆ. 'ರಿಪ್‌ವ್ಯಾನ್‌ವಿಂಕಲ್' ಇದು ದೊಡ್ಡವರಿಗಾಗಿ ಇರುವುದಾದರು ಮಕ್ಕಳಿಗೆ ಇಷ್ಟವಾಗುವ ಸಂಗತಿಗಳಿವೆ. ಸೋಮಾರಿಯೊಬ್ಬನ ನಿದ್ದೆಯ ವರ್ಣನೆಗಳಿವೆ. ಇವೆಲ್ಲವು ಮಕ್ಕಳಿಗೆ ತಮಾಷೆಯಾಗಿ ಕಾಣಿಸಿಕೊಂಡು ಮೋಜುಗೊಳಿಸುವುದಿದೆ. ಇಂಗ್ಲಿಷ್‌ನ ಹಾಗೆಯೆ ಭಾರತದಲ್ಲಿ ಇತರ ಭಾಷೆಗಳಿಂದ ಬಂದು ಕನ್ನಡದ ಮಕ್ಕಳ ಕತೆಯಾಗಿರುವ ಅನೇಕ ಉದಾಹರಣೆಗಳು ನಮ್ಮ ಮುಂದಿವೆ. ಅವುಗಳಲ್ಲಿ ಮಹತ್ತರವಾದುದನ್ನು ನೋಡುವುದಾದರೆ ಸ್ವಿಡಿಷ್ ಭಾಷೆಯಿಂದ ಬಂದ ಜುಜ್ಞಾ ಮತ್ತು ಥಾಮಸ್ ವೈಸ್ ಲ್ಯಾಂಡರ್‌ನ ಪುಟ್ಟಕತೆ ನಮ್ಮಲ್ಲಿ 'ಉಯ್ಯಾಲೆ ಆಡಿದ ಹಸು' ಎಂದು ಕಾಣಿಸಿಕೊಂಡಿತು. ಹಸುವೊಂದು ಕೇವಲ ಹುಲ್ಲುತಿಂದು ಹಾಲುಕೊಟ್ಟು ಸಾಯುವುದಕ್ಕಲ್ಲ ಹುಟ್ಟಿರುವುದು. ಅದಕ್ಕು ಮಾನವನಂತೆ ಆಸೆಗಳಿವೆ ಅದು ಸಹ ಆಸೆಗಳನ್ನು ಈಡೇರಿಸಿಕೊಳ್ಳಬಲ್ಲದು ಎಂಬ ಭಾವನೆಯು ಹುಟ್ಟಿಕೊಂಡು ನಮ್ಮಲ್ಲಿನ ಪ್ರಾಣಿ ಪಕ್ಷಿಗಳ ಕತೆಯಲ್ಲಿದ್ದ ಆಶಯವನ್ನು ಹೊಸದಾಗಿ ನೋಡುವಂತಾಯಿತು. ನ್ಯಾಷನಲ್ ಬುಕ್ ಹೌಸ್ ಇಂತಹ ಕತೆಗಳನ್ನು ಕನ್ನಡಕ್ಕೆ ತರುವ ಪ್ರಯತ್ನವನ್ನು

ಮಾಡಿದ ಮೇಲೆ ನಮ್ಮ ಮಕ್ಕಳ ಕತೆಗಳಿಗೆ ಹೊಸ ಸ್ಪರ್ಶ ಸಿಕ್ಕಿತು.[೨೭] ಇಂತಹದೆ ಆದ 'ಕೋಕೋವಾ ಜೋನ್ಸ್ ಗೇಟ್' ಜೋನ್ಸ್ ಬರೆದ ಚಿಕ್ಕ ಕತೆಗಳು ವಾಸ್ತವ ಅನುಭವಗಳಂತೆ ಮೂಡಿ ಮಕ್ಕಳಿಗೆ ಹಿಡಿಸಿದವು.

## ೪.೨ ವಿದೇಶದಿಂದ ಕನ್ನಡಕ್ಕೆ ಬಂದ ಕೆಲವು ಮಹತ್ತ್ವದ ಕತೆಗಳು

ಎನ್ ಬಿ ಟಿ ಟ್ರಸ್ಟಿನಿಂದ ವಿದೇಶದ ಕತೆಗಳನ್ನು ಕನ್ನಡಕ್ಕೆ ತಂದಿರುವ ಸಂಕಲನವೂ ಗಮನಾರ್ಹವಾಗಿದೆ. 'ಏಷ್ಯಾದ ಆಯ್ದ ಕತೆಗಳು' ಸಂಗ್ರಹದಲ್ಲಿ ೧೩ ಬೇರೆ ಬೇರೆ ದೇಶಗಳ ಕತೆಗಳಿವೆ [೨೮]. ಅಫ್ಘಾನಿಸ್ತಾನ, ಬರ್ಮ, ಇಂಡೋನೇಷಿಯಾ, ಇರಾನ್, ಜಪಾನ್, ಕೊರಿಯಾ, ಮಲೇಷಿಯಾ, ನೇಪಾಳ, ಪಾಕಿಸ್ತಾನ, ಫಿಲಿಫೈನ್ಸ್, ಸಿಂಗಪೂರ, ಶ್ರೀಲಂಕಾ, ಥೈಲ್ಯಾಂಡ್ ಹೀಗೆ ನಮ್ಮ ಸುತ್ತಲಿನ ದೇಶಗಳಲ್ಲಿನ ಲೇಖಕರು ಮಕ್ಕಳಿಗಾಗಿ ಹೇಗೆಲ್ಲ ತುಡಿದಿದ್ದಾರೆ ಎನ್ನುವುದಕ್ಕೆ ಇಲ್ಲಿ ಸೊಗಸಾದ ಉದಾಹರಣೆಗಳಿವೆ.

ರಸ್ಕಿನ್ ಬಾಂಡ್ ನಂತಹ ಲೇಖಕರು ತಮ್ಮ ಬೆವಣಿಗೆಯನ್ನು ಮಕ್ಕಳಿಗಾಗಿ ಕಂಡುಕೊಂಡ ಮೇಲೆ ಮಕ್ಕಳ ಸಾಹಿತ್ಯಾಸಕ್ತರಿಗೆ ಮತ್ತಷ್ಟು ಖುಷಿಕೊಡುವ ಸಂಗತಿಗಳು ಉಂಟಾದವು. ಪ್ರಕೃತಿಯ ಮಾತುಕತೆಗಳನ್ನು ಮಕ್ಕಳಿಗಾಗಿ ಅವರು ವಸ್ತುವಾಗಿ ಕಂಡುಕೊಂಡರು.ಮತ್ತು ಅವರದ್ದೇ ಆದ ಬಾಲ್ಯದ ಸಂಗತಿಗಳನ್ನು ಅಲ್ಲಿ ಪ್ರಮುಖವಾಗಿ ತಂದರು. ಬ್ರಿಟೀಷರು ಭಾರತ ಬಿಟ್ಟು ಹೋದಾಗ ಇಲ್ಲಿ ಉಳಿದಿದ್ದ ಆಂಗ್ಲೋ ಇಂಡಿಯನ್ ಕುಟುಂಬಗಳಿಗಾಗಿ ಪ್ರತ್ಯೇಕವಾದ ಭಾವನೆಗಳು, ಪರಿಸರ, ಸ್ವತಂತ್ರ್ಯ ಜೀವನದ ಹಂಬಲಗಳು ಕಾಣಿಸಿಕೊಂಡವು. ಅವರ ಜೀವನಶೈಲಿ, ಬಂಧನ ಮುಕ್ತತೆಯ ವಾತಾವರಣ, ಬಿಲುಪೈಲು ಜೀವನ ಇವೆಲ್ಲಾ ವಸ್ತುವಾಗಿ ರಸ್ಕಿನ್ ಬರೆವಣಿಗೆಯಲ್ಲಿ ಕಾಣಿಸಿಕೊಂಡವು.[೨೯] ಇಂತಹ ಪ್ರೇರಣೆಗಳನ್ನು ಕನ್ನಡದಲ್ಲಿಯು ಕಾಣಬಹುದಾಗಿದೆ. ರಸ್ಕಿನ್ ಬಾಂಡ್‌ರ ಇಂಗ್ಲಿಷ್ ಮೂಲದ ಕತೆಯು ಕನ್ನಡದಲ್ಲಿ ಹೇರಳವಾಗಿ ಕಾಣಿಸಿಕೊಂಡಿವೆ.

'ಸೀತೆ ಮತ್ತು ನದಿ' ಇಲ್ಲಿ ಗಮನಿಸಬೇಕಾದ ರಸ್ಕಿನ್ ರವರ ಮಹತ್ತರದ ಕತೆಯಾಗಿದೆ. ನದಿಯ ನಡುವಿನ ದ್ವೀಪದ, ಹಾಗೂ ಸಮುದ್ರದ ಸುತ್ತಲಿನ ಪರಿಸರವನ್ನು ಕುರಿತು ನಡೆಯುವ ಸಂಗತಿಗಳಿವೆ. ದ್ವೀಪದಲ್ಲಿನ ಕೋಳಿ, ಆಡು, ತರಕಾರಿ ವನಗಳ ನಡುವೆ ಅಶ್ವತ ಮರ ಕಾಣಿಸಿಕೊಳ್ಳುತ್ತದೆ. ಅಲ್ಲಿ ಅಜ್ಜನು ಮೀನಿನ ಬಲೆಯನ್ನು ಮಾಡುತ್ತಿರುತ್ತಾನೆ. ಯಾವ ಮೀನು ಎಲ್ಲಿ ಸಿಗುತ್ತದೆ ಎಂಬುದು ಅವನಿಗೆ ಸರಿಯಾಗಿ ತಿಳಿದಿದೆ. ನದಿಯಾಚೆ ಶಾಲೆ ಇರುವುದನ್ನು ಅವನ ಮೊಮ್ಮಗಳು ಸೀತೆ ನೋಡೇ ಇರುವುದಿಲ್ಲ. ಜೊತೆಗೆ ಹುಷಾರಿಲ್ಲದ ಅಜ್ಜಿಯ ಆರೈಕೆ ಅವಳ ಪಾಲಿಗೆ. ಅಜ್ಜಿಯನ್ನು ಷಾಗಂಜಿಯ ಆಸ್ಪತ್ರೆಗೆ ಕರೆದುಕೊಂಡು ಹೋಗುವಾಗ ಸೀತೆ ಒಬ್ಬಳೆ ಮನೆಯಲ್ಲಿರಬೇಕಾಗುವುದು. ಇದು ಅವಳಿಗೆ ಚಿಂತೆಯಲ್ಲ, ನದಿಯ ನೀರು ಏರಿದರೆ ಮಾತ್ರ ಭಯಗೊಳ್ಳುತ್ತಾಳೆ. ಆಡು ನೋಡಿಕೊಳ್ಳುವ ಗೊಡವೆಯಿಲ್ಲ, ಯಾಕೆಂದರೆ ಅಜ್ಜಿಯ ಆಸ್ಪತ್ರೆ ಖರ್ಚಿಗಾಗಿ ಅದು ಮಾರಾಟವಾಗಲಿದೆ. ಅದಾದ ಮೇಲೆ ಸೀತೆಯು ಅಜ್ಜನನ್ನು ಹುಡುಕಿಕೊಂಡು ಷಾಗಂಜಿಗೆ ಕೃಷ್ಣನೊಂದಿಗೆ ಬರುತ್ತಾಳೆ. ಅವನು ಒಂದು ಕೊಳಲು ಕೊಡುತ್ತಾನೆ. ಹಳ್ಳಿ ಮುಳುಗಡೆಯಾಗಿ

---

೨೭ ಹೀಗೆ.. ಖುಷಿಕೊಟ್ಟವು, ಲೇ: ಆನಂದ ಪಾಟೀಲ, ೨೦೦೩, ಪುಟ ೧೯.

೨೮ ಏಷ್ಯಾದ ಆಯ್ದ ಕಥೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೯೫, ಅನು: ಎಸ್. ಕೆ. ರಮಾದೇವಮ್ಮ.

೨೯ ಅಲರು ಮಕ್ಕಳ ಸಾಹಿತ್ಯ ಕುರಿತು, ಲೇ: ಡಾ. ಆನಂದ ಪಾಟೀಲ, ೨೦೧೦, ಪುಟ ೩೯.

ಗಾಡಿಯಲ್ಲಿ ಹೋದ ದಾರಿಯೂ ಮುಳುಗಡೆಯಾಗಿ ಅವರಿಗೆ ದಿಕ್ಕು ತೋಚದಾಗುತ್ತದೆ. ಮತ್ತೆ ದ್ವೀಪಕ್ಕೆ ಅಜ್ಜನೊಂದಿಗೆ ಹಿಂದಿರುಗುತ್ತಾಳೆ. ಕೃಷ್ಣ ಕೊಳಲಿಗಾಗಿ ಹುಡುಕಿಕೊಂಡು ದ್ವೀಪಕ್ಕೆ ಬಂದಾಗ ಅವಳು ಅದನ್ನು ಬಳಸಲು ಬರದೆ ಹಾಗೆಯೇ ಇಟ್ಟು ಕೊಂಡಿದ್ದು ಕೊಡುವಳು. ಎಂದೂ ಪಕ್ಕದ ಊರನ್ನು ನೋಡಿರದ ಸೀತೆ ಪಕ್ಕದ ಊರನ್ನು ಕಂಡು ಖುಷಿಯಿಂದ ಅವನೊಂದಿಗೆ ಮಾತನಾಡುತ್ತಾಳೆ. ಇಂತಹದೆ ಆದ ಕತೆಯು ನಾ. ಡಿಸೋಜರ 'ಮುಳುಗಡೆಯ ಊರಿಗೆ ಬಂದವರು' ಎಂಬ ಹೆಸರಿನಲ್ಲಿ ಮಲೆನಾಡಿನ ನಡುವೆ ಕಾಣಿಸಿಕೊಳ್ಳುತ್ತದೆ. ನಮ್ಮ ಲೇಖಕರು ಇಂತಹ ಪ್ರೇರಣೆ, ಪ್ರಭಾವಗಳನ್ನು ಅರಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಇಂಡೋನೇಷಿಯಾದ ಮೂಲದ ಕತೆಯೊಂದು ಭಾರತದ, ಕನ್ನಡದ ವಾತಾವರಣದಲ್ಲಿ ಕಾಣಿಸಿಕೊಳ್ಳುತ್ತದೆ. 'ತಾತನಿಗೊಂದು ಉಡುಗೊರೆ' ಜುಸ್ರಾನ್ ಸಫಾನೋ ಇದರ ಲೇಖಕರು. ಪುಟ್ಟ ಹಳ್ಳಿಯ ಬಕ್ರಿ ಅನ್ನುವ ಹುಡುಗನ ಕತೆಯಿದು. ಅವನು ಚುರುಕು ಮತ್ತು ತೀಕ್ಷ್ಣಬುದ್ಧಿಯವನು. ಪ್ರತಿದಿನವೂ ನಸುಕಿನಲ್ಲಿ ಎದ್ದು ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿ, ಕಂಚಿನ ಕಂಠದಿಂದ ತಾನು ಹಾಡುತ್ತಿದ್ದನು. ಒಂದು ದಿನ ತಾತನ ದನಿ ಕೇಳಿಸಿದೆ ಆತಂಕಗೊಳ್ಳುವನು. ತಾತ ಮೈಹುಷಾರಿಲ್ಲದೆ ಹಾಸಿಗೆ ಹಿಡಿದಾಗ ಸ್ವತಃ ತಾನೆ ಮಾನ್ ಕಾಂಗ್ ಕಾಯಿಗಳನ್ನು ಆಯ್ದು ತರಲು ಚುಮುಚುಮು ಚಳಿಯಲ್ಲಿ ವೈಟ್‌ಹಿಲ್ಸ್ ಕಡೆಗೆ ಹೋಗುವನು. ಎಲ್ಲರಿಗಿಂತ ಮುಂಚೆ ಕಾಯಿಗಳನ್ನು ಆರಿಸಿಕೊಂಡು ಬರುವಾಗ, ಎದುರಾಗುವ ಹುಡುಗರ ಗುಂಪಿಗೆ ಹೆದರಿ ಪೊದೆಯ ಹಿಂದೆ ಅವಿತುಕೊಳ್ಳುವನು. ಅವರು ದೊಡ್ಡ ಹುಡುಗರಾಗಿದ್ದು ಇವನನ್ನು ಬೆನ್ನಟ್ಟಿ ಕಾಯಿಗಳನ್ನು ಕಸಿದುಕೊಳ್ಳಲು ಯೋಚಿಸುವರು. ಇದನ್ನು ತಿಳಿದ ಅವರಲ್ಲಿಯೇ ಒಬ್ಬ ಹುಡುಗ ಈ ಕಾಯಿಗಳು ಬಕ್ರಿಗೆ ಸೇರಬೇಕು, ಅವನು ಬೇಗನೆ ಬಂದು ಆರಿಸಿರುವನು ಎನ್ನುತ್ತಾನೆ. ಅದನ್ನು ಕೇಳಿಸಿಕೊಂಡ ಬಕ್ರಿಯು ಅವರಿಗೂ ಸ್ವಲ್ಪ ಕಾಯಿಗಳನ್ನು ಕೊಡುತ್ತಾನೆ. ಹೀಗೆ ಮಕ್ಕಳ ಬಾಲ್ಯದ ಸಂಗತಿಗಳೊಡನೆ ಮೂಡಿಬಂದಿರುವ ಅಪೂರ್ವ ಕೃತಿ ಇದಾಗಿದೆ.

ಸಿಂಗಪೂರ್‌ನ ವೈಲೆಟ್ ವೆಲ್ ಕಿಂಗ್ಸ್ ಅವರದೊಂದು ಕತೆ ಕನ್ನಡದಲ್ಲಿ ತೀರ ಆಸಕ್ತಿಯನ್ನು ಕೆರಳಿಸಿದೆ. 'ಮರೆಯಲಾಗದ ಬೆಕ್ಕು' ಎಂಬ ಹೆಸರಿನ ಕತೆಯಿದು. ಹುಡುಗನೊಬ್ಬನು ಮನೆಯಲ್ಲಿ ಸಾಕಿದ ಬೆಕ್ಕನ್ನು ಹೇಗೆಲ್ಲ ಹಚ್ಚಿಕೊಳ್ಳುವನು ಎನ್ನುವುದರ ಹಿನ್ನಲೆಯನ್ನು ಹೇಳುವ ಕತೆಯಿದು. ಚರಂಡಿಯಲ್ಲಿ ಸಿಕ್ಕಿದ ಮರಿಯನ್ನು ಯುಸುಫ್‌ನು ಮನೆಗೆತಂದು ಸಾಕಿ ಸಲುಹುವ ಅನುಭವಗಳಿವೆ. ತಂದೆ, ತಾಯಿ, ತಂಗಿ ಅದರೊಂದಿಗೆ ಹೊಂದಿಕೊಂಡು ಖುಷಿ ಪಡುವ ಸಂಗತಿಗಳಿವೆ. ಆದರೆ ಅವರು ಆ ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋಗುವ ಸಂದರ್ಭ ಬಂದಾಗ ಸಮಸ್ಯೆಗಳು ಎದುರಾಗುತ್ತವೆ. ಇವರು ಹೋದ ಪ್ಲಾಟ್‌ನ ಮಾಲೀಕ ಪ್ರಾಣಿಗಳನ್ನು ಸಾಕದಂತೆ ತಾಕಿತ್ತು ಮಾಡುತ್ತಾನೆ. ಆಗ ಬೆಕ್ಕನ್ನು ಪ್ರಾಣಿ ಸಾಕುವ ಸಂಸ್ಥೆಗೆ ಕೊಡಲು ನಿರ್ದರಿಸುತ್ತಾರೆ. ಆದರೆ ಯುಸಫ್ ಅದನ್ನು ಒಪ್ಪುವುದಿಲ್ಲ. ಅದನ್ನು ಅಜ್ಜಿಯ ಮನೆಗೆ ಕೊಡಲು ಅವನು ಒಪ್ಪುತ್ತಾನೆ. ಬಾಲ್ಯದ ಅನುಭವಗಳು ಇಲ್ಲಿ ಹೊಸದಾಗಿ ಕಾಣಿಸಿಕೊಂಡು ಬಂದಿವೆ.

ಅಫ್ಘಾನಿಸ್ಥಾನದ ಲೇಖಕ ಅಹಜಮ್ ರಹ್ನಾವರ್ಡ್ ಜರ್‍ಯಬ್ ಬರೆದ ಕತೆಯೊಂದು ಕನ್ನಡದಲ್ಲಿ 'ಗಿಡುಗ ಮತ್ತು ಮರ' ಎಂಬ ಹೆಸರಿನಿಂದ ಕಾಣಿಸಿಕೊಂಡಿದೆ. ಹಳೆಯದಾದ ಒಣಕಲು ಮರದ ಕೆಳಗೆ ಒಬ್ಬ

ಮೋಚಿಯು ಅಂಗಡಿ ಇಟ್ಟುಕೊಂಡು ದಿನಾಲು ಕೆಲಸಮಾಡುವಾಗ ಸೋಮಾರಿಗಳಬ್ಬರು ಅಲ್ಲಿ ಬಂದು ಹರಟುತ್ತಿದ್ದರು. ಒಂದು ದಿನ ಆ ಇಬ್ಬರು ಸೋಮಾರಿಗಳು ದುಃಖದಲ್ಲಿರುವ ಮೋಚಿಯನ್ನು ಕೇಳಿದಾಗ ಅವನು ತನ್ನ ಗಿಡುಗ ತಪ್ಪಿಸಿಕೊಂಡಿದೆ ಎಂದು ಹೇಳುತ್ತಾನೆ. ಅದು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅದರ ಕಾಲಿಗೆ ದಾರ ಕಟ್ಟಿರುವುದಾಗಿ ಹೇಳುತ್ತಾನೆ. ಅದಕ್ಕೆ ಅವನು ಆಹಾರವಾಗಿ ಜೀವಂತ ಗುಬ್ಬಿಗಳನ್ನು ನೀಡುತ್ತಿದ್ದನು. ಅಲ್ಲಿಂದ ಹೊರ ಹೋದವನು ಮಲಗಿದಾಗ ದಾರ ಕಟ್ಟಿದ ಗಿಡುಗ ಮತ್ತು ನೇತಾಡುವ ಒಣಮರವನ್ನು ಭ್ರಮಿಸಿಕೊಳ್ಳುತ್ತಾನೆ. ಪಕ್ಷಿಯು ನೇತಾಡುತ್ತಾ ಪುಕ್ಕಗಳನ್ನು ಉದುರಿಸುತ್ತದೆ. ಮೋಚಿಯು ಅದರ ಸಾವನ್ನು ಬಯಸಿ ಹೇಳಿದ್ದು ಅವನಿಗೆ ನೆನಪಾಗುತ್ತದೆ. ದಾರ ಬಿಡಿಸಿದರು ಗಿಡುಗ ಸಾಯುತ್ತದೆ, ಏಕೆಂದರೆ ಇನ್ನೊಂದು ಕಾಲಿಗೂ ದಾರ ಸಿಕ್ಕಿಕೊಂಡಿತ್ತು ಅದು ಜೀವಂತ ಗುಬ್ಬಿಗಳಿಂದ ಕೂಡಿದ ದಾರವಾಗಿತ್ತು ಎಂದು ಕತೆಯು ಮುಕ್ತಾಯವಾಗುತ್ತದೆ. ಇದೊಂದು ಧ್ವನಿಪೂರ್ಣವಾದ ಕತೆಯಾಗಿದ್ದು ಪಂಚತಂತ್ರಗಳಂತಿರದೆ ಭಿನ್ನವಾಗಿದೆ.

ಬರ್ಮಾದ ಕತೆಯನ್ನು ಕನ್ನಡದ ವಾತಾವರಣದಲ್ಲಿ ಕಾಣುವಂತಾದುದು ಎನ್.ಬಿ.ಟಿಯವರಿಂದ ಎನ್ನಬಹುದು. ಇದು ಅಲ್ಲಿಯ ಲೇಖಕರಾದ ಗಯೇತ್ನಿ ಯು ವೆ ಮಿಂತ್‌ರು ಬರೆದ ಒಂದು ಸಣ್ಣಕತೆಯಾಗಿದೆ. ಪ್ರಾಣಿ, ಪಕ್ಷಿಗಳನ್ನು ಪ್ರೀತಿಯಿಂದ ನೋಡುವ, ಸಾಕುವ ಹಂಬಲವಿರುವ ಹುಡುಗನ ಕತೆಯಾಗಿದೆ. ಅವನ ಗೆಳೆಯನೊಬ್ಬನು ನೀರುಹಕ್ಕಿಯನ್ನು ಹೊಡೆದು, ಅದರ ಕಾಲಿಗೆ ಬಳ್ಳಿಯೊಂದನ್ನು ಕಟ್ಟಿಕೊಂಡು ಬರುತ್ತಾನೆ. ಕಥಾನಾಯಕ ಹುಡುಗನಿಗೆ ಬಿಳಿಯ ರೆಕ್ಕೆಯುಳ್ಳ ಈ ಹಕ್ಕಿಯನ್ನು ನೋಡಿದ ಮೇಲೆ ಬಿಡುವ ಮನಸ್ಸಾಗದೆ ಅದನ್ನು ಕೇಳುತ್ತಾನೆ. ಆ ಹುಡುಗ ಅದಕ್ಕೆ ಬದಲಾಗಿ ಹತ್ತು ಸಿಗರೇಟು ಕೇಳುತ್ತಾನೆ. ಅದಕ್ಕಾಗಿ ಅವನು ಚಿಕ್ಕಮ್ಮನ ಬೀರುವಿನಿಂದ ಸಿಗರೇಟ್ ಕದ್ದು ತಂದು ಹಕ್ಕಿಗಾಗಿ ಕೊಡುತ್ತಾನೆ. ಹಕ್ಕಿಗೆ ಸುಂದರವಾದ ಮನೆಯನ್ನು ಕಟ್ಟಿಕೊಡುತ್ತಾನೆ. ಅದು ಅವರ ಚಿಕ್ಕಮ್ಮನಿಗೆ ತಿಳಿಯದೆ ಸಿಗರೇಟ್ ಕಳ್ಳ ಯಾರು ಎಂದು ವಿಚಾರಿಸುತ್ತಾಳೆ. ನಿರಾಪರಾಧಿಯಾದ ಅವನ ತಮ್ಮನಿಗೆ ಏಟು ಬೀಳುವುದನ್ನು ನೋಡಿ ಹುಡುಗ ತಾನೆ ಕಳ್ಳನೆಂದು ಒಪ್ಪಿಕೊಳ್ಳುತ್ತಾನೆ. ಒಬ್ಬ ಸುಕೋಮಲ ಹುಡುಗನು ಪ್ರೀತಿ ತುಂಬಿದ ಕಣ್ಣುಗಳಿಂದ ಹೃದಯವನ್ನು ಸಂವೇದಿಸುವ ಬಗೆಯು ಈ ಕತೆಯಲ್ಲಿ ಮೂಡಿದೆ. ಯಾವುದೆ ಆದರ್ಶವನ್ನು ಹೇಳದೆ, ನೀತಿಯನ್ನು ತುರುಕದೆ ಕಾಣಿಸಿಕೊಂಡಿದೆ. ಇದು ನಮ್ಮಲ್ಲಿನ ವಾಸ್ತವದ ಕತೆಗಳಿಗೆ ಹದವಾದ ವಾತಾವರಣವನ್ನು ತಂದುಕೊಟ್ಟಿದೆ.

ಸ್ವಿಡ್ಜರ್ ಲ್ಯಾಂಡನ್ ನ ಮೂಲದ ಲೇಖಕ ಜುಜ್ಞ ಥಾಮಸ್ ವೈವ್ ಲ್ಯಾಂಡ್ ಬರೆದಿರುವ ಸಣ್ಣಕತೆ 'ಉಯ್ಯಾಲೆ ಆಡಿತು ಹಸು' ಎಂದು ಕನ್ನಡದಲ್ಲಿ ಕಾಣಿಸಿಕೊಂಡಿತು. ಇದೊಂದು ತೀರ ಹೊಸ ಬಗೆಯ ಕತೆಯಾಗಿ ಬಂದಿತು. ಬೇಸಿಗೆಯ ಗೋಮಾಳದಲ್ಲಿ ಹಸುಗಳು ಹುಲ್ಲು ಮೇಯುವಾಗ ಒಂದು ಹಸು ಮಾತ್ರ ಆಕಡೆ ಈಕಡೆ ನೋಡಿ ತಪ್ಪಿಸಿಕೊಂಡು ಹೋಗಿ, ಅಲ್ಲೊಂದು ಸೈಕಲ್ ತೆಗೆದುಕೊಂಡು, ಅದರಲ್ಲಿದ್ದ ಕ್ಯಾರಿಯರ್ ನಲ್ಲಿ ಹಗ್ಗ, ಹಲಗೆಯನ್ನು ತೆಗೆದುಕೊಂಡು ಸೈಕಲ್ ಹತ್ತಿ ಕಾಡಿನಲ್ಲಿ ಮಾಯವಾಗುತ್ತದೆ. ಅದು ತನ್ನ ಗೆಳೆಯ ಕಾಗೆಯನ್ನು ಕೇಳಿಕೊಂಡು ಉಯ್ಯಾಲೆ ಕಟ್ಟಿಸಿಕೊಳ್ಳುತ್ತದೆ. ಕಾಗೆ ಈ ವಿಚಿತ್ರವಾದ ಹಸುವಿಗೆ

ಸಹಾಯ ಮಾಡುತ್ತದೆ. ಹಸು ಉಯ್ಯಾಲೆ ಏರಿದ ಮೇಲೆ ತೂಗಲು ಕಾಗೆಗೆ ತಿಳಿಸುತ್ತದೆ. ಈ ಹಸು ಎಲ್ಲರಂತಿರದೆ ವಿಚಿತ್ರವು, ವಿಶೇಷವು ಆಗಿರುತ್ತದೆ. ಆಡಿದ ಮೇಲೆ ಉಯ್ಯಾಲೆ ಬಿಚ್ಚದೆ ಹಾಗೆಯೇ ಬಿಟ್ಟು ಹೋಗುತ್ತದೆ. ಏಕೆಂದರೆ ಯಾರಾದರೂ ಅದರಂತೆ ಆಸೆಪಟ್ಟರೆ ಆಡಲಿ ಎಂದು. ಇಂತಹ ಆಕಾಂಕ್ಷೆಗಳು ಭಾರತದ ಪರಿಸರದಲ್ಲಿ ಹೊಸದಾಗಿಯೆ ಮೂಡಿದವು. ನಮ್ಮ ಜನಪದದ ಕತೆಗಳು ಪ್ರಾಣಿಗಳನ್ನು ನೋಡಿದಂತೆ ಇಲ್ಲಿ ನೋಡಿಲ್ಲ. ಆದುದರಿಂದ ಇದು ವಿಶೇಷವಾದ ಕತೆಯೇ ಆಗಿದೆ.

ಇರಾನ್ ದೇಶದಿಂದ ಬಂದು ಕನ್ನಡದ ಮಕ್ಕಳಿಗಾಗಿ ಕಾಣಿಸಿಕೊಂಡ ಕತೆ 'ಕವಿ ಮತ್ತು ಸೂರ್ಯ' ಎಂಬುದಾಗಿದೆ. ಕವಿಯನ್ನು ಕೇಂದ್ರವಾಗಿಸಿಕೊಂಡು ನೋಡಿದ ಕತೆಯಿದು. ಸೂರ್ಯನ ಬೆಳಕಿನಲ್ಲಿ ಕಾಣಿಸಿಕೊಳ್ಳುವ ವಸ್ತುಗಳು, ಅವನ ನೆಚ್ಚಿನ ಪಕ್ಷಿಗಳು, ಪ್ರಾಣಿಗಳು ಎಲ್ಲವೂ ಬಣ್ಣಮಯವಾಗಿ ನೈಜವಾಗಿರುತ್ತವೆ. ಆದರೆ ಕತ್ತಲಾದಾಗ ಇವೆಲ್ಲವೂ ಕಪ್ಪು ಕಪ್ಪಾಗುತ್ತವೆ. ಇದು ಅವನಿಗೆ ಇಷ್ಟವಾಗದ ಸಂಗತಿ. ಅವನು ಒಂದು ದಿನ ಕನಸು ಕಾಣುತ್ತಾನೆ. ಎತ್ತರವಾದ ಬೆಟ್ಟವನ್ನು ಹತ್ತಿದಂತೆ, ಸೂರ್ಯನನ್ನು ಕಾಣುತ್ತಾನೆ. ಮುಂಜಾನೆ ಎದ್ದು ತಮ್ಮ ಮನೆಗೆ ಹತ್ತಿರವಿರು ಬೆಟ್ಟದಿಂದ ಸೂರ್ಯನನ್ನು ಹಿಡಿದು ತಂದು ಎಂದೂ ಕತ್ತಲಾಗದಂತೆ ಆ ಊರನ್ನು ಮಾಡಬೇಕು ಎಂದುಕೊಳ್ಳುತ್ತಾನೆ. ಮುಂಜಾನೆ ಹಾಗೇಯೇ ಮಾಡಲು ಬೆಟ್ಟದ ಬಳಿಗೆ ಹೋಗುವಾಗ ಕೋಳಿ, ಮೊಲ ಇವನನ್ನು ಹಿಂಬಾಲಿಸುತ್ತವೆ. ಅವನಿಗೆ ತಾನು ಒಂಟಿಯಲ್ಲ ಎನಿಸಿ ಅವುಗಳ ಮೈದಡುವುತ್ತಾನೆ. ಪರ್ವತವನ್ನು ಏರಿ ಆಚಿನ ಪ್ರಕೃತಿಯನ್ನು ಅವನು ಕಾಣುತ್ತಾನೆ. ಸೂರ್ಯನ ಜೊತೆ ಮಾತಾಡುತ್ತಾನೆ. ಅಲ್ಲಿಂದ ಬಂದು ಪ್ರಾಣಿಗಳ, ಪಕ್ಷಿಗಳ, ಗಿಡಮರಗಳ ಭಾಷೆಯನ್ನು ಕಲಿಯುತ್ತಾನೆ. ದೊಡ್ಡವನಾಗಿ ತಂದೆಯಾಗುತ್ತಾನೆ, ಗಿಡ, ಮರದ, ಜೀವಿಗಳ ಭಾಷೆಯೊಂದಿಗೆ ಮಾನವೀಯತೆಯ ಭಾಷೆ ಕಲಿಯುತ್ತಾನೆ, ಇದೆ ಕವಿತೆಯ ಭಾಷೆಯೂ ಆಗಿರುತ್ತದೆ. ಒಂದು ಹೊಸ ಜಗತ್ತಿನಂತೆ ಈ ಕತೆಯು ಕಾಣಿಸಿಕೊಳ್ಳುತ್ತದೆ. ಇಲ್ಲಿಯೂ ಮಕ್ಕಳ ಕತೆಗಳ ತುಡಿತದ ಮುಗ್ಧತೆಯ ಲೋಕ, ಪ್ರಾಣಿ ಜಗತ್ತು, ಪ್ರಕೃತಿ ಪ್ರೇಮ, ಮಾನವತೆಗಳು ಮಿಶ್ರಗೊಂಡು ನಿಲ್ಲುವಿಕೆಯಿದ್ದು ನೇರವಾಗಿ ಮೌಲ್ಯ ಹೇಳುವುದಿಲ್ಲ.

ಜಪಾನ್‌ನ ನಾನ್ ಕಿಚಿಕ್ ನಿಮಿ ಅವರ ಕತೆಯನ್ನು ಕನ್ನಡದಲ್ಲಿ 'ನರಿಯ ಹುಡುಗ' ಹೆಸರಿನಲ್ಲಿ ಕಾಣಬಹುದಾಗಿದೆ. ಬೆಳದಿಂಗಳ ರಾತ್ರಿಯಲಿ ಹುಡುಗರು ನಡೆದು ಹೋಗುವಾಗ ತಮ್ಮ ನೆರಳಿನ ಚಿತ್ತಾರಗಳನ್ನು ನೋಡಿ ಆನಂದಿಸುವ ಅನುಭವಗಳಿವೆ. ಅವರು ಆ ರೀತಿ ನಡೆಯುತ್ತಿರುವುದು ಊರ ಜಾತ್ರೆಗೆ ಹೋಗುವ ಸಲುವಾಗಿ. ಇವರಲ್ಲಿ ಅತ್ಯಂತ ಚಿಕ್ಕವನು, ನಿಧಾನ ನಡುಗೆಯವನು ಮಾತ್ರ 'ಬುನ್ ರೋಕೊ' ಆಗಿರುತ್ತಾನೆ. ಅವನು ಆ ರೀತಿ ನಡೆಯಲು ಕಾರಣ ಅವನು ಧರಿಸಿರುವ ಚಪ್ಪಲಿಗಳು. ಅವು ಮಾತ್ರ ಅವನ ತಾಯಿಯವು, ದೊಡ್ಡವೂ ಕೂಡ. ಅವರು ಪಟ್ಟಣಕ್ಕೆ ಬಂದು ಹೊಸ ಚಪ್ಪಲಿ ಖರೀದಿಸುವಾಗ ಅಜ್ಜಿಯೊಬ್ಬಳು ಹೇಳುತ್ತಾಳೆ ಹುಣ್ಣಿಮೆಯ ದಿನ ಹೊಸ ಚಪ್ಪಲಿ ಧರಿಸಿದರೆ ನರಿಯ ಪಾಲಾಗುವರು ಎಂದು. ಎಲ್ಲರು ಭಯಗೊಳ್ಳುವರು. ಅಲ್ಲಿನ ದೊಡ್ಡ ಹುಡುಗನಾದ ಯೋಷಿನೋರಿ ಇಲ್ಲ ಆಗಾಗುವುದಿಲ್ಲ ಅದು ಮೂಢನಂಬಿಕೆ ಎಂದು ಅವಳಿಗೆ ಹೇಳಿದನು. ಹೊಸ ಚಪ್ಪಲಿಯನ್ನು ಬೆಂಕಿಕಡ್ಡಿಯಿಂದ ಸುಟ್ಟು ಹಳೆಯದು ಮಾಡಿದರೆ ಎಲ್ಲ ಸರಿಹೋಗುವುದು ಎಂದು ಅನಿಸಿ, ಅವರು ಹಾಗೆಯೇ ಮಾಡುವರು. ಜಾತ್ರೆ ನೋಡಿ

ಹಿಂದಿರುಗುವ ಮಕ್ಕಳಿಗೆ ಹೋಗುವಾಗ ಇದ್ದ ಉತ್ಸಾಹ ಬರುವಾಗ ಇರದೆ ಅವರಿಗೆ ನರಿಯ ಭಯವಿರುತ್ತದೆ. ಬುನ್‌ರೋಕೊ ನರಿಯಾಗುವಂತೆ ಕಲ್ಪಿಸಿಕೊಂಡು ಭಯಪಡುವ ಆತಂಕಗಳಿಂದ ಮಲಗುತ್ತಾನೆ. ಅವನ ತಾಯಿಯು ಸಮಾಧಾನ ಪಡಿಸಿ ತಲೆಗೆ ದಿಂಬನ್ನು ಇಡುತ್ತಾಳೆ. ಹೀಗೆ ಮಕ್ಕಳ ಭಯ, ಆತಂಕ ಕುತೂಹಲಗಳ ನಡುವೆ ಕತೆಯು ಸಾಗಿ ಮೂಢನಂಬಿಕೆಗಳನ್ನು ನಯವಾಗಿ ತಿರಸ್ಕರಿಸುವ ಹದಗಾರಿಕೆಯಿದ್ದು ಕನ್ನಡದಲ್ಲಿ ಹಾಗೇಯೆ ಕಾಣಿಸಿಕೊಂಡಿದೆ.

ಕೊರಿಯಾ ದೇಶದ ಕತೆಯು ಕನ್ನಡದಲ್ಲಿ ಕಾಣಿಸಿಕೊಂಡಿರುವುದಿದೆ. ಓ ಯಾಂಗ್ ಸೂ ಇದರ ಲೇಖಕರು. 'ಯೂನಿ ಮತ್ತು ಎತ್ತು' ಎಂಬುದು ಈ ಕತೆಗಿರುವ ಹೆಸರು. ಯೂನಿಗೆ ಎತ್ತು ಎಂದರೆ ಅವನಿಗೆ ಇಷ್ಟವಿಲ್ಲ. ಅದು ಕುದುರೆಯಂತೆ ಅಲ್ಲ ಎಂಬುದು ಅವನ ವಾದ. ಎತ್ತು ನಿಧಾನ, ಯಾವಾಗಲೂ ತಿನ್ನುವ ಹೊಟ್ಟೆಬಾಕ, ಕೊಂಬುಗಳಿರುವುದರಿಂದ ಮುದ್ದಾಡಲು ಆಗುವುದಿಲ್ಲ, ಬೆನ್ನ ಮೇಲೇರಿ ಸವಾರಿ ಮಾಡಲು ಆಗುವುದಿಲ್ಲ ಇವೆಲ್ಲಾ ಕಾರಣಗಳಿಗೆ ಅದು ಇಷ್ಟವಾಗುವುದಿಲ್ಲ. ಸುಗ್ಗಿಯ ಕಾಲದಲ್ಲಿ ಹಸುರು ಗಿಡಗಳಿಗೆ ಕಟ್ಟಿಹಾಕಿದರೆ ಇದು ಕಂದು ಬಣ್ಣದಿಂದ ಕಾಣುತ್ತದೆ. ಅದು ಭಯಂಕರವಾಗಿ ಕಾಣಿಸಿ ಅವನಿಗೆ ಚೆಂಡು ಆಡಲು ಅಲ್ಲಿ ಆಗುವುದಿಲ್ಲ. ಎತ್ತು ತಲೆಯಾಡಿಸುವುದು ಅವನ ಚೆಂಡನ್ನು ಕಿತ್ತುಕೊಳ್ಳಲು ಎಂದು ಅವನು ಭಾವಿಸುವನು. ಎತ್ತು ಮತ್ತು ಕುದುರೆಗೆ ಜಗಳವಾದರೆ ಅದು ಕೊಂಬಿರುವುದರಿಂದ ಗೆಲ್ಲವುದು ಅವನಿಗೆ ಇಷ್ಟವಾಗುವುದಿಲ್ಲ. ಒಂದು ದಿನ ಅವನ ಚೆಂಡು ಎತ್ತಿನ ಬಳಿ ಹೋಗಿ ಬೀಳುತ್ತದೆ. ಅದನ್ನು ತೆಗೆದುಕೊಳ್ಳಲು ನಡೆಸುವ ಪ್ರಯತ್ನಗಳು, ಅವನಲ್ಲಿ ಉಂಟಾಗುವ ಯೋಚನೆಗಳು, ಅವನು ಒಂದು ಹುಡುಗಿಯನ್ನು ಚೆಂಡು ತೆಗೆದು ಕೊಡಲು ಕರೆದುಕೊಂಡು ಬರುವನು. ಅಷ್ಟರಲ್ಲಿ ಎತ್ತು ನೇಗಿಲನ್ನು ಹೊತ್ತು ಉಳುತ್ತಿರುತ್ತದೆ. ಚೆಂಡು ಎಲ್ಲೂ ಕಾಣಿಸುವುದಿಲ್ಲ. ಹೀಗೆ ನಿರಾಸೆಯೊಂದಿಗೆ ಯೂನಿಯ ತೊಳಲಾಡುವಿಕೆ ಇದೆ, ಭಯ, ಆತಂಕಗಳಿಂದ ಕೂಡಿದ ಸಂಗತಿಗಳಂತೆ, ಆಲೋಚನೆಗಳಿರುವುದರಿಂದ ವಾಸ್ತವದ ವಸ್ತು ಹಂದರ ಕತೆಯ ತುಂಬೆಲ್ಲ ಹರಿದಾಡಿವೆ.

ಮಲೇಷಿಯಾದ ಮೂಲದ ಕತೆ 'ನೆರೆ-ಹೊರೆ' ಎಂಬುದಾಗಿದೆ. ಇದರ ಲೇಖಕರು ಇಸ್ಮಾಯಿಲ್ ಅಹಮದ್. ಮಲೇಷಿಯಾದ ಬಾಡಿಗೆ ಮನೆಯಲ್ಲಿ ವಾಸಿಸುವವರ ಜೀವನ ಮತ್ತು ಅವರು ನಂಬುವ ಧರ್ಮದ ಚಿತ್ರಣಗಳು ಮಕ್ಕಳ ಮುಂದೆ ತಂದೊಡ್ಡುವ ಸಮಸ್ಯೆಗಳಾಗಿ ನಿಲ್ಲುವುದು ಈ ಕತೆಯ ವಸ್ತುವಾಗಿದೆ. ಝುಲೇಲಾಳ ಸಂಸಾರವು ಅವಳಿಗಾಗಿ ನಾಯಿಮರಿಯನ್ನು ಉಡುಗೊರೆ ನೀಡಿ, ಅದನ್ನು ಸಾಕಲು ಧರ್ಮದಲ್ಲಿ ನಿರಾಕರಣೆಯಿರುವುದರಿಂದ ಬೇರೊಂದು ಮನೆಗೆ ಬಿಡಲು ತಿಳಿಸುವರು. ಅದು ಮೇಲಿಂಗ್ ಎಂಬ ಗೆಳತಿ ಮನೆಯಾಗಿದ್ದು ಇವಳು ಅಲ್ಲಿಗೆ ಹೋಗಿ ನಾಯಿ ಮರಿಯೊಂದಿಗೆ ಆಡಿ ಬರುತ್ತಿದ್ದಳು. ಅಲ್ಲಿಂದ ಬಂದು ಅವಳು ಮೊಣಕಾಲಿನ ವರೆಗೂ ಕಾಲು ತೊಳೆದುಕೊಳ್ಳಬೇಕಿತ್ತು. ಇದು ಅವಳಿಗೆ ಇಷ್ಟವಾಗುತ್ತಿರಲಿಲ್ಲ. ನಾಯಿಯು ಶುಚಿಯಾಗಿದ್ದರೂ ಅದೊಂದು ಕೊಳಕು ಪ್ರಾಣಿ. ಅದನ್ನು ಮುಟ್ಟಿದರೆ ಆರು ಬಾರಿ ಕೈ ತೊಳೆಯುವಂತೆ ಧರ್ಮದಲ್ಲಿ ಹೇಳಿದೆ ಎಂಬುದನ್ನು ಅವರಮ್ಮ ಹೇಳುತ್ತಿದ್ದಳು. ನಾಯಿ ಬೆಳೆದು ದೊಡ್ಡದಾಗಿ ನೆರೆ ಹೊರೆಯವರಿಗೆ ಕೊಡುವ ಕಾಟವನ್ನು ಸಹಿಸದೆ ಸರಪಳಿ ಹಾಕಿ ಕಟ್ಟುವಂತೆ ಅವರೆಲ್ಲಾ ಸಲಹೆ ನೀಡುತ್ತಿದ್ದರು. ಅದರ ರಂಪಾಟ ಕಟ್ಟಿ ಹಾಕಿದಾಗ ಹೆಚ್ಚಾಗಿ ಎಲ್ಲರು ತೊಂದರೆ

ಅನುಭವಿಸಿದರು ಒಂದು ದಿನ ಬಿಚ್ಚಿಬಿಡುವರು. ಅದು ಹಿಂದಿರುಗಿ ಬರದೆ ಹೋಗಿ ಇವಳು ದುಃಖಿಸುತ್ತಿರುವಾಗ, ಬುಟ್ಟಿಯಲ್ಲಿ ಅವಳಮ್ಮ ಪುಟಾಣಿ ಬೆಕ್ಕಿನಮರಿಯನ್ನು ತಂದಿಡುವಳು. ಈಗ ಅವಳಿಗೆ ಆನಂದವಾಗುವುದು. ಮಕ್ಕಳ ನೈಜವಾದ ಅನುಭವಗಳು, ಪ್ರಾಣಿಯ ಮೇಲಿನ ಪ್ರೀತಿಗೆ ಅಡ್ಡಿಯಾಗುವ ನೆರೆ ಹೊರೆಯ ಸಂಗತಿಗಳು ಕತೆಯ ತುಂಬ ಹರಿದಾಡಿವೆ. ಆದುದರಿಂದಲೆ ಇದು ವಾಸ್ತವದ ಘಟನೆಗಳಿಗೆ ಸಕ್ಷಿಯಾಗಿ ನಿಲ್ಲುತ್ತದೆ.

ನೇಪಾಳ ಮೂಲದಿಂದ ಕನ್ನಡಕ್ಕೆ ಬಂದ ಕತೆಯೆಂದರೆ ಅದು 'ಮಾಂತ್ರಿಕ ಕೊಳಲು'. ಇದರ ಲೇಖಕರು ಮಾಧವ್ ಘಿಮ್ಮೈರ್ ಎಂಬುವರಾಗಿದ್ದಾರೆ. ಅಲ್ಲಿಯ ಪರಿಸರದ ಒಂದು ಸಣ್ಣಹಳ್ಳಿಯಲ್ಲಿ ನಡೆಯುವ ಸಂಗತಿಗಳಿಂದ ಕೂಡಿದ ಕತೆಯಿದು. ಹತ್ತು ವರ್ಷ ಪ್ರಾಯದ ಸುಕುಮಾರ್ ಈ ಕತೆಯ ನಾಯಕ. ಹಿಮಾಲಯದ ಪರ್ವತಗಳ ತಪ್ಪಲಿನ ಪರಿಸರದಲ್ಲಿ ಒಂಟಿಯಾಗಿ ವಾಸಿಸುವ ಹುಡುಗ, ಜೊತೆಗೆ ಯಾರಾದರು ಸಿಕ್ಕರೆ ಗೆಳೆತನ ಮಾಡುವ ಹಂಬಲಿಕೆಯಿಂದ ಊರಿನ ಬೀದಿಯಲ್ಲಿ ನಡೆದಾಡುವಾಗ ಯಾರಾದರು ಅವರ ತಾಯಿಯನ್ನು ಕೂಗಿದರೆ ಸತ್ತು ಹೋದ ತನ್ನ ತಾಯಿಯನ್ನು ನೆನಸಿಕೊಳ್ಳುವನು. ಹೀಗೆ ಕೊಳಲು ನುಡಿಸುತ್ತಾ ಹೋಗುವಾಗ ಊರಿನ ಮುಖ್ಯಸ್ಥನ ಹೆಂಡತಿಯನ್ನು ನೋಡಿದ, ಅವಳು ಪರಿಚಯದವಳಿರುವಂತೆ ಕಾಣಿಸಿದಳು. ಅವಳಲ್ಲಿ ಆ ರಾತ್ರಿ ಕಳೆಯುವ ಸಲುವಾಗಿ ಜಾಗವನ್ನು ಕೇಳಿದನು. ಅವಳು ತಾಯಿಯಂತೆ, ಕೊಳಲ ದನಿಯನ್ನು ಕೇಳಿ ಇವನನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುವಳು. ಅವನ ತಂದೆ ಕೊಡಿಸಿದ ಕೊಳಲು ಅದಾಗಿದ್ದು, ನುಡಿಸುವುದನ್ನು ಅವನೇ ಹೇಳಿಕೊಟ್ಟಿದನು. ಅವನ ತಾಯಿಯು ಸತ್ತ ಮೇಲು ಅವರಪ್ಪನ ಹೃದಯದಲ್ಲಿ ನೆಲಸಿರುವಳು ಎಂದು ನಂಬಿ, ಕೊಳಲು ನುಡಿಸಿದಾಗ ಅವಳು ಭೇಟಿಯಾಗುವಳು ಎಂದು ತಿಳಿದು, ತಾನು ನುಡಿಸುವ ಸಲುವಾಗಿ ಈ ಕೊಳಲನ್ನು ಪಡೆದಿದ್ದನು. ಹೀಗೆ ಊರುರು ಸುತ್ತುತ್ತಾ ಬರುವಾಗ ಸಾಯಪತ್ರಿಯ ಮನೆಗೆ ಬರುವನು. ಹಿಂದೆ ನಡೆದ ಘಟನೆಗಳೆಲ್ಲಾ ಹಳೆಯ ವರ್ಷಗಳಾಗುತ್ತಿದ್ದವು. ಇದೆಲ್ಲಾ ಮಾಂತ್ರಿಕ ಕೊಳಲಿನ ಆಟವಾಗಿರುತ್ತಿತ್ತು. ಸಾಯಪತ್ರಿಯ ಮನೆಯ ಮುಂದೆ ದೀಪವು ಉರಿಯುತ್ತಿದ್ದು ಅವಳು ಅದರ ಕೆಳಗೆ ಮಲಗಿ ಸಾಯುವವಳಿದ್ದಳು. ಇವನು ಬಂದಾಗ ಅವಳ ತಾಯಿಯು ನಿನ್ನ ತಂಗಿಯನ್ನು ಉಳಿಸು ಎನ್ನುವಳು. ಸುಕುಮಾರನು ಅವಳ ಕೆನ್ನೆಯ ಮೇಲೆ ಕೈಯಿಡುವನು ನಂತರ ಕೊಳಲನ್ನು ಚೆನ್ನಾಗಿ ನುಡಿಸುವನು. ಅವಳು ಎದ್ದು ಅಣ್ಣಾ ವಾಪಸ್ಸು ಬಂದೆಯಾ ಎಂದಾಗ ಇವನು ಹೌದು ತಂಗಿ ಎನ್ನುವನು. ಒಬ್ಬರಿಗೊಬ್ಬರು ನೋಡಿಕೊಳ್ಳವರು. ಇಲ್ಲಿ ಅವಾಸ್ತವದ ಸಂಗತಿಗಳು ಮಾನವನ ಸಂಬಂಧಗಳೊಡನೆ ಆಡುವ ಆಟವಾಗಿ ಕಾಣಿಸಿಕೊಂಡು, ಅನಾಥನೊಬ್ಬನು ತನ್ನ ಕೊಳಲಿನ ಮಾಂತ್ರಿಕತೆಯಿಂದ ತನಗೆ ಬೇಕಾದ ಪ್ರೀತಿಯನ್ನು, ವಾತ್ಸಲ್ಯವನ್ನು ಪಡೆಯುವುದಿದೆ.

ಪಾಕಿಸ್ತಾನದ ಮೂಲದಿಂದ ಬಂದ ಕತೆಯಾದ 'ಟುನ್ನು ಮತ್ತು ಕತ್ತೆ'ಯು ಕನ್ನಡದಲ್ಲಿ ಕಾಣಿಸಿಕೊಂಡು ಹೊಸ ಓದಿನ ಸಾಧ್ಯತೆಯನ್ನು ಹೆಚ್ಚಿಸಿರುವುದಿದೆ. ಇದರ ಲೇಖಕರು ಅನ್ವರ್ ಇನಾಯತ್ ಉಲ್ಲಾ. ಟುನ್ನು ಮತ್ತು ಅವಳ ತಮ್ಮ ಸಫ್ದರ್ ಚೂಟಿಯಾದ ಮಕ್ಕಳಾಗಿದ್ದು, ವ್ಯವಸಾಯ ಇಲಾಖೆಯ ಅಧಿಕಾರಿಯ ಮಕ್ಕಳಾಗಿರುವರು. ಅವರ ಬಳಿ ಸಾಕು ಪ್ರಾಣಿಗಳಿದ್ದವು. ಒಂದು ಭಾನುವಾರ ಅವರು ಬಾಗಿಲ

ಬಳಿ ಕುಳಿತು ಚಿತ್ರಬರೆಯುವಾಗ ಬಟ್ಟೆ ಹೊತ್ತು ಬಂದ ಕತ್ತೆ ಇವರ ಬಳಬಂದು ಅರಚಿತು. ಕತೆಯ ಜೊತೆ ಕಾಣಿಸಿಕೊಂಡ ಅಗಸನು ಡುಮ್ಮಗಿದ್ದು ಇವರಿಗೆ ಹಾಸ್ಯದ ವಸ್ತುವಾಗಿ ಕಾಣಿಸಿದ. ಕತ್ತೆಯವನು ಬಟ್ಟೆ ಕೊಟ್ಟು ಶೆಡ್ ಕಡೆಗೆ ಹೋದನು. ಟುನ್ನು ಕತ್ತೆಯನ್ನು ಎಳೆದುಕೊಂಡು ಯಾರಿಗೂ ಕಾಣಿಸದಂತೆ ಸವಾರಿ ಮಾಡಲು ಬಯಸುವಳು. ಅವಳು ಸಾಕು ಜಿಂಕೆಗೆ ಆಹಾರ ಕೊಡುವಂತೆ ನನಗು ಕೊಡಬಹುದುದು ಎಂದು ಕತ್ತೆ ಎಣಿಸುತ್ತದೆ. ಹೀಗೆ ಎಳೆದು ಕೊಂಡು ಹೋಗುವಾಗ ಒಂದು ಭಯಂಕರವಾದ ಧ್ವನಿ ಕೇಳಿಸುವುದು. ಅದು ಕತ್ತೆಯ ಯಜಮಾನನು ಕತ್ತೆಯನ್ನು ಕೂಗುತ್ತಿರುವುದಾಗಿತ್ತು. ಕತ್ತೆಯನ್ನು ಟುನ್ನು ಅಡಗಿಸಿಟ್ಟಿದ್ದಳು ಮತ್ತು ಅದು ಗೊತ್ತಿಲ್ಲವೆಂದು ಪ್ರಮಾಣ ಮಾಡಿದಳು, ಅದು ಕಾಡಿನ ಕಡೆಗೆ ಓಡಿರುವುದು ಎಂದು ಹೇಳುವಳು. ಅದು ತೋಟಕ್ಕೆ ನುಗ್ಗಿ ರಂಪಾಟ ಮಾಡಿದಾಗ ಅಲ್ಲಿ ಆಳುಗಳು ಅದನ್ನು ಕತ್ತೆಯ ರೂಪದಲಿ ಬಂದಿರುವ ಶಕ್ತಿ ಎಂದು ನಂಬುವರು. ಈ ಕತೆಯಲ್ಲಿ ಸಾಕು ಪ್ರಾಣಿಯ ಪ್ರೀತಿಯ ಜೊತೆಗೆ ಮಕ್ಕಳ ತುಂಟಾಟಗಳು ಕಾಣಿಸಿಕೊಂಡು ಅವು ಹಾಸ್ಯ, ಗೇಲಿಗಳಾಗುವ ಸಂಗತಿಗಳವೆ. ಪಾಕಿಸ್ತಾನದ ಪಟ್ಟಣದ ಪರಿಸರವು ಇಲ್ಲಿ ಪರಿಚಯವಾಗುವುದಿದೆ. ಕನ್ನಡದ ಮಕ್ಕಳಗೆ ಇದೊಂದು ಹೊಸಬಗೆಯ ಓದುವಾಗಿ ಕಾಣಿಸಿಕೊಂಡಿತು.

ಫಿಲಿಪೈನ್ಸ್ ದೇಶ ಮೂಲದಿಂದ ಬಂದ ಕತೆಯು 'ಭಾಗ್ಯಶಾಲಿ ಹುಡುಗ' ಎಂದು ಕನ್ನಡದಲ್ಲಿ ಅನುವಾದಗೊಂಡಿದೆ. ಇದರ ಲೇಖಕರು ಎನ್.ವಿ. ಎಮ್. ಗೊಂಜಾಲೆಸ್ ಆಗಿದ್ದಾರೆ. ಪತ್ರ ಬರೆಯುವ ಮೂಲಕ ಕತೆ ಆರಂಭವಾಗುತ್ತದೆ. ಜ್ಯುಲಿಯೋ ತನ್ನ ಮನೆಯ ಮಾಲೀಕನಿಗೆ ಪತ್ರಬರೆಯುತ್ತಾನೆ. ಮಾನಸಾಲಯ ಎಂಬ ಪಟ್ಟಣದಲ್ಲಿ ತನ್ನ ಮಗನನ್ನು ಓದಿಸಬೇಕೆಂಬ ಹಂಬಲವನ್ನು ಇರಿಸಿಕೊಂಡಿದ್ದಾನೆ. ಜೋನ್ ಅವನ ಮಗನಾಗಿದ್ದು ಅವನಿಗೆ ಇವನು ಸಾಕು ತಂದೆಯಾಗಲು ಕಾರಣಗಳನ್ನು, ನೆನಪುಗಳನ್ನು ವಿವರಿಸಿ ಹೇಳುತ್ತಾನೆ. ಅವರ ವಾಸದ ಮನೆಯು ಒಂದೇ ಕೋಣೆಯಾಗಿದ್ದು, ಹೆಂಡತಿ, ಮಕ್ಕಳು ಎಲ್ಲರಿಗೂ ತುಂಬಾ ಕಿರಿದಾಗಿರುತ್ತಿತ್ತು. ಅವರ ಬಡತನದ ನೋವು, ಜೊತೆಗೆ ಆಗಾಗ ಮಾಡುವ ಮೀನಿನ ಸಾಂಬಾರಿನ ಘಮಲು, ಭಾವುಕನಾದ ಅವನನ್ನು ಸೆಳೆಯುವ ಸಂಗತಿಗಳವೆ. ಅಕ್ಕಿ ಮೂಟೆಗಳನ್ನು ಸಾಲಪಡೆದು ಸುಗ್ಗಿಯಲ್ಲಿ ಎರಡರಷ್ಟು ವಾಪಸ್ಸು ಮಾಡುವ ಸಂಗತಿಗಳು ಅವನ ಬದುಕಿನ ದುಸ್ಥಿತಿಯನ್ನು, ಬಡತನವನ್ನು ಹೇಳುತ್ತವೆ. ಹುಡುಗನೊಬ್ಬನು ಎಮ್ಮೆಯ ಮೇಲೆ ಸವಾರಿ ಮಾಡುವ ಸಂಗತಿಗಳವೆ. ಅಲ್ಲಿನ ಸೆಣಬಿನ ಬೆಳೆಗಳು, ವ್ಯವಸಾಯದ ವಿಧಾನ ಎಲ್ಲವೂ ಕಾಣಿಸಿಕೊಂಡು ಪಕ್ಷಿಯ ಹಾಡು, ಹೊಳೆಯ ಸಂಗೀತದಿಂದ ಪತ್ರದ ಓದು ನಡೆದು ಕತೆಯು ಮುಗಿಯುತ್ತದೆ. ಇಂತಹ ಕತೆಯ ಸಾಧ್ಯತೆಗಳು ಕನ್ನಡದ ಆರಂಭದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಪತ್ರ ಬರೆಯುವ, ಓದುವ ಮೂಲಕ ನಿರೂಪಣೆ ನಡೆಯುವುದು ನಮ್ಮಲ್ಲಿ ಈಗ ಸಾಧ್ಯವಾಗಿದೆ. ಇಂತಹ ಪ್ರಯೋಗಗಳಿಗೆ ಈ ಕತೆಯು ಪ್ರೇರಣೆಯಾಗಬಲ್ಲದು. ಕನ್ನಡದಲ್ಲಿ ಆನಂದ ಪಾಟೀಲರ 'ಪುಟ್ಟಕ್ಕನ ಪತ್ರ' ಎಂಬುದನ್ನು ಇಲ್ಲಿ ಅಗತ್ಯವಾಗಿ ಸ್ಮರಿಸಿಕೊಳ್ಳಬಹುದು.

ಶ್ರೀಲಂಕಾ ಮೂಲದಿಂದ ಬಂದ ಕತೆಗಳು ನಮ್ಮ ಕನ್ನಡದ ವಾತಾವರಣದಲ್ಲಿ ಕಾಣಿಸಿಕೊಂಡು ಪ್ರಭಾವವನ್ನು ಬೀರಿರುವುದಿದೆ. ಸಿಬಿಲ್ ವೆಟ್ಟಾಸಿಂಘೆ ಯವರ 'ಮನೆಯಷ್ಟು ದೊಡ್ಡ ಲಾಂದ್ರ'ಎಂಬ ಕತೆಯು ಮಹತ್ತರದಾಗಿದೆ. ಇವರು ಅಲ್ಲಿಯ ಪ್ರಸಿದ್ಧ ಮಕ್ಕಳ ಕತೆಗಾರರು ಆಗಿರುವಂತೆ ಚಿತ್ರಕಾರರು ಸಹ. ಬುದ್ಧನ

ಉತ್ಸವದ ವರ್ಣನೆಯೊಂದಿಗೆ ಆರಂಭವಾಗುವ ಈ ಕತೆಯು, ಅದು ಬರುವ ಕಾಲ, ಅಂದಿನ ಚಂದ್ರನ ಬೆಳಕಿನ ಪ್ರಕರತೆ, ಹಬ್ಬದ ತಿಂಡಿ ಮುಂತಾದ ವಿವರಗಳವೆ. ಇಡೀ ರಾತ್ರಿ ಬುದ್ಧನ ಉಪದೇಶಗಳನ್ನು ಕೇಳುವುದಿದೆ. ಅದು 'ವೇಸಕ್' ಉತ್ಸವಕ್ಕಾಗಿ ಲಾಂದ್ರಗಳನ್ನು ಹುಡುಗನೊಬ್ಬನು ತಯಾರಿಸುವ ಸಲುವಾಗಿ, ಸೋರೆಕಾಯಿ ಚಪ್ಪರಕ್ಕೆ ಬಳಸುವ ಬಿದಿರಿನ ಕಡ್ಡಿಗಳನ್ನು ಬಳಸಿ ವಜ್ರಾಕೃತಿಯಲ್ಲಿ ಚೌಕಟ್ಟು ಮಾಡುವನು. ಅದು ಕಳೆದ ವರ್ಷ ಅವನು ಇದೇ ಉತ್ಸವದಲ್ಲಿ ಅಜ್ಜಿಯೊಂದಿಗೆ ಹೋಗಿ ನೋಡಿ ಬಂದಾಗ ಕಂಡಿದ್ದು. ಅಂತಹದ್ದನ್ನು ಮಾಡುವ ಆಸೆ ಇವನದಾಗಿದೆ. ಊರಿನ ಹುಡುಗರು ತಮ್ಮ ಮನೆಯ ಲಾಂದ್ರಗಳನ್ನು ನೋಡಿಕೊಂಡು ಇವೇ ದೊಡ್ಡವೆಂದು ಭಾವಿಸಿದ್ದರು. ಇವನು ಯಾರ ನೆರವೂ ಇಲ್ಲದೆ ದೊಡ್ಡ ಲಾಂದ್ರವನ್ನು ತಯಾರಿಸುವಲ್ಲಿ ನಿರತನಾಗಿದ್ದನು. ಅಜ್ಜಿಯ ಎಲ್ಲಾ ಕೆಲಸದಲ್ಲೂ ನೆರವಾಗುವ ಹುಡುಗ ಇವನು. ಅವನು ತಯಾರಿಸಿದ ಲಾಂದ್ರವು ಅವರ ಮನೆಯನ್ನು ಮೀರಿ ಎತ್ತರವಾಗಿದ್ದು, ಮನೆಗೆ ಹೋಗಲು ಲಾಂದ್ರದ ಒಳಗೆಯೇ ಹೋಗಬೇಕಿತ್ತು. ಅದನ್ನು ಸಾಗಿಸುವುದು ಸುಲಭದ ಮಾತಾಗಿರಲಿಲ್ಲ. ಪತಿಯಾ ನು ಪೇಟೆಗೆ ಹೋಗಿ ಸಿಹಿ ಗೆಣಸು ಮಾರಿ, ಲಾಂದ್ರವನ್ನು ಅಲಂಕಾರ ಮಾಡಲು ಸಾಮಾಗ್ರಿ ತರುವಾಗ ದಾರಿಯಲ್ಲಿ ಸಿಗುವ ಎಲ್ಲ ಲಾಂದ್ರಗಳನ್ನು ಖುಷಿಯಿಂದ ನೋಡುವನು. ವೇಸಾಕ್ ಉತ್ಸವ ಸಮೀಪಿಸುತ್ತಿದೆ ಪತಿಯಾ ಲಾಂದ್ರದ ಕೆಲಸ ಬೇಗ ಮುಗಿಸುವುದು ಒಳಿತು ಎಂದು ಅಜ್ಜಿಯು ಸಲಹೆ ನೀಡುವಳು. ಸರಿಯಾದ ಸಮಯದಲ್ಲಿ ಅಜ್ಜಿಯ ನೆರವು, ಬುದ್ಧನ ದಯೆಯಿಂದ ಕೆಲಸವು ಮುಗಿಯುವುದು ಎಂದ ಅವನು ಸಮಾಧಾನ ಪಟ್ಟುಕೊಳ್ಳುವನು. ಆ ರಾತ್ರಿ ಅವನು ಲಾಂದ್ರದ ಮುಂದೆಯೆ ಮಲಗಿದನು. ಕನಸಿನಲ್ಲಿಯು ಮನೆಗಿಂತ ದೊಡ್ಡದಾದ ಲಾಂದ್ರವು ಕಾಣಿಸಿಕೊಳ್ಳುವುದು. ಹುಡುಗನೊಬ್ಬನ ಆಸೆ, ಆಕಾಂಕ್ಷೆಗಳನ್ನು ಚಿತ್ರಿಸಿರುವ ಸೊಗಸುಗಾರಿಕೆಯು ಈ ಕತೆಯಲ್ಲಿ ಬರುವ ಜೊತೆಗೆ ಮಕ್ಕಳ ಮುಗ್ಧತೆಯಿದ್ದು, ಉತ್ಸವಗಳಲ್ಲಿ ತೊಡಗಿಸಿಕೊಳ್ಳುವಿಕೆಯ ಸಂಭ್ರಮದ, ಬುದ್ಧನ ವೇಸಾಕ್ ಸಂಸ್ಕೃತಿಯನ್ನು ಹೇಳುವುದಿದೆ.

ಥೈಲ್ಯಾಂಡ್ ಮೂಲದ ಕತೆಗಳೂ ನಮ್ಮಲ್ಲಿ ಬಂದಿರುವುದಿದೆ. ಅವುಗಳಲ್ಲಿ ಮಹತ್ತರವಾದುದು ಹಳ್ಳಿಗಾಡಿನ ಪ್ರೇಮದ ಹಂದರದಲ್ಲಿ ಬರೆಯುವ ಲೇಖಕ ಮನೋಪ್ ಕ್ಯೂಸಾನಿತ್‌ರ ಕತೆಯಾದ 'ಮೊಟ್ಟೆ ಒಡೆಯುವ ಧೀರ' ಎಂಬುದು. ಇಲ್ಲಿಯೂ ಗ್ರಾಮೀಣ ಭಾಗದ ಜಾತ್ರೆಗಳ ಸಂಗತಿಗಳವೆ, ಅದಕ್ಕಾಗಿ ಮಕ್ಕಳು ನಡೆಸುವ ಸಿದ್ಧತೆಗಳವೆ. ಜ್ಯಾಕ್ ಎಂಬುವ ಹುಡುಗನು ಜಾತ್ರೆಯಲ್ಲಿ ನಡೆಯುವ ಮೊಟ್ಟೆ ಒಡೆಯುವ ಆಟಕ್ಕಾಗಿ ಮೊಟ್ಟೆ ಬೇಯಿಸಿಕೊಂಡು ಕಾಯುವುದಿದೆ. ಸಂಭಾಷಣೆಯ ಮಾದರಿಯಲ್ಲಿ ಕತೆಯು ಆರಂಭವಾಗುವುದಿದೆ. ಸುತ್ತ ಮುತ್ತಲ ಹಳ್ಳಿಗಳಿಂದ ಬರುವ, ಸೇರುವ ಜನರಿಗಾಗಿ ವಸ್ತು ಪ್ರದರ್ಶನ ಮಾಡಲು ನಡೆಸುವ ತಯಾರಿಗಾಗಿ ಜ್ಯಾಕ್ ಯೋಚಿಸುವನು. ಮನೋರಾ ಎಂಬ ಪ್ರಸಿದ್ಧವಾದ ನೃತ್ಯ ನೋಡಲು ಚಾಪೆಗಳನ್ನು ಹಾಸಿ ಮಕ್ಕಳು ಕಾಯುವ ಕನವರಿಕೆಗಳವೆ. ಜ್ಯಾಕ್ ಮತ್ತು ಜೋರಾಮ್ ನಡುವೆ ಮೊಟ್ಟೆ ಹೊಡೆಯುವ ಸ್ಪರ್ಧೆ ನಡೆಯುವ, ಗೆಲ್ಲುವ ರೋಚಕತೆಗಳವೆ. ಇಂತಹ ಮಕ್ಕಳ ಆಟಗಳನ್ನು ಮುಂದಿಟ್ಟುಕೊಂಡು ಜಾತ್ರೆಯ ಕಾರಣದಿಂದ ರಂಜಿಸುವ, ಸೋಲು ಗೆಲುವುಗಳ ತಂತ್ರಗಳನ್ನು ಎಣೆಯುವ, ಸಿದ್ಧಗೊಳ್ಳುವ ಅವರ ಮನಸ್ಸುಗಲನ್ನು ಕತೆಯಾಗಿಸಿ ನೋಡುವುದು ಮಕ್ಕಳ ಕತೆಯ ಪರಿಸರದಲ್ಲಿ

ಪರಿಣಾಮಕಾರಿಯಾಗಿ ಕಾಣಿಸಿಕೊಂಡಿದೆ. ಇದು ಕನ್ನಡದ ಗ್ರಾಮೀಣ ಕ್ರೀಡೆಗಳನ್ನು ವಸ್ತುವಾಗಿ ನೋಡುವಲ್ಲಿ ಭಿನ್ನವಾದ ಆಯಾಮಗಳಿಂದ ಪ್ರೇರಣೆಯಾಗಬಲ್ಲದು.

ಹೀಗೆ ಬಂದಿರುವ ಕೃತಿಗಳು ತೋರಿಸುವ ವಿಭಿನ್ನವಾದ ಕಥಾ ಜಗತ್ತು, ವಸ್ತುವಿನ ಹರಹು, ವೈವಿಧ್ಯದ ಬರವಣಿಗೆಗಳು ಮಕ್ಕಳ ಸಾಹಿತ್ಯದಲ್ಲಿ ಆಸಕ್ತಿಯಿಂದ ತೊಡಗಿಸಿಕೊಂಡ ಬಹುಪಾಲು ಲೇಖಕರಿಗೆ ಸ್ಫೂರ್ತಿಯಾಗಲಿಲ್ಲ. ಅವರು ತಮ್ಮದೇ ಏಕತಾನತೆಯಲ್ಲಿ ಮುಳುಗಿರುವಂತೆ ನಮ್ಮಲ್ಲಿನ ಕೃಷಿ ಕಾಣಿಸುತ್ತದೆ. ಇಂಗ್ಲಿಷಿನಲ್ಲಿ ಕಥಾಜಗತ್ತು ಬಲು ವೈವಿಧ್ಯದಿಂದ ಬೆಳೆದಿದೆ. ಅದರಲ್ಲಿಯೂ ಕಾದಂಬರಿಯಂತಹ ದೀರ್ಘವಾದ ಬರಹಗಳು ವಿಪುಲವಾಗಿ ಸಿಗುತ್ತವೆ. ಅಲ್ಲಿಯ ಫ್ಯಾಂಟಸಿಯು ಅನೇಕ ಬಗೆಯಲ್ಲಿ ಹೊಸತನವನ್ನು ಕಂಡುಕೊಂಡಿದೆ. ಈ ಬಗೆಯ ಕಥಾ ಬರವಣಿಗೆಯಲ್ಲಿ ತೊಡಗಿಸಿಕೊಂಡ ಅನೇಕ ಲೇಖಕರು ಅಮೇರಿಕಾ, ಇಂಗ್ಲಂಡ್. ಕೆನಡಾ, ಆಸ್ಟ್ರೇಲಿಯಾ ಕಡೆಗಳಲ್ಲೆಲ್ಲ ಸಿಗುತ್ತಾರೆ. ಓದುಗರ ಸಂಖ್ಯೆಯೂ ಹಾಗೆಯೆ ಹೆಚ್ಚಳವಾಗಿದೆ. ಅಧ್ಯಯನಗಳು ಸಹ ಗಂಭೀರವಾಗಿ ನಡೆಯುತ್ತಿವೆ. ಚರ್ಚೆ, ವಿಮರ್ಶೆಗಳು, ವಿಚಾರಸಂಕಿರಣಗಳು ಸಹ ನಡೆಯುತ್ತಿವೆ. ನಮ್ಮಲ್ಲಿ ಈ ಯಾವುದೇ ಪ್ರಭಾವ ಆಗುತ್ತಿಲ್ಲ. ಇದಕ್ಕೆ ಹೊರಗಿನ ಓದು, ವಿಸ್ತಾರಕ್ಕೆ ತೆರೆದುಕೊಳ್ಳುವ ಮನಸ್ಸುಗಳು ಕಾಣುತ್ತಿಲ್ಲ. ತೀರ ಇತ್ತೀಚೆಗೆ ಕೆಲವರಲ್ಲಿ ಒಂದಿಷ್ಟು ಅಂತಹ ಪ್ರಯತ್ನಗಳು ಕಾಣಿಸಿಕೊಳ್ಳುತ್ತಿವೆ.

### ೪.೩ ಭಾರತದ ಇತರ ಭಾಷೆಗಳ ಪ್ರಭಾವ, ಪ್ರೇರಣೆ

ವಿದೇಶಿ ಮಕ್ಕಳ ಸಾಹಿತ್ಯವು ಕನ್ನಡದಲ್ಲಿ ಪ್ರಭಾವ ಬೀರಿದಂತೆಯೆ ಭಾರತದ ಎಲ್ಲ ಭಾಷೆಗಳ ಮೇಲು ತನ್ನ ಛಾಪು ಮೂಡಿಸಿರುವುದು ಕಾಣಿಸಿಕೊಂಡಿದೆ. ಭಾರತದ ಭಾಷೆಗಳು ಸಹ ತಾವು ಕಂಡುಕೊಂಡ ಸಾಹಿತ್ಯವನ್ನು ಕನ್ನಡದ ಮೇಲೂ ಪ್ರಭಾವಿಸಿರುವುದಿದೆ. ನಮ್ಮಲ್ಲಿ ಭಾರತೀಯ ಇಂಗ್ಲಿಷ್ ಸಾಹಿತವ್ಯ ಹೇಗೆ ಹೊಸತನಕ್ಕೆ, ಹೊರಗಿನದಕ್ಕೆ, ವಿಶೇಷವಾಗಿ ಪಶ್ಚ್ಯಾತ್ಯಕ್ಕೆ ತೆರೆದುಕೊಂಡಿತು ಎನ್ನುವುದು ಮುಖ್ಯವೋ ಹಾಗೆಯೆ ಭಾರತೀಯ ಮಕ್ಕಳ ಸಾಹಿತ್ಯದ ಸಂದರ್ಭದಲ್ಲಿಯು ಇದು ಗಮನಾರ್ಹವಾದುದು. ಶಂಕರ ಪಿಳ್ಳೆ ಅವರು ೧೯೫೭ರಲ್ಲಿ ಚಿಲ್ಡ್ರನ್ ಬುಕ್ ಟ್ರಸ್ಟ್ ಸಂಘಟಿಸಿದನಂತರ ಈ ದಿಸೆಯಲ್ಲಿ ಸಾಕಷ್ಟು ಬಗೆಯಲ್ಲಿ ತೊಡಗಿಸಿಕೊಂಡರು. ಅವರ ಈ ನಿಟ್ಟಿನ ಚಟುವಟಿಕೆಗಳೂ ಗಮನಿಸುವಂತಿವೆ. ನಗರದ, ಇಂಗ್ಲಿಷ್ ಓದಿನ ಸಾಧ್ಯತೆಯುಳ್ಳ ಲೇಖಕರು ಸಿದ್ಧವಾಗುವಲ್ಲಿ ಅವರು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡರು. ಮಕ್ಕಳ ಸಾಹಿತ್ಯಕ್ಕೆ ಚಿತ್ರಗಳ ಸಾಹಚರ್ಯವೂ ಕೂಡ ಎಷ್ಟೊಂದು ಮಹತ್ತ್ವದ್ದು, ಅಗತ್ಯದ್ದು ಎನ್ನುವುದನ್ನು ಅವರು ಗಂಭೀರವಾಗಿ ಪರಿಗಣಿಸಿದರು. ಹೀಗೆ ಸಿದ್ಧವಾದ ಲೇಖಕರು ಹೊರಗಿನ ಹೊಸತಿಗೆ ತೆರೆದುಕೊಳ್ಳುತ್ತಲೇ ಬಂದರು. ಅವರಿಗೆ ಈ ಹೊಸ ಓದು ಸಾಧ್ಯವಾಗುವ ವಾತಾವರಣದಲ್ಲಿನೆರವಾದವರು ಶಂಕರಪಿಳ್ಳೆ ಅವರು. ಹೊರಗಿನ ಹೊಸ ಹೊಸ ಪುಸ್ತಕಗಳು ಇವರಿಗೆ ಲಭ್ಯವಾಗತೊಡಗಿದವು. ಶಂಕರಪಿಳ್ಳೆ ಅನೇಕ ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತಿದ್ದರು. ಅಲ್ಲದೆ ಪ್ರತಿವರುಷ ಕಥಾಸ್ಪರ್ಧೆಯನ್ನು ಏರ್ಪಡಿಸುತ್ತಾ ಬಂದುದು ಅಪರೂಪದ ಸಂಗತಿ. ಇಂದು ಖ್ಯಾತಿ

ಹೊಂದಿರುವ ಅರೂಪಕುಮಾರ ದತ್ತಾ, ರಾಮೇಂದ್ರಕುಮಾರ ಮುಂತಾದ ಅನೇಕ ಲೇಖಕರು ಈ ಬಗೆಯ ವಾತಾವರಣದಿಂದ ಮಕ್ಕಳಲೇಖಕರಾಗಿ ರೂಪುಗೊಂಡವರು. ಇವರೆಲ್ಲ ಹಳೆಯ ಜಾಡನ್ನು ಬಿಟ್ಟು ಹೊಸತಿಗಾಗಿ ತುಡಿದವರು. ಚಿಲ್ಡ್ರನ್ ಬುಕ್ ಟ್ರಸ್ಟ್‌ನಿಂದ ಬಂದಿರುವ ಪುಸ್ತಕಗಳನ್ನೆಲ್ಲ ನೋಡಿದರೆ ಈ ಹೊಸತನದ ತುಡಿತದ ಅರಿವಾಗುತ್ತದೆ. ಅಲ್ಲಿ ಫ್ಯಾಂಟಸಿಯ, ವಾಸ್ತವದ ಅನೇಕ ಬಗೆಯ ಹೊಸ ಸೃಷ್ಟಿ ಕಾಣಿಸಿಕೊಂಡಿದೆ. ಕಾವ್ಯವನ್ನು ಬಿಟ್ಟು ಗದ್ಯದೆಡೆಗೆ, ಅದರಲ್ಲೂ ಕತೆಗಳ ಕಡೆಗೆ ಹೆಚ್ಚು ತುಡಿದಿರುವುದು ಎದ್ದು ಕಾಣುತ್ತದೆ. ಹಾಗಾಗಿ ಟ್ರಸ್ಟ್‌ನ ಪುಸ್ತಕಗಳನ್ನು ನೋಡುತ್ತಾ ಹೋದರೆ ಕತೆಗಳ ಪುಸ್ತಕಗಳೇ ಹೆಚ್ಚಾಗಿಕಾಣಿಸಿಕೊಂಡಿವೆ. ಅದರಲ್ಲಿಯು ಕಾದಂಬರಿಯಂತಹ ಪ್ರಕಾರ, ದೀರ್ಘ ಕತೆಗಳು ವಿಶೇಷವಾಗಿ ಕಾಣಿಸಿಕೊಂಡಿವೆ ಎನ್ನುವುದು ಗಮನಿಸಬೇಕಾದ ಸಂಗತಿ. ನಮ್ಮ ಸುತ್ತಲಿನಲ್ಲಿ ವಾಸ್ತವದ ಅನುಭವಕ್ಕೆ ತೆರೆದು ಕೊಳ್ಳುತ್ತಿರುವ ಮಕ್ಕಳಿಗೆ ಅಗತ್ಯವಾದದ ಓದನ್ನು ನೀಡುವ ಪುಸ್ತಕಗಳು ಕಾಣಿಸಿಕೊಂಡಿರುವುದು ಅತ್ಯಂತ ವಿಶೇಷವಾಗಿದೆ. ಬಹು ಮುಖ್ಯವಾಗಿ ಈ ಪುಸ್ತಕಗಳು ವರ್ಣಗಳಲ್ಲಿ, ನುರಿತ ಕಲಾವಿದರಿಂದ ರಚಿಸಿದ ಚಿತ್ರಗಳ ಆಕರ್ಷಣೆಯನ್ನು ಅವು ತಪ್ಪದೆ ಹೊಂದಿದವು. ಶಂಕರ ಪಿಳ್ಳೆ ಅವರು ಸಹ ಚಿತ್ರಗಳ ಬಗೆಗೆ ಅತ್ಯಂತ ಕಾಳಜಿವಹಿಸಿದರು. ಮಕ್ಕಳ ಸಾಹಿತ್ಯದ ಅವಿಭಾಜ್ಯ ಅಂಗ ಈ ಚಿತ್ರಗಳು ಎನ್ನುವುದನ್ನು ಅವರು ಗಟ್ಟಿಯಾಗಿ ಹೇಳಿದರು. ಅಲ್ಲದೆ ಚಿತ್ರಕಾರರಿಗಾಗಿಯೆ ಶಿಬಿರಗಳನ್ನು ನಡೆಸಿದದರು. ಅನೇಕ ಖ್ಯಾತ ಕಲಾವಿದರು ಮಕ್ಕಳ ಪುಸ್ತಕಗಳಿಗಾಗಿ ತೊಡಗಿಸಿಕೊಂಡರು. ಅಂತರರಾಷ್ಟ್ರೀಯ ಪುರಸ್ಕಾರಗಳನ್ನು ಪಡೆಯುವಲ್ಲಿ ಮಕ್ಕಳ ಜಗತ್ತಿನ ಈ ಚಿತ್ರಕಾರರ ಸಾಧನೆ ಕಾಣಿಸುತ್ತದೆ. ಪಿಳ್ಳೆ ಅವರು ಇದ್ದಾಗಲೆ ಅಂತರಾಷ್ಟ್ರೀಯ ಮಕ್ಕಳ ಸಾಹಿತ್ಯದ ಪ್ರತಿಷ್ಠಿತ ಸಂಸ್ಥೆಯಾದ IBBY (International Board on Books for Young People) ಸಂಸ್ಥೆಯ ಸದಸ್ಯರೂ ಕೂಡ ಆಗುವಂತೆ ನೋಡಿಕೊಂಡರು. ಅಲ್ಲದೆ ಅದರ ಅಂಗಸಂಸ್ಥೆಯಾಗಿ AWIC (Association of Writers and Illustrators for Chidlren) ಯನ್ನು ಪ್ರಾರಂಭಿಸಿದರು. ಆ ಸಂಸ್ಥೆಯಿಂದ ತ್ರೈಮಾಸಿಕವಾಗಿ Writers and Illustrator ಎನ್ನುವ ಪತ್ರಿಕೆ ನಿಗದಿತವಾಗಿ ಬರುವಂತೆ ನೋಡಿಕೊಂಡರು. ಈ ಸಂಸ್ಥೆಯ ಮೊದಲ ಅಧ್ಯಕ್ಷರಾದ ಮನೋರಮಾ ಜಫಾ ಅತ್ಯಂತ ಆಸಕ್ತಿಯಿಂದ ತೊಡಗಿಸಿಕೊಂಡು ಮುನ್ನಡೆಸಿದರು. ಮಕ್ಕಳ ಸಾಹಿತ್ಯದ ಕುರಿತಾಗಿ ಅಧ್ಯಯನ, ಚರ್ಚೆ ನಡೆಯುವ ಪತ್ರಿಕೆ ಇದು. ಈ ಸಂಸ್ಥೆಯಿಂದ ೧೯೯೭ರಲ್ಲಿ ಪಂಚತಂತ್ರಗಳ ಕುರಿತು ವಿಶೇಷ ವಿಚಾರಸಂಕಿರಣ ನಡೆಯಿತು. ಆ ಕುರಿತ ವಿಶೇಷ ಸಂಚಿಕೆ ಕೂಡ ಹೊರಬಂತು. ವಿಚಾರ ಸಂಕಿರಣದಲ್ಲಿ ಪ್ರಸ್ತುತ ಪಡಿಸಿದ ಪ್ರಬಂಧಗಳು ಈ ಸಂಚಿಕೆಯಲ್ಲಿವೆ. ಭಾರತೀಯ ಹಾಗೂ ವಿದೇಶೀಯ ಲೇಖಕರು ಬರೆಯುತ್ತಾ ಬಂದಿರುವ ಈ ವಿರಳವಾದ ಪತ್ರಿಕೆಯ ಕುರಿತು ನಮ್ಮಲ್ಲಿ ಬಹಳಷ್ಟು ಲೇಖಕರಿಗೆ ಪರಿಚಯವಿರಲಿಲ್ಲ. ಈ ಪತ್ರಿಕೆಯ ಅನೇಕ ಸಂಚಿಕೆಗಳು ಸಂಗ್ರಹಯೋಗ್ಯವಾಗಿವೆ. ಟ್ರಸ್ಟ್‌ನ ಇಲ್ಲಿಯವರೆಗೆ ಪ್ರಕಟವಾದ ಪುಸ್ತಕಗಳ ಕಡೆಗೆ ಕಣ್ಣು ಹಾಯಿಸಿದರೆ ಅಲ್ಲಿನ ಹೊಸತು ಕಣ್ಣಿಗೆ ಕಾಣುತ್ತದೆ. ೧೯೮೨ರಲ್ಲಿ ತಂದಿರುವ Short Stories For Chidlren ಸಂಕಲನವಾಗಲಿ, ೧೯೮೫ರಲ್ಲಿ ತಂದಿರುವ Short Stories For Children More, ೧೯೯೧ ರಲ್ಲಿ ಬಂದ ೨೪ Short Stories, ೧೯೯೭ರಲ್ಲಿ ಬಂದ

kaleidsocscope, ಸಂಕಲನವಾಗಲಿ ಎಲ್ಲವುಭಾರತೀಯ ಮಕ್ಕಳ ಕಥಾ ಜಗತ್ತಿನಲ್ಲಿ ಹೊಸತು ಪ್ರವೇಶಿಸಿದ ಬಲುದೊಡ್ಡದಾದ ಕುರುಹಾಗಿವೆ. ಇಲ್ಲಿನ ಕೆಲವು ಕೃತಿಗಳನ್ನು ಗಮನಿಸುತ್ತಾ ಹೋದರೆ ಹೊಸತು ಭಾರತೀಯ ಪರಿಸರದ ಲೇಖಕರಲ್ಲಿ ಹೇಗೆಲ್ಲ ಕಾಣಿಸಿಕೊಳ್ಳುತ್ತಾ ಬಂದಿದೆ ಎನ್ನುವುದು ಗೋಚರವಾಗುತ್ತದೆ. ಮನೋರಮಾ ಜಾಫಾ ಅವರ 'Leg Trap', ಇರಾ ಸಕ್ಸೇನಾ ಅವರ 'Dogs on Strike', ನೀಲಿಮಾ ಸಿನ್ಹಾ ಅವರ 'Metamorphosis', ಇಂದಿರಾ ಅನಂತಕೃಷ್ಣನ್ ಅವರ 'The Sandalwood Trees', ಅನಿಲ ಏಕಬೋಟೆ ಅವರ 'Paper Boat', ಆರ್. ಕೆ. ಮೂರ್ತಿ ಅವರ 'Jasma', ಸುರೇಖಾ ಪನಂಡೀಕರ ಅವರ ಅವರ 'Durga be Praised', ರೂಪಾ ಗುಪ್ತಾ ಅವರ 'The Secret path', ಸ್ವಪ್ನಾ ದತ್ತಾ ಅವರ 'The Ramayana that went Wrong', ನೀಲಿಮಾ ಸಿನ್ಹಾ ಅವರ 'Raghu and I', ಮತೀಯ ಧಾಂದಲೆಗಳನ್ನೇ ಕೇಂದ್ರವಾಗಿರಿಸಿಕೊಂಡ ಸಿಗುರನ್ ಶ್ರೀವಾಸ್ತವ್ ಅವರ 'The Neighbour', ಸೈಬಲ್ ಚಕ್ರವರ್ತಿ ಅವರ 'Gift from Mother', ಗಿರಿಜಾರಾಣಿ ಆಸ್ಥಾನಾ ಅವರ 'God Mother', ಕಾವ್ಯಮಯವಾಗಿ ಬಂದ ನೀತಾ ಬೆರ್ರಿ ಅವರ 'The Song of the River', ಹಾಸ್ಯವನ್ನುಳ್ಳ ಪ್ರತಿಭಾನಾಥ್ ಅವರ 'Counting Sheep' ಇವೆಲ್ಲಮಕ್ಕಳ ಕಥಾ ಜಗತ್ತಿನಲ್ಲಿ ಹೊಸ ಪುಟಗಳನ್ನು ಬರೆಯುವತ್ತ ಹೆಜ್ಜೆಹಾಕಿದವು.

Golden Set ಮಾಲಿಕೆಯಲ್ಲಿ ಅಸ್ಸಾಮಿ ಲೇಖಕ ಅರೂಪಕುಮಾರ ದತ್ತಾ ಅವರ ೪ ದೀರ್ಘ ಹರವಿನ ವಸ್ತುವುಳ್ಳ ಕತೆಗಳು ನಮ್ಮಸುತ್ತಲಿನ ವಾಸ್ತವದ ಪರಿಸರದಲ್ಲಿ ಮಕ್ಕಳು ಹೇಗೆಲ್ಲ ಅನನುಕೂಲಗಳ ಮಧ್ಯೆಯು ಸಾಹಸಕ್ಕೆ, ಇನ್ನಿಲ್ಲದ ಚಟುವಟಿಕೆಗಳಿಗೆ ತೊಡಗಿಸಿಕೊಳ್ಳುತ್ತಾರೆ ಎನ್ನುವುದು ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಇದರಲ್ಲಿ ಕಾಜಿರಂಗಾ ಟ್ರಯಲ್ ಕೃತಿ ಸಿನಿಮಾ ಕೂಡ ಆಗಿದೆ. ಅಸ್ಸಾಮಿನ ಕಾಜಿರಂಗ ಅಭಯಾರಣ್ಯದಲ್ಲಿ ತಮ್ಮ ಕೋಡುಗಳಿಗಾಗಿ ಬಲಿಯಾಗುತ್ತಿದ್ದ ಪ್ರಾಣಿಗಳ ಕಳ್ಳರ ತಂಡವನ್ನು ಪತ್ತೆಹಚ್ಚುವಲ್ಲಿ ತೊಡಗುವ ಸಾಹಸಿ ಬಾಲಕರ ಸುತ್ತ ಹಬ್ಬಿರುವ ಈ ಕೃತಿ, ವಾಸ್ತವಗಳ ನಡುವೆಯೂ ನಾ. ಡಿಸೋಜ ಅವರ ಕೃತಿಗಳಂತೆ ಸಾಹಸದ, ರೋಚಕದ, ಕುತೂಹಲದ ಬರವಣಿಗೆಯನ್ನು ನೀಡಿರುವಂತದ್ದಾಗಿದೆ. ಅದರಲ್ಲೂ ಅವರ 'ಬ್ಲೈಂಡ್ ವಿಟ್ನೆಸ್' ಒಬ್ಬ ಕುರುಡ ಬಾಲಕ ಕಳ್ಳ ಸಾಗಾಣಿಕೆದಾರನನ್ನು ಪತ್ತೆ ಹಚ್ಚುವಲ್ಲಿ ಸಹಾಯಕ್ಕೆ ಬರುವ ಕತೆಯಾಗಿದ್ದು ಅತ್ಯಂತ ರೋಮಾಂಚನಕಾರಿಯಾಗಿ ಮೂಡಿ ಬಂದಿದೆ. ಅರೂಪಕುಮಾರ ದತ್ತಾ ತೀರ ಬಡ, ಅಸಹಾಯಕ ಮಕ್ಕಳ ನಡುವೆಯೆ ಈ ಬಗೆಯ ಸಾಹಸಗಳನ್ನು ತಂದುಕೊಳ್ಳುತ್ತಾರೆ. ಅಲ್ಲದೆ ಸಾಕಷ್ಟು ವಿವರಗಳೊಡನೆ ಚಿತ್ರಗಳನ್ನು ಕಟ್ಟಿಕೊಡುತ್ತಾರೆ. ಈ ಯಾವುವೂ ನಮ್ಮ ಹಳೆಯ ಜನಪದ, ನೀತಿ ಕತೆಗಳ ಮಾದರಿಗಳನ್ನು ಅನುಸರಿಸಿಲ್ಲ, ಬದಲಿಗೆ ಇಂದಿನ ವಾತಾವರಣದಲ್ಲಿ, ನಮ್ಮ ಸುತ್ತಲಿನ ಸಾಮಾಜಿಕ ಸಂದರ್ಭದಲ್ಲಿ ಅರಳಿದ ಕತೆಗಳಾಗಿವೆ.

ಅರೂಪಕುಮಾರ ದತ್ತಾ ಅವರಂತೆ ಅನೇಕ ಲೇಖಕರು ಮಕ್ಕಳ ಲೋಕದಲ್ಲಿಯೆ ಕಾಣಿಸಿಕೊಂಡು ಸಾಧನೆ ತೋರಿಸಿದ್ದಾರೆ. ಆ ರಂಗವನ್ನು ಗಂಭೀರವಾಗಿ ಕಂಡಿರುವುದು ಗಮನಿಸಬಹುದಾಗಿದೆ. ರಾಮೇಂದ್ರ

ಕುಮಾರ, ಸಿಗುರನ್ ಶ್ರೀವಾಸ್ತವ್, ಮನೋರಮಾ ಜಾಫಾ, ದೀಪಾ ಅಗರವಾಲ್, ಸುನೀತಿ ನಾಮಜೋಷಿ, ನೀಲಿಮಾ ಸಿನ್ಹಾ, ಇರಾ ಸಕ್ಸೇನಾ ಹೀಗೆ ಅನೇಕ ಹೊಸ ಲೇಖಕರು ಕಾಣಿಸಿಕೊಂಡು ಹೊಸ ಹರಿವನ್ನು ತಂದರು. ಅದರಲ್ಲೂ ಸಿಗುರನ್ ಶ್ರೀವಾಸ್ತವ್ ಅಂತಹವರ ಕೃತಿಗಳು ಅನೇಕ ಸಲ ಪ್ರತಿಷ್ಠಿತ ಪುರಸ್ಕಾರಗಳನ್ನು ಪಡೆಯುತ್ತ ನಮ್ಮ ಸುತ್ತಲಿನ ಜ್ವಲಂತಸಮಸ್ಯೆಗಳಿಗೆ ಸ್ಪಂದಿಸಿವೆ. ಶಂಕರಪಿಳ್ಳೆ ಅವರು ಚಿಲ್ಡ್ರನ್ಸ್ ಬುಕ್ ಟ್ರಸ್ಟ್ ಕಥಾ ಸ್ಪರ್ಧೆಗಳನ್ನು ವಿಭಿನ್ನ ಮಾದರಿಯಲ್ಲಿ ನಡೆಸುತ್ತ ಬಂದಿರುವುದು ಸಹ ಗಮನಾರ್ಹ ಪ್ರಯತ್ನವಾಗಿದೆ.

ಬಾಲ್ಯದ ಮನಸ್ಸಿನ ವಿಭಿನ್ನವಾದ ನೋಟಗಳನ್ನು ಇವು ಕೊಡುವುದರೊಂದಿಗೆ, ನಮ್ಮ ನಡುವಿನ ಗಂಭೀರವಾದ ಹಲವಾರು ಬದುಕಿನ ಸಂಗತಿಗಳಿಗೆ ತೆರೆದುಕೊಂಡಿರುವುದು ಕಾಣುತ್ತದೆ. ಈ ಸಂಕಲನಗಳು ಪದೆ ಪದೆ ಮರುಮುದ್ರಣಗೊಳ್ಳುತ್ತಲು ಬಂದಿವೆ. ಇವನ್ನು ಇಂಗ್ಲಿಷು ಮಾಧ್ಯಮದ ಮಕ್ಕಳು ಓದುತ್ತ ಬಂದಿದ್ದಾರೆ. ಕನ್ನಡದ ಮಕ್ಕಳು ಭಾಷೆಯ ದೆಸೆಯಿಂದ ಇಂತಹ ಹೊಸತಿಗೆ ದೂರವಾಗಿದ್ದಾರೆ ಎನ್ನಬಹುದು. ವಿರಳವಾಗಿ ಕೆಲವರಾದರೂ ಇಂತಹ ಪುಸ್ತಕ ಜಗತ್ತಿನೆಡೆಗೆ ಕಣ್ಣು ಹಾಯಿಸಿರಬಹುದು. ಆದರೆ ಬರವಣಿಗೆಯಲ್ಲಿ ಯಾರೂ ಕಾರ್ಯಗತಗೊಳಿಸಿದ ಉದಾಹರಣೆಗಳಿಲ್ಲ. ಅಂತಹವುಗಳಕುರಿತು ಮಾತುಕತೆ, ಚರ್ಚೆಗಳೂ ನಮ್ಮ ನಡುವೆ ನಡೆಯಲಿಲ್ಲ. ಸಿಸು  ಸಂಗಮೇಶರು ಈ ಬಗೆಯ ಒಡನಾಟಗಳನ್ನು ಕನ್ನಡದಾಚೆ ಹೊಂದಿದ್ದರು. ಆದರೆ ಗಂಭೀರವಾದ, ವಿಸ್ತೃತವಾದ ಬರವಣಿಗೆಗೆ ಅವರು ಇಂತಹವುಗಳ ಪ್ರಭಾವವನ್ನು ಬಳಸಿಕೊಳ್ಳಲಿಲ್ಲ. ಅವರು ಹಿಂದಿಯ ಸೌಲಭ್ಯದ ಮೂಲಕ ಸಂಪರ್ಕದಲ್ಲಿದ್ದವರೇ ವಿನಃ ಇಂಗ್ಲೀಷಿನಿಂದಲ್ಲ. Writers and Illustrators ಪತ್ರಿಕೆಯನ್ನು ಮಕ್ಕಳ ಸಾಹಿತ್ಯಾಸಕ್ತಿಯ ವಲಯದ ಯಾರೂ ನಮ್ಮಲ್ಲಿ ಗಮನಿಸಲಿಲ್ಲ. ಗಮನಿಸಿದ್ದಿದ್ದರೆ ಕೆಲವು ಹೊಸ ಬದಲಾವಣೆಗೆ ತಮ್ಮನ್ನು ಒಗ್ಗಿಸಿಕೊಳ್ಳಬಹುದಿತ್ತು. ಆ ಕುರಿತು ಇಂದಿಗೂ ಬಹಳಷ್ಟು ಜನಕ್ಕೆ ಗೊತ್ತಿಲ್ಲದಂತಿದೆ. ಹೀಗೆ ಹೊಸ ಬಗೆಯ ಕಥಾ ಜಗತ್ತು ನಮ್ಮನಡುವೆ ಎತೆರೆದುಕೊಳ್ಳಲು ಈ ರಂಗದಲ್ಲಿ ತೊಡಗಿಸಿಕೊಂಡ ಲೇಖಕರ ಮಿತಿಗಳಿಂದಲು ಅಸಾಧ್ಯವಾಯಿತು. ಪ್ರಬುದ್ಧ ಸಾಹಿತ್ಯ ವಲಯದಲ್ಲಿಯೆ ತಮ್ಮನ್ನು ಕಾಣಲು ಬಯಸಿದ ಕೆಲವರು ವಿರಳವಾಗಿ ಇಲ್ಲಿಯೂ ಒಂದಿಷ್ಟು ಬರೆಯಲು ನೋಡಿದವರು, ತುಡಿದವರು ಬರೆದಿದ್ದರೂ ಅವರ್ಯಾರೂ ಈ ಬಗೆಯ ಓದನ್ನುಸಾಧ್ಯ ಮಾಡಿಕೊಂಡವರಲ್ಲ. ಅವರು ಒಟ್ಟಾರೆಯಾಗಿ ಸಾಹಿತ್ಯದ ಹಿನ್ನೆಲೆಯಲ್ಲಿ ಬರೆದವರು. ಕೇವಲ ಮಕ್ಕಳ ಜಗತ್ತಿನಲ್ಲಿ ಕಾಣಿಸಿಕೊಳ್ಳುವಲ್ಲಿ ಅನಾಸಕ್ತಿ ತಳೆದವರು. ಆದರೆ ಈ ಬಗೆಯ ಪುಸ್ತಕಗಳು ಭಾರತದಲ್ಲಿ ಮಕ್ಕಳ ಸಾಹಿತ್ಯದ ಹೊಸಗಾಲದ ಹೊಸ ವಾತಾವರಣವನ್ನು ಸೃಷ್ಟಿಸುತ್ತ ಬಂದಿರುವುದನ್ನು ಅತ್ಯಂತ ಮಹತ್ತ ದ್ದಾಗಿ ನೋಡಬೇಕು. ಇಲ್ಲಿನ ಕತೆಗಳು ಬಾಲ್ಯವನ್ನು, ನಮ್ಮ ನಡುವಿನ ಮಕ್ಕಳ ವಾತಾವರಣದಲ್ಲಿ ಎಷ್ಟೆಲ್ಲ ಸೂಕ್ಷ್ಮದಿಂದ ನೋಡಿವೆ ಎನ್ನುವುದು ಅಗತ್ಯವಾಗಿ ಅಭ್ಯಸಿಸಬೇಕಾದ ಸಂಗತಿ. ಇವೆಲ್ಲ ತುಸು ಬೆಳೆದ, ಓದಿನ ಹಂಬಲ ಬೆಳೆಸಿಕೊಂಡ ಮಕ್ಕಳಿಗೆ ಸೊಗಸಿನ ಓದನ್ನು ಕೊಡುವಂತಹವು. ಪುಟಾಣಿಗಳಿಗೂ ಈ ಟ್ರಸ್ಟ್ ಹಲವಾರು ರೀತಿಯ ಬಣ್ಣಗಳಲ್ಲಿ ಅರಳಿದ ಕತೆಗಳ ಪುಸ್ತಕಗಳನ್ನು ತರುವ ಪ್ರಯತ್ನವನ್ನು ಮಾಡುತ್ತಲೆ ಬಂದಿದೆ. ವಿಶೇಷವಾಗಿ ತುಸು ಬೆಳೆದ, ಹೈಸ್ಕೂಲು ಮಟ್ಟಕ್ಕೆ ಬಂದ ಮಕ್ಕಳಿಗೆ ನಿಲುಕಬಲ್ಲ ಗಂಭೀರ ಬಾಗಿನ ಕತೆಗಳನ್ನು, ಕಾದಂಬರಿಗಳನ್ನು ಸಾಕಷ್ಟು

ಸಂಖ್ಯೆಯಲ್ಲಿ ಟ್ರಸ್ಟ್ ತಂದಿದೆ. ಈ ಬಗೆಯ ಬರವಣಿಗೆ ಕನ್ನಡದಲ್ಲಿ ಇಲ್ಲವೇ ಇಲ್ಲ. ನಮ್ಮ ಕನ್ನಡದ ಬರವಣಿಗೆ ಆದಷ್ಟೂ ಕವಿತೆಗಳ ಕಡೆಗೆ ಹೊರಳಿದ್ದು ಗದ್ಯದ ಕಡೆಗೆ ಹೊರಳಿದ್ದೆ ಕಡಿಮೆ. ಆದಷ್ಟು ಪುಟ್ಟ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಜನಪದ ಕತೆಗಳನ್ನು ಸಂಗ್ರಹಿಸಿ ನೀಡುವುದರಲ್ಲಿಯೆ ನಮ್ಮ ಲೇಖಕರು ಮುಳುಗಿದರು. ಹಾಗಾಗಿ ಇಂಗ್ಲೀಷು ಓದಬಲ್ಲ ಮಕ್ಕಳಿಗೆ ಸಿಗುವಷ್ಟು ಓದಿನ ಆಹಾರ, ಕಥಾಜಗತ್ತು ಕನ್ನಡದ ಮಕ್ಕಳಿಗೆ ದಕ್ಕಲಿಲ್ಲ.

ಸಿಬಿಟಿ ಯ ಪ್ರಯತ್ನಗಳ ಜೊತೆಗೆ ಅನೇಕ ಖಾಸಗಿ ಪ್ರಕಾಶಕರು ದೆಹಲಿ, ಮುಂಬೈ ನಂತಹ ನಗರಗಳಲ್ಲಿ ಕಾಣಿಸಿಕೊಂಡು ಮಕ್ಕಳ ಹೊಸ ಬಗೆಯ ಕತೆಗಳ ಪುಸ್ತಕಗಳನ್ನು ತರುವಲ್ಲಿ ಕೆಲಸ ಮಾಡಿದರು. ಪ್ರಮುಖವಾಗಿ ಇಂಗ್ಲಿಷಿನಲ್ಲಿಯೆ ತೊಡಗಿಸಿಕೊಂಡರು. ಹೊರಗಿನ ಪ್ರಭಾವಗಳನ್ನು ಹೊಂದಿ ಹೊಸಗಾಲದ ಕಥಾ ಜಗತ್ತನ್ನು ಸೃಷ್ಟಿಸಲು ಈ ಬಗೆಯ ಪ್ರಯತ್ನಗಳು ಸಹಾಯ ಮಾಡಿದವು ಎನ್ನಬೇಕು. ರತ್ನಸಾಗರ ಎನ್ನುವ ಪ್ರಕಾಶಕರಿಂದ ಪ್ರಕಟವಾದ ಸಿಗುರನ್ ಶ್ರೀವಾಸ್ತವ ಅವರ 'A Moment of Truth' ಕೃತಿ ವಿಶ್ವದ ನಾನಾ ಕಡೆಗಳ ೧೫ ಕತೆಗಳನ್ನು ಹೊಂದಿದ್ದು ಮಕ್ಕಳಲ್ಲಿನ ನಾನಾ ಬಗೆಯ ಸ್ವಭಾವ, ಮನೋಭೂಮಿಕೆಗಳಿಗೆ ಕನ್ನಡಿ ಹಿಡಿಯುವಲ್ಲಿ ಯಶಸ್ವಿಯಾಗಿದೆ. ಇಂದಿರಾ ಅನಂತ ಕೃಷ್ಣನ್ ಅವರ ಕಥಾ ಸಂಗ್ರಹ 'Nivedita's New Home and Other Stories' ಹೆಣ್ಣುಮಕ್ಕಳನ್ನೇ ಪ್ರಧಾನ ಭೂಮಿಕೆಯಲ್ಲಿ ಹೊಂದಿ ಗಮನಾರ್ಹ ಸೃಜನಶೀಲತೆಯಿಂದ ಬಂದಿರುವಂತಹದು. AWI ಯಿಂದ ಪ್ರಕಾಶಿತವಾದ 'Mystery Stories''More Mystery stories' ಸಂಗ್ರಹಗಳು ಕುತೂಹಲ, ಪತ್ತೇದಾರಿಯಂತಹ ಕತೆಗಳನ್ನೆ ಹೊಂದಿ ಹೊಸತನ್ನು ಹೇಳಿದವು. ರತ್ನಸಾಗರ ಪ್ರಕಾಶಕರೆ ರಸ್ಕಿನ್ ಬಾಂಡ್ ಅವರ 'Island of Trees' ಎನ್ನುವ ಕೃತಿಯನ್ನು ೧೯೯೨ರಲ್ಲಿ ತಂದರು. ರಸ್ಕಿನ್ ಬಾಂಡ್ ಭಾರತೀಯ ಪರಿಸರದಲ್ಲಿ ಮಕ್ಕಳ ಲೋಕದಲ್ಲಿ ಹೆಸರಾದಷ್ಟು ಇನ್ನೊಬ್ಬ ಲೇಖಕ ಕಂಡುಬರುವುದಿಲ್ಲ. ಅಷ್ಟು ವಿಪುಲವಾಗಿ ಅವರು ಮಕ್ಕಳಿಗಾಗಿ ಬರೆದಿದ್ದಾರೆ. ಅವರ ಬರವಣಿಗೆಯೂ ಸಹಜವಾದುದು. ಡೆಹರಾದಂತಹ ಪ್ರಕೃತಿಯ ಪರಿಸರದಲ್ಲಿ ಹಸಿರಿನ ಸಾಹಚರ್ಯದಲ್ಲಿಯೆ ಅವರ ಕತೆಗಳು ಅರಳುವುದು. ಅವರ ಬಾಲ್ಯವೇ ಬಹಳಷ್ಟು ಸಲ ಅವರ ಬರವಣಿಗೆಯ ಹಿನ್ನೆಲೆಯಾಗಿರುತ್ತದೆ. ರಸ್ಟಿ ಎನ್ನುವ ಹುಡುಗ ಅವರ ಬಾಲ್ಯದ ಪ್ರತಿರೂಪವೆ ಆಗಿ ಕಾಣಿಸಿಕೊಳ್ಳುತ್ತಾನೆ. ಅವರ ಪುಸ್ತಕಗಳು ಅನೇಕ ಪ್ರಕಾಶಕರಿಂದ ಪದೇ ಪದೇ ಪ್ರಕಟವಾಗುತ್ತ ಬಂದಿವೆ. ಆದರೆ ಇಷ್ಟು ಜನಪ್ರಿಯರಾದ ಲೇಖಕ ಕೂಡ ಕನ್ನಡದ ಮಕ್ಕಳ ಸಾಹಿತ್ಯವಲಯದಲ್ಲಿ ಅಪರಿಚಿತರಾಗಿ ಉಳಿದಿರುವುದು ವಿಪರ್ಯಾಸ. ತೀರ ಇತ್ತೀಚಿನ ದಿನಗಳಲ್ಲಿ, ಅದರಲ್ಲಿಯು ಸಂಧ್ಯಾ ಸಾಹಿತ್ಯ ವೇದಿಕೆಯಂತಹ ಆಸಕ್ತ ಬಳಗದವರಿಂದ ಮಕ್ಕಳ ನಡುವೆ, ಲೇಖಕರ ನಡುವೆ ಅವರ ಕೃತಿಗಳು ಹರಿದಾಡತೊಡಗಿವೆ.

Harper Collins ಸಂಸ್ಥೆಯು ಪ್ರಕಾಶನದಲ್ಲಿ ತೊಡಗಿಸಿಕೊಂಡಾಗಿನಿಂದ ಮತ್ತೆ ಮಕ್ಕಳ ಹೊಸ ಬಗೆಯ ಕಥಾಲೋಕವು ಪ್ರಚಾರವಾಗಲು ಸಹಾಯವಾಯಿತು. ಪಾರೋ ಆನಂದ ಅವರ 'Pepper the

Capuchian Monkey', ಶಾಂತಿನಿ ಗೋವಿಂದನ್ ಅವರ 'The Ice – cream Dragon and Other Stories' ಮುಂತಾದ ಕೃತಿಗಳನ್ನು ಇಲ್ಲಿ ಸ್ಮರಿಸಿ ಹೆಸರಿಸಬಹುದು.

೧೯೭೦ರ ದಶಕದಲ್ಲಿ ತೊಡಗಿಸಿಕೊಂಡ ಸರಕಾರಿ ಆಶ್ರಯದ ನ್ಯಾಷನಲ್ ಬುಕ್ ಟ್ರಸ್ಟ್ ಪ್ರಾರಂಭದಿಂದಲೂ ಮಕ್ಕಳ ಲೋಕವನ್ನು ಗುರುತಿಸುವಲ್ಲಿ ದಾರಿಮಾಡಿಕೊಟ್ಟಿತು. ಚಿಲ್ಡ್ರನ್ಸ್ ಬುಕ್ ಟ್ರಸ್ಟ್ ಹಾಕಿಕೊಟ್ಟ ದಾರಿಯನ್ನು ಅದು ಇನ್ನಷ್ಟು ವಿಶೇಷತೆಗಳಿಂದ ತನ್ನದೇ ಆದ ಸಾಧ್ಯತೆಗಳಿಂದ ರೂಪಿಸಿಕೊಂಡಿತು. ಇಂಗ್ಲಿಷು, ಹಿಂದಿಗಳಲ್ಲದೆ ಭಾರತದ ಎಲ್ಲ ಪ್ರಾದೇಶಿಕ ಭಾಷೆಗಳಿಗೂ ವಿಸ್ತರಿಸಿಕೊಂಡು ಬಲು ದೊಡ್ಡ ಕೆಲಸ ಮಾಡಿದೆ. ಎಲ್ಲ ಭಾಷೆಗಳನ್ನು ಗೌರವಿಸುತ್ತ, ಎಲ್ಲ ಕಡೆಯ ಲೇಖಕರನ್ನು ಒಳಗೊಳ್ಳುತ್ತ ಅದು ತನ್ನ ಪ್ರಕಾಶನವನ್ನು ಸಮೃದ್ಧಗೊಳಿಸಿತು. ಒಂದು ಭಾಷೆಯಿಂದ ಕೃತಿ ಉಳಿದ ಎಲ್ಲ ಭಾಷೆಗಳಿಗೆ ತರ್ಜುಮೆಯಾಗುವ ವ್ಯವಸ್ಥೆಯಂತೂ ಈ ಎಲ್ಲ ಭಾರತೀಯ ಭಾಷಾವಲಯಗಳನ್ನು ಬೆಸೆಯುವಲ್ಲಿ, ಒಂದು ಬಗೆಯ ವಿಸ್ತಾರವಾದ ವಾತಾವರಣವನ್ನು ಮೂಡಿಸುವಲ್ಲಿ ದೊಡ್ಡ ಪಾತ್ರ ವಹಿಸಿತು. ಈ ಸಂಸ್ಥೆಯು ಗದ್ಯಕ್ಕೆ, ಅದರಲ್ಲಿಯು ಮಕ್ಕಳನ್ನಾಕರ್ಷಿಸುವ ಕಥಾಲೋಕಕ್ಕೆ ಅದ್ಯತೆ ನೀಡಿತು. ಹೀಗೆ ವಿಸ್ತರಿಸಿಕೊಳ್ಳುತ್ತಾ ಅದು ಹೊಸತಿಗಾಗಿಯೆ ತುಡಿಯುತ್ತಲೇ ಬಂತು. ಅಂದವಾದ, ಅಗತ್ಯವಾದ ಬಣ್ಣ ಬಣ್ಣದ ಚಿತ್ರಗಳಿಂದ, ಬಲು ಸೊಗಸಿನ ಮುದ್ರಣದಿಂದ ಕಂಗೊಳಿಸುತ್ತ ಕಥಾಲೋಕದ ಕಲ್ಪನಾಲೋಕವನ್ನು ವಿಸ್ತರಿಸುವಲ್ಲಿ ಮುತುವರ್ಜಿ ವಹಿಸಿತು. ವಿರಳವಾಗಿ ಒಂದೊಂದು ಕತೆಯನ್ನು ಒಂದೊಂದೇ ಪುಸ್ತಕವಾಗಿಸಿ ಬಲು ಸೊಗಸಿನಿಂದ ಪ್ರಕಟಿಸುತ್ತ ಬಂದುದು ವಿಶೇಷವಾಗಿ ಗಮನಿಸಬೇಕಾದ ಸಂಗತಿ. ರಾಷ್ಟ್ರೀಯ ಸರಕಾರಿ ಸಂಸ್ಥೆಯಾದುದರಿಂದ ಕಡಿಮೆ ಬೆಲೆಯಲ್ಲು, ಎಲ್ಲೆಡೆಯಲ್ಲಿಯು ಮಕ್ಕಳಿಗೆ ಮುಟ್ಟುವ ಸಾಹಸವನ್ನು ಅದು ಮಾಡಿಕೊಂಡುಬಂದಿತು. ಈ ಬಗೆಯ ಪ್ರಯತ್ನವು ಎಲ್ಲ ಸಂದರ್ಭದಲ್ಲು ಯಶಸ್ವಿಯಾಗದಿದ್ದರೂ ಒಳ್ಳೆಯ ತೊಡಗುವಿಕೆಯನ್ನು ಹೇಳುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಈ ಸಂಸ್ಥೆಯ ಯೋಜನೆ ತೊಡಗಿಸಿಕೊಂಡಾಗಿನಿಂದ ಇಲ್ಲಿಯವರೆಗೆ ಬಹು ಸಂಖ್ಯೆಯಲ್ಲಿ ಕತೆಗಳು ಕನ್ನಡವನ್ನು ತಲುಪಿವೆ. ಹೊರ ಭಾಷೆಗಳಿಂದ ಕನ್ನಡಕ್ಕೆ ಬರುತ್ತ ಕನ್ನಡದ ಮಕ್ಕಳನ್ನು ತಲುಪುವುದರೊಂದಿಗೆ ಲೇಖಕ ಸಮುದಾಯವನ್ನೂ ಜಾಗೃತಗೊಳಿಸುವಲ್ಲಿ ಸುದೃವ ಕೆಲಸ ಮಾಡಿವೆ. ಈ ರಾಷ್ಟ್ರೀಯ ಯೋಜನೆಯಲ್ಲಿ ಅನೇಕ ಹಿರಿಯ, ಖ್ಯಾತ ನಾಮರಾದ ಲೇಖಕರು ಕಾಣಿಸಿಕೊಂಡಿರುವುದು ಇನ್ನೊಂದು ಮುಖವಾಗಿ ಕಾಣಿಸಿಕೊಂಡಿತು.. ಮಕ್ಕಳ ಲೋಕದಲ್ಲಿಯೆ ಕಾಣಿಸಿಕೊಂಡಿರುವ ಲೇಖಕರಲ್ಲದೆ ಈ ಬಗೆಯಲ್ಲಿ ಹಿರಿಯರ ಕೊಡುಗೆಯು ಅನೇಕ ವಿಶೇಷತೆಗಳಿಗೆ ಕಾರಣವಾಗಿದೆ. ಪ್ರೇಮಚಂದ್, ಮಹಾಶ್ವೇತಾದೇವಿ, ಮುಲ್ಕರಾಜ ಆನಂದ್, ಆರ್. ಕೆ ನಾರಾಯಣ, ರಸ್ಕಿನ್ ಬಾಂಡ್ ಅಂತಹ ಲೇಖಕರು ಇಲ್ಲಿ ಮಕ್ಕಳ ಲೋಕದಲ್ಲಿ ಕಾಣಿಸಿಕೊಂಡಿರುವುದು, ತಮ್ಮ ಬರೆಹವನ್ನು ವಿಭಿನ್ನವಾದ ಭಾಷಾವಲಯಕ್ಕೆ ಮುಟ್ಟಿಸಿರುವುದು ವಿಶೇಷವಾಗಿದೆ. ಮಕ್ಕಳ ಕಥಾಲೋಕದಲ್ಲಿಯೆ ತೊಡಗಿಸಿಕೊಂಡ ಅನೇಕ ಲೇಖಕರ ಕತಗೆಳು ಎಲ್ಲೆಡೆ ಈಗ ಸುಳಿದಾಡಿವೆ. ಇವುಗಳ ಪ್ರಭಾವ, ಪರಿಣಾಮವು ಖಂಡಿತವಾಗಿಯು ನಿರೀಕ್ಷಿಸುವಂತಹದಾಗಿದೆ. ಕನ್ನಡದ ಪರಿಸರ ಇದನ್ನು ಎಷ್ಟರ ಮಟ್ಟಿಗೆ ತನ್ನದನ್ನಾಗಿಸಿಕೊಂಡಿತು ಎನ್ನುವುದು ಮುಂದಿನ ಪ್ರಶ್ನೆಯಾಗಿ ಕಾಣಿಸಿಕೊಳ್ಳಲಿದೆ.

ನ್ಯಾಷನಲ್ ಬುಕ್ ಟ್ರಸ್ಟ್ ಸರಕಾರಿ ಸ್ವಾಮ್ಯದ ಸಂಸ್ಥೆಯಾಗಿ ಕಾಣಿಸಿಕೊಂಡ ಮೇಲೆ ಇಂಗ್ಲಿಷಿನೊಂದಿಗೆ, ಭಾರತೀಯ ಭಾಷೆಗಳಗೆಲ್ಲ ಸ್ಪಂದಿಸತೊಡಗಿತು. ಆದರೆ ಈಗ ಸಾಕಷ್ಟು ಸಮಯವು ಕಳೆಯಿತು. ಈ ದೀರ್ಘ ಸಮಯದಲ್ಲಿ ಟ್ರಸ್ಟ್ ಸಾಕಷ್ಟು ಗಮನಿಸುವಷ್ಟು ಕೆಲಸ ಮಾಡಿದೆ. ಭಾರತೀಯ ಒಂದು ಭಾಷೆಯ ಕೃತಿ ಉಳಿದೆಲ್ಲ ಭಾಷೆಗೆ, ಇಂಗ್ಲಿಷಿಗೆ, ಹಿಂದಿಗೆ ಅನುವಾದಗೊಳ್ಳುತ್ತ, ಅಂದವಾಗಿ ಬಣ್ಣ ಬಣ್ಣವಾಗಿ ಚಿತ್ರಮಯವಾಗಿ ಹೊರಬರುವುದು, ದೇಶದ ಎಲ್ಲ ಕಡೆಯ ಮಕ್ಕಳಿಗೆ ಮುಟ್ಟಲು, ಅದರಾಚೆಗೂ ತಲುಪಲು ಸಹಾಯವಾಗಿವೆ. ಇವುಗಳ ಕಡಿಮೆ ಬೆಲೆ ಕೂಡ ಮಕ್ಕಳ ಓದನ್ನು ಹೆಚ್ಚಿಸಲು ದೊಡ್ಡ ಸಹಾಯ ಮಾಡಿದೆ. ಇಲ್ಲಿಯೂ ಕೂಡ ಕವಿತೆ ಅಷ್ಟಾಗಿ ಗಮನಕ್ಕೆ ಬಂದಿಲ್ಲ ಎನ್ನುವುದು ಕತೆಯ ಮಹತ್ತ್ವವನ್ನು ಹೇಳುತ್ತದೆ. ಅನುವಾದಕ್ಕೆ ಕವಿತೆಗಳು ಕಷ್ಟದ ಸಂಗತಿಯಾದುದರಿಂದ ಹೀಗೂ ಕಾಣಿಸಿರಬಹುದು. ಈ ಸಾಧ್ಯತೆಯಲ್ಲಿ ಕತೆಗಳೇ ವಿಪುಲವಾಗಿ ಕಾಣಿಸಿಕೊಂಡಿವೆ. ಟ್ರಸ್ಟ್ ಭಾರತೀಯ ಭಾಷೆಯ, ಪ್ರಬುದ್ಧರ ಲೋಕದ ಅನೇಕ ಹಿರಿಯರನ್ನು ಕೂಡ ಒಳಮಾಡಿಕೊಂಡು ಅವರಿಂದ ಮಕ್ಕಳಗಾಗಿ ಪುಸ್ತಕ ತರುವ ಪ್ರಯತ್ನ ಮಾಡಿದೆ. ಇಲ್ಲಿಯವರೆಗಿನ ಟ್ರಸ್ಟ್ ಬೆಳೆ ಬಲು ಇದು ಮಹತ್ತ್ವದ್ದಾಗಿ ಕಾಣುತ್ತದೆ. ಸಹಜವಾಗಿಯೇ ವಿಭಿನ್ನ ಬಗೆಯ, ವಿಭಿನ್ನ ಪ್ರಾದೇಶಿಕತೆಯ, ನಾನಾ ಬಗೆಯ ಲೇಖಕರ ಕೃತಿಗಳು ಕನ್ನಡದಂತಹ ಪರಿಸರವನ್ನು ಸೇರಲು ಅನುವಾಗಿದೆ. ಇದರಿಂದ ಲೇಖಕರಿಗೆ ಹೊಸತಿಗಾಗಿ, ವಿಭಿನ್ನ ಸಾಧ್ಯತೆಗಳಿಗೆ ತೆರೆದುಕೊಳ್ಳುವುದಕ್ಕೆ ಬಾಗಿಲು ತೆರೆದಂತಾಗಿದೆ. ಮಹಾಶ್ವೇತಾದೇವಿ, ಆರ್. ಕೆ. ನಾರಾಯಣ, ಮುಲ್ಕ್ ರಾಜ್ ಆನಂದ, ಅನಿತಾ ದೇಸಾಯಿ, ಧನಗೋಪಾಲ ಮುಖರ್ಜಿ ಹೀಗೆ ಅನೇಕ ಖ್ಯಾತಲೇಖಕರ ಕೃತಿಗಳು ಮಕ್ಕಳಗೂ, ಅಧ್ಯಯನದಲ್ಲಿ ಇರುವವರಿಗೂ, ಲೇಖಕರಿಗೂ ತಲುಪಲು ಸಾಧ್ಯವಾಗಿದೆ. ಅನುವಾದದ ಮೂಲಕ ಕನ್ನಡದ ಪುಸ್ತಕಗಳ ವಿಸ್ತಾರವೂ ಈ ಮೂಲಕ ಆಗಿದೆ. ನಮ್ಮ ಬಹಳಷ್ಟು ಲೇಖಕರು ಈ ಹೊಸ ಬೆಳಸಿನಕಡೆಗೆ ಅಷ್ಟಾಗಿ ಗಮನ ಹರಿಸದಿದ್ದರೂ ಕೆಲವರೆಲ್ಲ ಗಮನಿಸುತ್ತ ಬಂದಿದ್ದಾರೆ. ಆದರೆ ಆಕುರಿತ ಅಧ್ಯಯನಪರ ಬರವಣಿಗೆಗಳು ಅಷ್ಟಾಗಿ ಕಾಣಿಸಿಕೊಂಡಿಲ್ಲ ಎನ್ನುವುದು ನಿಜ. ಕನ್ನಡದ ಅನೇಕ ಲೇಖಕರ ಕೃತಿಗಳು ಇಲ್ಲಿ ಅಡಕಗೊಂಡಿವೆ. ವಿಶೇಷವಾಗಿಯಲ್ಲದಿದ್ದರೂ, ಒಂದಷ್ಟು ಹೊಸ ಪ್ರಯತ್ನಗಳು ಕಾಣಲು ಸಿಗುತ್ತವೆ. ಈ ವಿಭಿನ್ನವಾದ ಕತೆಗಳು ಒಂದು ಬಗೆಯಲ್ಲಿ ವಿಸ್ತಾರವಾಗಿ ಮಕ್ಕಳ ಕಥಾಲೋಕವನ್ನು ವಿಸ್ತರಿಸಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ನಮ್ಮ ಬಹಳಷ್ಟು ಲೇಖಕರಿಗೆ ಇನ್ನೂ ನ್ಯಾಷನಲ್ ಬುಕ್ ಟ್ರಸ್ಟ್ ಬಗೆಗೆ ಮಾಹಿತಿ ಇಲ್ಲದಂತಿರುವುದು ಮಕ್ಕಳ ಕತೆಗಳ ಮಿತಿಯು ಆಗಿದೆ. ಅತಿ ಕಡಿಮೆ ಬೆಲೆಯ ಇವನ್ನು ಬಹಳಷ್ಟು ಮಕ್ಕಳಗೆ ಸುಲಭವಾಗಿ ಮುಟ್ಟಿಸಬಹುದಾದರೂ ಆ ಕಡೆಗೆ ನಮ್ಮ ಶಾಲಾ ವ್ಯವಸ್ಥೆಗಳು, ಆಸಕ್ತರು ಗಮನವನ್ನು ಹರಿಸಿಲ್ಲ. ಇದೊಂದು ದೊಡ್ಡ ವಿಪರ್ಯಾಸ. ಆದರೆ ಇಲ್ಲಿನ ಸಾಹಿತ್ಯ ಅಂದವಾದ ನುರಿತ ಕಲಾವಿದರಿಂದ ಬಿಡಿಸಿದ ಚಿತ್ರಗಳಂದ ಬಣ್ಣ ಬಣ್ಣವಾಗಿ, ಕಿರು ಹೊತ್ತಿಗೆಯಾಗಿ, ಆಕರ್ಷಕವಾಗಿ ಎಲ್ಲ ವಯೋಮಾನದ ಮಕ್ಕಳಗೂ ತಲುಪುವಂತಿವೆ. ಆ ದಿಸೆಯಲ್ಲಿ ಮಕ್ಕಳ ಕಥಾ ಲೋಕವನ್ನು ಈ ಪುಸ್ತಕಗಳು ಬಹಳಷ್ಟು ವಿಸ್ತರಿಸಿವೆ. ವಾಸ್ತವ ಮಾದರಿಯ, ಫ್ಯಾಂಟಸಿಯ, ಪ್ರಾಣಿ ಪಕ್ಷಿ ಪಾತ್ರಗಳನ್ನೊಳಗೊಂಡ ಬಹು ವಿಧದ ಕತೆಗಳು ಇಲ್ಲಿ ಹೊಸ ಪ್ರಯೋಗವಾಗಿ ಮೂಡಿಬಂದಿವೆ. ಒಟ್ಟು ಭಾರತೀಯ ಮಕ್ಕಳ ಕಥಾ ಲೋಕಕ್ಕೆ

ಹೊಸಗಾಲದ ಈ ಕೊಡುಗೆ ಅತ್ಯಂತ ಗಮನಾರ್ಹವಾದುದಾಗಿದೆ. ಜನಪದ ಕತೆಗಳನ್ನು ಇವು ಹೊಂದಿವೆ. ಹಾಗೆಯೇ ಜನಪದ ಕತೆಗಳ ಶೈಲಿಯನ್ನು ಬಳಸಿಕೊಳ್ಳುತ್ತ ಹೊಸ ಪ್ರಯೋಗಗಳಿಗೆ ತೆರೆದುಕೊಂಡವು ಕೂಡ ಇವೆ. ಸುದೀರ್ಘ ಅವಧಿಯ ಟ್ರಸ್ಟಿನ ಈ ಕೊಡುಗೆಯನ್ನು ಇಟ್ಟುಕೊಂಡು ಚಿಂತಿಸುವ, ಚರ್ಚಿಸುವ ಅಗತ್ಯ ನಮ್ಮ ಮಕ್ಕಳ ಸಾಹಿತ್ಯದ ವಲಯದಲ್ಲಿ ಈಗ ಅಗತ್ಯದ್ದಾಗಿದೆ. ಆದರೆ ಕನ್ನಡದಂತಹ ಸಾಹಿತ್ಯ ಪರಿಸರ ಈ ನಿಟ್ಟಿನಲ್ಲಿ ಹೊರಳಿಯು ನೋಡದಿರುವುದು ಬೇಸರದ ಸಂಗತಿಯು ಆಗಿದೆ.

## ೪.೪ ಭಾರತೀಯ ಇತರ ಭಾಷೆಗಳಿಂದ ಕನ್ನಡಕ್ಕೆ ಬಂದ ಕೆಲವು ಮಹತ್ತ್ವದ ಕತೆಗಳು

ಎನ್ ಬಿ ಟಿ ಟ್ರಸ್ಟಿನಿಂದ ಭಾರತದ ಅನೇಕ ಭಾಷೆಗಳ ಕತೆಗಳನ್ನು ಕನ್ನಡಕ್ಕೆ ತಂದಿರುವ ಸಂಕಲನವೂ ಗಮನಾರ್ಹವಾಗಿದೆ. 'ಹದಿಮೂರು ಶ್ರೇಷ್ಠ ಕತೆಗಳು' ಎಂಬಸಂಗ್ರಹದಲ್ಲಿ ೧೩ ಬೇರೆ ಬೇರೆ ಭಾಷೆಯ ಕತೆಗಳಿವೆ[೩೦]. ಅಸ್ಸಾಮಿ, ಬಂಗಾಳ, ಗುಜರಾತಿ, ಹಿಂದಿ, ಮಲಯಾಳಂ, ಮರಾಠಿ, ಒರಿಯಾ, ಪಂಜಾಬಿ, ತಮಿಳು, ತೆಲುಗು, ಉರ್ದು ಹೀಗೆ ನಮ್ಮ ಸುತ್ತಲಿನ ರಾಜ್ಯಗಳಲ್ಲಿನ ಲೇಖಕರು ಮಕ್ಕಳಿಗಾಗಿ ಹೇಗೆಲ್ಲ ತುಡಿದಿದ್ದಾರೆ ಎನ್ನುವುದಕ್ಕೆ ಇಲ್ಲ ಸೊಗಸಾದ ಉದಾಹರಣೆಗಳಿವೆ.

ಖ್ಯಾತಲೇಖಕ ಮುಲ್ಕ್‌ರಾಜ್ ಆನಂದರ ಒಂದು ಆನೆಯ ಕುರಿತಾದ ಕತೆ ಕೂಡ ಬಂದಿದೆ. ರವೀಂದ್ರರ 'ರಜೆ ಬಂತು' ಗಂಭೀರವಾದ ಓದನ್ನು ನಿರೀಕ್ಷಿಸುವ ಕತೆಯಾಗಿದೆ. ಒಬ್ಬ ಹಟಮಾರಿ ದಾರಿ ತಪ್ಪಿದ ಮಗ, ತನ್ನ ಮಾವನ ಮನೆಗೆ ಶಾಲೆ ಕಲಿಯಲೆಂದು ಬಂದು ಮನೆಯಲ್ಲೂ, ಶಾಲೆಯಲ್ಲೂ ಪಡಬಾರದ ನೋವುಗಳನ್ನು ಅನುಭವಿಸಿ, ಅಮ್ಮನನ್ನೇ ನೆನೆಸುತ್ತ, ಮತ್ತೆ ಹಳ್ಳಿಗೆ ಮರಳಲು ತವಕಿಸುವ ಕತೆ ಅವನಲ್ಲಿ ಪರಿವರ್ತನೆ ಸಹಜವಾಗಿ ಹೇಗೆಲ್ಲ ಬಂದಿತು ಎನ್ನುವುದನ್ನು ಹೇಳುತ್ತದೆ.

ಸೋವಿಯತ್ ಯುನಿಯನ್ ಇದ್ದಾಗ 'ರಾಗ ಪ್ರಕಾಶನ' ದಿಂದ ಹೇರಳವಾಗಿ ಅಲ್ಲಿನ ಮಕ್ಕಳ ಪುಸ್ತಕಗಳು ಬಣ್ಣ ಬಣ್ಣವಾಗಿ ಕನ್ನಡಕ್ಕೆ ತಲುಪಿರುವುದನ್ನು ಮರೆಯಲಾಗದುದು. ಉದ್ದೇಶ ಏನೇ ಇರಲಿ, ಇಲ್ಲಿ ಕೆಲವೆಲ್ಲ ಕೃತಿಗಳು ಬಲು ವಿಶೇಷವಾಗಿದ್ದವು. ಖ್ಯಾತ ಲೇಖಕ ಆ್ಯಂಟನ್ ಚೆಕಾಫ್‌ರ 'ಕಷ್ಟಾಂಕ' ಈ ಬಗೆಯದು. ಒಬ್ಬ ಬಡ ಬಡಿಗನಲ್ಲಿದ್ದ ನಾಯಿ ಒಂದು ಸಲ ಒಡೆಯನೊಡನೆ ಪೇಟೆಗೆ ಬಂದಾಗ ದಾರಿ ತಪ್ಪಿಸಿಕೊಂಡು ಶ್ರೀಮಂತನ ಮನೆಯಲ್ಲಿ ಆಸರೆ ಪಡೆಯುತ್ತದೆ. ಅದಕ್ಕೆ ರಾಜಾತಿಥ್ಯವೇ ಅಲ್ಲಿ ಸಿಗುತ್ತದೆ. ಆದರೆ ಅಲ್ಲಿ ಅದು ಸರ್ಕಸ್‌ಗಾಗಿ ಪಳಗಬೇಕಾಗುತ್ತದೆ. ಇದೆಲ್ಲವು ಒಂದು ಶಿಸ್ತಿನ ಚೌಕಟ್ಟಿನೊಳಗಿದ್ದರು ಅದಕ್ಕೆ ಸ್ವಾತಂತ್ರ್ಯದ ಅಗತ್ಯ ಬೀಳುತ್ತದೆ. ಕೊನೆಯಲ್ಲಿ ತನ್ನ ಹಳೆಯ ಮಾಲೀಕನನ್ನು ಸೇರುತ್ತದೆ. ಇಂತಹ ಕತೆಗಳು ನಮ್ಮ ವಾತಾವರಣವನ್ನು ಮತ್ತಷ್ಟು ವಿಸ್ತರಿಸಿವೆ.

ಧನಗೋಪಾಲ ಮುಖರ್ಜಿ ಅವರ ಕೃತಿ 'ಗೇನೆಕ್' ಇಂಗ್ಲೆಂಡಿನ ನ್ಯೂ ಬೆರ್ರಿ ಪುರಸ್ಕಾರವನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾರತೀಯ ಮೂಲದ ಲೇಖಕನಿಗೆ ತಂದುಕೊಟ್ಟ ಮೊದಲ ಕೃತಿ. ಈ ಕೃತಿ

---

[೩೦] ಹದಿಮೂರು ಶ್ರೇಷ್ಠ ಕಥೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೨೦೧೫, ಅನು: ಎಲ್. ಎಸ್. ಶೇಷಗಿರಿ ರಾವ್.

ಜಂಗಲ್ ಬುಕ್‌ನ ಹಾಗೆ ಪಾರಿವಾಳಗಳ ಸುತ್ತ ನಡೆಯುವ ದೀರ್ಘ ಕಥಾನಕವನ್ನು ವಾಸ್ತವದ ಸಂಗತಿಗಳೊಡನೆಯೆ ವಿಸ್ತಾರವಾಗಿ ನೀಡಿದೆ. ಪಾರಿವಾಳಗಳೊಡನೆ ನಾಯಕ ಹುಡುಗನ ಸಂಬಂಧಗಳು, ಪಾರಿವಾಳಗಳ ಬದುಕಿನ ವಿಭಿನ್ನವಾದ ಮಗ್ಗಲುಗಳು, ಅವುಗಳನ್ನು ಬೇಹುಗಾರಿಕೆಯಲ್ಲಿ ಬಳಸಿಕೊಳ್ಳುತ್ತಿದ್ದುದು, ಬೌದ್ಧಸನ್ಯಾಸಿಗಳ ಪ್ರಶಾಂತ ವಾತಾವರಣ ಎಲ್ಲವೂ ಈ ಕಾದಂಬರಿಯಲ್ಲಿ ಗಾಢವಾಗಿ ಮೂಡಿಬಂದಿವೆ. ಧನಗೋಪಾಲ ಮುಖರ್ಜಿಯವರು ಪ್ರಾಣಿಲೋಕದ ಸುತ್ತಲೇ ಹಲವು ಗಮನಾರ್ಹ ಕೃತಿಗಳನ್ನು ನೀಡಿದ್ದಾರೆ.

ಅಮೇರಿಕಾದ ಗಾರ್ಡಿಯನ್ ಪುರಸ್ಕಾರವನ್ನು ಮೊದಲ ಬಾರಿಗೆ ತಮ್ಮ ಮೊದಲ ಕಾದಂಬರಿ 'ವಿಲೇಜ್ ಬೈ ದಿ ಸೀ' ಕೃತಿಗೆ ಪಡೆದವರು ಅನಿತಾ ದೇಸಾಯಿ. ಈ ಕೃತಿ ಮುಂಬೈ ನಂತ ನಗರ ಪರಿಸರದ ಬದಿಯಲ್ಲಿ ಕುಟುಂಬದ ನಿರ್ವಹಣೆಯ ಭಾರವನ್ನು ಹೊರುವ ಹುಡುಗನ ಸುತ್ತ ಹಬ್ಬಿಕೊಂಡಿರುವ ಗಂಭೀರ ವಾಸ್ತವದ ಕಥಾ ಹಂದರ. ಕನಸುಗಾರ ಹುಡುಗನು ತನ್ನ ದಿನಗಳನ್ನು ದುಡಿಮೆಯಲ್ಲಿ ಬದುಕನ್ನು ಕಾಣುತ್ತ ಕಳೆಯುವ ಕತೆಯಾಗಿದೆ. ಮಕ್ಕಳ ಕಥಾಲೋಕದಲ್ಲಿ ಹೊಸತನವನ್ನು ಸೇರಿಸದೆ ಇರುವುದೆ ಈ ಪುರಸ್ಕಾರಗಳು ಮತ್ತೆ ಭಾರತೀಯ ಲೇಖಕರಿಗೆ ಸಂದಿಲ್ಲ ಎಂಬುದು ಹೊಸತನದ ಅವಶ್ಯಕತೆಯನ್ನು ಹೇಳುತ್ತದೆ.

ಹಿಂದಿಯ ಖ್ಯಾತ ಕತೆಗಾರ ಪ್ರೇಮಚಂದರ ಕತೆ 'ಈದಗಾ' ಮಕ್ಕಳಗಾಗಿ ಅಂದವಾಗಿ ಮೂಡಿಬಂದುದು ಟ್ರಸ್ಟ್ ಮೂಲಕವೆ ಆಗಿದೆ. ಒಬ್ಬ ಬಡ ಹುಡುಗ ತನ್ನಜ್ಜಿಯ ಬಳಿಯಲ್ಲಿ ಬದುಕನ್ನು ರೂಪಿಸಿಕೊಳ್ಳುತ್ತಿರುವವನು ಹೇಗೆಲ್ಲಾ ಸೂಕ್ಷ್ಮ ಸಂಗತಿಗಳಿಗೆ ಒಡ್ಡಿಕೊಳ್ಳುತ್ತಾನೆ ಎನ್ನುವುದನ್ನು ಕತೆಯು ಮುಟ್ಟಿಸುತ್ತದೆ. ಈಗಾಗಲೇ ಎರಡು ಸಲ ಕಿರು ಅವಧಿಯ ಸಿನಿಮಾ ಕೂಡ ಆದ ಈ ಕೃತಿ ಮಕ್ಕಳ ಓದಿಗೆ ತೀರ ಆಪ್ಯಾಯಮಾನವಾದ ಕೊಡುಗೆ ಎನ್ನುವುದರಲ್ಲಿ ಅನುಮಾನವೇ ಇಲ್ಲ. ರಂಜಾನ್ ಹಬ್ಬದಲ್ಲಿ ತನ್ನೋರಗೆಯವರೆಲ್ಲ ಮನೆಯಲ್ಲಿ ನೀಡಿದ ಕಾಸಿನಿಂದ ಆಟದ ನಾನಾ ತರಹದ ಗೊಂಬೆಗಳನ್ನು, ಸಿಹಿ ತಿಂಡಿಗಳನ್ನು ಕೊಳ್ಳತೊಡಗಿದರೆ ಈ ಹುಡುಗ ಅಜ್ಜಿ ತಿನಿಸಿಗಾಗಿ ನೀಡಿದ ಹಣದಿಂದ ಕೊಂಡುಕೊಳ್ಳುವುದು ಒಲೆಯ ಮೇಲಿಂದ ಸುಡುವ ಪಾತ್ರೆಯನ್ನು ಇಳಸುವ ಕಬ್ಬಿಣದ ತಂಡಾಸ(ಇಕ್ಕಳು). ಪ್ರತಿದಿನವೂ ತನ್ನಜ್ಜಿಯು ಒಲೆಯಿಂದ ಇಳಸುವಾಗ ಕೈಸುಟುಕೊಳ್ಳುತ್ತಿದ್ದುದನ್ನು ನೋಡಿದ್ದ ಈ ಹುಡುಗನೊಳಗೆ ಆ ನೋವು ಎಷ್ಟೊಂದು ಮಡುಗಟ್ಟಿತ್ತು ಎನ್ನುವುದು ಗೋಚರಿಸುತ್ತದೆ. ಪ್ರೇಮಚಂದರ ಹದಿಮೂರು ಕತೆಗಳನ್ನು ಒಂದು ಸಂಕಲನವಾಗಿ ಟ್ರಸ್ಟ್ ಪ್ರಕಟಿಸಿದೆ.

ಹಿರಿಯ ಲೇಖಕಿ ಬಂಗಾಲಿಯ ಮಹಶ್ವೇತಾದೇವಿ ಮಕ್ಕಳಗಾಗಿ ಸತ್ಯಜಿತ್‌ಸರೇ ಕುಟುಂಬ ತರುತ್ತಿದ್ದ 'ಸಂದೇಶ' ಮಕ್ಕಳ ಪತ್ರಿಕೆಗೆ ನಿರಂತರವಾಗಿ ಬರೆಯುತ್ತ ಬಂದವರು, ಟ್ರಸ್ಟ್‌ಗಾಗಿ ಎರಡು ಕತೆಗಳನ್ನು ರಚಿಸಿದ್ದಾರೆ. ಮುಂಡಾ ಬುಡಕಟ್ಟಿನ ಬಾಲಕನ ಶಾಲೆಗೆ ಸೇರುವ ಹೋರಾಟದ ಕತೆ 'ಏತೋ

ಮುಂಡಾ ಯುದ್ಧವನ್ನು ಗೆದ್ದ' ಅದರಲ್ಲಿ ಒಂದು. ಕೃತಿಯಲ್ಲಿ. ಕತೆಯೊಂದಿಗೆ ಬುಡಕಟ್ಟಿನ ಪರಿಸರದಲ್ಲಿನವೇ ಆದ ಭಾವಚಿತ್ರಗಳನ್ನು ಬಳಸಿಕೊಂಡ ಈ ಪುಸ್ತಕ ಹೆಚ್ಚು ಆಪ್ತವಾಗಿದೆ. ಬುಡಕಟ್ಟಿನ ಹುಡುಗ ಜೀತದಲ್ಲಿದ್ದು, ಮನೆಗೆ ಆಸರೆಯಾಗಿದ್ದು, ಶಾಲೆಯ ಓದಿಗೆ ಸೇರುವುದೇ ಒಂದು ದೊಡ್ಡ ಹೋರಾಟ ಆಗುವ ಕತೆ ಇಲ್ಲಿದೆ. ದಿನವೂ ದನಕಾಯಲು ಹೋಗುವ ಹುಡುಗ ಶಾಲೆಯ ಮುಂದಿನಿಂದಲೇ ಹಾದು ಹೋಗುತ್ತ, ಶಿಕ್ಷಕರ ಹೇಳುತ್ತಿರುವ ಕತೆಗಳನ್ನು ಕೇಳುತ್ತಾ, ತನ್ನೊಳಗೂ ಕನಸುಗಳನ್ನು ಕಟ್ಟಿಕೊಳ್ಳುತ್ತಾನೆ. ಏತೋನ ಅಜ್ಜ ಹಟದಿಂದ ಈ ಮಗುವನ್ನು ಶಾಲೆಗೆ ಹಚ್ಚುವ ಬಯಕೆಯುಳ್ಳವನು, ಆದರೆ ಅಸಹಾಯಕ. ಕೊನೆಗೂ ಏತೋ ಶಾಲೆಯ ವಾತಾವರಣಕ್ಕೆ ಬಂದು ತಲುಪುವ ಹೋರಾಟದ ಕತೆ ಇಲ್ಲಿದೆ. ಹೀಗೆಯೇ 'ಎಕ್ಕೋರಿಯ ಕನಸು' ಕತೆಯಲ್ಲಿ ಕರಕುಶಲ ಪ್ರತಿಭೆಯ ಬಡ ಹುಡುಗ ಎಕ್ಕೋರಿ ಅರಸುತ್ತಾ, ತನಗೆ ತಕ್ಕನಾದ ಆಸರೆ ಪಡೆಯುವ, ತನ್ನ ಕಲೆಯ ಕನಸುಗಳಿಗೆ ದಾರಿ ಕಂಡುಕೊಳ್ಳುವ ಕತೆ ಇದೆ.

ಈ ಮೊದಲು ಹೇಳಿದಂತೆ ರಸ್ಕಿನ್ ಬಾಂಡ್ ಒಬ್ಬ ಅವಿರತದ ಲೇಖಕರು. ಅವರು ಪ್ರಬುದ್ಧರಿಗಾಗಿ ಬರೆದಂತೆ ಮಕ್ಕಳಿಗಾಗಿಯೂ ಬರೆಯುತ್ತಲೇ ಬಂದಿದ್ದಾರೆ ಅವರ ಬರವಣಿಗೆಯದೆ ಒಂದು ಲೋಕ. ಮಸ್ಸೂರಿ, ಡೆಹರಾದ ವಾತಾವರಣದ ನಡುವೆ ಅರಳುವ ಬಡ, ದುಡಿಯುವ ಮಕ್ಕಳ ಸುತ್ತ ನಾನಾ ಬಗೆಯಲ್ಲಿ ಅವರ ಕತೆಗಳು ಅರಳುತ್ತ ಹೋಗಿವೆ. ರಸ್ಟಿಯಾ ತಮ್ಮದೇ ಬಾಲ್ಯದ ಸಂಗತಿಗಳನ್ನು ಪದೆ ಪದೆ ಅವರು ಬರವಣಿಗೆಗೆ ತಂದುಕೊಂಡಿದ್ದಾರೆ. ಅಂತಹ ಕೆಲವು ಕನ್ನಡಕ್ಕೆ ಬಂದಿವೆ. ನ್ಯಾಷನಲ್ ಬುಕ್ ಟ್ರಸ್ಟ್‌ನಿಂದ. 'ರಸ್ಟಿಯ ಸಾಹಸಗಳು', 'ಹೆಬ್ಬಾವು ಮಾಡಿದ ಗೊಂದಲ' ಈ ಬಗೆಯವು. ಇವೆಲ್ಲ ರಸ್ಟಿಯ ಬಾಲ್ಯದ ಸಮಯದ ಪ್ರಸಂಗಗಳಿಗೆ ಬಣ್ಣ ತುಂಬಿದವು.

ಲೀಲಾ ಮುಜುಮ್‌ದಾರರ 'ಬಾರಾಪಾಣಿ' ಕೃತಿಯು ಪ್ರಕೃತಿ ಪ್ರೇಮ, ಬದುಕಿನ ಅನನ್ಯತೆ, ಪ್ರೀತಿಯನ್ನು ಹೇಳುವ ಕತೆಯಾಗಿದೆ. ಇದು ಬೆಂಗಾಲಿ ಮೂಲದಿಂದ ಬಂದ ಕತೆಯಾಗಿದ್ದು ಭಾಷೆ ಹಾಗು ವಸ್ತುವಿನಿಂದ ಓದುಸಿಕೊಳ್ಳುವ ಗುಣವಿದೆ. ದಟ್ಟವಾದ ಪ್ರಕೃತಿಯ ನಡುವೆ ನಡೆಯುವ ಸಂಗತಿಗಳನ್ನು ವಿವರಿಸುತ್ತಾ 'ಕಾನು' ಎಂಬ ಹುಡುಗನ ಬದುಕನ್ನು ಕಟ್ಟಿಕೊಡುತ್ತದೆ. ಅವನೊಂದಿಗೆ ಯಾವಾಗಲೂ ಕಾಣಿಸಿಕೊಳ್ಳುವ ಅವನ 'ನಾನಾ' ಕಾಡಿನಲ್ಲಿ ಗತಿಸಿದ ಅನೇಕ ಸಂಗತಿಗಳನ್ನು ಕತೆಕಟ್ಟಿ ಹೇಳುತ್ತಾನೆ. ಅವುಗಳೇ ಕಾನುವಿನ ಬದುಕಿನ ಪಾಠಗಳಾಗುತ್ತವೆ. ವೃದ್ಧನಾದ ಅವನ ತಾತನು ಕಾಣೆಯಾದಾಗ ಅವನು ಅನುಭವಿಸುವ ನೋವು, ಯಾತನೆ, ಏಕಾಂಗಿ ಬದುಕು ಎಲ್ಲವು ಇಲ್ಲಿ ಕಾಣಿಸಿಕೊಂಡು ಮಕ್ಕಳ ಮುಂದೆ ವಾಸ್ತವದ ಬದುಕೊಂದು ಕಣ್ಣಿಗೆಕಟ್ಟುವಂತೆ ನಿಲ್ಲುತ್ತದೆ.

ವೆಣ್ಣಿಕಣ್ಣನ್‌ರವರು ತಮಿಳಿನ ಖ್ಯಾತ ಲೇಖಕಿಯಾಗಿದ್ದು ರಷ್ಯಾದ ಕತೆಗಳನ್ನು ಸಹ ಅನುವಾದಿಸಿರುವರು. 'ಮೇಡಂನ ಬಸ್ಸ್ ಸವಾರಿ'ಯು ತಮಿಳಿನ ಪ್ರಸಿದ್ಧವಾದ ಕೃತಿಯಾಗಿದ್ದು ಕನ್ನಡದಲ್ಲಿ ಕಾಣಿಸಿಕೊಂಡಿತು. ಹಳ್ಳಿಯ ಹುಡುಗಿಯ ಮನಸ್ಸಿನ ಸುತ್ತ ಅರಳಿರುವ ಕುತೂಹಲದ ಕತೆಯಿದಾಗಿದೆ.

ಮಕ್ಕಳ ಸಹಜದ ಪ್ರಯಾಣದ ಬಯಕೆಯೆ ಇಲ್ಲಿಯ ಕತೆಯ ವಸ್ತುವಾಗಿದೆ. ದಿನವು ತನ್ನ ಹಳ್ಳಿಯಿಂದ ಪೇಟೆಗೆ ಸಂಚರಿಸುವ ಬಸ್ಸಿನಲ್ಲಿ ತಾನು ಒಮ್ಮೆ ಪೇಟೆಗೆ ಹೋಗಿ ಬರಬೇಕು ಎನ್ನುವ ಹಂಬಲ, ಹೋದಾಗ ಬಸ್ಸಿನಲ್ಲಿ ಆಗುವ ಪುಳಕಗಳು, ಕಿಟಕಿಯಿಂದ ಕಾಣುವ ಪರಿಸರ, ನಗರ ತಲುಪಿದಾಗ ಸಿಕ್ಕುವ ಆನಂದ ಎಲ್ಲವೂ ಒಂದು ಮುಖದಲ್ಲಿ ಕಾಣಿಸಿಕೊಂಡರೆ, ಬಸ್ಸು ತಿರುಗಿ ಬರುವಾಗ ಅವಳು ಇಳಿಯದೆ ಅದೇ ಬಸ್ಸಿನಲ್ಲಿ ಹಿಂದಿರುಗಿ ಪ್ರಯಾಣಿಸುವಾಗ ಸಿಗುವುದಿಲ್ಲ. ಹಸುವಿಗೆ ಅದೇ ಬಸ್ಸಿನಿಂದಾದ ಅಪಘಾತ ಅವಳನ್ನು ಅಸಮಾಧಾನಿಸುತ್ತದೆ. ಹೀಗೆ ಮಕ್ಕಳ ಮನಸ್ಸಿನೊಂದಿಗೆ ಹದವಾಗಿ ಸಾಗುವ ಕಥಾಹಂದರವುಳ್ಳದಾಗಿದೆ.

ಅಸ್ಸಾಮಿಯ ಪ್ರಸಿದ್ಧ ಲೇಖಕರಾದ ಅನಂತದೇವ್ ಶರ್ಮಾರು ಬರೆದಿರುವ ಕತೆ 'ವಿಶೇಷ ಬಹುಮಾನ' ಎಂಬುದು ಕನ್ನಡದಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್ ರವರಿಂದ ಕಾಣಿಸಿಕೊಂಡಿದೆ. ಮುಖ್ಯೋಪಾಧ್ಯಾಯರು ಕೋಪಗೊಂಡು ಮಕ್ಕಳ ತುಂಟಾಟವನ್ನು ದಂಡಿಸುವ ಸಲುವಾಗಿ ಅವರಲ್ಲಿ ಪ್ರಮುಖನಾದ ತಫಾನ್ ನನ್ನು ಕರೆಸಿಕೊಳ್ಳುವ ಸಂದರ್ಭದಿಂದ ಇದು ಆರಂಭಗೊಳ್ಳುತ್ತದೆ. ಸಂಭಾಷಣೆಯ ಮಾದರಿಯಿಂದ ನಿರೂಪಣೆಯಿದ್ದು ಆಕರ್ಷಕವಾಗಿ ಶುರುವಾಗುತ್ತದೆ. ಹೈಸ್ಕೂಲ್ ಹುಡುಗನಾದ ತುಫಾನ್ ಅಂಗಡಿಯ ಮೇಲೆ ಕಾರಣವಿಲ್ಲದೆ ಕಲ್ಲು ತೂರಿರುವ ಆರೋಪವನ್ನು ಹೊತ್ತಿರುತ್ತಾನೆ. ಅವನು ಚಿಕ್ಕಪ್ಪನ ಮನೆಯಲ್ಲಿದ್ದುಕೊಂಡು ಓದು ಮುಂದುವರೆಸುತ್ತಿರುವವನು. ಅಂಗಡಿಯವನು ಮಾಡಿದ ಮೋಸದ ಲೆಕ್ಕವನ್ನು ಅವನು ಮುಖ್ಯೋಪಾಧ್ಯಾಯರ ಮುಂದೆ ವಿವರಿಸುತ್ತಾನೆ. ಆದರೂ ಅವನು ಏಟು ತಿಂದು ಮಕ್ಕಳ ಮುಂದೆ ಗೇಲಿಗೊಳಗಾಗುತ್ತಾನೆ. ಒಂದು ದಿನ ಗೂಳಿಯೊಂದು ಶಾಲೆಯ ಮೈದಾಕ್ಕೆ ನುಗ್ಗಿ ರಂಪಮಾಡಿತು. ಸಿಕ್ಕ ಸಿಕ್ಕವರನ್ನು ಗಾಯಗೊಳಿಸಿತು. ಕಿಟಕಿಗಾಜು ಮುರಿಯಿತು. ಕೊಬ್ಬಿದ ಗೂಳಿಯ ಹಿಂದೆ ಯಾರೂ ಹೋಗಲಿಲ್ಲ. ಆದರೆ ತಫಾನ್ ಅದನ್ನು ಪಳಗಿಸುವ ಪಣತೊಟ್ಟು ಅದರ ಡುಬ್ಬವನ್ನು ಹಿಡಿದು ಮುರಿದನು. ಅದು ಈಗ ಜೀವ ಉಳಿಸಿಕೊಳ್ಳಲು ಹವಣಿಸಿ ಓಡಿತು. ಈ ಎಲ್ಲಾ ತಫಾನ್ ನಿಂದ ಆದವು ಎಂದು ಮತ್ತೆ ದೂರು ಹೋಯಿತು. ಮುಖ್ಯೋಪಾಧ್ಯಾಯರ ಕೋಪ ಈಗ ನೆತ್ತಿಗೇರಿ ಬೆತ್ತದಿಂದ ತಳಿಸಿದರು. ಒಂದುದಿನ ಮುದುಕಿಯೊಬ್ಬಳು ರಸ್ತೆ ದಾಟುವಾಗ ವಾಹನ ದಟ್ಟಣೆಯಿಂದ ಸಾಯುವವಳಿದ್ದಳು. ಅದನ್ನು ನೋಡಿದ ತಫಾನ್ ಸಹಾಯ ಮಾಡಿದನು ಇದು ಅವರ ಮುಖ್ಯೋಪಾಧ್ಯಾರಿಗೆ ತಿಳಿದು ಅವನಿಗೆ ವಿಶೇಷ ಬಹುಮಾನ ಘೋಷಿಸುವರು. ಇದು ಎಲ್ಲರಿಗೂ ಆಶ್ಚರ್ಯವಾಗುವುದು. ಆಗ ಅವರು ಇವನ ಗುಣಗಳ ಬಗೆಗೆ ಕೊಂಡಾಡುವರು. ಇದು ಕನ್ನಡದ ವಾತಾವರಣದಲ್ಲಿ ಶಿಕ್ಷಣದ ಭಾಗವಾಗಿ ಕಾಣಿಸಿಕೊಂಡಿದ್ದ ಕತೆಗಳನ್ನು ನೀತಿಯ ನೆಲೆಯಲ್ಲಿ ಕಟ್ಟಿಕೊಳ್ಳಲು ಪ್ರೇರಕವಾಗಿ ಕಾಣಿಸಿಕೊಂಡಂತಿದೆ.

ಬಂಗಾಳಿಯ ಹಿರಿಯ ಲೇಖಕರಾದ ಸತ್ಯಜಿತ್‌ರೇ ರವರು ಬರೆದಿರುವ ಪ್ರಸಿದ್ಧವಾದ ಕತೆ ಕನ್ನಡದಲ್ಲಿ 'ಹಸಿದ ಸೆಪ್ಟೋಪಸ್' ಆಗಿ ಕಾಣಿಸಿಕೊಂಡಿತು. ಕಾರ್ತಿಕ್ ಕೆಲಸದ ಜಾಗದಿಂದ ತಪ್ಪಿಸಿಕೊಳ್ಳುವ ಹುಡುಗನಾಗಿ ಕಾಣಿಸಿಕೊಳ್ಳುತ್ತಾನೆ. ಲೇಖಕರು ಕಂಠಿಯವರನ್ನು ಭೇಟಿಯಾಗಿ, ಐವತ್ತು ವರ್ಷಗಳ ಅನುಭವಗಳನ್ನು, ಅವರು ಕೊಟ್ಟಿದ್ದ ಸೀತಾಳೆ ಗೆಡ್ಡೆಯನ್ನು, ಅವರ ಸಸ್ಯದ ಮೇಲಿನ ಪ್ರೀತಿಯನ್ನು ಸಂಭಾಷಿಸುವ ವಾಸ್ತವದ ಅನುಭವಗಳಿಂದ ಆರಂಭವಾಗುವ ಕತೆಯು 'ಕಂಠಿಬಾಬು' ಅವರು ಗಿಡಗಳಿಗಾಗಿ ಮಾಡಿದ ಒಂದು ಗಾಜಿನಮನೆಯ ವರ್ಣನೆಯನ್ನು ನೀಡುತ್ತದೆ. ವಯಸ್ಸಾದ ಮೇಲೆ

ಬೇಟೆಯಾಡುವುದನ್ನು ಬಿಟ್ಟಿರುವುದು, ಪ್ರಾಣಿಗಳನ್ನು ಕೊಲ್ಲಲು ಆಸಕ್ತಿಯಿಲ್ಲವೆಂದು ಹೇಳುವ ಮೂಲಕ ತೋರಿಸುವ ಪ್ರಾಣಿಪ್ರೀತಿ. ಆದರೆ ನಾಯಿಯ ಮಾರಾಟದ ಕಡೆಗೆ ತೆರೆದುಕೊಳ್ಳುವಿಕೆಗಳವೆ. ಕೀಟಹಾರಿ ಸಸ್ಯ ಜಗತ್ತಿನ ಮಾಹಿತಿಯನ್ನು, ಅಮೇರಿಕಾ ಪ್ರವಾಸದ ಸಂಗತಿಗಳನ್ನು ಅಭಿಜಿತ್‌ನ ನಾಯಿಯ ಪ್ರೇಮ, ಐಷಾರಾಮಿ ಕಾರು, ಗುಂಡು ಹಾರಿಸುವಾಗ ಪಾಲಿಸ ಬೇಕಾದ ನಿಯಮ, ಪರಿಮಳ್‌ನ ಸಮಯ ಪ್ರಜ್ಞೆ ಮುಂತಾದ ಸಂಗತಿಗಳಂದ ಕತೆಯು ಚೇತೋಹಾರಿಯಾಗಿದ್ದು, ತುಸು ಬೆಳೆದ ಮಕ್ಕಳಗೆ ಬದುಕಿನ ಅನುಭವಗಳನ್ನು ಹೇಳುವ ಸಲುವಾಗಿ ನೀಡಿದ ಕತೆಯಾಗಿದೆ. ಇದು ದೀರ್ಘಕತೆಯು ಆಗಿದ್ದು ಸಂಭಾಷಣೆಗಳು ಹೆಚ್ಚು ಬಂದಿರುವುದರಿಂದ ಮಕ್ಕಳಗೆ ಇಷ್ಟವಾಗುತ್ತದೆ. ಇಂತಹ ಕಥಾಪ್ರಯೋಗವು ಕನ್ನಡದ ಪರಿಸರಕ್ಕೆ ಅಗತ್ಯವಾದರೂ ತುಸು ದೀರ್ಘಬರೆವಣಿಗೆಗೆ ಮನಸ್ಸು ಮಾಡದಿರುವುದು ಮಕ್ಕಳ ನಡುವೆ ಕತೆಗಳ ಕೊರತೆಯನ್ನು ತಂದಂತಾಗಿದೆ. ನಮ್ಮಲ್ಲಿಯು ಬೆಳೆದ ಮಕ್ಕಳು ಇಂತಹ ಕತೆಗಳನ್ನು ಅಪೇಕ್ಷಿಸುವುದು ಇದೆ. ಅವರಿಗಾಗಿ ಪ್ರಯತ್ನಗಳು ಅನಿವಾರ್ಯವಾಗಿ ನಡೆಯಬೇಕಿದೆ.

ಗುಜರಾತಿ ಭಾಷೆಯಿಂದ ಕನ್ನಡದ ಕತೆಗಳ ಮೇಲೆ ಪ್ರಭಾವ ಉಂಟಾಗಿರುವುದನ್ನು ನಾವು ಕಾಣಬಹುದಾಗಿದೆ. ಪನ್ನಲಾಲ್ ಪಟೇಲ್‌ರ 'ಅದಲ್-ಬದಲ್' ಕತೆಯು ಇಂತಹ ಕತೆಗಳಲ್ಲಿ ಮಹತ್ತರವಾದ ಪ್ರಯೋಗಳಂದ ಕಾಣಿಸಿಕೊಂಡಿರುವಂತಹದು. ಕನ್ನಡದಲ್ಲಿ 'ಅದಲು- ಬದಲು' ಎಂಬ ಹೆಸರಿಂದ ಬಂದಿದೆ. ಹೋಳ ಹಬ್ಬದ ಹೊಸ ಬಟ್ಟೆಯ ಸಂಭ್ರಮದಲ್ಲಿ ಬಣ್ಣವನ್ನು ಎರಚಾಡಿಕೊಂಡು ಕೆಸರು ಮಾಡಿಕೊಳ್ಳುವ ಅಮೃತ್ ಮತ್ತು ಇಸಬ್ ಒಂದೇ ಹಳ್ಳಿಯ ಹುಡುಗರು. ರೈತ ಕುಟುಂಬದ ಹಿನ್ನೆಯ ಗೆಳೆಯರಾಗಿದ್ದು, ಸರಿಸಮನಾದ ಚಾತುರ್ಯವನ್ನು ಹೊಂದಿರುತ್ತಾರೆ. ಮತ್ತೊಬ್ಬ ತುಂಟ ಹುಡುಗನ ಸಲಹೆಯನ್ನು ತಳ್ಳಹಾಕಿ ಒಬ್ಬರಿಗೊಬ್ಬರು ಕುಸ್ತಿಯಲ್ಲಿ ಸೆಣಸುವುದಿಲ್ಲ. ಅವರು ಹೊಸ ಬಟ್ಟೆ ತೆಗೆದುಕೊಳ್ಳಲು ಪಟ್ಟ ಶ್ರಮ, ತಂದೆ ತಾಯಿಯರಿಂದ ಅನುಭವಿಸಿದ ಸಂಕಟ ಎಲ್ಲವು ಚಿತ್ತಾರಗೊಂಡಿವೆ. ಆದರೆ ಒಬ್ಬ ದಾಂಡಿಗನು ಕುಸ್ತಿ ಆಡಲು ಅಮೃತನನ್ನು ಎತ್ತಿಕೊಂಡು ಹೋಗುತ್ತಾನೆ. ಕಲಿಯಿಂದ ಕುಸ್ತಿಯಲ್ಲಿ ಸೋಲಾದರು, ಅಮೃತನು ಅದನ್ನು ತಮಾಷೆಯಾಗಿ ತೆಗೆದುಕೊಂಡು ಸುಮ್ಮನಾಗುತ್ತಾನೆ. ಆದರೆ ಇಸಬ್ ಇದನ್ನು ಸಹಿಸದೆ ಕಲಿಯನ್ನು ಕುಸ್ತಿಗೆ ಕರೆದು ಕಾಲುಕೊಟ್ಟು ಬೀಳಸುತ್ತಾನೆ. ತಮಾಷೆ ಹೋಗಿ ದೊಡ್ಡದಾಗಿ, ಕಲಿಯ ತಾಯಿ ತಂದೆ ಹೊಡೆಯುವರು ಎಂಬ ಭಯದಿಂದ ಇಬ್ಬರೂ ಓಡುತ್ತಾರೆ. ಆದರೆ ಇಸಬ್‌ನ ಜೇಬು ಹರಿದು ಹೋಗಿತ್ತು. ಇದರಿಂದ ವಿಷಯ ಮನೆಗೆ ಮುಟ್ಟಿ, ಇಸಬ್‌ನ ತಂದೆ ಆರ್ಭಟ ನಡೆಸಿ, ಅವರು ಕೋಪಗೊಂಡಿರುವ ವಿಷಯ ತಿಳದು, ಅಮೃತ್ ಒಂದು ಉಪಾಯ ಮಾಡಿ, ಅವನ ಅಂಗಿಯನ್ನು ಅದಲು ಬದಲು ಮಾಡುತ್ತಾನೆ. ಹೋಳಯ ರಂಪಾಟದಲ್ಲಿ ಆಯಿತು ಎಂದು ಅಮೃತನ ತಾಯಿ ಹರಿದ ಜೇಬನ್ನು ಸೂಜಿಯಿಂದ ಹೊಲಿದು ಕೊಡುತ್ತಾಳೆ. ಆದರೆ ಒಬ್ಬ ಹುಡುಗನಿಗೆ ಈ ಅಂಗಿಯು ಅದಲು ಬದಲಾಗಿರುವುದು ತಿಳದು ಹೋಗಿರುತ್ತದೆ. ಅದನ್ನು ಮರೆಮಾಚಿಸಲು ಇಬ್ಬರೂ ಅದಲ್ ಬದಲ್ ಎಂದು ಹಾಡುತ್ತಾ ಪದೇಪದೇ ಹಾಡುತ್ತಾರೆ. ಹುಡುಗರ ಹಿಂಡು ಸಹ ಅವರ ಹಿಂದೆ ಹೀಗೆಯೇ ಹಾಡುತ್ತಾ ಹೋಗುತ್ತಾರೆ. ಇಸಬ್‌ನ ತಂದೆ ಚುಟ್ಟಾ ಸೇದುತ್ತಾ ಕುಳತಿರುವಾಗ ಇವರು ಅಲ್ಲಿಗೆ ಬರುತ್ತಾರೆ. ಆದರೆ

ಅವರ ತಂದೆಗೆ ವಿಷಯ ತಿಳಿದಿದ್ದು ಇವರು ನಿರೀಕ್ಷಿಸಿದಂತೆ ಏನೂ ನಡೆಯದೆ ಇವರ ಉಪಾಯವನ್ನು ಕೇಳಿ ಎಲ್ಲರು ಪ್ರೀತಿಯಿಂದ ಹೊಗಳುತ್ತಾರೆ. ಹೀಗೆ ಕತೆಯು ಮಕ್ಕಳ ತುಂಟಾಟದ ನಡುವೆಯು ಹಿರಿಯರ ನಿರ್ಬಂಧಗಳಿಗೆ ಅಂಜುವ ಮನೋಭಾವ, ಪ್ರತಿತಂತ್ರ, ಸ್ನೇಹಪರತೆ, ಎಳೆಯತನದ ಸಹಜ ಚೇಷ್ಟೆಗಳಿಂದ ಕೂಡಿದ್ದು ಮಕ್ಕಳ ಮುಂದೆ ಸೊಗಸಾಗಿ ತೆರೆದುಕೊಂಡಿರುವುದಿದೆ. ಇತ್ತೀಚೆಗೆ ಕನ್ನಡದಲ್ಲಿಯು ಇಂತಹ ಜಾಣ್ಮೆಯ ಪ್ರಯೋಗಗಳನ್ನು ಮಕ್ಕಳ ಮುಂದಿರಿಸಿನೋಡಲು ಇದು ಸಹಕಾರಿಯಾಗಿದೆ.

ಹಿಂದಿ ಮೂಲದ ಲೇಖಕ ಬಿಷಂ ಸಹಾನಿ ಅವರ ಪ್ರಸಿದ್ಧವಾದ ಕತೆ ಕನ್ನಡದಲ್ಲಿ 'ಕವಣೆ ಇಟ್ಟುಕೊಂಡಿದ್ದ ಹುಡುಗ' ಎಂಬುದಾಗಿ ಹೆಸರುವಾಸಿಯಾಗಿದೆ. ಬೋಧಿರಾಜ ಎಂಬ ವಿಚಿತ್ರವಾದ ಹುಡುಗನ ಕತೆಯಿದು. ಆ ಹುಡುಗನು ಚಿಟ್ಟೆ ಹಿಡಿಯುವುದರಲ್ಲಿಯು, ಹಕ್ಕಿ ಕೊಲ್ಲುವುದರಲ್ಲು, ನಿಸ್ಸೀಮನು. ಅವನ ಬಳಿ ಒಂದು ಕವಣೆಯು ಇತ್ತು. ಅದರಿಂದ ಹೊಡೆದು ಹಾರುವ ಹಕ್ಕಿಗಳನ್ನು ಬೀಳಿಸುತ್ತಿದ್ದ. ಅವನ ಮೈಯೆಲ್ಲಾ ವಿಷಮಯವಾಗಿದ್ದು, ಅವನಿಗೆ ಹಾವು ಕಚ್ಚಿದರು ಏನೂ ಆಗುತ್ತಿರಲಿಲ್ಲ. ಇತರರಿಗೆ ನೋವು ಮಾಡುವುದು ಎಂದರೆ ಇವನಿಗೆ ಇಷ್ಟವಾದ ವಿಷಯ. ಇವನ ತಾಯಿಯೂ ಇವನನ್ನು ರಾಕ್ಷಸ ಎಂದು ಕರೆಯುತ್ತಾಳೆ. ವಿಚಿತ್ರವಾದ ವಸ್ತುಗಳು ಇವನ ಬಳಿ ಇರುತ್ತಿದ್ದವು. ಜೀವಂತ ಗಿಳಿ, ಮೊಟ್ಟೆ ಇತ್ಯಾದಿ. ಶಾಲೆಯಲ್ಲಿಯೂ ಒರಟನಾಗಿದ್ದು, 'ಘೊ' (ಉಡ) ಕುರಿತು ಕತೆಗಳನ್ನು ಭಯಂಕರವಾಗಿ ಹೇಳುತ್ತಿದ್ದನು. ಹರ್ಬನ್ಸ್ ಲಾಲ್ ಇವನ ಗೆಳೆಯ. ಅವನ ತಂದೆಗೆ ವರ್ಗಾವಣೆಯಾಗಿ ಕಾಡಂಚಿನ ಬಂಗಲೆಗೆ ಬಂದು ವಾಸಿಸುವಾಗ ಅಲ್ಲಿಗೆ ಬೋಧಿರಾಜನು ಮುಳ್ಳು ಹಂದಿಯನ್ನು ಹಿಡಿದು ತರುವನು. ಅದು ಹರ್ಬನ್ಸ್ ಲಾಲ್ ತಾಯಿಗೆ ಇಷ್ಟವಾಗುವುದಿಲ್ಲ. ಅವಳು ಹೇಳುವ ಬುದ್ಧಿವಾದ ಇವನಿಗೆ ಹಿಡಿಸುವುದಿಲ್ಲ. ಇಂತಹ ವಿಚಿತ್ರವಾದ ಹುಡುಗನು ಮೈನಾ ಹಕ್ಕಿಗಳನ್ನು ಕೊಲ್ಲುವ ಗಿಡುಗನಿಗೆ ಕವಣೆಯಿಂದ ಹೊಡೆದು ಅವುಗಳನ್ನು ಕಾಪಾಡಲು ಬಯಸುವುದು ಆಶ್ಚರ್ಯವನ್ನು ತರುತ್ತದೆ. ನಂತರ ಅವನು ಹರ್ಬನ್ಸ್‌ಲಾಲ್‌ಗೆ ಕವಣೆಯನ್ನು ಉಪಯೋಗಿಸುವುದನ್ನು ಹೇಳಿಕೊಡುವನು. ಮೈನಾ ಮರಿಗಳನ್ನು ಕೊಲ್ಲದೆ ಅವುಗಳಿಗೆ ನೀರು, ಕಾಳು ಕೊಟ್ಟು ಕಾಪಾಡುವನು. ಕೊನೆಗೆ ಕವಣೆಯನ್ನು ಬಿಟ್ಟು ಬಿಡುವನು. ಅವನು ಪಕ್ಷಿಗಳ ಬಗೆಗೆ ಒಲವು ಬೆಳಸಿಕೊಳ್ಳುವುದಿದೆ. ಈ ಕತೆಯಲ್ಲಿ ಮಕ್ಕಳ ಸಹಜವಾದ ಶಾಲಾ ವಾತಾವರಣದ ಶೈಕ್ಷಣಿಕ ಭಯಗಳಿವೆ, ಪ್ರಾಣಿ ಪಕ್ಷಿಗಳ ವೈರುಧ್ಯವಾದ ಒಲವಿನೊಂದಿಗೆ ಬಾಲ್ಯದ ತುಂಟಾಟಗಳನ್ನು ಕಾಣುವುದಿದೆ. ವಾಸ್ತವದ ಮಾದರಿಯ ದಳಗಳಿಂದ ಸಂಗತಿಗಳು ಭಿನ್ನವಾಗಿ ಕಾಣಿಸುತ್ತವೆ. ನವೋದಯದ ಹೊಸತನಗಳ ಪ್ರಭಾವದಲ್ಲಿ ಪ್ರೇರಣೆಯನ್ನು ಉಂಡ ಕನ್ನಡದಲ್ಲಿಯೂ ಕೆಲವು ಮಹತ್ತರದ ಪ್ರಯೋಗಗಳನ್ನು ಮಾಡಿ ಬರೆಯುವಲ್ಲಿ ನಮ್ಮ ಲೇಖಕರು ಆಸ್ಥೆಯನ್ನು ವಹಿಸಿದ್ದರು. ಇದರ ಫಲವಾಗಿ ಕನ್ನಡದಲ್ಲಿ ಕೆಲವು ನಾವೀನ್ಯ ಮಾದರಿಯ ಕತೆಗಳು ಕಾಣಿಸಿಕೊಂಡವು.

ತ್ರಿವೇಣಿಯವರ 'ರಾಹುಲ' ಇಂತಹ ನಿರೀಕ್ಷೆಗಳೊಂದಿಗೆ ಕಾಣಿಸಿಕೊಂಡಿತು. ಬ್ರಾಹ್ಮಣರ ಮನೆಯ ಮಡಿವಂತಿಕೆಯಲ್ಲಿ, ಆಚಾರ ವಿಚಾರದ ಆಚರಣೆಗಳೊಳಗೆ ನಾಯಿಯಂತಹ ಮಡಿಮೈಲಿಗೆ ಇಲ್ಲದ ಪ್ರಾಣಿಯನ್ನು ಸಾಕಲು ಅನುಮತಿ ಸಿಗುವುದು ಬಲು ಕಷ್ಟದ ಕೆಲಸ. ಆಧುನಿಕ ಯುಗದಲ್ಲಿ ನಾಯಿಯನ್ನು

ವಿವಿಧ ಕಾರಣಗಳಗಾಗಿ ಸಾಕುವುದಿದೆ. ನಾಯಿಯನ್ನು ವಸ್ತುವಾಗಿಸಿಕೊಂಡು ಬಂದಿರುವುದನ್ನು ಈಗಾಗಲೆ ಅನೇಕ ಕತೆಗಳಲ್ಲಿ ನಾವು ನೋಡಿದ್ದೇವೆ. ನೆರೆ-ಹೊರೆಯ ಕತೆಯಲ್ಲಿ ಕಾಣಿಸಿಕೊಳ್ಳುವ ನಾಯಿಯ ಸಂಗತಿಗಳಂತೆ ಇದು ಕಾಣಿಸಿಕೊಂಡಿಲ್ಲ. ಇದು ಭಿನ್ನವಾದ ವಸ್ತುವಿನ ಸಂಗತಿಗಳಿಗೆ ಮಾದರಿಯಾಗಿದೆ. ಭಾರತದ, ಕನ್ನಡದ ಬ್ರಾಹ್ಮಣ ಸಂಪ್ರದಾಯದ ಸೆರಗಿನೊಳಗೆ ನೂತನತೆಗೆ ತುಡಿಯುವ ಹಂಬಲಗಳವೆ. ನಾಯಿ ಸಾಕಲು ಮಡಿವಂತಿಕೆಯ ಅಜ್ಜಿಯು ವಿರೋಧಿಸುವುದು, ಅಪ್ಪನು ಕಳ್ಳರ ಕಾಟಕ್ಕೆ ನಾಯಿಯ ಅಗತ್ಯವನ್ನು ನೆಪಮಾಡಿಕೊಂಡು ತರಿಸಿಕೊಳ್ಳುವುದು, ಕೆಲಸದ ಚೆನ್ನನು ಕಪ್ಪು ನಾಯಿಯ ಮರಿಯೊಂದನ್ನು ಹಿಡಿದು ತಂದು ಪುಟಾಣಿ ಲೀಲವ್ವನಿಗೆ ತೋರಿಸಿದಾಗ ಅವಳಲ್ಲಿ ಉಂಟಾಗುವ ಪರಿಣಾಮಗಳನ್ನು ಕಾಣುವ ಸಂಗತಿಗಳ ವಿವರಣೆಗಳವೆ. ಲೀಲಳು ನಾಯಿಮರಿಯನ್ನು ಎತ್ತಿಕೊಂಡು ಮುದ್ದಿಸುವಾಗ ಅಜ್ಜಿಯು ಮಡಿಯ ನೆಪದಿಂದ ಗೊಣಗುವ ಮಾತುಗಳವೆ. ಅವಳು ಮರಿಗೆ ರಾಹುಲ ಎಂದು ಹೆಸರಿಡುತ್ತಾಳೆ. ನಾಯಿಯ ಅಳು, ರಂಪಾಟಗಳನ್ನು ಗಂಡನ ಮನೆ ಅಗಲಿ ಬಂದಾಗ ಅಜ್ಜಿಯು ಪಟ್ಟ ವೇದನೆಗಳಿಗೆ ಹೋಲಿಸಿ ಲೀಲವ್ವ ಅವಳನ್ನು ಸಿಡುಕುಗೊಳಿಸುತ್ತಾಳೆ. ತನ್ನ ಗೆಳತಿ ಮಾಲತಿಯೂ ಒಂದು ನಾಯಿಮರಿಯನ್ನು ಉಡುಗೊರೆಯಾಗಿ ಕೊಡುತ್ತಾಳೆ, ಅದು ಮನೆಗೆ ಬಂದ ಮೇಲೆ ರಾಹುಲನಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳು, ಆ ನಾಯಿ ಮರಿಯು ಹೆಣ್ಣಾಗಿದ್ದು ಅದರ ಸಾಂಗತ್ಯದಲ್ಲಿ ಅವನು ಮುಳುಗಿ ಹೋಗುವ ವಿಷಯಗಳವೆ. ಬ್ರಾಹ್ಮಣರ ಮನೆಯ ಕಟ್ಟುನಿಟ್ಟಿಗೆ ಹೊಂದಿಕೊಳ್ಳಲಾಗದ ನಾಯಿಗೆ ಹುಚ್ಚು ಹಿಡಿದಿದೆ ಎಂದು ವಿಷವಿಕ್ಕುವಾಗ ಅದರ ನೋವು ಸಂಕಟಗಳು ಲೀಲವ್ವಳಿಗೆ ಮಾತ್ರ ಅರ್ಥವಾಗುವುದಿದೆ. ಅದರ ಸಾವಿನ ಸಂಕಟ ನೋಡಿ ಅವಳು ಇನ್ನೆಂದೂ ನಾಯಿಯನ್ನು ಸಾಕಲಾರೆ ಎಂದು ತೀರ್ಮಾನಿಸುತ್ತಾಳೆ. ಇದು ಕನ್ನಡದ ಸಾಂಪ್ರದಾದ ಕತೆಗಳಗಿಂತ ಭಿನ್ನವಾಗಿ ಕಾಣಿಸಿಕೊಂಡು ಹೊಸತನಗಳನ್ನು ರೂಢಿಸಿಕೊಳ್ಳುವ ಅಗತ್ಯವನ್ನು ಹೇಳದೆ ಎನ್ನಬಹುದು.

ಕನ್ನಡಕ್ಕೆ ಮಲಯಾಳಂ ಭಾಷೆಯಿಂದ ಪ್ರೇರಣೆಯಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಅದು ನೆರೆಹೊರೆಯ ಭಾಷೆಯು ಸಹ ಆಗಿರುವುದರಿಂದ ಅದರ ಪ್ರಭಾವವು ಸಹಜವಾಗಿ ಆಗಿರುತ್ತದೆ. ಅಲ್ಲದೆ ಸಿಬಿಟಿಯು ಇಂತಹ ಪ್ರೇರಣೆಗಳನ್ನು ಒದಗಿಸಿರುವುದಿದೆ. ಮಲಯಾಳಂ ಮೂಲದ ಕೆರೂರು ನೀಲಕಂಠ ಪಿಳ್ಳೆಯವರ ಕತೆಗಳು ಕನ್ನಡದಲ್ಲಿ ಕಾಣಿಸಿಕೊಂಡಿವೆ. 'ಸುಂದರ ಮತ್ತು ಚುಕ್ಕೆಬಾಲ' ಎಂಬುದು ಅವರ ಮಹತ್ತರದ ಕತೆಯಾಗಿದೆ. ಅದರ ವಸ್ತು, ಸಂಗತಿಗಳ ಮೂಲಕ ತಾತ್ವಿಕವಾದ ಪ್ರಭಾವವನ್ನು ಅರಿಯಲು ಸಾಧ್ಯವಾಗುತ್ತದೆ. ಸುಂದರ ಎಂಬ ಹುಡುಗನದು ದನ ಕಾಯುವ ಕೆಲಸವಾಗಿದ್ದು ಅವನು ಕಾಡಿನ ಸಮೀಪದ ಹುಲ್ಲುಗಾವಲಲ್ಲಿ ಅವುಗಳನ್ನು ಮೇಯಿಸುತ್ತಾನೆ. ಅಲ್ಲಿನ ಕಾಡು ಸರ್ಕಾರಕ್ಕೆ ಸೇರಿದ್ದು, ಪ್ರಾಣಿ, ಪಕ್ಷಿಗಳ ರಕ್ಷಿತಾರಣ್ಯವಾಗಿರುತ್ತದೆ. ಒಂದು ದಿನ ಹಗಲಲ್ಲಿ ಮಲಗಿ ನಿದ್ರಿಸುತ್ತಿರುವಾಗ ಎಚ್ಚರಾಗದೆ ರಾತ್ರಿಯಾಗಿರುತ್ತದೆ. ನರಿಗಳು ಊಳಿಡುವ ಸಮಯದಲ್ಲಿ ಎದ್ದು ನೋಡಿದಾಗ ದನಗಳರದೆ ಇವನಿಗೆ ಆತಂಕ ಶುರುವಾಗುತ್ತದೆ. ನರಿಗಳು ಮಾಡಿರುವ ಅಪಾಯದ ಊಹೆಗಳವೆ, ಕತ್ತಲಲ್ಲಿ ಕಲ್ಲನ್ನು ನರಿಗಳೆಡೆಗೆ ಎಸೆದು ಓಡಿಸಿ, ಧೈರ್ಯವಾಗಿ ನಡೆದು ಹೋಗುವಾಗ ಸಾವಿನ ಹಕ್ಕಿಯು ಕೂಗಿಕೊಳ್ಳುತ್ತದೆ. ಅವನು

ದೇವರಿಗೆ ಕೈ ಮುಗಿದು ಕಾಪಾಡುವಂತೆ ಬೇಡುತ್ತಾನೆ. ಕತ್ತಲ ಕಾಡಿನಲ್ಲಿ ಅಲೆದಾಡುವಾಗ ಎದುರಾಗುವ ಸಂಕಷ್ಟಗಳು, ಅವುಗಳೊಂದಿಗೆ ಅವನ ಸೆಣೆಸಾಟಗಳು ತೆರೆದುಕೊಂಡಿವೆ. ಕತ್ತಲ ಎದೆ ಸೀಳ ಕಾಣಿಸಿದ ಬೆಳಕಿನಡೆಗೆ ಹೋಗಿ ನೋಡಿದಾಗ ಅಲ್ಲಿ ನಾಲ್ಕು ಜನ ದಾಂಡಿಗರು ದನದ ಚರ್ಮ ಸುಲಿಯುತ್ತಿರುತ್ತಾರೆ. ಅದು ಅವನದೇ ಹಸುವಾಗಿರುತ್ತದೆ. ಅವರನ್ನು ಹೆದರಿಸುತ್ತಾನೆ. ಅದು ಚುಕ್ಕೆಬಾಲದ ಹಸುವಾಗಿರುತ್ತದೆ. ಅಲ್ಲಿನ ಮಾಂಸದ ವಾಸನೆಗೆ ನರಿಗಳು ಮುತ್ತುತ್ತವೆ. ಇವನು ಕೊಳಲನ್ನು ಊದಿ ಅವುಗಳನ್ನು ಓಡಿಸಲು ಯತ್ನಿಸುತ್ತಾನೆ. ಮರದಿಂದ ಇಳದು ಹೆದರಿ ಓಡುವಾಗ ಅವನಿಗೆ ಗಾಯಗಳಾಗುತ್ತವೆ. ಕೊಟ್ಟಿಗೆಯಿಂದ ಅದೇ ಸಮಯಕ್ಕೆ ಚುಕ್ಕೆಬಾಲದ ಹಸು ಕಾಡಿಗೆ ಬಂದು ಇವನನ್ನು ಹುಡುಕುತ್ತದೆ. ನಿಜವಾಗಿ ಹಸು ಆ ದಿನ ಮೇಯಲು ಬಂದಿಲ್ಲ. ಅದು ತಪ್ಪಿಸಿಕೊಂಡು ಬಂದಿರುವ ಹುಡುಗನನ್ನು ಹುಡುಕುತ್ತದೆ. ಅವನನ್ನು ಹಿಂಬಾಲಿಸಿಕೊಂಡು ಅವನ ಅಪ್ಪ, ಹಸುವಿನ ಒಡತಿ ಬಂದಾಗ ಚುಕ್ಕಿಬಾಲದ ಹಸು ಸುಂದರನ ಗಾಯದ ಕಾಲನ್ನು ನೆಕ್ಕುತ್ತಿರುತ್ತದೆ. ಅವನು ಅದರ ಮಡಿಲಲ್ಲಿ ನಿದ್ರಿಸುತ್ತಿರುತ್ತಾನೆ. ಇದನ್ನು ಅವರು ನೋಡುತ್ತಾರೆ. ಹೀಗೆ ಕತೆಯು ಸುಂದರ ಮತ್ತು ಚುಕ್ಕೆಬಾಲದ ಹಸುವಿನ ಸಂಬಂಧವನ್ನು ಹೇಳುವ ಪ್ರಯತ್ನದಲ್ಲಿ ಕಾಡಿನ ಕೆಲವು ಕತ್ತಲ ಸಂಗತಿಗಳನ್ನು ತೆರೆದಿಡುತ್ತದೆ. ಇದು ಕನ್ನಡದಲ್ಲಿಯು ಮಲೆನಾಡಿನ ಭಾಗದ ಮಕ್ಕಳ ಕತೆಗಳಲ್ಲಿ ಇಂತಹ ಸಂಗತಿಗಳು ಘಟಿಸಿರುವ ಸನ್ನಿವೇಶಗಳನ್ನು ಸಮೀಕರಿಸಿನೋಡಲು ನೆರವಾಗಿದೆ.

ಮರಾಠಿಯು ಸಹ ಕನ್ನಡದ ಮೇಲೆ ಪ್ರಭಾವನ್ನು ಉಳಸಿಕೊಂಡಿರುವ ಭಾಷೆಯಾಗಿದ್ದು, ನೆರೆಹೊರೆಯ ಜನರ ಆಡುಮಾತು ಕೂಡ ಆಗಿದೆ. ಇದರ ಗಡಿಯು ಕನ್ನಡಕ್ಕೆ, ಕನ್ನಡಿಗರಿಗೆ ಅಂಟಿಕೊಂಡಂತಿರುವುದರಿಂದ ಪ್ರೇರಣೆಗಳಾಗಿವೆ. ಮರಾಠಿ ಮೂಲದ ಲೇಖಕ ಬಿ. ಆರ್. ಭಾಗವತ್ ರ ಕತೆಯು ಕನ್ನಡದಲ್ಲಿ ಮಹತ್ತ್ವದಾಗಿ ಕಾಣಿಸಿಕೊಂಡಿದೆ. ಅದು 'ಬಹು ವೇಗದ ಫೆನೆ' ಎಂದು ಅನುವಾದಗೊಂಡಿದೆ. ಮುಂಬೈನ ವಾಸಿಯಾದ ಬನೇಶ್‌ನ ಅಲೆಮಾರಿ ಜೀವನವನ್ನು ಹೇಳುವುದೇ ಈ ಕತೆಯ ವಸ್ತುವಾಗಿ ಕಾಣಿಸಿಕೊಂಡಿದೆ. ಇಡೀ ಜಗತ್ತನ್ನು ಅವನ ಮನೆಯೆಂದು ಹೇಳಕೊಳ್ಳುವವ ಅವನು, ಅವನ ಧೈರ್ಯದ ಮಾತಿದು. ಅವನು ವಿದ್ಯಾರ್ಥಿಯಾಗಿದ್ದು ಬಹುವೇಗದ ಫೆನೆ ಎಂಬ ಅಡ್ಡ ಹೆಸರಿಂದ ಕರೆಸಿಕೊಳ್ಳುತ್ತಾನೆ. ಇವನ ಸಾಹಸಗಳಂದ ಬರೆಹಗಾರ ನಂದುವಿನ ಗೆಳೆತನವಾಗಿ, ಒಂದು ಚಿತ್ರ ಸ್ಪರ್ಧೆಯಲ್ಲಿ ಭಾಗವಹಿಸುತ್ತಾನೆ. ಚಿಕ್ಕಮ್ಮನ ಮನೆಯಲ್ಲಿದ್ದಾಗ ಜಾಹಿರಾತು ಬರೆಯುವ ಸಾಹಿತ್ಯವನ್ನು ಒದಗಿಸಿ, ಅವಳಂದ ಬೈಸಿಕೊಳ್ಳುತ್ತಾನೆ. ನಂದು ಇವನ ಕತೆಗಳಗೆ ಅಸಮಾಧಾನಗೊಳ್ಳುತ್ತಾ, ಇವನು ಬಹುವೇಗದ ದೊಡ್ಡಮನುಷ್ಯ ಎಂದು ಟೀಕಿಸುತ್ತಾನೆ. ಅವನು ಹೋದೆಡೆಯೆಲ್ಲಾ ಅಪಾಯಗಳಾಗುತ್ತವೆ, ಅವನಿಗೆ ತಾನು ಶ್ರೇಷ್ಠವೆಂಬ ಗರ್ವವೂ ಇದೆ. ಹುಡುಗರು ಲಿಫ್ಟಿಕ್ ಹಾಕುವುದಿಲ್ಲವೆಂದು ಗೇಲಿಮಾಡಿ ನಂದುವನ್ನು ನಗಿಸುವಲ್ಲಿ ಸೋತು ಮಂಕಾಗಿ ಕೂರುತ್ತಾನೆ. ಜಾಹಿರಾತು ಬರೆಯುವ ನಂದುವನ್ನು ವ್ಯಂಗ್ಯಮಾಡುತ್ತಲೇ ಇವನು ಕಾಣಿಸಿಕೊಳ್ಳುವುದಿದೆ. ಕೊನೆಗೆ ಜಾಹಿರಾತುಗಳು ಸುಳ್ಳು ಹೇಳುತ್ತವೆ ಎಂದು ಅವನ ಚಿಕ್ಕಮ್ಮನಿಗೆ ಅರ್ಥವಾಗುತ್ತದೆ. ನಂದು ಸಹ ತನ್ನ ಸೋಲನ್ನು ಒಪ್ಪಿಕೊಳ್ಳುತ್ತಾನೆ. ಹೀಗೆ ಜಾಹಿರಾತು ಲೋಕದ ಬಣ್ಣದ ಜಗತ್ತಿನ ಹಿಂದೆ ಹೋದವರ, ಅಲ್ಲಿ ಕೆಲಸಮಾಡುವ ಹುಡುಗರ ಸಂಗತಿಗಳನ್ನು

ಆಧಾರವಾಗಿಸಿಕೊಂಡು ಕತೆಯು ಸಾಗುತ್ತದೆ. ಬದುಕಿನ ವ್ಯಂಗ್ಯಗಳನ್ನು ಬೆನ್ನಟ್ಟುವ ವಾಸ್ತವದ ಹಂದರಗಳಂದ ಕೂಡಿದ ಕತೆಯಿದಾಗಿದ್ದು ಮುಂಬೈನ ವಾಣಿಜ್ಯ ಪರಿಸರವನ್ನು ಮಕ್ಕಳ ಕತೆಯಾಗಿ ನೋಡುವ ಕುಶಲಗಾರಿಕೆಯಿದೆ. ಕನ್ನಡದಲ್ಲಿ ಆರ್.ವಿ. ಭಂಡಾರಿಯವರ ಕತೆಗಳಲ್ಲಿ ಇಂತಹ ಎಳೆಗಳನ್ನು ಕಾಣಬಹುದಾಗಿದೆ.

ಕನ್ನಡದ ಕತೆಗಳ ಮೇಲೆ ಒರಿಯಾದ ಕತೆಗಳ ಪ್ರೇರಣೆಯು ಇದೆ ಎನ್ನಬಹುದು. ಅಲ್ಲಿ ಮಹತ್ತರದ ಲೇಖಕರಾದ ಎಸ್.ಕೆ.ಆಚಾರ್ಯರು ಬರೆದಿರುವ 'ಸ್ವರ್ಗಕ್ಕೆ ಏಳು ಮೆಟ್ಟಿಲು' ಎಂಬ ಕತೆಯು ಗಮನಿಸುವಂತದಾಗಿದೆ. ಖ್ಯಾತ ಖಗೋಳ ವಿಜ್ಞಾನಿಯಾದ ಸುಮಂತ ಚಂದ್ರಶೇಖರನ್ನು ಕುರಿತಾದ ಕಥಾವಸ್ತು ಇಲ್ಲಿದೆ. ಮರಕ್ಕೆ ಮೊಳೆಯೊಡೆದು ನೇತುಹಾಕಿದ ನಕ್ಷತ್ರಗಳನ್ನು ನೋಡಲು ಬಳಸುವ ಸಾಧನವನ್ನು ವಿದ್ಯಾರ್ಥಿಯೊಬ್ಬ ನೋಡಿ ಅವನಲ್ಲಿ ಉಂಟಾಗುವ ಭಾವನೆಗಳನ್ನು ನಿರೂಪಿಸುವ ಶೈಲಿಯಲ್ಲಿ ಇದು ಮೂಡಿಬಂದಿದೆ. ನಕ್ಷತ್ರಗಳನ್ನು ನೋಡುವ ಕಾತರದ ಜೊತೆಗೆ ನೀಲಿ ಆಗಸದಲ್ಲಿ ಹಾರಾಡುವ ಅನುಭವಗಳ ಹಂಬಲಿಕೆಗಳು ಕಾಣಿಸಿಕೊಳ್ಳುತ್ತವೆ. ರಾಕೆಟನ್ನು ಏರಿಗಂಟೆಗೆ ಎಪ್ಪತ್ತು ಸಾವಿರ ಕಿಮೀ ವೇಗದಲ್ಲಿ ಪ್ರಯಾಣಿಸುವಾಗ ಅನಿಸುವ ಸಂಗತಿಗಳನ್ನು, ಗಗನದ ನೀಲಮೋಡಗಳ ಸ್ಪರ್ಷಿಸಬೇಕೆಂದು ಕೊಳ್ಳುವ ಆಸೆಗಳುಗಳು, ಅಲ್ಲಿ ಸಹಜವಾಗಿ ಮನುಷ್ಯನನ್ನು ಕಾಡುವ ಹಸಿವು, ಬಾಯಾರಿಕೆಗಳ ತಣಿತ, ಅಲ್ಲಿಗೆ ಹೊಂದುಕೊಳ್ಳುವ ಉಡುಪುಗಳ ಅಗತ್ಯ ಮುಂತಾದವುಗಳು ಹಾಸ್ಯವಾಗಿಯು, ಗಂಭೀರವಾಗಿಯು ವೈಜ್ಞಾನಿಕ ಸಂಗತಿಗಳಂದ ಹೇಳಲ್ಪಟ್ಟಿವೆ. ಇದೊಂದು ವಿಜ್ಞಾದ ಲೋಕವನ್ನು ಮಕ್ಕಳಗೆ ಪರಿಚಯಿಸುವ ಜೊತೆಗೆ, ಜ್ಞಾನವನ್ನು ಹೇಳುವ ಕತೆಯಾಗಿದೆ. ಕೊನೆಗೆ ಸಂದೇಶದ ರೂಪದಲ್ಲಿ ಮಕ್ಕಳಗೆ ಸಾಮಾನ್ಯ ಮತ್ತು ಅತಿಮಾನವರ ಪರಿಚಯವಿದೆ. ಇಂತಹ ಕತೆಗಳು ಕನ್ನಡದಲ್ಲಿ ತೀರ ಅಪರೂಪದ ಸಂಗತಿಗಳಾಗಿವೆ. ಇವುಗಳ ಅಗತ್ಯವನ್ನು ಭಾವಿಸುವ ಅನಿವಾರ್ಯವೂ ನಮ್ಮ ಮುಂದಿದೆ.

ಪಂಜಾಬಿಯ ಕತೆಗಳು ಸಹ ನಮ್ಮಲ್ಲಿ ಕಾಣಿಸಿಕೊಂಡಿರುವುದಿದೆ. ಇವೆಲ್ಲವೂ ಅನುವಾದದ ಸಲುವಾಗಿ ಕನ್ನಡದ ಮಕ್ಕಳಗೆ ಓದಲು ಸಾಧ್ಯವಾಗಿದೆ. ಈ ಕಾರ್ಯವನ್ನು ಸಹ ಎನ್‌ಬಿಟಿ ಯವರು ಮಾಡಿರುವುದಿದೆ. ಪಂಜಾಬಿಯ ಲೇಖಕರಾದ ಗುರುಭಕ್ಷ್‌ಸಿಂಗ್‌ರ ಮಹತ್ತ್ವದ ಕತೆಯನ್ನು ನೋಡುವುದಾದರೆ ಕನ್ನಡತಲ್ಲಿ ಅದು 'ಬಮ್ ಬಹಾದುರ್' ಎಂಬ ಹೆಸರಿನಲ್ಲಿ ಸಿಗುತ್ತದೆ. ಬಮ್ ಬಹಾದುರ್ ಎಂಬುದು ಒಂದು ಆನೆಯಾಗಿದ್ದು, ಅದರ ಸಂಗಾತಿಯು ಕಾಯಿಲೆಯಿಂದ ನರಳುವಾಗ ಸಂಗಾತಿಯಿಂದ ಇದನ್ನು ದೂರ ಇರಿಸಿರುವುದರ ವಿರುದ್ಧ ದಂಗೆಯೆದ್ದು, ರಂಪಾಟ ಮಾಡುತ್ತದೆ. ಇದನ್ನು ಅದರ ಮಾವುತ ರಾಜನಿಗೆ ದೂರುತ್ತಾನೆ. ಅದರ ವಿರಹ ವೇದನೆಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಇದು ರಾಜನಿಗೆ ಮೆರವಣಿಗೆಯಲ್ಲಿ ತೋರಿದ ನಿಷ್ಠೆಯ ವರ್ಣನೆಗಳವೆ. ಇದು ರಾಜನಿಗೆ ಕೇವಲ ಆನೆಯಲ್ಲ, ಗೆಳೆಯ. ರಾಣಿಗೂ ಅಷ್ಟೆ ಇದರ ಬಗೆಗೆ ಗೌರವವಿದೆ. ಬೆಟ್ಟದಂತಹ ದೇಹದ ಪ್ರಾಣಿ ಅವಳಗಾಗಿ ವಾರಗಟ್ಟಲೇ ಕಾಯುವುದು ಅವಳಗೆ ಎಲ್ಲಿಲ್ಲದ ಒಲವು. ಬಮ್ ಬಹಾದರ್ ಈಗ ಎಲ್ಲರ ಮೇಲೆ ಸಿಟ್ಟುಗೊಂಡಿದೆ. ಅದರ ಉಪಟಳ ಹೆಚ್ಚಾಗಿ, ಮಾವುತ, ರಾಹುತರಿಗೆಲ್ಲಾ ಕಾಡುತ್ತದೆ. ಒಂದು ದಿನ ಮಹಾರಾಣಿ ಅದನ್ನು ನೋಡಲು ಬಯಸಿದಳು. ಎಲ್ಲರೂ ಬೇಡವೆಂತಲೇ ಹೇಳುತ್ತಾರೆ, ಆದರೆ ಅವಳಗೆ ಅದರ ಮೇಲೆ ನಂಬಿಕೆಯಿದೆ.

ಅವಳನ್ನು ಕಂಡರೆ ಅದು ಸಿಟ್ಟುಗೊಳ್ಳುವುದಿಲ್ಲ. ಅವಳು ಪೂರ್ವ ಸಿದ್ಧತೆಯಾಗಿ ತನ್ನ ಕಾರನ್ನು ಫರ್ಲಾಂಗು ದೂರದಲ್ಲಿ ನಿಲ್ಲಿಸಿ, ಸೈನಿಕರಿಗೆ ಹೇಳಿ ಅಗತ್ಯವಾದ ರಕ್ಷಣಾ ಕ್ರಮವನ್ನೆಲ್ಲ ಮಾಡಿಸಿ ರಕ್ಷಣದಳದವರಿಗೆ ತಾನು ಹೇಳುವ ವರೆಗೂ ಗುಂಡು ಹಾರಿಸಬೇಡಿ ಎಂದು ಸಲಹೆ ಇತ್ತಳು. ಆದರೂ ಅವರು ಸಿದ್ಧರಾಗಿದ್ದರು. ಮಹಾರಾಣಿ ಆನೆಯ ಬಳಿಗೆ ಹೋಗುವಾಗ ಎಲ್ಲರನ್ನು ಹಿಂದೆ ಹೋಗುವಂತೆ ಹೇಳಿ ಮುಂದೆ ನಡೆದಳು. ಆನೆಯು ನಮಸ್ಕರಿಸಿತು, ವೃತ್ತವನ್ನು ಕಾಲಿನಿಂದ ಎಳೆದು ಅದರ ನೋವನ್ನು ಹೇಳಿಕೊಂಡಿತು. ಮುಂದಿನ ಮಾತುಗಳನ್ನು ಒಂದೊಂದಾಗಿ ವೃತ್ತ ಬರೆದು ಹೇಳುತ್ತಿತ್ತು. ಅವಳು ಎಲ್ಲವನ್ನು ಅರ್ಥಮಾಡಿಕೊಂಡು, ಈಗ ಇವಳನ್ನೂ ಅರ್ಥಮಾಡಿಸಲು ಯತ್ನಿಸಿದಳು. ಅವರು ಷರತ್ತುಗಳಿಗೆ ಒಬ್ಬರಿಗೊಬ್ಬರು ಒಪ್ಪಿಕೊಳ್ಳುತ್ತಿದ್ದರು. ಅದು ಮಾಡಿದ ತಪ್ಪುಗಳಿಗೆ ಪಶ್ಚಾತಾಪವಾಗಿ ಅರ್ಧ ಆಹಾರ ಶಿಕ್ಷೆ ವಿಧಿಸಿದಳು. ಅದು ಅದಕ್ಕೆ ಒಗ್ಗಿ ಹೋಗಿ, ಅದರ ಆರೋಗ್ಯವು ಸುಧಾರಿಸಿಕೊಂಡು ಮಹಾರಾಣಿಗೆ ಅಭಿನಂದಿಸುವ ಸಂಗತಿಗಳು ಬಲು ರೋಚಕತೆಗಳಿಂದ ಕೂಡಿವೆ. ಇಂತಹ ಕತೆಗಳು ಮಾನವ ಮತ್ತು ಪ್ರಾಣಿಗಳ ನಡುವಿನ ಸಾಮಾರಸ್ಯವನ್ನು ಹದವಾಗಿ ಹೇಳುತ್ತವೆ. ನಾ. ಡಿಸೋಜರ ಕತೆಗಳು ಇಂತಹ ಪ್ರಾಣಿಯ ಪ್ರೀತಿಯನ್ನು ಕುರಿತು ಹೇಳುತ್ತವೆ ಎನ್ನಬಹುದು. ಆದರೆ ಇದೊಂದು ವಿಶೇಷತೆಯಿಂದ ಕೂಡಿದ ಕತೆಯೆಂಬುದು ಮಾತ್ರ ಓದುಗನಿಗೆ ಅನಿಸದೆ ಇರಲಾರದು.

ತಮಿಳು ಮೂಲದ ಲೇಖಕರಾದ ಸುಂದರ ರಾಮಸ್ವಾಮಿಯವರು ಬರೆದಿರುವ 'ಅಂಚೆ ಚೀಟಿ ಸಂಗ್ರಹ ಪುಸ್ತಕ' ಎನ್ನುವ ಕತೆಯು ಮಹತ್ತ್ವದ್ದಾಗಿದೆ. ತಮಿಳು ಮಕ್ಕಳ ಸಾಹಿತ್ಯವು ಕನ್ನಡದ ಮೇಲೆ ಹೇರಳವಾಗಿ ಪ್ರಭಾವ ಬೀರಿರುವುದಿದೆ. ನೆರೆಯ ರಾಜ್ಯವು ಇದಾಗಿದ್ದು ಕನ್ನಡದಲ್ಲಿ ತಮಿಳಿನ ವಾತಾವರಣವು ಹದವಾಗಿರುವುದು ಇದಕ್ಕೆ ಕಾರಣವಾಗಿದೆ. ನಾಗರಾಜನ್‌ಗೆ ಸಿಂಗಾಪೂರ್ ನಿಂದ ಅವನ ಚಿಕ್ಕಪ್ಪ ಒಂದು ಆಲ್ಬಂ ಕಳುಹಿಸಿರುತ್ತಾನೆ. ಅದನ್ನು ಮಕ್ಕಳಿಗೆಲ್ಲಾ ತೋರಿಸಿ, ಅವರಿಂದ ನಾಯಕನ ಪಟ್ಟ ಪಡೆದುಕೊಳ್ಳುವ ಇವನು, ಬೆಳಗ್ಗೆ ಶಾಲೆಯಲ್ಲಿ, ಸಂಜೆ ಮನೆಯಲ್ಲಿ ಮಕ್ಕಳು ಗುಂಪುಗಟ್ಟುವಂತೆ ಮಾಡುತ್ತಾನೆ. ಇದು ಅವನ ಸಹಪಾಠಿ ರಾಜಪ್ಪನಿಗೆ ಕಿರಿಕಿರಿಯಾಗುತ್ತದೆ. ಒಂದು ಕಾಲಕ್ಕೆ ರಾಜಪ್ಪನ ಅಂಚೆಚೀಟಿ ಸಂಗ್ರಹ ಪುಸ್ತಕವೇ ಪ್ರಸಿದ್ಧಿಯಾಗಿತ್ತು. ಅದರ ಎಲ್ಲಾ ವರ್ಚಸ್ಸು ಕುಗ್ಗಿದ್ದು ಈ ಸಂಗ್ರಹ ಬಂದಾಗ. ಹುಡುಗ ಹುಡುಗಿಯರೆಲ್ಲರಿಗೂ ನಾಗರಾಜನ್ ಇಡಿಸುತ್ತಾನೆ. ಅದೊಂದು ಅದ್ಭುತವಾದ ಸಂಗ್ರಹ, ದೇಶವಿದೇಶಗಳ ಅಂಚೆ ಚೀಟಿಗಳಿವೆ. ಇದು ಅವನ ಸ್ವಂತಕ್ಕಾಗಿ, ಹೆಸರು ಬೇರೆ ಬರೆದು ಕಳುಹಿಸಿದ ಸಂಗ್ರಹವಾದರಿಂದ ಅವನ ಅಹಂಕಾರಕ್ಕೆ ಮಿತಿಯಿಲ್ಲ. ಬಾಲ್ಯದ ಸಹಜವಾದ ಈರ್ಷೆಗಳಿವೆ, ಹೊಗಳಿಕೆಗಳಿವೆ, ಆಕರ್ಷಕ ಗುಂಗುಗಳಿವೆ. ರಾಜಪ್ಪನ ಆಲ್ಬಮ್‌ನ ಮೇಲೆ ಗೇಲಿಮಾಡುವ, ಅವನನ್ನು ಹಂಗಿಸುವ ಸಂಗತಿಗಳಿಂದ ಕತೆಯು ವಿಸ್ತಾರವಾಗಿ ಹರಡಿಕೊಂಡು ಮಕ್ಕಳನ್ನು ಮೋಜುಗೊಳಿಸುತ್ತದೆ. ರಾಜಪ್ಪನಂತೆ ಇವನು ಶ್ರಮವಹಿಸಿ ಸಂಗ್ರಹಿಸಿದ್ದಲ್ಲ ಅದು. ಆದುದರಿಂದ ಅದರ ಮೌಲ್ಯ, ಮಹತ್ತ್ವಗಳು ನಾಗರಾಜನ್‌ಗೆ ತಿಳಿದಿಲ್ಲ ಎನ್ನುವ ಪುಷ್ಟೀಕರಣಗಳಿವೆ. ಕೊನೆಗೆ ಒಂದುದಿನ ರಾಜಪ್ಪನು ಆ ಅಂಚೆಚೀಟಿ ಸಂಗ್ರಹವನ್ನು ಕದ್ದು, ತನ್ನ ರೂಮಿನಲ್ಲಿ ಬಚ್ಚಿಟ್ಟುಕೊಳ್ಳುವನು. ಆನಂತರ ಅವನಲ್ಲಿ ಉಂಟಾಗುವ ತಳಮಳಗಳು, ನಾಗರಾಜನ್ ತಂದೆ ಪೊಲೀಸ್

ಇಲಾಖೆಯವರು. ದೂರು ಕೊಟ್ಟರೆ?, ಗತಿ ಏನಾಗಬಹುದು? ಇತ್ಯಾದಿ ಆಲೋಚನೆಗಳಿಂದ ಅವನು ಬಳಲುವ ಸಂಗತಿಗಳಿವೆ. ಅಪ್ಪು ಎನ್ನುವ ಹುಡುಗನು ಇಬ್ಬರ ನಡುವಿನ ಸಂಪರ್ಕವಾಗಿ ಕಾಣಿಸಿಕೊಳ್ಳುತ್ತಾನೆ. ಪೋಲೀಸರ ಭಯದಿಂದ ಅದನ್ನು ಬಾತ್ ರೂಮಿನ ಒಲೆಯ ಬೆಂಕಿಗೆ ಹಾಕಿ ಸುಡುತ್ತಾನೆ. ನಂತರ ನಾಗರಾಜನ್ ಇವನ ಮನೆಗೆ ಬಂದಾಗ ಅವನ ಮುಖ ನೋಡಲಾಗದೆ ತನ್ನ ಆಲ್ಬಮ್‌ನ್ನು ರಾಜಪ್ಪನಿಗೆ ನೀಡುವ ಸಂಗತಿಯು ಮಕ್ಕಳಲ್ಲಿ ಮನಸ್ಸು ಕರಗುವಿಕೆಯನ್ನು ಹೇಳುತ್ತದೆ. ಮಕ್ಕಳ ಚಂಚಲತೆ, ಚೇಷ್ಟೆ, ಕಳ್ಳತನಗಳನ್ನು ಹೇಳುವಂತೆ ಅವರ ತ್ಯಾಗಗುಣಗಳನ್ನು ಈ ಕತೆಯು ಹೇಳುತ್ತದೆ. ಕಳೆದು ಕೊಳ್ಳುವ, ಕಳೆದುಕೊಳ್ಳಲಾಗದ ಸಂಗತಿಗಳು ಮನಕಲಕುತ್ತವೆ. ಇಂತಹ ದಟ್ಟವಾದ ವಾಸ್ತವದ ಅನುಭವವು ಕನ್ನಡದ ಇತ್ತೀಚಿನ ಲೇಖಕರಲ್ಲಿ ವಿರಳವಾಗಿ ಕಾಣಿಸಿಕೊಳ್ಳುತ್ತಿದೆ. ಇಂತಹ ಓದಿನ ಸಾಧ್ಯತೆಗೆ ಕನ್ನಡ ಮಕ್ಕಳ ಕಥಾಲೋಕವನ್ನು ಒರಳನೋಡುವ ಅಗತ್ಯವಿದೆ.

ತೆಲುಗು ಭಾಷೆಯಲ್ಲಿಯೂ ಮಕ್ಕಳ ಕತೆಗಳು ಹೇರಳವಾಗಿದ್ದು ಅವು ಸಹ ಕನ್ನಡದ ಮೇಲೆ ತನ್ನ ಪ್ರಭಾವವನ್ನು ಉಂಟುಮಾಡಿವೆ ಎನ್ನಬಹುದು. ತೆಲುಗು ಭಾಷಿಕ ಪರಿಸರವು ಕನ್ನಡದಲ್ಲಿ ದಟ್ಟವಾಗಿದೆ. ಆದುದರಿಂದ ಅಲ್ಲಿಯ ಕತೆಗಳನ್ನು, ವಸ್ತುಬಗೆಯನ್ನು ಅಗತ್ಯವಾಗಿ ಭಾವಿಸಬೇಕಿದೆ. ತೆಲುಗಿನ ಲೇಖಕರಾದ ರಾಂಧಿ ಸೋಮರಾಜು ಅವರ 'ಅಪ್ಪುವಿನ ಕತೆ'ಯನ್ನು ಅವಲೋಕಿಸಬಹುದು. ಮುತ್ತಿನ ದ್ವೀಪ ಎಂಬ ಸಣ್ಣ ಹಳ್ಳಿಯಲ್ಲಿ ನಡೆಯುವ ಘಟನೆಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಹಳ್ಳಿಯಲ್ಲಿದ್ದರೂ ಅಪ್ಪು ನಗರದ ಜೀವನ ನಡೆಸುತ್ತಾ ಹಣವನ್ನು ದುಂದು ವೆಚ್ಚಮಾಡುವವನಾಗಿದ್ದನು. ಶೋಕಿವಾಲ, ಬೇಜವಾಬ್ದಾರಿ ಹುಡುಗನಾಗಿದ್ದು, ಪುಸ್ತಕ, ಬಟ್ಟೆಗಳ ಮೇಲೆ ಮುತುವರ್ಜಿಯಿಲ್ಲದೆ ಕಳೆದುಕೊಂಡು ಅವುಗಳಿಗಾಗಿ ನಿತ್ಯ ಪೋಷಕರನ್ನು ಪೀಡಿಸಿ, ಗೋಳಾಡಿಸುವ ಸಂಗತಿಗಳಿವೆ. ಅವನು ದುಷ್ಟಚಟಗಳಿಗೂ ತುತ್ತಾಗಿ ಕಲಿಕೆಯಲ್ಲಿ ಹಿಂದುಳಿಯುವನು. ಇದನ್ನು ಅರಿತ ಗುರುಗಳು ಮನೆಗೆ ಹೋಗಿ ಬುದ್ಧಿ ಹೇಳಲು ಬಯಸುವರು. ಇದರಿಂದ ಅವನು ಆತಂಕಗೊಳ್ಳುವನು. ಅವನು ನೋಡಿದ ಒಂದು ಉಪಗ್ರಹ ಕುರಿತಾದ ಲೇಖನದಿಂದ ಅವನಲ್ಲಿ ಕುತೂಹಲಗಳು ಉಂಟಾಗಿ, ಶಿಕ್ಷಕರನ್ನು ಪ್ರಶ್ನಿಸುತ್ತಾ ದೇಶವನ್ನು ಸುತ್ತುವ ಆಸೆ ವ್ಯಕ್ತಪಡಿಸುವನು. ನಂತರ ಪ್ರಯಾಣಕ್ಕೆ ಹಣ ಉಳಿಸುವ ಅಗತ್ಯವನ್ನು ಅರಿತು, ತಾನು ವ್ಯರ್ಥಮಾಡಿದ ಹಣ, ಪುಸ್ತಕದ ಮೌಲ್ಯಗಳಿಗಾಗಿ ಪಶ್ಚಾತಾಪ ಪಡುವನು. ಇಲ್ಲಿ ಬದುಕಿನ ಆಡಂಬರಗಳನ್ನು ಹೇಳಿದಂತೆ, ಬದುಕಿನ ಹತಾಶೆಗಳನ್ನು ಕಟ್ಟಿಕೊಟ್ಟಿರುವುದಿದೆ. ಇಲ್ಲಿ ಎಳೆಯ ಮನಸ್ಸುಗಳ ಮೇಲೆ ಪರಿಣಾಮ ಬೀರುವ ಅಂಶಗಳಿವೆ. ಇಂತಹ ಕತೆಗಳು ನೀತಿಯ ಭಾಗವಾಗಿ ಕನ್ನಡದಲ್ಲಿ ಕಾಣಿಸಿಕೊಂಡಿವೆ.

ಉರ್ದು ಭಾಷೆಯು ಕನ್ನಡದ ಪರಿಸರದಲ್ಲಿ ಹರಡಿಕೊಂಡಿದ್ದು, ಅದರ ಪ್ರಭಾವಗಳು, ಪ್ರೇರಣೆಗಳು ಮೌಖಿಕವಾಗಿಯೂ, ಲಿಖಿತವಾಗಿಯು ಕನ್ನಡದ ಮಕ್ಕಳನ್ನು ತಲುಪಿವೆ. ಅರಬ್ಬ್, ಇರಾಕ್, ಇರಾನ್ ಮುಂತಾದ ದೇಶಗಳಿಂದಲೂ ಬಂದ ಕತೆಗಳು ನಮ್ಮ ಪರಿಸರವನ್ನು ಆವರಿಸಿವೆ. ಇಂತಹ ಕತೆಗಳನ್ನು ನಾವು ಅಗತ್ಯವೆಂದು ಕಾಣಬೇಕಿದೆ. ಉರ್ದುವಿನ ಮಹತ್ತ್ವದ ಲೇಖಕರಾದ ಸಿರಾಜ್‌ಅನ್ವರ್ ಬರೆದಿರುವ ಕತೆಯನ್ನು ಕನ್ನಡದಲ್ಲಿ 'ಅಹಂಕಾರದ ಬೆಲೆ' ಎನ್ನುವ ಹೆಸರಿಂದ ಅನುವಾದಿಸಿ ನೋಡಲಾಗಿದೆ. ಸಮುದ್ರದ

ಆಳದಲ್ಲಿ ಚಿಪ್ಪಿನೊಳಗೆ ಕುಳಿತು ಮುತ್ತು ತಯಾರಿಸುವ ಸಿಂಪಿ ಹುಳುವು ಈ ಕತೆಯ ವಸ್ತುವಾಗಿದೆ. ಅದರ ಅಹಂಕಾರವನ್ನು, ಅದರ ಫಲವನ್ನು ಹೇಳುವ ಅನೇಕ ರೀತಿಯ ತಂತ್ರಗಾರಿಕೆಗಳನ್ನು ಇಲ್ಲಿ ಕಾಣಬಹುದು. ಬಿರುಗಾಳಿಗೆ ಸಮುದ್ರದಿಂದ ಅಲೆಯೆದ್ದು ಹೊರಬರುವ ಸಿಂಪಿಯು, ತೀರದ ಮರದ ತುದಿಯಲ್ಲಿ ಕುಳಿತು ಹರಟುವ ಕಾಗೆಯು ಮಾತನಾಡಿಕೊಳ್ಳುವ ಸಂಭಾಷಣೆಗಳಿವೆ. ಸಮುದ್ರದಲ್ಲಿ ಮುತ್ತು ತಯಾರಿಸುವ ನಾನೇ ಶ್ರೇಷ್ಠ ಎನ್ನುವ ಅಹಂಕಾರದಿಂದ ಚಿಪ್ಪಿನಿಂದ ಹೊರಬರಲಾರದ ಸಿಂಪಿಗೆ ಕಾಗೆಯು ಜಾಣ್ಮೆಯಿಂದ ಉತ್ತರಿಸಿ, ಅದನ್ನು ಆಹಾರವಾಗಿ ಪಡೆಯುವ ಚಾತುರ್ಯಗಳಿವೆ. ಇಂತಹ ಸರಕು ಕನ್ನಡದಲ್ಲಿ ಜನಪದದ ಸ್ವರೂಪದಲ್ಲಿ ಹೇರಳವಾಗಿ ದೊರೆತರೂ, ಮಾತನಾಡುವ ಶೈಲಿಯಿಂದ, ಕತೆಯ ತಂತ್ರಗಾರಿಕೆಯಿಂದ ಇದು ಹೊಸತನವನ್ನು ಅನುಭವಿಸುವಂತಾಗಿದೆ.

ಮಹಾಶ್ವೇತಾ ದೇವಿಯವರ 'ಏತೋೀ ಮುಂಡ ಯುದ್ಧ ಗೆದ್ದ' ಬಂಗಾಲಿ ಮೂಲದ ಕತೆಯಾಗಿದೆ. ಇದು ಕನ್ನಡದ ಮನೆ ಮಾತಾಗುವಷ್ಟು ಪ್ರತಿಗಳು ಮಾರಾಟವಾಗಿವೆ. ಇದರ ಪ್ರೇರಣೆಯನ್ನು ಕನ್ನಡದಲ್ಲಿ ಅಲ್ಲಗಳೆಯಲಾಗುವುದಿಲ್ಲ. ಆದಿವಾಸಿ ಹುಡುಗನೊಬ್ಬನ ಕುರಿತಾದ ಕತೆಯಿದು. ಅನಕ್ಷರತೆ, ಬಡತನ, ಶೋಷಣೆಗಳ ನಡುವೆ ನಲುಗಿರುವ ಕುಟುಂಬದ 'ಏತೋೀ' ಶಾಲೆಯ ಮುಂದೆ ಹೋಗುವಾಗಲೆಲ್ಲಾ ಅವನಿಗೆ ಅಕ್ಷರದ ಆಸೆಗಳುಂಟಾಗುತ್ತವೆ. ಆದರೆ ಅವನು ದನಮೇಯಿಸುವುದು ಅನಿವಾರ್ಯದ ಕೆಲಸವಾಗಿರುತ್ತದೆ. ಅವನ ತಾತನಿಗೆ ಇದು ಅರ್ಥವಾಗಿ ಶಾಲೆಗೆ ಸೇರಿಸಲು ಎಲ್ಲಾ ಸಮಸ್ಯೆಗಳನ್ನು ಮೀರಿ ನಿಲ್ಲುವಂತಹ ಮನಸ್ಸು ಮಾಡುತ್ತಾನೆ. ಇದರಿಂದ ಏತೋೀಗೆ ಜೀತದಿಂದ ಮುಕ್ತಿ ಸಿಕ್ಕಿ, ಶಾಲೆಯ ದಿನಗಳು ಹತ್ತಿರವಾಗುವ ಕಾಲ ಬರುತ್ತದೆ. ಇಂತಹ ವಾಸ್ತವದ ಸಮಸ್ಯೆಗಳನ್ನು ಕತೆಯ ವಸ್ತುವಿನಲ್ಲಿ ಪ್ರಯೋಗಿಸಿರುವುದು ಕಂಡುಬರುತ್ತದೆ. ಕನ್ನಡಕ್ಕೆ ಇದೊಂದು ಮಹತ್ತರದ ಕೃತಿಯಾಗಿ ಬಂದು ವಸ್ತು ವೈವಿಧ್ಯತೆಯನ್ನು ತಂದುಕೊಟ್ಟಿದೆ. ಆರ್. ವಿ. ಭಂಡಾರಿಯವರ 'ಚಿನ್ನದ ಹುಡುಗಿ ಚಿನ್ನಮ್ಮ' ಕೂಡ ಇಂತಹದೆ ವಸ್ತುವನ್ನು ಹೇಳುತ್ತದೆ.

ಬಂಗಾಲಿ ಕತೆಯಾದ ಲೀಲಾ ಮಜುಮ್‌ದಾರರ 'ಬಾರಾಪಾಣಿ'ಯು ಮಹತ್ತ್ವವಾದದು. ಕಾನು ಎಂಬ ಹುಡುಗನ ಮೂಲಕ ಪ್ರಕೃತಿ ಪ್ರೇಮ, ಬದುಕಿನ ಅನನ್ಯತೆಯ ಎಳೆಗಳನ್ನು ಹೇಳುವಂತದಾಗಿದೆ. ತನ್ನ ತಾತನು ಹೇಳುವ ಕತೆಗಳನ್ನು ಕೇಳುತ್ತಾ ಬೆಳೆಯುವ ಕಾನುವಿಗೆ ಕತೆಗಳೇ ಪಾಠಗಳಾಗಿ ಬದುಕನ್ನು ಕಟ್ಟಿಕೊಡುತ್ತವೆ. ನೈಜವಾದ ಸಂಗತಿಗಳಿಂದ ಕೂಡಿದ ಕತೆಯಿಂದ ನಮ್ಮಲ್ಲಿ ಅನೇಕ ಪ್ರಕೃತಿಯ ಪ್ರೇಮದ ಕತೆಗಳು ಮೂಡಿಬಂದಿವೆ. ನಾ. ಡಿಸೋಜ ರ ಕತೆಗಳ ತುಂಬೆಲ್ಲಾ ಮಲೆನಾಡಿನ ಪ್ರಕೃತಿಯ ಪ್ರೇಮವೇ ಮೈದುಂಬಿದೆ.

ಹೀಗೆ ಕನ್ನಡದ ಕಥಾಜಗತ್ತು ಅನೇಕ ಭಾಷೆಯ ಕತೆಗಳಿಂದ ಪ್ರೇರಣೆಯನ್ನು ಪಡೆದು ವಸ್ತು ವೈವಿಧ್ಯತೆಯಲ್ಲಿ ತನ್ನನ್ನು ತಾನು ಕಟ್ಟಿಕೊಂಡಿದೆ. ಇಂತಹ ದಟ್ಟ ಪ್ರೇರಣೆ ನಮ್ಮ ಮುಂದಿರುವಾಗಲು ಕನ್ನಡದ ವಾತಾವರಣವು ಅಗತ್ಯವಾದಷ್ಟು ವಿಸ್ತಾರವನ್ನು ಕಾಣಲಿಲ್ಲ. ಹೀಗೆ ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ. ಹೊಸ ಮಾದರಿಯ ಕತೆಗಳಿಗೆ ದಾರಿ ತೋರಿಸುವಲ್ಲಿ ಹೊರಗಣ ಕೃಷಿ ಒಂದಿಷ್ಟೆಲ್ಲ ಕನ್ನಡಕ್ಕೆ

## ಅಧ್ಯಾಯ : ೫

### ಫ್ಯಾಂಟಸಿ ಸ್ವರೂಪದ ಕತೆಗಳು

೫.೧ ಫ್ಯಾಂಟಿಸಿಯ ಉದ್ದೇಶಗಳು

೫.೨ ಫ್ಯಾಂಟಸಿಯ ನೆಲೆ

೫.೩ ಮಕ್ಕಳ ಕಥೆಗಳ ಸಾಮಾನ್ಯ ಲಕ್ಷಣಗಳು

೫.೪ ಫಾಂಟಸಿಯ ಲಕ್ಷಣಗಳು

೫.೫ ಫಾಂಟಸಿಯ ಭಾಷೆ ಮತ್ತು ಗುಣಾವಗುಣಗಳು

೫.೬ ಫಾಂಟಸಿಯ ಪ್ರಮುಖ ಪ್ರೇರಣೆ, ಪ್ರಭಾವಗಳು

೫.೭ ಕನ್ನಡದಲ್ಲಿ ಫ್ಯಾಂಟಸಿಯ ಪ್ರಯೋಗಗಳು

೫.೮ ಫ್ಯಾಂಟಸಿಯ ವಿವಿಧ ಬಗೆಗಳು

## ಅಧ್ಯಾಯ : ೫

# ಫ್ಯಾಂಟಸಿ ಸ್ವರೂಪದ ಕತೆಗಳು

'ಫ್ಯಾಂಟಸಿ' ಎಂಬ ಶಬ್ದವೇ ಹೊರಗಿನಿಂದ ಬಂದುದಾದರೂ ಭಾರತೀಯ ಕಥಾ ಪ್ರಪಂಚದಲ್ಲಿ ಎಲ್ಲಾ ಕಡೆಯೂ ಹಾಸುಹೊಕ್ಕಾಗಿದೆ. ಇದು ಜನಪದ ಲೋಕದ ಒಂದು ಅಗತ್ಯವಾಗಿಯೇ ಕಾಣಿಸಿಕೊಂಡಿದೆ. ಅದಕ್ಕೆ ಕಾರಣಗಳೂ ಅನೇಕವಾಗಿವೆ. 'ಮನುಷ್ಯ ತಾನು ಕಂಡ ಕನಸನ್ನು ತನ್ನೆದುರಿಗೆ ಸಾಧಿಸಲು ಸಾಧ್ಯವಾಗದಿದ್ದಾಗ ಅದನ್ನು ಕಲ್ಪಿಸಿಕೊಂಡಾದರೂ ಸಾಧಿಸುವ, ಮಾನಸಿಕವಾಗಿ ಅನುಭವಿಸುವ ಬಗೆಯು ಇದಾಗಿದೆ. 'ಫ್ಯಾಂಟಸಿಯಲ್ಲಿ ಕಂಡುಬರುವ ಚಿತ್ರ ವಿಚಿತ್ರವಾದ ಸಾಧ್ಯತೆಗಳೆಲ್ಲಾ ಮನುಷ್ಯನೊಳಗಿನ ಸುಪ್ತ ಬಯಕೆಗಳೆ ಆಗಿವೆ. ವಿಜ್ಞಾನದ ಬೆಳವಣಿಗೆಯಾದಂತೆ ಇಂತಹ ಎಷ್ಟೋ ಕನಸುಗಳು ಈಗ ಸಾಕಾರವಾಗಿ ನಿಂತಿವೆ. ಮನುಷ್ಯ ತನ್ನ ಕನಸುಗಳನ್ನು ಇನ್ನೂ ಕಟ್ಟಿಕೊಳ್ಳುತ್ತಲೇ ಇದ್ದಾನೆ. ಅದು ಮುಗಿಯದ ಪಯಣ ಎನ್ನಬೇಕು. ಮಧುರಚೆನ್ನರು 'ಬಯಕೆ ಬರುವುದರ ಕಣ್ಣಸ್ನೆ ಕಾಣೋ' ಎಂದಿರುವುದನ್ನು ಇಲ್ಲಿ ಅನ್ವಯಿಸಿಕೊಳ್ಳಬಹುದಾಗಿದೆ. ಫ್ಯಾಂಟಸಿ ಮನುಷ್ಯರೆಲ್ಲರನ್ನೂ ಆವರಿಸಿಕೊಂಡು ಸಾಂಸ್ಕೃತಿಕವಾಗಿ ಬೆಳೆದು ಬಂದುದೊಂದು ಬಗೆಯಾದರೆ ಅದು ಸುದೈವದಂತೆ ನಮ್ಮ ಮಕ್ಕಳ ಜಗತ್ತಿನಲ್ಲಿ ಯಾವಾಗಲೂ ಜಾಗೃತವಾಗಿರುವು ಒಂದು ವರದಾಯಕ. ಫ್ಯಾಂಟಸಿ ಅವಾಸ್ತವವಾದರೂ ಎಲ್ಲ ಅವಾಸ್ತವ ಕಲ್ಪನೆಗಳನ್ನೂ ಫ್ಯಾಂಟಸಿ ಎಂದು ಕರೆಯಲಾಗುವುದಿಲ್ಲ. ನಮ್ಮ ಬರಹಗಾರರು ಕಲ್ಪಸಿಕೊಂಡು ರಚಿಸಿರುವ ಹಲವಾರು ವಸ್ತು ವಿಷಯಾಂಶವೆಲ್ಲವು ಅವಾಸ್ತವ, ಅಸಂಗತ ರಚನೆಗಳು ಫ್ಯಾಂಟಸಿಯ ಲೋಕಕ್ಕೆ ಸೇರುವುದಿಲ್ಲ. ಅವೇನಿದ್ದರೂ ನಮ್ಮ ವಾಸ್ತವಕೆ ಹೆಚ್ಚು ಹತ್ತಿರವಾಗುವಂತಹವು. ಮನುಷ್ಯನೊಳಗಿನ ಅಸಂಗತಿಗಳಿಗೆ, ಅವುಗಳ ಅಭಿವ್ಯಕ್ತಿಗಳಿಗೆ ದಾರಿ ಮಾಡಿಕೊಂಡ ಬಗೆಯಷ್ಟೆ ಅವುಗಳಾಗಿರಲು ಸಾಧ್ಯ. ಚಂದ್ರಶೇಖರ ಪಾಟೀಲರ ಅಸಂಗತ ನಾಟಕಗಳನ್ನು ಉದಾಹರಣೆಯಾಗಿ ನೋಡಬಹುದು. ಅವಾಸ್ತವ, ಅಸಂಗತ ಕತೆಗಳನ್ನು ಬರಯುತ್ತಾ ಬಂದ ಎಂ. ಎಸ್. ಕೆ. ಪ್ರಭು ತಮ್ಮ 'ಸಾಹಿತ್ಯದಲ್ಲಿ ಫ್ಯಾಂಟಸಿ' ಎಂಬ ಲೇಖನದಲ್ಲಿ ಹೇಳುವ ಹಾಗೆ 'ಬದುಕಿನ ಯಾಂತ್ರಿಕತೆ, ಜಡತ್ವ ಅಪರಿಪೂರ್ಣತೆ ಮತ್ತು ಕ್ಲೇಶಗಳಿಂದ ಬಿಡುಗಡೆ ಪಡೆಯಲು ಫ್ಯಾಂಟಿ ಒಂದು ಸಾಧನ. ಭೂತಕಾಲದ ಹೊರೆ, ವರ್ತಮಾನದ ಗೊಂದಲ ಮತ್ತು ಭವಿಷ್ಯದ ಅನಿಶ್ಚಿತತೆಗಳು ಮನುಷ್ಯನನ್ನು ದಿಗ್ಭ್ರಮೆಗೊಳಿಸಿದಾಗ ಅವುಗಳಿಂದ ತಪ್ಪಿಸಿಕೊಳ್ಳಲು, ಬದುಕನ್ನು ಹೊಸ ನೆಲೆಯಲ್ಲಿ ನಿಂತು ಅರ್ಥಮಾಡಿಕೊಳ್ಳಲು ಪೂರ್ವನಿರ್ಧಾರಿತ ಮೌಲ್ಯಗಳು, ಸಿದ್ಧವಾದ ಭಾಷೆ, ನುಡಿಗಟ್ಟು, ಪ್ರತಿಕ್ರಿಯೆಗಳು ಸತ್ವ ಹೀನವಾದಾಗ, ಸ್ಥಾಪಿತವಾದ ನಂಬಿಕೆಗಳಿಗೆ ವಿರುದ್ಧವಾದ ಸೃಷ್ಟಿಯಾದಾಗ, ಮನುಷ್ಯನ ಭಾವನೆಗಳ, ಅನುಭವಗಳ, ವ್ಯವಹಾರಗಳ ಮೂಲ ಅರ್ಥದ ಶೋಧನೆಗೆ ಫ್ಯಾಂಟಸಿ ಹುಟ್ಟುತ್ತದೆ'[೩೧]. ಆದರೆ ಜನಪದ ಕತೆಗಳಲ್ಲಿನ ಫ್ಯಾಂಟಸಿಯು ಈ ಬಗೆಯದಲ್ಲವೆಂದೆನಿಸುತ್ತದೆ. ಮಕ್ಕಳ ನಡುವಿನ ಫ್ಯಾಂಟಸಿಯೂ ಈ

---

[೩೧] ಸಾಹಿತ್ಯದಲ್ಲಿ ಫ್ಯಾಂಟಸಿ: ಲೇ: ಎಂ. ಎಸ್.ಕೆ. ಪ್ರಭು. ಪ್ರತಿಭಾ ಯುವ ವೇದಿಕೆ. ಪ್ರಕಟಣೆ. ಪುಟ ೧೨. ೧೯೯೨.

ತಾತ್ವಿಕತೆಯ ಹಂದರದೊಳಗೆ ಬಂಧಿತವಾಗುವುದಿಲ್ಲ. ಮಕ್ಕಳ ನಡುವಿನ ಫ್ಯಾಂಟಸಿಯು 'ಕಲ್ಪನೆಯ ಕಣ್ಣುಗಳಿಂದ ಕುತೂಹಲವಾಗಿ ನೋಡುವಂತಹದು, ಕಾಯುವಂತಹದು, ಅದ್ಭುತವಾದ, ಚಮತ್ಕಾರಿಕವಾದ, ಜರುಗಲಾರದ ಸಂಗತಿ ಜರುಗುವುದು ಆಗಿರುತ್ತದೆ. ಹಾಗೆಯೇ ಜರುಗುತ್ತಾ ಅದು ಕತೆಯಲ್ಲಿನ ನಾಯಕರಿಗೆ ಗೆಲುವು ಸಾಧಿಸಲು, ಅವರ ದಾರಿಗಳಲ್ಲಿ ಎದುರಾಗುವ ಅಡ್ಡಿಗಳನ್ನು ನಿವಾರಿಸಲು ಅನುಕೂಲವಾಗುತ್ತದೆ'. ಅದಲ್ಲದೆ ಜನಪದ ಕತೆಗಳಲ್ಲಿಯಂತೆಯೇ ದುಷ್ಟ ಶಕ್ತಿಗಳು, ವೈರಿಗಳು ಕೂಡ ಈ ಬಗೆಯ ಅದ್ಭುತ ಸಂಗತಿಗಳನ್ನು ಸೃಷ್ಟಿಸಿ ಅಡ್ಡಿ ಆತಂಕಗಳನ್ನು ತಂದೊಡ್ಡಬಹುದಾದು ಕಾಣಸಿಗುತ್ತದೆ. ಇಲ್ಲಿ ಏನಿದ್ದರೂ ಅವಾಸ್ತವವು ರೋಚಕತೆಯನ್ನು ಉಂಟುಮಾಡುವುದಕ್ಕೆ, ಅಚ್ಚರಿಗೊಳ್ಳುವುದಕ್ಕೆ ಬಳಕೆಯಾಗುತ್ತದೆ ಎನ್ನಬಹುದು. ವರ್ತಮಾನ ಕಾಲದಲ್ಲಿ ನಾವು ಅನುಭವಿಸುವ ಗೊಂದಲಗಳಿಗೆ ಕಾರಣಗಳು, ಕಟ್ಟುಬಿದ್ದಿರುವ ಕಟ್ಟಳೆಗಳು, ನಂಬಿಕೆಗಳು ಒಮ್ಮೊಮ್ಮೆ ಕಾಡುವ ಪರಿ. ಅವುಗಳಿಂದ ಬಿಡಿಸಿಕೊಳ್ಳಲಾಗದೆ ತೊಳಲಾಡುವ ಮನಸ್ಸು ತನಗೆ ತಾನು ಬಿಡುಗಡೆಯನ್ನು ಬಯಸಿ ಸ್ವಚ್ಛಂದವಾದ ವಿಹಾರವನ್ನು ಬಯಸಿದಂತೆ ಫ್ಯಾಂಟಸಿಯು ಕೂಡ ತನ್ನನ್ನು ತಾನು ಸ್ವತಂತ್ರವಾಗಿ ನೆಲೆಗೊಳಿಸಿಕೊಳ್ಳಲು ಹಂಬಲಿಸುತ್ತದೆ. ಮನುಷ್ಯನು ಎಷ್ಟೇ ಶಕ್ತಿಮೀರಿ ಪ್ರಕೃತಿಯನ್ನು ಜಯಿಸಲು ಹೊರಟಾಗಲೂ ಅವನಿಗೆ ಅರಿಯದ ರೀತಿ ವಿಸ್ಮಯ ಗೋಚರಿಸಬಹುದು. ಅದು ತರ್ಕಕ್ಕೆ ನಿಲುಕದಿರಬಹುದು ಆದರೆ ಯೋಚನೆಗೆ ಅವನನ್ನು ಹಚ್ಚುವುದು ಖಂಡಿತವಲ್ಲವೇ ಹಾಗೇಯೇ ಈ ಕತೆಗಳಲ್ಲಿನ ಫ್ಯಾಂಟಸಿಯು ಮಗುವಿನಲ್ಲಿ ಆಶ್ಚರ್ಯಭರಿತ ನೋಟವನ್ನು ಉಂಟುಮಾಡಿ ಊಹೆಗಳನ್ನು ಕೆದುಕಿ, ಅನ್ವೇಷಣೆಗಳಿಗೆ ದಾರಿ ನೀಡುವ ಗುಣವನ್ನು ಪ್ರಚೋದಿಸುತ್ತದೆ. ಕೆಲವು ವರ್ತಮಾನದ ಸಮಸ್ಯೆಗಳಿಗೂ ಪರಿಹಾರವನ್ನು ಫ್ಯಾಂಟಸಿಯು ಹುಡುಕಿಕೊಡುವ ಗುಣವನ್ನು ತೋರಿಸುತ್ತದೆ.

### ೫.೧ ಫ್ಯಾಂಟಸಿಯ ಉದ್ದೇಶಗಳು

ಕತೆಗಳಲ್ಲಿ ಫ್ಯಾಂಟಸಿಯನ್ನು ತರುವುದರಿಂದ ಮಕ್ಕಳಿಗೆ ಹಾಗೂ ಮಕ್ಕಳ ಮೂಲಕ ಸಮಾಜಕ್ಕೆ ಉಂಟಾಗುವ ಪ್ರಯೋಜನಾಕಾರಿ ಅಂಶಗಳಿಂದಲೇ ಅದರ ಉದ್ದೇಶಗಳನ್ನು ಅರಿಯಬಹುದಾಗಿದೆ. ಮಗುವಿನ ವಯಸ್ಸಿನ ಬೆಳವಣಿಗೆಯನ್ನು ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಸರಿಯಾದ ಕ್ರಮದಲ್ಲಿ ಬೆಳೆಸಲು ಫ್ಯಾಂಟಸಿಯನ್ನು ಮಾಧ್ಯಮವಾಗಿರಿಸಿಕೊಂಡು ಅದರ ಉದ್ದೇಶಗಳನ್ನು ಅರಿಯಬಹುದು.

೧ ಜಾಗತಿಕ ಹಾಗೂ ತನ್ನ ಸುತ್ತಲಿನ ಪರಿಸರದ ಬದಲಾವಣೆಗೆ ಹೊಂದಿಕೊಳ್ಳಲು ಮಗುವಿಗೆ ಪೂರಕವಾದ ಜ್ಞಾನವನ್ನು ನೀಡುವುದು ಫ್ಯಾಂಟಸಿಯ ಉದ್ದೇಶವಾಗಿದೆ.

೨ ಮಗುವಿನ ಮನಸ್ಸಿನಲ್ಲಿ ಹುದುಗಿರುವ ಸುಪ್ತವಾದ ಅಗೋಚರ, ಆಲೋಚನ ಕ್ರಮದ ವಿಸ್ತರಣೆ ಸಾಧ್ಯವಾಗುತ್ತದೆ.

೩ ಹೊಸತನದ ದೃಷ್ಟಿ ಮತ್ತು ಸಂಶೋಧನಾತ್ಮಕ ಸೃಷ್ಟಿ.

೪ ತನ್ನ ಅನುಭವಗಳನ್ನು ಮರುಹೊಂದಿಸುವ, ಸಂಯೋಜಿಸುವ ತಂತ್ರಗಾರಿಕೆ ಬೆಳೆಯುತ್ತದೆ.

೫ ನಾವೀನ್ಯತೆಯೆಡೆಗಿನ ಊಹೆಗಳ ಸೃಷ್ಟಿ.
೬ ಕನಸುಗಳನ್ನು ಕಂಡು ಅವುಗಳನ್ನು ಸಾಕಾರಗೊಳಸಿಕೊಳ್ಳುವ ಹಂಬಲ.
೭ ಮಾನವ ಮತ್ತು ಇತರ ಜೀವಿಗಳ ನಡುವೆ ಸಾಮರಸ್ಯ ಏರ್ಪಡಿಸುವ ಯತ್ನ
೮ ಹಿಂದಿನ ವ್ಯವಸ್ಥೆಯಲ್ಲಿರುವ ಮೌಢ್ಯಗಳನ್ನು ಕಿತ್ತು, ವೈಜ್ಞಾನಿಕತೆಯ ಪ್ರೇರಣೆಗೆ ತುಡಿಯುವುದು.
೯ ಸೃಜನಶೀಲ ಪರಿಸರ, ವ್ಯಾಪಕವಾದ ಮತ್ತು ಅನಂತವಾದ ಪರಿಸರದಲ್ಲಿ ವಿಹರಿಸುವುದು ಮತ್ತು ಅಲ್ಲಿನ ವಸ್ತುಗಳೊಡನೆ ವ್ಯವಹರಿಸುವುದು.
೧೦ ಜಗತ್ತು ನನ್ನದು ಎಂಬ ವಿಶಾಲವಾದ ದೃಷ್ಟಿಕೋನ ಹೊಂದುವುದು.

ಮಗುವನ್ನು ವರ್ತಮಾನದಲ್ಲಿ ನಿಂತು ಭವಿಷ್ಯದ ಬದುಕನ್ನು ಕಟ್ಟಿಕೊಳ್ಳಲು ಫ್ಯಾಂಟಸಿಯು ಪ್ರೇರೇಪಿಸಿ, ಅದರ ಆಲೋಚನ ಕ್ರಮಗಳನ್ನು ಸಮಾಜಕ್ಕೆ ಪೂರಕವಾಗಿ ನಿಲ್ಲುವಂತೆ ಮಾಡುವಲ್ಲಿ ನೆರವಾಗುತ್ತದೆ. ಮಕ್ಕಳ ಫ್ಯಾಂಟಸಿಯು ನೇರವಾಗಿ ಮಗುವಿನ ಮನಸ್ಸನ್ನು ಅವಲಂಭಿಸಿರುವುದರಿಂದ ಅದರ ಭಾವನಾತ್ಮಕತೆಯನ್ನು ವಿಸ್ತರಿಸುವುದು, ಅಂತೆಯೇ ಸಂಕುಚಿತಗೊಳಸುವುದು ನಡೆಯುತ್ತದೆ. ಒಳ್ಳೆಯ ಉದ್ದೇಶಗಳೊಂದಿಗೆ ಕಾಣಸಿಕೊಳ್ಳುವ ಫ್ಯಾಂಟಸಿಯು ಮಗುವನ್ನು ಜಡತ್ವದಿಂದ ದೂರವಿರಿಸಿ, ಐತಿಹಾಸಿಕ ಮತ್ತು ವಾಸ್ತವಿಕ ಅಂಶಗಳಿಂದ ಕೂಡಿದ ಪರಿಸರವನ್ನು ದೂರಮಾಡಿ ತನ್ನ ಮನೋಸ್ವತಂತ್ರ ಆಲೋಚನೆಗಳನ್ನು ಬೆಳೆಸಿಕೊಳ್ಳಲು ಹದವಾದ ವಾತಾವರಣವನ್ನು ನಿರ್ಮಾಣ ಮಾಡಿಕೊಡುತ್ತದೆ. ಲೇಖಕನ ಆಲೋಚನ ಕ್ರಮಗಳು ಮಕ್ಕಳ ಮನಸ್ಸಿನ ಪರಕಾಯ ಪ್ರವೇಶಮಾಡಿ ಸೃಷ್ಟಿಸಿಕೊಳ್ಳುವುದರಿಂದ ಮಗುವಿಗೆ ಇಷ್ಟವಾಗುವ ಸೂತ್ರಗಳರುತ್ತವೆ. ಮಗುವಿನ ಪ್ರಪಂಚದ ವಸ್ತುಗಳು ಅನಾವರಣಗೊಂಡು ಚಮತ್ಕಾರವನ್ನು ಕಟ್ಟುತ್ತವೆ. ಓದುತ್ತಿರುವುದು ಕತೆಯೆಂಬ ಭಾವನೆಯಿಂದ ವಾಸ್ತವವನ್ನು ಮರೆತು ಮಗುವು ಕಲ್ಪನಾ ಲೋಕವನ್ನು ಒಪ್ಪಿಕೊಂಡು ಅಲ್ಲಿಯ ವಸ್ತುವಿನೊಂದಿಗೆ ವಿಹರಿಸುತ್ತದೆ. ಇದರಿಂದ ಫ್ಯಾಂಟಸಿಯ ಉದ್ದೇಶವು ನೇರವಾಗಿ ಈಡೇರಿದಂತಾಗುತ್ತದೆ. ಫ್ಯಾಂಟಸಿಯು ಮಾನವನ ಇಡೀ ಬದುಕಿನ ಕನಸುಗಳನ್ನು ಕಟ್ಟುವ ಮತ್ತು ಅವುಗಳನ್ನು ಕಾತರತೆಯಿಂದ ಪಡೆಯುವ ಹಂಬಲಿಕೆಯನ್ನು ಒಳಗೊಂಡು ಕೆಲಸಮಾಡುವಂತೆ ಪ್ರಚೋದಿಸುತ್ತದೆ. ಇದು ಮಕ್ಕಳನ್ನು ಸದಾ ಉತ್ಸಾಹಶೀಲರನ್ನಾಗಿಸಿ ಆಸಕ್ತಿಯನ್ನು ತುಂಬುತ್ತಿರುತ್ತದೆ ಎಂದು ಅನೇಕ ಲೇಖಕರು ಕಂಡುಕೊಂಡಿದ್ದಾರೆ. ಆದುದರಿಂದಲೇ ಮಕ್ಕಳ ಸಾಹಿತ್ಯವು ಫ್ಯಾಂಟಸಿಯನ್ನು ಹೇರಳವಾಗಿ ಬಯಸುತ್ತದೆ. ಜನಪದ ಸಾಹಿತ್ಯವು ಸಹ ಇದನ್ನು ಹೊರತಾಗಿ ಬೆಳೆದು ಬಂದಿಲ್ಲ. ಅಲ್ಲೆಲ್ಲಾ ಫ್ಯಾಂಟಸಿಯು ಹರಿದಾಡಿದೆ. ಮಾನುಷ, ಅಮಾನುಷ, ಅತಿಮಾನುಷ ಶಕ್ತಿಗಳು ಮೇಳೈಸಿವೆ. ಅದರ ಪರಂಪರೆಯಿಂದಲೇ ಭಾರತದ ಫ್ಯಾಂಟಸಿ ಚಿಗುರೊಡೆದಿದೆ ಎಂದರೂ, ವಿದೇಶಿಯರ ಪ್ರಭಾವವು ನಮ್ಮ ಲೇಖಕರ ಮೇಲೆ ಉಂಟಾದುದು ಅಷ್ಟೆ ಪ್ರಮಾಣದಲ್ಲಿ ಇದೆ.

## ೫.೨ ಫ್ಯಾಂಟಸಿಯ ನೆಲೆ

ಸಾಮಾನ್ಯವಾಗಿ ಮಕ್ಕಳ ಕತೆಗಳು ವ್ಯವಹಾರಿಕ ಜಗತ್ತಿನ ನಿಯಮಗಳು, ಕಟ್ಟಲೆಗಳು, ನಂಬಿಕೆಗಳು, ವಿಧಿ, ನಿಷೇಧಗಳು, ಲೋಕಾಚಾರಗಳು ವಾಸ್ತವವಾದಿ ನೆಲೆಯ ಕತೆಗಳಾಗಿರುತ್ತವೆ. ಆದರೆ ಫ್ಯಾಂಟಸಿ ಕತೆಗಳಲ್ಲಿ ಈ ಎಲ್ಲಾ ಗುಣಗಳು ತದ್ವಿರುದ್ಧವಾಗಿರುತ್ತವೆ.[೩೨] ಪ್ರಪಂಚದ ಅನೇಕ ವಸ್ತುಗಳು, ಸಂಗತಿಗಳು, ಬದುಕಿನ ಅನುಭವಗಳು ನಮ್ಮ ಮುಂದೆ ಕಂಡುಬರುವಂತೆ ಮನಸ್ಸು, ಬುದ್ಧಿ, ಅಹಂಕಾರ, ಪ್ರೀತಿ, ದ್ವೇಷಗಳು ಇಂದ್ರೀಯ ಅನುಭವಕ್ಕೆ ದಕ್ಕುತ್ತವೆ. ಅವುಗಳನ್ನು ತರ್ಕದಿಂಲೋ ಅನುಮಾನಗಳಿಂದಲೋ ಗ್ರಹಿಸುತ್ತೇವೆ. ನಾವು ಗ್ರಹಿಸಿದ ಗ್ರಹಿಕೆಯ ಮೇಲೆ ವಾಸ್ತವದ ಕತೆಗಳನ್ನು ಎಣೆಯುತ್ತೇವೆ. ಆದರೆ ತರ್ಕದಿಂದ ಗ್ರಹಿಸಲಾಗದ, ಪ್ರತ್ಯಕ್ಷ ಅನುಭವಕ್ಕೆ ಸಿಗಲಾರದ, ಇಂದ್ರಿಯಗಳಿಗೆ ರುಚಿಸಬಹುದಾದ, ಕಾಲ್ಪಾನಿಕ ಲೋಕದ ಅನಾವರಣವುಳ್ಳ, ಇಂದ್ರೀಯ ಜ್ಞಾನ ಸಂಪಾದನೆಗೆ ನೆರವಾಗಬಲ್ಲ ಕತೆಗಳು ಫ್ಯಾಂಟಸಿ ಕತೆಗಳೆನಿಸುತ್ತವೆ. ಕೆಲವು ಸಮಯದಲ್ಲಿ ವಾಸ್ತವವಾಗಿ ಗ್ರಹಿಸಿದ ಜ್ಞಾನವೂ ಕೂಡ ಅಪೂರ್ಣವಾಗಿದ್ದು ದೋಷಗಳಿಂದ ಕೂಡಿ ಗೊಂದಲತೆಯನ್ನು ಅನುಭವಿಸಿದನ್ನು ನಾವು ಕಾಣುತ್ತೇವೆ. ಅಂತಹ ಸ್ಥಿತಿಗಿಂತ ಅವಾಸ್ತವ ಫ್ಯಾಂಟಸಿಯ ಜ್ಞಾನ ಕಡಿಮೆ ಎನಿಸುವುದಿಲ್ಲ. ವಾಸ್ತವದಲ್ಲಿ ಸಿಗಲಾರದ ಅನುಭವಗಳ ಕೊರತೆಯನ್ನು ಫ್ಯಾಂಟಸಿಯು ಕಟ್ಟಿಕೊಟ್ಟು ತನ್ನ ಅಸ್ತಿತ್ವವನ್ನು ತಿಳಸುತ್ತದೆ. ಫ್ಯಾಂಟಸಿಯು ಮಕ್ಕಳಲ್ಲಿ ಅನುಭವದ ನೆಲೆಯನ್ನು ನಿರ್ಮಾಣ ಮಾಡಿಕೊಡುವುದಲ್ಲದೆ ವಾಸ್ತವದ ತದ್ವಿರುದ್ಧತೆಯನ್ನು ಆಲೋಚಿಸಿಕೊಳ್ಳಲು ಅವಕಾಶವನ್ನು ಮಾಡಿಕೊಡುತ್ತದೆ. ಕೆಲವು ಸಂದರ್ಭಗಳಲ್ಲಿ ಗಂಭೀರವಾದ ವಿಚಾರಗಳಿಂದಲೂ ಮಕ್ಕಳ ಮನಸ್ಸು ಘಾಸಿಗೊಳ್ಳುತ್ತದೆ. ಮಗುವಿನ ನಡತೆ, ಚಿಂತನೆ, ಕನಸು, ಚಡಪಡಿಸುವಿಕೆಗಳು ವಾಸ್ತವದ ಹಿನ್ನೆಲೆಯಿಂದಲೇ ಬಂದಿರುತ್ತವೆ ಎಂಬುದನ್ನು ನಂಬುವುದಾದರೆ ಇವುಗಳ ಪರಿಣಾಮಗಳು ಸಹ ಮಗುವನ್ನು ನಕರಾತ್ಮಕವಾಗಿ ಬೆಳೆಸಬಲ್ಲವು ಎಂಬುದನ್ನು ನಂಬಬೇಕಾಗುತ್ತದೆ. ಮಗುವಿನ ಮೇಲೆ ಬೀರುವ ಪರಿಣಾಮವು ಭಾವನಾತ್ಮಕವಾಗಿ ಘಾಸಿಗೊಳಿಸಿತೆ ವಿನಃ ವಿಸ್ತರಿಸಲಾರದು. ಆದರೆ ಫ್ಯಾಂಟಸಿಯಲ್ಲಿ ಇಂತಹ ಅಪಾಯಗಳಿರುವುದಿಲ್ಲ. ಫ್ಯಾಂಟಸಿಯು ಮಗುವಿಗೆ ಒಂದು ಕಲ್ಪನೆಯ ಸನ್ನಿವೇಶವಾಗಿ ಕತೆಗಳಲ್ಲಿ ಕಾಣಿಸಿಕೊಳ್ಳುವುದರಿಂದ ರಂಜನೆಯ ಸರಕಾಗಿ ಕಾಣಿಸುತ್ತದೆ. ಮುಂಚಿತವಾಗಿಯೆ ಇದು ಕಲ್ಪನೆ ಎಂದು ತಿಳಿದಿರುವುದರಿಂದ ಇದರಿಂದಾಗುವ ಭಯ, ಆತಂಕಗಳು ದೂರವಾಗುತ್ತವೆ. ಮಕ್ಕಳಲ್ಲಿ ಸ್ವಾಭಾವಿಕವಾಗಿ ಇರುವ ಕುತೂಹಲಗಳನ್ನು ವಿಸ್ತರಿಸಿ, ಭಾವನಾತ್ಮಕವಾಗಿ ಆಲೋಚನಕ್ರಮಗಳನ್ನು ಬೆಳೆಸುತ್ತದೆ. ಫ್ಯಾಂಟಸಿಯು ಕತೆಯೊಳಗಿನ ಅನುಭವನ್ನು ಮಕ್ಕಳಿಗೆ ಉಣಬಡಿಸುವುದಲ್ಲದೆ ಹೊರಜಗತ್ತಿನ ಅನುಭವವನ್ನು ವಿಸ್ತಾರಗೊಳಿಸಿ ಕೊಡುತ್ತದೆ. ಮಗುವಿನ ಅನುಭವದ ಗ್ರಹಣದ ನೆಲೆಯನ್ನು ತದ್ವಿರುದ್ಧವಾಗಿ ಕಲ್ಪಿಸುತ್ತದೆ. ಫ್ಯಾಂಟಸಿ ನೆಲೆಯು ಯಾವಾಗಲೂ ವಾಸ್ತವದ ನೆಲೆಗೆ ವಿರುದ್ಧವಾಗಿರುತ್ತದೆ.

---

[೩೨] ಸಾಹಿತ್ಯದಲ್ಲಿ ಫ್ಯಾಂಟಸಿ, ಲೇ: ಎಮ್. ಎಸ್.ಕೆ.ಪ್ರಭು, ೧೯೯೨, ಪುಟ ೩.

ಜಗತ್ತು ಆಧುನಿಕತೆಯ ವೇಗದಲ್ಲಿ ಸಾಗಿದಂತೆ ನೂತನ ಆವಿಷ್ಕಾರಗಳ ಭಾವನೆಗೆ ತುಡಿಯುವ ಮನುಷ್ಯನ ಪ್ರಯೋಗಶೀಲತೆಯು ಅವನದೇ ಆದ ಚಿಕ್ಕ ಆಕೃತಿಯಾದ ಮಗುವಿನಲ್ಲು ಹೊಸತನವು ಮೊಳಕೆಯೊಡೆಯುತ್ತದೆ. ಮಕ್ಕಳ ಭಾವನೆ ಮತ್ತು ಆಲೋಚನೆಗಳ ನಡುವೆ ವೈಜ್ಞಾನಿಕತೆಯು ನುಸುಳದಾಗ ಅದರ ಅನುಕೂಲ ಪಡೆಯುವ ಸಲುವಾಗಿ ತಾಂತ್ರಿಕ ಆವಿಷ್ಕಾರಗಳುಂಟಾದವು. ಮನುಷ್ಯನು ತನ್ನ ಮೂಲಭೂತ ವಸ್ತುಗಳ ಶೋಧನೆಯಲ್ಲಿ ತೊಡಗಿಕೊಂಡು ವೈಜ್ಞಾನಿಕ ಚಿಂತನೆಗಳನ್ನು ಬೆಳೆಸಿಕೊಂಡನು. ಇದರ ಪರಿಣಾಮವಾಗಿ ಹಿಂದೆ ನೆಲೆಸಿದ್ದ ವಾಸ್ತವ ನೆಲೆಯ ಸಾಂಪ್ರದಾಯಗಳು, ನಂಬಿಕೆಗಳು, ಕಟ್ಟುಪಾಡುಗಳಿಗೆ ವೈಜ್ಞಾನಿಕ ಸ್ಪರ್ಷ ಸಿಕ್ಕಿ ಬದಲಾಗತೊಡಗಿದವು. ವಾಸ್ತವ ಬಯಕೆಗಿಂತ ಪ್ರಕೃತಿಯಲ್ಲಿ ಹುದುಗಿರುವ ರಹಸ್ಯಗಳನ್ನು ಊಹಿಸಿಕೊಂಡು ಹೊರಹಾಕುವ ತವಕದಲ್ಲಿ ಅವಾಸ್ತವ ಅಂಶಗಳು ನುಸುಳಿದವು. ಅವಾಸ್ತವಗಳ ರೋಚಕತೆ ಜನರಿಗೆ ಖುಷಿ ಯನ್ನು ತಂದಂತೆ ಮಕ್ಕಳಿಗೂ ರುಚಿಸಿತು. ವಾಸ್ತವ ದೃಷ್ಟಿಯಲ್ಲಿ ರೂಪಿತವಾದ ಚಿತ್ರಣವನ್ನು ಬದಲಾಯಿಸುವ ಸಲುವಾಗಿ ಫ್ಯಾಂಟಸಿಯು ಹುಟ್ಟಿತು. ಇದರಲ್ಲಿ ಮಕ್ಕಳಿಗಾಗಿನ ಕನಸುಗಳು, ಆದರ್ಶಜೀವನದ ಕಲ್ಪನೆಗಳು, ಸಾಮಾಜಿಕ ಸಾಮರಸ್ಯ ಕಾಳಜಿ, ಬೆರಗುಗಣ್ಣಿನ ನೋಟ, ಕುತೂಹಲಕಾರಿ ಮನಸ್ಸು, ಸಾಧಿಸುವ ಹುಮ್ಮಸ್ಸು, ಹೊಸ ದಾರಿಗಳ ಹುಟುಕಾಟ, ಆವಿಷ್ಕಾರಕ ಪ್ರವೃತ್ತಿಗಳು ಮಕ್ಕಳಿಗೆ ವ್ಯಾಪಕವಾಗಿ ಹುಟ್ಟಿಕೊಂಡು ವಾಸ್ತವ ಅಂಶಗಳಿಂದ ಬಿಡುಗಡೆಗೆ ತುಡಿಯುವ ಹಂಬಲ ಹೆಚ್ಚಿತು.

ಯಕ್ಷ ಮತ್ತು ಯಕ್ಷಿಣಿಯರ ಕತೆಗಳಿಗೆ ಇಲ್ಲಿ ಹೇರಳವಾದ ಮನ್ನಣೆ ದೊರೆತಂತೆಯೇ ವೈಜ್ಞಾನಿಕ ಕತೆಗಳಿಗೂ ದೊರೆಯಿತು. ಪುರಾಣದ ಕತೆಗಳಿಗು ಪುನರುಜ್ಜೀವನ ಸಿಕ್ಕಿತು. ಅಡುಗೂಲಜ್ಜಿಯ ಕತೆಯ ಅತಿಮಾನುಷ ಪಾತ್ರಗಳು, ಅಸಾಧಾರಣ ಘಟನೆಗಳು, ಅದ್ಭುತ ಚಮತ್ಕಾರಗಳು, ಇಂದ್ರಜಾಲ, ಮಾಯಲೋಕಗಳ ಸೃಷ್ಟಿಯ ಮೆರಗು ಫ್ಯಾಂಟಸಿಯ ರೂಪತಳೆದು ಕನ್ನಡದ ಮಕ್ಕಳಿಗೆ ಕಾಣಿಸಿಕೊಂಡಿತು. ಕತೆ ಯಾವುದೇ ಯುಗದಲ್ಲಿ ನಡೆದರೂ ಫ್ಯಾಂಟಸಿಯ ನಿರೂಪಣೆಯಿಂದಾಗಿ ವಾಸ್ತವದ ಹತ್ತಿರಕ್ಕೆ ಮಕ್ಕಳನ್ನು ತಂದು ನಿಲ್ಲಿಸುತ್ತದೆ. ಕನ್ನಡ ಜನಪದದ 'ಗೋವಿನ ಹಾಡು' ಕತೆಯು ಸತ್ಯದ ಕಾಲಘಟ್ಟದಲ್ಲಿ ನೆಲೆನಿಂತ ಮಾನವ ಗುಣಧರ್ಮದ 'ನುಡಿದಂತೆ ನಡೆಯುವುದ'ನ್ನು ಪ್ರಾಣಿಗಳ ಮೂಲಕ ನಿರೂಪಿಸುತ್ತದೆ. ಆ ಕಾಲಕ್ಕೆ ನೆಲೆನಿಂತ ಕಾಲಧರ್ಮವನ್ನು ಸಾರಿದ ಕತೆಯಾದರೂ ಅಲ್ಲಿ ಪ್ರಾಣಿಗಳು ವಾಸ್ತವವಾಗಿ ಮಾತನಾಡುವಂತಿಲ್ಲ ಅವು ಮೂಕವಾದವು. ಪ್ರಾಣಿ ಮಾತನಾಡುವುದು ಅವಾಸ್ತವದ ಲಕ್ಷಣವೆನ್ನಬೇಕು. ಆದರೆ ಕತೆಯ ವಸ್ತುವಿನ ಮುಂದೆ ಫ್ಯಾಂಟಸಿಯು ಗೌಣವಾಗಿ ಕಾಣಿಸುತ್ತದೆ. ಹುಲಿಯು ಸಹ ಅಲ್ಲಿ ಸುಶಿಕ್ಷಿತ ನಾಗರಿಕ ಪ್ರಜ್ಞೆಯನ್ನು ತಳೆದು, ಕೊಲ್ಲುವುದರ ಬದಲು ಪಶ್ಚಾತಾಪ ಹೊಂದುವುದು. ವಾಸ್ತವದಲ್ಲಿ ಹುಲಿ ಕ್ರೂರಮೃಗವಾದರೂ ಫ್ಯಾಂಟಸಿಯಲ್ಲಿ ತದ್ವಿರುದ್ಧತೆಯನ್ನು ಪ್ರಕಟಿಸುತ್ತದೆ. ಇವು ವಾಸ್ತವ ಸಮಾಜದಲ್ಲಿ ಮಾನವನು ಬಯಸುವ ಸೂಕ್ಷ್ಮ ಪ್ರಜ್ಞೆಗಳು. ಆದರೆ ಫ್ಯಾಂಟಸಿಯಲ್ಲಿ ಪ್ರಾಣಿಗಳೂ ಮಾನವನಂತೆ ಕಾಲಧರ್ಮದ ಮೌಲ್ಯಗಳನ್ನು ಕಾಪಾಡಿಕೊಂದು ಬಂದಿರುವುದನ್ನು ಕಾಣುತ್ತೇವೆ. ಇದೊಂದು ಅವಾಸ್ತವದ ಸಂಗತಿಗೆ ಉದಾಹರಣೆ ಎನ್ನಬಹುದು. ಪ್ರಾಣಿಗಳು ಮಾನವನಂತೆ ವ್ಯವಹಾರಿಕ ಬಾಂಧವ್ಯವನ್ನು ಹೊಂದುವುದು, ಮಾನವನ ಉಡುಪು ಧರಿಸುವುದು, ವೃತ್ತಿ ಮಾಡುವುದು, ಅವನಂತೆ

ಸಂಭಾಷಿಸುವುದು ಎಲ್ಲವೂ ಕಾಲಧರ್ಮವು ಸ್ಥಾಪಿಸಿದ ವಾಸ್ತವ ನಂಬಿಕೆಗಳನ್ನು ಮುರಿದು ಬೆಳೆದುದಾಗಿವೆ. ಫ್ಯಾಂಟಸಿಯು ಕನ್ನಡದಲ್ಲಿ, ಜನಪದದಲ್ಲಿ ಮೊದಲಿಗೆ ಕಾಣಿಸಿಕೊಂಡರೂ ಅಲ್ಲಲ್ಲಿ ಅಪೇಕ್ಷೆಯಿಂದ ತಂದದ್ದು ಇದೆ. ನಾ. ಕಸ್ತೂರಿಯವರ 'ಪಾತಾಳದಲ್ಲಿ ಪಾಪಚ್ಚಿ'ಯು ಒಂದು ರೂಪಾಂತರವಾದ ಕತೆಯಾದರೂ ಕನ್ನಡದಲ್ಲಿ ಫ್ಯಾಂಟಸಿಯನ್ನು ಪರಿಚಯಿಸುವ ಕೆಲಸಮಾಡಿದೆ. ಮೊಲದ ಬಿಲವನ್ನು ಹೊಕ್ಕುವ ಆಲಿಸಳು ಅದ್ಭುತವದ ಲೋಕವೊಂದನ್ನು ಕಾಣುತ್ತಾಳೆ. ವಾಸ್ತವ ಲೋಕದ ಪ್ರಜೆಯಾದ ಆಲಿಸಳು ತನ್ನ ಜಾಗೃತ ಪ್ರಜ್ಞೆಯಿಂದ ಅವಾಸ್ತವ ಅದ್ಭುತ ಲೋಕದಲ್ಲಿ ವಿಹಾರಿಸುತ್ತಾಳೆ. ಅವಳ ಆಗಮನದಿಂದ ಪಾತಾಳ ಲೋಕದ ಪ್ರಾಣಿಗಳಿಗೆ ಮಾನವ ತಿಳಿವಳಿಕೆ ಬರುತ್ತದೆ. ಇದೆಲ್ಲವೂ ಓದುಗನಿಗೆ ಜಾದೂ ಎನಿಸಿದರು ಅವಾಸ್ತವದ ರಮ್ಯತೆ ಸೆಳೆಯುತ್ತದೆ. ವಾಸ್ತವದಲ್ಲಿ ಪ್ರಾಣಿಗಳು ಮೂಕವಾಗಿರುತ್ತವೆ. ಆದರೆ ಫ್ಯಾಂಟಸಿಯಲ್ಲಿ ಪ್ರಾಣಿಗಳದೇ ಪ್ರಪಂಚ ತೆರೆದುಕೊಳ್ಳುತ್ತದೆ. ಇಲ್ಲಿ ಮಾನವರೊಡನೆ ಅವು ಸಂಭಾಷಿಸುತ್ತವೆ. ಅವುಗಳು ಸಹ ಮನುಷ್ಯರಂತೆ ಭಾವನೆಗಳನ್ನು, ಸಂವೇದನೆಗಳನ್ನು, ವ್ಯವಹಾರಿಕತೆಯನ್ನು, ಸಂಬಂಧಗಳನ್ನು ಪ್ರಕಟಿಸಬಲ್ಲವು. ಇದು ಫ್ಯಾಂಟಸಿಯಲ್ಲಿ ಮಾತ್ರ ಸಾಧ್ಯವಾಗುವಂತದ್ದು. ಆದುದರಿಂದ ಇದರ ಘನತೆ ಮತ್ತು ಗಂಭೀರತೆಯನ್ನು ನಾವು ಪರಿಗಣಿಸಬೇಕು. ಅದರ ಕೆಲವು ಲಕ್ಷಣಗಳು ಸಾಮಾನ್ಯ ಕತೆಗಳಗಿಂತ ವಿಭಿನ್ನವಾಗಿ ಗೋಚರಿಸುವುದನ್ನು ಕಾಣುತ್ತೇವೆ.

### ೫.೩ ಮಕ್ಕಳ ಕತೆಗಳ ಸಾಮಾನ್ಯ ಲಕ್ಷಣಗಳು

ಮಕ್ಕಳ ಕತೆಗಳು ಎಂದರೆ ದೊಡ್ಡವರ ಕತೆಯ ಸಂಸ್ಕರಿಸಿದ ಭಾಗವೆಂದು ಕಾಣಿಸಿಕೊಂಡಿದ್ದು, ಅವರ ಕತೆಯ ಲಕ್ಷಣಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಆದರೂ ಮಕ್ಕಳ ವಿಷಯದಲ್ಲಿ ಕೆಲವು ಅಂಶಗಳನ್ನು ಅಪೇಕ್ಷಣೀಯವಾಗಿ ತರಲಾಗುತ್ತದೆ. ಆಶಯಗಳನ್ನು ಪ್ರಧಾನವಾಗಿರಿಸಿಕೊಂಡು ಸಂಗತಿಗಳನ್ನು ಎಣೆಯಲಾಗಿರುತ್ತದೆ. ಇವುಗಳನ್ನು ಗಮನಿಸಿದಾಗ ಕೆಲವು ಅಂಶಗಳನ್ನು ಮುಖ್ಯವಾಗಿ ಆರಿಸಿ ನೋಡಬಹುದು.

೧ ಮಕ್ಕಳ ಕತೆಗಳಿಗೆ ನಿರ್ದಿಷ್ಟವಾದ ಸನ್ನಿವೇಶ ಇರುತ್ತದೆ.

೨ ಕತೆಯ ಪ್ರಧಾನವಾದ ವಸ್ತು ಸಂಘರ್ಷತೆಯಿಂದ ಕೂಡಿರುತ್ತದೆ.

೩ ಪಾತ್ರಗಳು ಸಹಾ ಸಂಘರ್ಷಮಯವಾಗಿರುತ್ತವೆ

೪ ಪಾತ್ರಗಳು ಮತ್ತು ಸಂಘರ್ಷ ವಾಸ್ತವ ಬದುಕಿನ ಅಂಶಗಳಾಗಿರುತ್ತವೆ.

೫ ಕತೆಯ ವಸ್ತು ಮಾನವನ ಜೀವನದ ಅನುಭವಕ್ಕೆ ತಕ್ಕಂತೆ ಮೂಡಿಬರುತ್ತದೆ.

೬ ಗ್ರಹಿಸಿದ್ದನ್ನು ತನ್ನ ಗ್ರಹಿಕೆಯ ಇತಿಮಿತಿಯಲ್ಲಿ ವಸ್ತುವಾಗಿ ತರಲಾಗುತ್ತದೆ.

೭. ಮನುಷ್ಯ ಮತ್ತು ಪ್ರಾಣಿಗಳು ಎದುರಾದರು ಅವರ ಜೀವನ ಶೈಲಿಯು ಪ್ರತ್ಯೇಕವಾಗಿ ಕಾಣಿಸಿಕೊಳ್ಳುತ್ತದೆ.

೮ ಊಹೆ, ಕಲ್ಪನೆಗಳು ಕನಸುಗಳಂತೆ ಮೂಡಿರುತ್ತವೆ, ಕಾಣಿಸಿಕೊಳ್ಳುತ್ತವೆ.

೯ ಬದುಕಿನ ಸಮಸ್ಯೆಗಳು, ರಸಗಳಿಗೆಗಳು ಸಂಗತಿಗಳಾಗಿ ಕಾಣಿಸಿಕೊಳ್ಳುತ್ತವೆ.

೧೦ ಆದರ್ಶ, ನೀತಿ ಪಾಲನೆಯು ಸಾಮಾನ್ಯ ಆಶಯವಾಗಿರುತ್ತದೆ.

೧೧ ಸುಃಖಾಂತ್ಯವು ಸಹಜ ಲಕ್ಷಣವಾಗಿರುತ್ತದೆ.

೧೨ ಮಕ್ಕಳ ಕತೆಗಳು, ವಸ್ತು, ಪಾತ್ರ, ಭಾಷೆ, ಸಂಗತಿಗಳಲ್ಲಿ ಇತಿಮಿತಿಗಳನ್ನು ಅನುಸರಿಸುತ್ತವೆ.

**೫.೪ ಫ್ಯಾಂಟಸಿಯ ಲಕ್ಷಣಗಳು**

ಫ್ಯಾಂಟಸಿ ಕತೆಗಳು ಸಹಾ ಅನೇಕ ಅಂಶಗಳಿಂದ ಕೂಡಿದ್ದು ವಾಸ್ತವ ಕತೆಗಳ ಹಿನ್ನೆಲೆಯಲ್ಲಿಯು ಕಾಣಿಸಿಕೊಳ್ಳುತ್ತವೆ. ಮೇಲಿನ ಅಂಶಗಳ ಗ್ರಹಿಕೆಯೊಂದಿಗೆ ಫ್ಯಾಂಟಸಿಯನ್ನು ಸಮೀಕರಿಸಿ ನೋಡುವುದಲ್ಲ. ಅವು ಸಾಮಾನ್ಯವಾಗಿ ಮಕ್ಕಳ ಕತೆಗಳಗಿಂತ ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ ಎಂಬುದ ಇಲ್ಲಿಯ ಆಶಯ. ಮಕ್ಕಳ ಕತೆಗಳಲ್ಲಿನ ಫ್ಯಾಂಟಸಿಯ ಲಕ್ಷಣಗಳು ಸಾಮಾನ್ಯ ಕತೆಗಳ ಲಕ್ಷಣಗಳಗಿಂತ ಭಿನ್ನವಾಗಿರುವುದರಿಂದ ಅವುಗಳನ್ನು ತೌಲನಿಕವಾಗಿ ತಿಳಿಯುವ ಸಲುವಾಗಿ ನೋಡಲಾಗಿದೆ.

೧ ಫ್ಯಾಂಟಸಿಯಲ್ಲಿ ಪ್ರಾಣಿಗಳು ಮನುಷ್ಯರೊಂದಿಗೆ, ಮನುಷ್ಯರು ಪ್ರಾಣಿಗಳೊಂದಿಗೆ, ಸುಲಭವಾಗಿ ಮಾತನಾಡುವರು.

೨ ಪ್ರಾಣಿಗಳು ಸಹ ಮಾನವರಂತೆ ಸಹಜ ಬದುಕನ್ನು ಹೊಂದಿದ್ದು ಮಾನವರಂತೆಯೇ ವರ್ತಿಸುತ್ತವೆ.

೩ ವಾಸ್ತವ ಲೋಕಕ್ಕೆ ವಿರುದ್ಧವಾದ ವಿಚಿತ್ರವಾದ ಲೋಕವನ್ನು ಇಲ್ಲ ಕಾಣಬಹುದು.

೪ ವಾಸ್ತವ ಪ್ರಪಂಚದ ವರ್ತಮಾನಗಳಗೂ ಫ್ಯಾಂಟಸಿಯ ವರ್ತಮಾನಗಳಗು ತದ್ವಿರುದ್ಧತೆಗಳಿರುತ್ತವೆ.

೫ ವಾಸ್ತವದ ಪ್ರಜ್ಞೆಯುಳ್ಳ ಪಾತ್ರಗಳಿಂದ ಕೂಡಿದ್ದರೂ ಫ್ಯಾಂಟಸಿಯಲ್ಲಿ ಅದ್ಭುತಗಳನ್ನು ಸೃಷ್ಟಿಸಿಕೊಳ್ಳುತ್ತವೆ.

೬ ಫ್ಯಾಂಟಸಿಯೊಳಗೂ ವಾಸ್ತವದ ಪ್ರಜ್ಞೆಯೊಂದಿಗೆ ಪಾತ್ರಗಳು ವರ್ತಿಸುತ್ತವೆ.

೭ ವಾಸ್ತವದಲ್ಲಿ ಒಂಟಿತನ ಅನುಭವಿಸುವ ಪಾತ್ರವು ಸಹಾ ಫ್ಯಾಂಟಸಿಯಲ್ಲಿ ಎಲ್ಲಾ ಪಾತ್ರಗಳೊಂದಿಗೆ ವಿಹರಿಸುತ್ತದೆ.

೮ ಫ್ಯಾಂಟಸಿಯಲ್ಲಿ ಕಲ್ಪನೆಯ ಸೃಷ್ಟಿ, ಊಹೆಗಳೇ ತುಂಬಿರುತ್ತವೆ.

೯ ಫ್ಯಾಂಟಸಿ ಲೋಕದ ವ್ಯಾಪ್ತಿಯು ಅನಂತವಾದುದು ಮತ್ತು ಬಹು ವಿಸ್ತಾರವಾದುದು.

೧೦ ಫ್ಯಾಂಟಸಿಯನ್ನು ಸೃಷ್ಟಿಸಿಕೊಳ್ಳುವ ನೋಟಕ್ಕೆ ಇತಿಮಿತಿಗಳ ನಿರ್ಬಂಧವಿಲ್ಲ.

ಹೀಗೆ ಫ್ಯಾಂಟಸಿಯು ತನ್ನದೇಯಾದ ಲಕ್ಷಣಗಳಿಂದ ಕೂಡಿದ್ದು, ಓದುಗರನ್ನು ದಿಗ್ಭ್ರಮೆಗೊಳಿಸುತ್ತದೆ ಹಾಗೂ ತನ್ನದೆಯಾದ ಸೆಳೆತವನ್ನು ಹೊಂದಿರುವುದರಿಂದಲೇ ಕತೆಗಳಲ್ಲಿ ಹಾಸುಹೊಕ್ಕಿ ತನ್ನ ಅಗತ್ಯತೆಯನ್ನು ಸಾದರಪಡಿಸಿಕೊಂಡಿದೆ. ಫ್ಯಾಂಟಸಿಯು ವಾಸ್ತವವಾಗಿ ಮಕ್ಕಳು ವಂಚಿತವಾಗಿರುವ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ತೀವ್ರವಾಗಿ ಸೆಳೆಯುತ್ತದೆ.

ಸಿಯಾಲಿನ್ ಗ್ರೀನ್ ಎಂಬ ಮನಶಾಸ್ತ್ರಜ್ಞನ ಮಾತಿನಂತೆ 'ಮಾನವನ ಮನಸ್ಸಿನ ಅತ್ಯಂತ ಗಮನಾರ್ಹ ಲಕ್ಷಣವೆಂದರೆ ಇತಿ-ಮಿತಿಗಳ ವ್ಯಾಪಿಯೇ ಆಗಿದೆ'. ಆದರೆ ಫ್ಯಾಂಟಸಿಯು ಈ ಎಲ್ಲಾ ಇತಿ-ಮಿತಿಗಳನ್ನು ಮೀರಿ ಮನಸ್ಸನ್ನು ಬೇರೆಡೆಗೆ ಕೊಂಡೊಯ್ಯಬಲ್ಲದಾಗಿದೆ. ಹೊಸಪ್ರಪಂಚದ ಹೊಸ ಅನುಭವಗಳನ್ನು ಮನಸ್ಸಿನ ಸಾಧ್ಯತೆಗಳನ್ನಾಗಿಸುವ ಕಾರ್ಯಮಾಡಿ ಮನಸ್ಸನ್ನು ವಿಸ್ತರಿಸುತ್ತದೆ.
ಫ್ಯಾಂಟಸಿಯ ಎಲ್ಲಾ ಗುಣಗಳು ಶ್ರೇಷ್ಠ ಎನ್ನಲಾಗುವುದಿಲ್ಲ. ಕೆಲವು ಅವಗುಣಗಳ ಅಪಾಯವನ್ನು ಸಹ ಮಕ್ಕಳ ಕತೆಗಳು ಅನುಭವಿಸಬೇಕಾಗುತ್ತದೆ. ಸಮಾಜದಲ್ಲಿ ಭದ್ರವಾಗಿ ಬೇರೂರಿ ನಿಂತಿರುವ ಕೆಲವು ಸಾಂಸ್ಕೃತಿಕ ವಿಚಾರಗಳನ್ನು ಮುರಿಯುವುದರ ಜೊತೆಗೆ, ನಂಬಿಕೆ, ವಿಶ್ವಾಸ, ವಿಚಾರ, ತರ್ಕಗಳನ್ನು ಬದಿಗೆ ಸರಿಸಿಬಿಡುತ್ತದೆ. ವ್ಯವಹಾರಿಕ ಜಗತ್ತಿನ ಕಟ್ಟಲೆಗಳನ್ನು, ಕಟ್ಟುಪಾಡುಗಳನ್ನು ಗಾಳಿಗೆ ತೂರಿಬಿಡುವ ಅಪಾಯವಿದೆ. ಅಸಂಗತವಾದುದನ್ನು ಸೃಷ್ಟಿಸಿ, ಸಂಗತವಾದುದನ್ನು ಮರೆಮಾಚಿಸುತ್ತದೆ. ಮಾನವ ಜಗತ್ತು ಇಂದು ಅಸ್ತಿತ್ವದಲ್ಲಿರುವುದನ್ನು ಬಯಸುತ್ತದೆಯೇ ವಿನಹಃ ನಾಳಿನ ಅಸ್ತಿತ್ವವನಲ್ಲ ಎಂಬ ಅರಿವನ್ನು ಫ್ಯಾಂಟಸಿ ಲೆಕ್ಕಚಾರ ಹಾಕದೆ ಆವರಿಸಿಕೊಂಡು ತುಂಬಿಕೊಳ್ಳುತ್ತದೆ. ಆದರೆ ಇಂದಿನ ಮಕ್ಕಳು ಮುಂದಿನ ಪ್ರಜೆಗಳೆಂದು ಭಾವಿಸುವ ಸಮಾಜಕ್ಕೆ ಇದು ಮಕ್ಕಳನ್ನು ಅಣಿಗೊಳಿಸಲಾರದು ಎಂಬ ಅಪವಾದವು ಇದೆ.

### ೫.೫ ಫ್ಯಾಂಟಸಿ ಭಾಷೆ ಮತ್ತು ಗುಣಾವಗುಣಗಳು

ಫ್ಯಾಂಟಸಿಯಲ್ಲಿ ಬಳಕೆಯಾಗುವ ಭಾಷೆಯಲ್ಲಿನ ಅಂಶಗಳನ್ನು ನಾವು ಅಗತ್ಯವಾಗಿ ಪರಿಗಣಿಸಬೇಕಾಗಿದೆ. ಅದು ವಾಸ್ತವವಾಗಿ ಇರುವ ಭಾಷೆಗಿಂತ ಭಿನ್ನತೆಯನ್ನು ಹೊಂದಿದೆ. ರಮ್ಯತೆಯನ್ನು ಸೃಷ್ಟಿಸುವ ಸಲುವಾಗಿ ಶಬ್ದಗಳು, ನುಡಿಗಟ್ಟುಗಳು, ರೂಪಕಗಳನ್ನು ಪ್ರಭಾವಶಾಲಿಯಾಗಿ ಬಳಸಲಾಗುತ್ತದೆ. ಇದರಿಂದಾಗಿ ಮಕ್ಕಳ ಅನುಭವಕ್ಕಿಂತ ಭಾಷೆಯ ಅಬ್ಬರ ಅನುರಣಿಸುವುದನ್ನು ಕಾಣುತ್ತೇವೆ. ಭಾಷೆಯು ಸೃಷ್ಟಿಸಿಕೊಡುವ ಸನ್ನಿವೇಶವು ಮಕ್ಕಳ ಮನಸ್ಸಿನ ಕಲ್ಪನೆಯನ್ನು ವಿಸ್ತರಿಸಲಾರದನ್ನು ನೋಡಬಹುದಾಗಿದೆ. ಭಾಷೆಯಿಂದ ಹೊರಡುವ ಜ್ಞಾನವೂ, ಅರ್ಥವೂ ಸಂಕುಚಿತವಾಗಿ ಕಾಣುತ್ತದೆ. ಅನುಭವವಿಲ್ಲದ ಸಂಕುಚಿತ ಮನಸ್ಸು ಸೃಷ್ಟಿಸುವ ಕಲ್ಪನಾ ಜಗತ್ತು ಅಸ್ಪಷ್ಟವೂ, ಅನಿರ್ದಿಷ್ಟವು ಆಗಿದ್ದು ಅಪರಿಪೂರ್ಣತೆಯನ್ನು ಮಕ್ಕಳು ಅನುಭವಿಸುವಂತಾಗುತ್ತದೆ. ಕಾಣದ ಯಾವುದೋ ಲೋಕವನ್ನು ಸೃಜಿಸುವಾಗ ಮಕ್ಕಳ ಮನಸ್ಸು ತನ್ನ ವಾಸ್ತವ ಅನುಭವದ ಗ್ರಹಿಕೆಯನ್ನೇ ಅಲ್ಲಿನ ವಸ್ತುಗಳೆಂದು ತಿಳಿಯುತ್ತವೆ. ಇದರಿಂದ ಫ್ಯಾಂಟಸಿಯ ಭಾಷೆ ಹೇಳುವುದೊಂದಾದರೆ ಅರ್ಥೈಕೆ ಮತ್ತೊಂದಾಗುವ ಸಂಭವವುಂಟಾಗುತ್ತದೆ.

ವಾಸ್ತವದ ಕತೆಗಳಲ್ಲಿ ಸಾಹಿತ್ಯದ ಅನೇಕ ಪ್ರತಿಮೆಗಳಿಂದ ಕಂಡುಕೊಂಡ ಬೇರೆ ಬೇರೆ ಭಾಷಾ ರೂಪಕಗಳು ಪ್ರಯೋಗವಾಗುತ್ತವೆ. ಆದರೆ ಫ್ಯಾಂಟಸಿಯು ಒಂದೇ ಪ್ರತಿಮೆಯಲ್ಲಿ ಎಲ್ಲವನ್ನು ಹೇಳುವ ಪ್ರಯತ್ನಗಳುಂಟಾಗುತ್ತವೆ. ಫ್ಯಾಂಟಸಿಯು ಹೊಸ ಭಾಷೆ, ಹೊಸ ಲಯಗಾರಿಕೆ, ಭಾಷೆಯ ತಂತ್ರಗಾರಿಕೆಯನ್ನು ಬಯಸುತ್ತದೆ. ಅದು ವಾಸ್ತವದ ಭಾಷೆಗಿಂತ ಭಿನ್ನವಾದ ಭಾಷೆಯನ್ನು ಬಯಸುವುದರಿಂದ ಮಕ್ಕಳಲ್ಲಿನ ಗ್ರಹಣಶಕ್ತಿಗೆ ಹಿನ್ನಡೆಯುಂಟಾಗಬಹುದು. ಸಾಹಿತ್ಯದಲ್ಲಿ ಜಡವಾದ,

ಸವಕಳಿಯಾದ ಭಾಷೆಯನ್ನು ಇದು ಅಲ್ಲಗಳೆದು ತನ್ನದೆಯಾದ ಗಟ್ಟಿತನವುಳ್ಳ ಧ್ವನಿಪೂರ್ಣ ಭಾಷೆಯನ್ನು ನಿರೀಕ್ಷಿಸುತ್ತದೆ. ಜಗತ್ತಿನ ಆಲೋಚನಾ ಕ್ರಮವನ್ನು ಬಳಕೆಯಲ್ಲಿರು ಭಾಷೆಯಲ್ಲಿ ಬಳಸಿ, ಅದನ್ನು ವಿಡಂಬನಾತ್ಮಕತೆಯಿಂದ ಕಂಡದ್ದನ್ನು ಇಲ್ಲಿ ನೋಡಬಹುದಾಗಿದೆ. ಪ್ರಶ್ನೆಗಳ ಸರಣಿಯು, ಸಂಭಾಷಣಾ ವಿಧಾನಗಳು, ನಾಟಕೀಯತೆಯ ಅಂಶಗಳು ಇಲ್ಲಿ ಭಾಷೆಯ ಜೀವಾಳವಾಗಿ ಕಾಣಸಿಗುತ್ತವೆ. ಯಕ್ಷ ಯಕ್ಷಿಯರು ಸಹಾ ಮನುಷ್ಯರ ವಾಸ್ತವದ ಭಾಷೆಯನ್ನು ಬಳಸಿದಂತೆ ವೃಕ್ಷ-ಪಕ್ಷಿಗಳು ಆ ಭಾಷೆಯನ್ನೆ ಬಳಸುವುದು ಕಂಡುಬರುತ್ತದೆ. ಭಾಷೆಯ ಅಮಲಿಲ್ಲದೆ ಫ್ಯಾಂಟಸಿ ಸಾಧ್ಯವಾಗಲಾರದು ಎಂದು ಎಂ.ಎಸ್. ಕೆ.ಪ್ರಭುರವರು ಹೇಳುತ್ತಾ ಭಾಷೆಯ ಅಮಲಿಳಿದಾಗ ಫ್ಯಾಂಟಸಿ ಕರಗಿಹೋಗಿ ಕನಸ್ಸೊಡೆದಂತಹ ಅನುಭವವಾಗುತ್ತದೆ ಎನ್ನುತ್ತಾರೆ.[೩೩] ಭಾಷೆಯು ಪ್ರತಿಮೆಗಳ ಸಂಗ್ರಹಾಲಯದಂತೆ ಕೆಲಸಮಾಡಿದಾಗ ಮಾತ್ರ ಫ್ಯಾಂಟಸಿ ದಕ್ಕುತ್ತದೆ.[೩೪] ಇಲ್ಲವಾದರೆ ಕೇವಲ ಘಟನೆಗಳ ಮಾಹಿತಿಯಾಗಿ ಹೋಗುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಮಗುವಿನ ಚಿಂತನೆಗೆ ಶಾಬ್ದಿಕ ರೂಪ ದೊರೆಯುವುದು ಭಾಷೆಯ ಬಳಕೆಯಿಂದಾದುದರಿಂದ ಅಂತಹ ಅದ್ಭುತ ಚಿಂತನೆಗಳ ಅಭಿವ್ಯಕ್ತಿಯು ಸಾಧಾರಣ ಭಾಷೆಗೆ ದಕ್ಕುವುದಲ್ಲ. ಅದಕ್ಕೆ ಸಂಸ್ಕಾರಯುತವಾದ ಫ್ಯಾಂಟಸಿಯುಕ್ತ ಭಾಷೆಯೆ ಬೇಕೆನಿಸುತ್ತದೆ. ಭಾಷೆಯು ಪ್ರತಿಮೆಯನ್ನು ಮೈಗೂಡಿಸಿಕೊಂಡು ಬೆಳೆದಂತೆ ಪ್ರತಿಮೆಯು ಫ್ಯಾಂಟಸಿಯನ್ನು ಮೈಗೂಡಿಸಿಕೊಂಡು ಸಮೃದ್ಧಿಯನ್ನು ಹೊಂದಿದ ಫ್ಯಾಂಟಸಿ ಕಥಾಲೋಕ ತೆರೆದುಕೊಳ್ಳುತ್ತದೆ. ಫ್ಯಾಂಟಸಿ ಭಾಷೆಯು ವಾಸ್ತವದ ಭಾಷೆಯ ಹಂಗಿನಿಂದ ಹೊರಬಂದು ಜಗತ್ತಿನ, ಪ್ರಾಣಿಯ, ವ್ಯಕ್ತಿಯ, ಮರಗಿಡಗಳ ಭಾಷೆಯಾಗಿ ಕಾಣಸಿಗುವುದಿಲ್ಲ. ಫ್ಯಾಂಟಸಿಯ ಭಾಷೆಯು ಹೊಸತನಕ್ಕಾಗಿ ತುಡಿದಂತೆ ಪ್ರತ್ಯೇಕತೆಗಾಗಿ ತುಡಿದದು ಅಪರೂಪವಾಗಿದೆ.

## ೫.೬ ಫ್ಯಾಂಟಸಿಯ ಪ್ರಮುಖ ಪ್ರೇರಣೆ, ಪ್ರಭಾವಗಳು

ಇಂಗ್ಲಿಷಿನಲ್ಲಿ ಮಕ್ಕಳ ಕಥಾ ಜಗತ್ತಿನಲ್ಲಿ ಅತ್ಯಂತ ವಿಶೇಷವಾಗಿ ಬಳಕೆಯಾಗುತ್ತ ಬಂದ ಫ್ಯಾಂಟಸಿಯು ಹಲವಾರು ಬೆಳವಣಿಗೆಯ ಬಗೆಗಳನ್ನು ಹೇಳುತ್ತದೆ. ಅವರಲ್ಲಿ ಮಕ್ಕಳ ನಡುವೆ ಕಳೆದು ಹೋಗುತ್ತಿರುವ ಮುಗ್ಧತೆ, ಬಾಲ್ಯಸಹಜವಾದ ಚೇಷ್ಟೆಯ ವಾತಾವರಣ ಮುಂತಾದ ಅಂಶಗಳು ವ್ಯತಿರಿಕ್ತವಾಗಿ ಬದಲಾಗುತ್ತಿರುವುದನ್ನು ಕಂಡು, ಪರ್ಯಾಯವಾಗಿ ಕಂಡುಕೊಳ್ಳುವ, ಕಾಲ್ಪನಿಕದಾರಿಯಾಗಿ ಫ್ಯಾಂಟಸಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಅತ್ಯಂತ ಪ್ರಮುಖವಾದ ಉದಾಹರಣೆಯೆಂದರೆ ಜೆ.ಎಮ್. ಬೆರ್ರಿಯ 'ಪೀಟರ್ ಪ್ಯಾನ್' ಕೃತಿಯಲ್ಲಿಯ ನಾಯಕನು ಬಾಲ್ಯದಿಂದ ಆಚೆಗೆ ಬೆಳೆಯದೇ ಹೊಗುವ, ಅದಕ್ಕಾಗಿ 'ನೋಮ್ಯಾನ್ ಲ್ಯಾಂಡ್' ಕಂಡುಕೊಳ್ಳುವ ಕಲ್ಪನೆಯನ್ನು ಕಾಣಬಹುದು. ವೆಂಡಿ ಕುಟುಂಬದ ಮಕ್ಕಳು ಕಿಟಕಿಯ ಮೂಲಕವಾಗಿ ಈ ಹುಡುಗನನ್ನು ಸೇರಲು ಹಾರಿ ಹೋಗುವಾಗ, ಆ ದಂಪತಿಗಳು ಕಿಟಕಿಯನ್ನು ಮುಚ್ಚದೆ ಮತ್ತೆ ತಮ್ಮ ಮಕ್ಕಳು ವಾಪಸ್ಸು ಬರಲಿ ಎಂದು ದಾರಿಕಾಯುವರು. ಇಲ್ಲಿ ಫ್ಯಾಂಟಸಿಯು ಆಶಾ ಭಾವನೆಯನ್ನು ಮೂಡಿಸುವ ಗುಣಸ್ವರೂಪವನ್ನು ತಳೆದಿದೆ. ಟಾಲ್ಕಿಯನ್ನನ ಸುಪ್ರಸಿದ್ಧ ಕೃತಿ 'ಹಾಬಿಟ್'

---

[೩೩] ಸಾಹಿತ್ಯದಲ್ಲಿ ಫ್ಯಾಂಟಸಿ, ಲೇ: ಎಮ್. ಎಸ್.ಕೆ. ಪ್ರಭು, ಪುಟ ೨೧. ೧೯೯೨.

[೩೪] ಅದೇ ಪುಟ

ಆಗಲಿ, ಸಿ. ಎಸ್. ಲೂಯಿಯ 'ನಾರ್ನಿಯಾ' ಕೃತಿಯಾಗಲಿ ಇದೇ ರೀತಿಯಲ್ಲಿ ಬಾಲ್ಯದ, ತರ್ಕವಿಲ್ಲದ, ಸ್ವಚ್ಛಂದ ಬದುಕಿಗೆ ಮರಳುವುದನ್ನು ಹೇಳುತ್ತವೆ. ಕಲ್ಪಿತ ಬಾಲ್ಯವು ಬಾಲ್ಯವಂಚನೆಗೊಂಡವರಿಗೆ ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಹಾಗೂ ಇಪ್ಪತ್ತನೆಯ ಶತಮಾನದಲ್ಲಿ ತಾತ್ವಿಕವಾಗಿಯೇ ಫ್ಯಾಂಟಸಿ ಕಂಡುಕೊಂಡ ದಾರಿಯಾಯಿತು, ಎನ್ನುವಷ್ಟರ ಮಟ್ಟಿಗೆ ಇಂಗ್ಲಿಷ್ ಮಕ್ಕಳ ಕಥಾಲೋಕ ಫ್ಯಾಂಟಸಿಗೆ ಪ್ರತಿಕ್ರಿಯಿಸಿತು. 'ಆ್ಯಲಿಸ'ಳ ಕತೆಯ ಅಸಂಗತಿ ಇನ್ನೊಂದು ವಿಧಾನದ ಮೂಲಕ ಇದನ್ನೇ ಹೇಳುತ್ತದೆ. ಮಕ್ಕಳ ಸಾಹಿತ್ಯದ ಕ್ಲಾಸಿಕ್ ಎಂದು ಕರೆಸಿಕೊಂಡ ಕೃತಿಗಳಲ್ಲಿಯೂ ಫ್ಯಾಂಟಸಿ ಕಾಣುತ್ತೇವೆ. ಎ.ಎ.ಮಿಲ್ನೆಯ 'ವಿನಿ ಪೂಹ' ಕೃತಿಯ ಫ್ಯಾಂಟಸಿಯೇ ಒಂದು ರೀತಿಯದು, 'ಸ್ಟುವರ್ಟ್ ಲಿಟಲ್'ನ ಕಲ್ಪನೆ ಮತ್ತೊಂದು ಬಗೆಯದು. ಆದರೆ ನಮ್ಮ ಮಕ್ಕಳ ಕಥಾ ಜಗತ್ತು ಜನಪದ ಕತೆಗಳಲ್ಲಿಯೇ ಮುಳುಗಿ ಹೋದುದರಿಂದ ಪಾಶ್ಚ್ಯಾತ್ಯರ ಪರಂಪರೆಯಾಗಿ ಬಂದ ಫ್ಯಾಂಟಸಿಯನ್ನು ಯಾವ ಪ್ರಯತ್ನವಿಲ್ಲದೆ ಒಪ್ಪಿಕೊಂಡಿರಬಹುದು. ಕನ್ನಡದಲ್ಲಿ ನಮ್ಮ ಮಕ್ಕಳು ಪಡೆದಿದ್ದು ಜನಪದ ಕಥಾ ಲೋಕದ ಫ್ಯಾಂಟಸಿಯೇ ಹೊರತು ಮಕ್ಕಳ ಜಗತ್ತಿನದೇ ಆದ ಪ್ರತ್ಯೇಕ ಫ್ಯಾಂಟಸಿಯಲ್ಲ. ಜನಪದ ಕತೆಗಳಿಂದ ಮಕ್ಕಳಿಗೆ ತಕ್ಕದಾದ ಫ್ಯಾಂಟಸಿಯನ್ನು ಆಯ್ದುಕೊಡುವ ಕಾರ್ಯವಾಗಲಿ, ಪರಿಷ್ಕರಿಸಿ ಕೊಡುವ ಪ್ರಯತ್ನಗಳಾಗಲಿ ನಮ್ಮಲ್ಲಿ ನಡೆಯಲಿಲ್ಲ.

ಫ್ಯಾಂಟಸಿ ನಮ್ಮ ಜನಪದರ ಕಥಾಲೋಕದಲ್ಲಿ ಸಹಜವಾಗಿ ಹರಡಿಕೊಂಡಿದೆ. ಇಲ್ಲಿರುವುದು ಎಂ.ಎಸ್.ಕೆ. ಪ್ರಭು ಅವರು ಹೇಳುವಂತಹ ಫ್ಯಾಂಟಸಿಯಲ್ಲ. ಜನಪದರ ಬದುಕಿನೊಡನೆ ಸಹಜವಾಗಿ ಹಾಸುಹೊಕ್ಕಾಗಿರುವ ಫ್ಯಾಂಟಸಿ. ಮಕ್ಕಳಿಗೆ ಕತೆ ಎಂದರೆ ಈ ಗ್ರಾಮೀಣ ಸೊಗಡೇ ಎನ್ನುವಂತೆ ನಮ್ಮ ಲೇಖಕರು ಬೃಹತ್ ಪ್ರಮಾಣದಲ್ಲಿ ಬರೆದರು. ಪಂಜೆಯಂತಹವರು ಮಕ್ಕಳಿಗೆ ಪ್ರಾರಂಭದಲ್ಲಿ ಇಂತಹ ಕತೆಗಳನ್ನು ಆಯ್ದುಕೊಂಡು ನೀತಿ ಹೇಳುವ ಬದಲು ಮನರಂಜನೆ ಕಡೆಗೆ ವಾಲಿದರು. ಅವರು ಆಯ್ದುಕೊಂಡಿದ್ದ ಕತೆಗಳನ್ನು ಗಮನಿಸಿದರೆ ಅವುಗಳು ನೀತಿಹೇಳುವ ನಿರ್ದಿಷ್ಟ ಉದ್ದೇಶವನ್ನು ಹೊಂದಿರದೆ ಮಕ್ಕಳ ಮನೋಲೋಕಕ್ಕೆ ವಿಶೇಷವಾಗಿ ಕಂಡುಬಂದವು. ಬಹು ಮುಖ್ಯವಾಗಿ ಅವುಗಳು ಮನರಂಜನೆಯನ್ನು, ಮಕ್ಕಳಲ್ಲಿ ಹಾಸ್ಯವನ್ನು, ಮುದವನ್ನು ನೀಡುವಂತಹವಾಗಿದ್ದವು. ಅವು ಯಾವುದೇ ಪಠ್ಯದ ಪಾಠವಾಗುವಂತಾಗಲಿ, ಅಥವಾ ಪಾಠಕ್ಕೆ ಪೂರಕ ವಸ್ತುವಾಗಲಿ ಆಗಿರಲಿಲ್ಲ.

ಗಜೇಂದ್ರಗಡ ಶ್ಯಾಮರಾಯರು ತಮ್ಮ 'ಕಥನಕಲೆ' ಕೃತಿಯಲ್ಲಿ 'ಮಕ್ಕಳ ಮನಸ್ಸಿನ ಸಮಾರಾಧನೆ'[೩೫] ಎಂದು ಫ್ಯಾಂಟಸಿಯನ್ನು ಕರೆದಿದ್ದಾರೆ. ಜನಪದರ ಕತೆ ಏನೇ ಕುತೂಹಲ, ರಂಜನೆ, ಚಮತ್ಕಾರಿಕ ಸಂಗತಿಗಳಿಂದ ಕೂಡಿದ್ದರೂ ತನ್ನ ಸಾಮಾಜಿಕ ವಾತಾವರಣದಲ್ಲಿಯೇ ಅರಳಿ ಬಂದಿದ್ದರಿಂದ ಅಲ್ಲಿನ ಮೌಲ್ಯವ್ಯವಸ್ಥೆ, ನಂಬಿಕೆಗಳು, ವಿಶ್ವಾಸಗಳು ಹೊಸಗಾಲದ ಮಕ್ಕಳಸಾಹಿತ್ಯ ಸಂದರ್ಭದಲ್ಲಿ ಮಕ್ಕಳಿಗೆ ಯೋಗ್ಯವಾಗಿ ಕಾಣಿಸಲಿಲ್ಲ. ಜನಪದ ಕಥಾಜಗತ್ತು ಈಗಾಗಲೇ ಚರ್ಚಿಸಿರುವಂತೆ ಒಟ್ಟಾರೆ ಸಮಾಜದ ಕೇಳುಗರನ್ನು ತನ್ನ ಮುಂದಿರಿಸಿಕೊಂಡು ಬಂದಿತೇ ವಿನಃ ಮಕ್ಕಳಿಗಾಗಿ ಎಂದೂ ಪ್ರತ್ಯೇಕವಾದ ಅರಳುವಿಕೆಯನ್ನು ತೋರ್ಪಡಿಸಲಿಲ್ಲ ಎನ್ನಬಹುದು. ಮಕ್ಕಳು ಹಿರಿಯರೊಂದಿಗೆ ಬೆರೆತು ಅವನ್ನೆಲ್ಲ

[೩೫] ಕಥನಾ ಕಲೆ, ಗಜೇಂದ್ರಗಡ ಶ್ಯಾಮರಾಯರ ಕುರಿತು, ಲೇ: ಆ ನವಲಗುಂದ, ಪುಟ ೫, ಸಂಧ್ಯಾ, ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ-೪, ೧೯೯೫

ಅನುಭವಿಸುವುದು, ಆಲಿಸುವುದು ನಡೆದಿದೆ. ಮಕ್ಕಳನ್ನೇ ಕೂರಿಸಿಕೊಂಡು ಹಿರಿಯರು ಹೇಳುವಾಗ ಜನಪದ ಕತೆಗಳು ಒಂದಷ್ಟು ಮಿತಿಗೊಳಗಾಗಿ, ಅಥವಾ ಮಕ್ಕಳಿಗಾಗಿ ಹೊಸದಾದ ಆಕರ ಪಡೆದು ಕಾಣಿಸಿಕೊಳ್ಳಬಹುದು. ಇವು ಮಕ್ಕಳ ಮನಸ್ಸಿನ ಸಮಾರಾಧನೆಯನ್ನು ಉಂಟುಮಾಡಲಿಲ್ಲ. ಜನಪದವು ಮೌಖಿಕ ಸಂಪ್ರದಾಯವಾಗಿರುವುದರಿಂದ ದಾಖಲೆಯಾಗಿ ಉಳಿಯದೇ ಹೋಗಿಬಿಡುತ್ತದೆ. ಜಾನಪದವಾಗಿ ಸಂಗ್ರಹಿತವಾದ ಕತೆಗಳಲ್ಲಿಯೂ ಮಕ್ಕಳ ಕತೆ ಎಂದು ಪ್ರತ್ಯೇಕವಾಗಿ ನಮ್ಮಲ್ಲಿ ಸಂಗ್ರಹವಾಗಲಿಲ್ಲ. ಗ್ರಾಮೀಣ ಭಾಗದ ಕೆಲವು ಜನಪದ ಕತೆಗಳು ಮಕ್ಕಳ ಕಥಾ ಲಕ್ಷಣಗಳೊಂದಿಗೆ ಜನಪದದಲ್ಲಿ ಬಹು ವಿರಳವಾಗಿ ದೊರೆಯುತ್ತವೆ. ಚಂದ್ರಶೇಖರ ಕಂಬಾರರು ಮಕ್ಕಳಿಗಾಗಿ ಮತ್ತೊಮ್ಮೆ ಹೇಳಿದ ಜನಪದ ಕತೆಗಳು ಎಂದು ಈ ಜನಪದ ಸರಕು ಉಳ್ಳ ಕತೆಗಳನ್ನು ತಮ್ಮ 'ಮರವೇ ಮರವೇ ಮರ್ಮವೇ' ಎಂಬ ಸಂಗ್ರಹದಲ್ಲಿ ನೀಡಿದ್ದಾರೆ. ಅವರು ದೃಷ್ಟಿ ಹರಿಸಿದ ಸಂಗತಿಗಳನ್ನು ಖಂಡಿತ ತಳ್ಳಿಹಾಕುವಂತಿಲ್ಲ. ಈ ಕತೆಗಳು ನಮ್ಮ ಪರಿಸರ, ಮರಗಳನ್ನು ಕಾಯ್ದು ಕೊಳ್ಳುವ, ಅವುಗಳ ಅವಿನಾಭಾವ ಸಂಬಂಧವು ಜನರ ಭಾವನೆಗಳಿಗೆ ಮೂರ್ತರೂಪ ಕೊಡುವಂತೆ ಈ ಕತೆಗಳು ಕಾಣುತ್ತವೆ[೩೬] ಎಂದು ಅವರು ಕತೆಗಳ ಒಳ ಹೊರಗನ್ನು ಬಿಚ್ಚಿಟ್ಟಿದ್ದಾರೆ. ಅಂತಹದೇ ಕತೆಗಳನ್ನು ಆಯ್ದು ನೀಡಿದ್ದಾರೆ. ಈ ರೀತಿಯ ಯಾವ ಪ್ರಕ್ರಿಯೆ ನಡೆದರೂ ಮಕ್ಕಳ ಸಂದರ್ಭದಲ್ಲಿ ಒಳ್ಳೆಯದು. ಈ ಬಗೆಯಲ್ಲಿ ಇವತ್ತಿಗೂ ಪ್ರಸ್ತುತವಾಗುವ ಬದುಕಿನ ಆಶಯಗಳನ್ನು ಹೊತ್ತಿರುವ ಕತೆಗಳು ಅರಳುವುದು ಜನಪದರ ಬದುಕಿನ, ಸಾಮಾಜಿಕ ವ್ಯವಸ್ಥೆಯ ಆವರಣದಲ್ಲಿಯೇ. ಹಾಗಾಗಿ ಆ ವ್ಯವಸ್ಥೆ ಮುಂದಿಡುವ ಚಿತ್ರಣದಲ್ಲಿ ನಮಗೆ ಪ್ರಸ್ತುತವೆನಿಸುವ ಸಂಗತಿಗಳಿರುವುದನ್ನು ತಳ್ಳಿಹಾಕಲಾಗದು. ಮಹಿಳೆಯನ್ನು ಚಿತ್ರಿಸುವಲ್ಲಿ, ಮಲತಾಯಿಯನ್ನು ನಿರ್ದಿಷ್ಟವಾಗಿಯೇ ಗುರುತಿಸುವುದು ಪ್ರಬುದ್ಧರಲ್ಲಿ ಸರಿಯೆನಿಸಿದರು ಮಕ್ಕಳಿಗೆ ಅಪ್ರಸ್ತುತ. ಈ ಹಿಂದೆ ಚರ್ಚಿಸಿದಂತೆ ಅನೇಕ ಸಾಮಾಜಿಕ ನಿಲುವುಗಳು ಮಕ್ಕಳಿಗೆ ಅವಶ್ಯವಲ್ಲವೆನಿಸುತ್ತವೆ. ಜೊತೆಗೆ ಜನಪದ ಕತೆಗಳನ್ನು ಆಯುವಾಗ ವಿಭಿನ್ನ ವಯೋಮಾನದ ಮಕ್ಕಳನ್ನು ಪರಿಗಣಿಸುವುದು ಅಗತ್ಯವೆನಿಸುತ್ತದೆ. ನಗರದ ಮಕ್ಕಳ, ಮಧ್ಯಮ ವರ್ಗದ ಮಕ್ಕಳ ವಾತಾವರಣಕ್ಕೂ ಗ್ರಾಮೀಣ ಮಕ್ಕಳ ವಾತಾವರಣಕ್ಕೂ ಅಂತರಗಳಿವೆ. ಹಳ್ಳಿಯ ಮಕ್ಕಳು ಆದಷ್ಟೂ ಸುತ್ತಲಿನ ವಿದ್ಯಮಾನಗಳಿಗೆ ತೆರದುಕೊಂಡಿರುವವರು. ನಗರದ ಮಕ್ಕಳ ಮುಂದೆ ಮುಚ್ಚು ಮರೆಯಾಗಿ ನಡೆಯುವ ಎಷ್ಟೋ ಸಂಗತಿಗಳು ಯಾವ ಮುಚ್ಚುಮರೆಯಿಲ್ಲದೆ ಹಳ್ಳಿಯ ಮಕ್ಕಳ ಮುಂದೆ ನಡೆಯುತ್ತಿರುತ್ತವೆ. ಹಾಗಾಗಿ ಹಳ್ಳಿ ಮಕ್ಕಳ ಕಥಾ ಲೋಕವು ನಗರದ ಮಕ್ಕಳ ಜನಪದ ಕಥಾಲೋಕಕ್ಕಿಂತ ಖಂಡಿತ ಭಿನ್ನವಾಗಿರುತ್ತದೆ.ಈ ಎಲ್ಲವನ್ನುಪರಿಗಣಿಸಿಕೊಂಡು ಜನಪದ ಕತೆಯ ಫ್ಯಾಂಟಸಿಯನ್ನು ಗುರುತಿಸುವುದಾಗಬೇಕಾಗುತ್ತದೆ. ಲಿಖಿತವಾಗಿ ಲಭ್ಯವಾಗುವ ಕತೆಗೂ ಅದೇ ಕತೆ ಹಳ್ಳಿಯ ಪರಿಸರದಲ್ಲಿ ಮುಖಾಮುಖಿಯಾಗಿ ಕೇಳುವಾಗಲೂ ವಿಭಿನ್ನವಾಗುವ ಸಾಧ್ಯತೆಯನ್ನು ಅರಿಯಬೇಕಾಗಿದೆ. ಹೀಗೆ ಕನ್ನಡದ ಫ್ಯಾಂಟಸಿಯು ಜನಪದದ ಪ್ರೇರಣೆಯನ್ನು ಉಂಡಷ್ಟು ವಿದೇಶದ ಪ್ರಭಾವವನ್ನು ಮುಂದಿರಿಸಿಕೊಂಡು ನೋಡಲಿಲ್ಲ ಎನ್ನಬಹುದು. ಮಕ್ಕಳಿಗೆ ಆರಿಸಿ ಕತೆಗಳನ್ನು ನೀಡುವಾಗಲು ಕನ್ನಡದ

---

[೩೬] ಮರವೇ ಮರವೇ ಮರ್ಮರವೇ- ಕೃತಿಯ ಮುನ್ನುಡಿಯಿಂದ ಲೇ: ಡಾ. ಚಂದ್ರಶೇಖರ ಕಂಬಾರ.

ಕತೆಗಳು ಮಕ್ಕಳಿಗಾಗಿ ಎಂದು ಪ್ರತ್ಯೇಕತೆಯನ್ನು ಕಾಣಲಿಲ್ಲ. ಆದುದರಿಂದ ಹಿರಿಯರ ಫ್ಯಾಂಟಸಿಯನ್ನು ಅನಿವಾರ್ಯವಾಗಿ ಅನುಭವಿಸುವಂತಾಯಿತು.

## ೫.೭ ಕನ್ನಡದಲ್ಲಿ ಫ್ಯಾಂಟಸಿಯ ಪ್ರಯೋಗಗಳು

ನಾ. ಕಸ್ತೂರಿಯವರು ಆಲೀಸಳ ಕತೆಯನ್ನು ಪ್ರಕಟಿಸುವಾಗ ಅದರ ಮುನ್ನುಡಿಯಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. "ಒಂದು ಕ್ಷಣವಾದರೂ ವೈವಿಧ್ಯಕ್ಕಾದರೂ ಬಿಸಿಲಿದ್ದು, ಮರವಿದ್ದು ನೆಳಲಿರದೆ ಹೋಗದೆ?. ಒಂದು ದಿನವಾದರು ನೀರು ಸುಡಬಾರದೆ? ಒಂದು ಸಲವಾದರೂ ಕಲ್ಲು ಹಕ್ಕಿಯ ತೆರದಿ ಹಾರಾಡಬಾರದೆ?. ಒಂದು ಕ್ಷಣವಾದರೂ ದಾಸ್ಯನಿಯಮಗಳಳಿದು ಸ್ವತಂತ್ರ್ಯ, ಸ್ವಚ್ಛಂದ ಹುಚ್ಚಾಟವಾಗದೆ"?[೩೭] ಎಂದು ಅಭಿಪ್ರಾಯ ಪಡುತ್ತಾರೆ. ಇದು ಫ್ಯಾಂಟಸಿಯ ಎಲ್ಲಾ ಆಶಯಗಳನ್ನು ಒಳಗೊಂಡ ಮಾತಾಗಿದ್ದು, ಫ್ಯಾಂಟಸಿಗೆ ನಾಂದಿಯು, ಮುನ್ನುಡಿಯು ಆಗುವಂತದಾಗಿದೆ.

ಬರವಣಿಗೆಯಕಾಲದ ಕಥಾ ಪ್ರಪಂಚದಲ್ಲಿ ಹುಟ್ಟಿಕೊಂಡ, ಹೊಸಗಾಲದ ಕತೆಗಳಲ್ಲಿ ಫ್ಯಾಂಟಸಿ ಕಾಣಿಸಿಕೊಂಡಿರುವುದು ಹೊಸಗಾಲದ ವಾತಾವರಣದಲ್ಲಿ, ನಮ್ಮ ಸುತ್ತಲಿನ ವಿದ್ಯಮಾನಗಳ ಹಿನ್ನಲೆಯಲ್ಲಿ, ನಮ್ಮ ಭಾಷೆಯ ಹೊರಗಿನ ಪ್ರಭಾವಗಳಿಂದ ಎನ್ನಬಹುದು. ಆದರೆ ಫ್ಯಾಂಟಸಿಯು ಹೊಸಗಾಲದ ಬರವಣಿಗೆಯು ಕನ್ನಡದ ಕಥಾ ಪ್ರಪಂಚದಲ್ಲಿ ತಾನಾಗಿ ಹುಟ್ಟಿಕೊಳ್ಳಲಿಲ್ಲ ಎನ್ನುವುದು ವಿಷಾದವೆ ಆಗಿದೆ. ಬಹಳ ವಿರಳ ಸಂಖ್ಯೆಯ ಕೃತಿಗಳು ಈ ನಿಟ್ಟಿನಲ್ಲಿ ಕಾಣಿಸುತ್ತವೆ. ಇಂಗ್ಲೀಷಿನ ಮಕ್ಕಳ ಸಾಹಿತ್ಯ ಫ್ಯಾಂಟಸಿಯನ್ನು ಎಷ್ಟು ಉಸಿರಾಡಿದೆಯೋ ಅಷ್ಟು ನಮ್ಮ ಕನ್ನಡ ಮಕ್ಕಳ ಕಥಾ ಲೋಕ ಇದುವರೆಗೂ ತನ್ನದನ್ನಾಗಿಸಿಕೊಂಡಿಲ್ಲ ಎನ್ನಬಹುದು. ನವೋದಯದ ಸಾಹಿತ್ಯ ಇಂಗ್ಲೀಷಿನಿಂದ ಪ್ರಭಾವಗೊಂಡಂತೆ ಮಕ್ಕಳ ಸಾಹಿತ್ಯ ಪ್ರಭಾವಗೊಳ್ಳಲಿಲ್ಲ ಎನಿಸುತ್ತದೆ.

ನಮ್ಮ ಪ್ರಾರಂಭದ ಕತೆಗಾರರಲ್ಲಿ ಮೇವುಂಡಿ ಮಲ್ಲಾರಿ ಅವರು ತಮ್ಮ 'ಮಡ್ಡಮ್ಮ'ನ ಸುತ್ತಲಿನ ಹಲವು ಕತೆಗಳಲ್ಲಿ ಫ್ಯಾಂಟಸಿಯನ್ನು ತಂದುಕೊಂಡಿದ್ದಾರೆ. ಅವು ಜನಪದರಿಂದ ತೆಗೆದು ಕೊಂಡುವುಗಳಲ್ಲ, ಅವರೇ ಕಟ್ಟಿಕೊಟ್ಟ ತಾಯಿಭಾವದ ಸುತ್ತ ಹಳ್ಳಿಯ ಸರಳ ಬದುಕಿನ ಪರಿಸರದಲ್ಲೇ ಆಪ್ತವಾಗಿ ಬಿಚ್ಚಿಕೊಂಡಿರುವ ಕಿರುಕತೆಗಳವು. ಪ್ರಾಣಿಗಳು, ಕ್ರಿಮಿಕೀಟಗಳು ವ್ಯವಹರಿಸುವುದು, ಮಾನವರಂತೆ ನಡೆದುಕೊಳ್ಳುವುದು ಮುಂತಾಗಿ ಕಾಣಿಸಿವೆ. ಅದರಲ್ಲೂ ಪುಟ್ಟ ಮಕ್ಕಳಿಗೆ ಅತಿ ಪ್ರಿಯವಾಗುವಂತೆ ಇವು ಕಾಣಿಸಿಕೊಂಡಿವೆ. ಇಲ್ಲಿನ ಫ್ಯಾಂಟಸಿಯು ಅದ್ಭುತವೆನಿಸದಿದ್ದರೂ ಕನ್ನಡಕ್ಕೆ ಹೊಸತಾಗಿ ಕಾಲಿಡುವಸಿದ್ಧತೆ ಎನಿಸಿತು.

ವಿಶೇಷವಾಗಿ ವೈಜ್ಞಾನಿಕ ಕಥಾ ಹಂದರಗಳಲಿ ಫ್ಯಾಂಟಸಿಯು ಹರಿದಾಡಿತು. ಆದರೆ ಇದನ್ನು ಪೂರ್ಣ ಪ್ರಮಾಣದ ಫ್ಯಾಂಟಸಿಯೆಂದು ಪರಿಗಣಿಸಲಾಗುವುದಿಲ್ಲ. ಹಾಗೆಯೇ ಮಾಂತ್ರಿಕ ಜಗತ್ತಿನ ಕತೆಯಾದಾಗ, ಅಲ್ಲಿನ ಫ್ಯಾಂಟಸಿಯು ಮಾಂತ್ರಿಕ ಚಟುವಟಿಕೆಗಳನ್ನು ಅವಲಂಬಿಸುತ್ತ ಸಹಜವಾಗಿಯೇ ಹರಡಿಕೊಂಡಿರುತ್ತದೆ. ಹ್ಯಾರಿ ಪಾಟರ್ ಕೃತಿಯಲ್ಲಿ ಫ್ಯಾಂಟಸಿ ಎಂದರೆ ಅದು ಮಾಂತ್ರಿಕ ಲೋಕದ

---

[೩೭] ಮಕ್ಕಳ ಸಾಹಿತ್ಯ ಮಾತುಕತೆ, ಡಾ .ಆನಂದ ಪಾಟೀಲ ಅಂತರ್ಜಾಲ ಪತ್ರಿಕೆ.

ಜಾಲವಾಗಿದೆ. ಅಲ್ಲಿನ ಹಾರ್‍ವರ್ಡ್ ಶಾಲೆಯು ನಗರದಲ್ಲೇ ಇದ್ದರೂ ಯಾರಿಗೂ ಕಾಣದೆ ಇರುವುದು, ಅದಕ್ಕೆ ಹೋಗುವವರೆಲ್ಲಾ ಒಂಭತ್ತು ಮುಕ್ಕಾಲು ನಂಬರಿನ ಅವ್ಯಕ್ತ ಪ್ಲ್ಯಾಟ್ ಫಾರ್ಮ್ ಮೂಲಕ ರೈಲು ಹಿಡಿದು ಹೋಗುವುದು ಎಲ್ಲಾ ಮಾಂತ್ರಿಕ ಲೋಕದ ವ್ಯವಸ್ಥೆಯಾಗಿಯೇ ಸಹಜವಾಗಿದೆ. ಈ ಬಗೆಯ ಫ್ಯಾಂಟಸಿಯ ಕುರಿತು ಇಂಗ್ಲೀಷಿನ ವಾತಾವರಣದಲ್ಲಿ ಸಾಕಷ್ಟು ಅಧ್ಯಯನಗಳು ಕಾಣಸಿಗುತ್ತವೆ.

ಕನ್ನಡದ ವೈಜ್ಞಾನಿಕ ಕತೆಗಳು ತಂದಿರಿಸುವ ಫ್ಯಾಂಟಸಿಯು ರಾಜಶೇಖರ ಭೂಸನೂರ ಮಠರ ಮಕ್ಕಳಿಗಾಗಿನ ಹಲವಾರು ಕಿರು ಕಾದಂಬರಿಗಳಲ್ಲಿ, ನೀಳ್ಗತೆಗಳಲ್ಲಿ ಹರಡಿನಿಂತಿದೆ. ಇಲ್ಲಿ ಮಾತ್ರ ವೈಜ್ಞಾನಿಕ ಸಂಶೋಧನೆಗಳು, ಅವುಗಳಿಂದುಂಟಾಗುವ ಪರಿಣಾಮಗಳು, ಚಮತ್ಕಾರಗಳು, ಭವಿಷ್ಯದ ಊಹೆಯ ಅಚ್ಚರಿಯ ಸಂಗತಿಗಳು ಮುಂತಾಗಿ ಹೊಸದಾದ ಲೋಕ ಕಾಣಿಸಿರುವುದು ಹೆಚ್ಚು.

ಸಂಪಟೂರು ವಿಶ್ವನಾಥರು ತಮ್ಮ ಒಂದಿಷ್ಟು ವೈಜ್ಞಾನಿಕ, ಒಂದಿಷ್ಟು ಪತ್ತೇದಾರಿ ಆಕಾರವುಳ್ಳ 'ಸುವರ್ಣ ಕೀಟ' ಕಾದಂಬರಿಯಲ್ಲಿ ಫ್ಯಾಂಟಸಿಯನ್ನು ನೀಡಿರುವುದನ್ನು ಕಾಣಬಹುದಾಗಿದೆ. ಆದರೆ ಅದು ತನ್ನ ವೈಜ್ಞಾನಿಕ ಸಂಗತಿಗಳ ಭಾಗವಾಗಿಯೇ ತಂದುಕೊಂಡಿರುವುದು. ಹಾಗೆಯೇ ಈ ಅಸಂಗತ ಕಥಾ ಸಂದರ್ಭ ನಮ್ಮ ನಡುವಿನ ವಾಸ್ತವದ ಚಿತ್ರಣಕ್ಕೆ ಕನ್ನಡಿ ಹಿಡಿಯಲೆಂದೇ ಉದ್ದೇಶಿಸಿರುವುದು. ವೈಜ್ಞಾನಿಕ ಪ್ರಯೋಗಗಳಿಂದ ಉಂಟಾಗುವ ಅನಿರೀಕ್ಷಿತ ಪರಿಣಾಮಗಳು, ಅವನ್ನು ದುರುಪಯೋಗ ಪಡಿಸಿಕೊಳ್ಳುವ ವಿಕೃತ ಮನಸ್ಸುಗಳು, ಕದಡುವ ಸಾಮಾಜಿಕ ವ್ಯವಸ್ಥೆ ಇವುಗಳು ಬಹು ಮುಖ್ಯವಾಗಿ ಕಾಣಸಿಗುತ್ತವೆ.

ನೀಲಾಂಬರಿ ಅವರ ಕೃತಿಗಳಲ್ಲಿ ಫ್ಯಾಂಟಸಿ ಕಾಣಸಿಕೊಳ್ಳುವುದು ವೈಜ್ಞಾನಿಕ ಕತೆಗಳ ಅಗತ್ಯಗಳಂತಲ್ಲ. ಅವರು ಮಕ್ಕಳ ಸುತ್ತಲೇ ಹಬ್ಬಿಸಿಕೊಳ್ಳುವ ಹಾಸ್ಯದ, ಸಾಹಸದ ಮುಂತಾಗಿ ಕಾಣಿಸಿಕೊಳ್ಳುವ ಕತೆಗಳನ್ನು ಹೊಂದಿಕೊಂಡಂತೆಯೇ ಅದು ಕಾಣಿಸಿಕೊಳ್ಳುವುದು. 'ಸೂರ್ಯನಲ್ಲಿಗೆ ನಿಯೋಗ' ಎಂಬುದು ನೀಲಾಂಬರಿಯವರ ಕತೆ. ಸೂರ್ಯನ ಬಿರುಬಿಸಿಲನ್ನು ಸಹಿಸಿಕೊಳ್ಳಲಾರದ ಭೂಮಿಯು ತತ್ತರಿಸುವ ಕತೆಯಿದು. ಅರಣ್ಯದ ವಾಸಿಗಳಾದ ಜೀವಿಗಳೆಲ್ಲ ಕಂಗೆಟ್ಟು ತಮ್ಮ ರಾಜನಾದ ಸಿಂಹನಿಗೆ ಒಂದು ಪತ್ರ ಚಳುವಳಿ ಮೂಲಕ ತಮ್ಮ ಸಮಸ್ಯೆಗಳನ್ನು ತಿಳಿಸುತ್ತವೆ. ಸಿಂಹವು ವಿವೇಚನೆಯಿಂದ ಯೋಚಿಸಿ ಸೂರ್ಯನಲ್ಲಿಗೆ ಒಂದು ನಿಯೋಗವನ್ನು ಕಳುಹಿಸುತ್ತಾನೆ. ಮಂತ್ರಿ ಹುಲಿರಾಯನು, ರಕ್ಷಣಾ ಮಂತ್ರಿ ಸಲಗಪ್ಪನು ಮೂರು ಹಗಲು, ಮೂರು ರಾತ್ರಿ ಪ್ರಯಾಣಿಸಿ ಸೂರ್ಯನ ಊರಿಗೆ ತಲುಪುತ್ತಾರೆ. ಅಲ್ಲಿನ ವಾಯುಮಂಡಲದ ಅಧಿಕಾರಿಗಳು ಇವರನ್ನು ತಂಗಾಳಿಯೊಂದಿಗೆ ಸ್ವಾಗತಿಸುವ ಸೌಜನ್ಯಕೆಯಿದೆ. ಅಲ್ಲಿಯ ವಾಯು ರಾಜನಿಗೂ ಶ್ವಾಶಕೋಶದ ಕಾಯಿಲೆ ಬಂದು ಬಳಲುತ್ತಿರುವುದು ಕಾಣಿಸಿಕೊಳ್ಳುತ್ತದೆ. ಮನುಷ್ಯನ ನಿರಂತರ ಪ್ರಯೋಗಶಿಲತೆಯೇ ಅವರ ರೋಗಗಳಿಗೆ ಕಾರಣವಾಗಿದೆಯೆಂದು ಅವರು ಅಭಿಪ್ರಾಯಿಸುತ್ತಾರೆ. ಅಲ್ಲಿಯೂ ವಿಶ್ರಾಂತಿ ಗೃಹಗಳು, ಪರ್ವತ, ಬೆಟ್ಟಗಳು ಕಾಣಿಸಿಕೊಳ್ಳುತ್ತವೆ. ಮೋಡಗಳ ರಾಜ ಕಾರ್ಮೋಡಪ್ರಭು ಕೂಡ ಮನುಷ್ಯರು ಹೊಸಹೊಸ ಸಂಶೋಧನೆ ಮಾಡಿದ್ದರಿಂದಲೇ ರೋಗಗಳು ಬರುತ್ತಿವೆ ಎಂದು ವಿವರಿಸುತ್ತಾನೆ. ಅವನ ಹೊಟ್ಟೆಯಲ್ಲಿ ಆಸಿಡ್ ಮಳೆ ತುಂಬಿರುವುದಾಗಿ ತಿಳಿಸುತ್ತಾನೆ. ಪ್ರಾಣಿಗಳ ನಿಯೋಗವು ದಯಮಾಡಿ ಅದನ್ನು ನಮ್ಮ ಮೇಲೆ ಅದನ್ನು ಸುರಿಸಬೇಡ. ನಾವು ಮನುಷ್ಯರಂತೆ ಪರಿಸರಕ್ಕೆ ಏನನ್ನು ಸೇರಿಸುತ್ತಿಲ್ಲ. ಅವನಂತೆ ಆಸೆಬುರುಕರಲ್ಲವೆಂದು

ಕೇಳಿಕೊಳ್ಳುತ್ತವೆ. ಆಗಲಿ ಎಂದು ಮೋಡ ಒಪ್ಪಿಗೆ ನೀಡುತ್ತದೆ. ಮುಂದೆ ಸಾಗಿದ ನಿಯೋಗವು ಬರುವ ಸೂರ್ಯನ ಹಾದಿಯನ್ನು ಕಾಯುತ್ತಾ ಕುಳಿತ್ತಿರುತ್ತವೆ. ಸೂರ್ಯನನ್ನು ಕಂಡು ಕೈಮುಗಿದು ತಮ್ಮ ತಪ್ಪಿದ್ದರೆ ಕ್ಷಮಿಸುವಂತೆ ವಿನಿಂತಿಸುತ್ತವೆ. ಅದಕ್ಕೆ ಸೂರ್ಯನು ಇಲ್ಲಿ ನಿಮ್ಮ ತಪ್ಪು ಏನು ಇಲ್ಲ, ನಾನು ಯಾರಿಗೂ ತೊಂದರೆ ಕೊಡಲು ಸಮಯವಿಲ್ಲ. ಅದು ಸುಡುವುದು, ಸುಡದಿರುವುದು ನನ್ನ ಸ್ವಭಾವವೆಂದು ಮುಂದೆ ಸಾಗುತ್ತಾನೆ. ನಂತರ ನಿಯೋಗವು ಹಿಂದಿರುಗುತ್ತದೆ. ಹೀಗೆ ವಾಸ್ತವ ಜಗತ್ತಿನ ಸಮಸ್ಯೆಗಳನ್ನು ಅವಾಸ್ತವವಾದ ರೀತಿಯಿಂದ ಪ್ರಾಣಿಗಳ ಮೂಲಕ ಸೂರ್ಯ, ಮೋಡ, ವಾಯುಮಂಡಲಗಳನ್ನು ಭೇಟಿಮಾಡುವುದು, ಚರ್ಚಿಸುವುದು ಎಲ್ಲವುಗಳ ರೋಚಕತೆಯನ್ನು ನೀಲಾಂಬರಿಯವರ ಈ ಕತೆಯಲ್ಲಿ ಕಾಣಬಹುದಾಗಿದೆ. ಇವರ ಇದೊಂದು ಕತೆಯು ಹಲವಾರು ರೀತಿಯ ಫ್ಯಾಂಟಸಿಯ ಸ್ವರೂಪವನ್ನು ತೆರೆದಿಡುತ್ತದೆ. ಈ ಬೆಳವಣಿಗೆಯನ್ನು ಕನ್ನಡದ ಫ್ಯಾಂಟಸಿ ಲೋಕವು ಬೆರಗುಗಣ್ಣಿನಿಂದ ಸ್ವೀಕರಿಸಿದೆ. ಇದು ಹಲವು ಹೊಸತುಗಳಿಗೂ ನಾಂದಿಯಾಗಿರುವುದನ್ನು ಕಾಣಬಹುದು. ಬರವಣಿಗೆಯಲ್ಲಿ ಈ ಕತೆಯು ಮಕ್ಕಳನ್ನು ತಲುಪುವುದಕ್ಕು ಮೌಖಿಕವಾಗಿ ತಲುಪುವುದಕ್ಕು ಮಿತಿಗಳು ಅನೇಕ ತೆರನಾಗಿ ಇರುತ್ತವೆ ಎಂಬುದನ್ನು ಇಲ್ಲಿ ಗಮನಿಸಬೇಕಿದೆ. ಇಲ್ಲಿಯ ಪ್ರಾಣಿಗಳ ರಾಜ್ಯದ ಕಲ್ಪನೆಯು ಜನಪದದ ಕಾಲಂತಿದ್ದರೂ ಸಮಸ್ಯೆಗಳು ಮಾತ್ರ ವಾಸ್ತವವೇ ಆಗಿದೆ. ಆದರೆ ನೀಲಾಂಬರಿಯವರ ಅವಾಸ್ತವ ತಂತ್ರಗಾರಿಕೆಯು ಫ್ಯಾಂಟಸಿ ರೋಚಕತೆಯನ್ನು ತಂದೊಡ್ಡುತ್ತದೆ. ಓದುಗ ಮಕ್ಕಳು ವಾಸ್ತವ ಬದುಕಿನ ತನ್ನ ಪರಿಸರದ ಸಮಸ್ಯೆಗಳನ್ನು ಗಮನಿಸಿ ಚಿಂತನೆಗೆ ಹಚ್ಚುವ ವಸ್ತುವನ್ನು ಇಲ್ಲಿ ನೋಡಬಹುದಾಗಿದೆ. ನೀಲಾಂಬರಿ ಯವರ ಇನ್ನೊಂದು ಕತೆಯಾದ 'ಕೆಂಪುರಿಬ್ಬರಿನ ಗೂಡು' ಒಂದು ಭಾವಪೂರ್ಣತೆಯಿಂದ ಮಕ್ಕಳನ್ನು ಸೆಳೆಯುವ ಕತೆಯಾಗಿದೆ. ಪುಟ್ಟ ಮರಿಗಳಿಗೆ ಗುಟುಕು ಕೊಡುವ ಹಕ್ಕಿಯು ತನ್ನ ಮರಿಗಳೊಂದಿಗೆ ಕಳೆದ ಸಮಯವನ್ನು ಒಂದು ದೊಡ್ಡ ಫೋಟೋದಲ್ಲಿ ಪ್ರದರ್ಶನ ಮಾಡಿಕೊಳ್ಳುವುದು, ಇದು ಜನರನ್ನು ಆಕರ್ಷಿಸುವುದು, ದಿಗಿಲುಗೊಳ್ಳುವುದು, ಅಚ್ಚರಿಪಡುವುದು, ಪುಳಕಗೊಳ್ಳುವುದು ಮುಂತಾದ ಭಾವಸಂಚಯನಗಳಿಗೆ ತೆರೆದುದುಕೊಳ್ಳುವುದಿದೆ. ಇವೆಲ್ಲವು ಮಾನವನ ಪರಿಸರದಲ್ಲಿ ವಾಸ್ತವವೆನಿಸಿದರೂ ಪಕ್ಷಿಗಳ ಲೋಕದಲ್ಲಿ ಅವಾಸ್ತವವಾದ, ಫ್ಯಾಂಟಸಿಯ ಲೋಕವನ್ನು ತೆರೆದಿಡುತ್ತವೆ. ಓದುಗ ಮಕ್ಕಳಿಗೆ ಅಂತಹ ವ್ಯತ್ಯಾಸವೇನು ಅನಿಸದಿದ್ದರೂ ತಮ್ಮ ಬದುಕಿನ ಸಂಗತಿಗಳಿಗೆ ಸ್ಪಂದನೆಯನ್ನುಂಟುಮಾಡುತ್ತವೆ.

**ಪಟಾಕಿಯ ಸಂಭ್ರಮ:** ಇದೊಂದು ಭಿನ್ನವಾದ ಫ್ಯಾಂಟಸಿಯನ್ನು ಹೇಳುವಂತಹ ಕತೆಯಾಗಿದೆ. ಹುಲಿಗೆವ್ವನ ಸ್ವಭಾವವನ್ನು ಬದಲಾಯಿಸಲು ಮಾಡಿದ ಪ್ರಯತ್ನಗಳು ಕಾಣಿಸಿಕೊಳ್ಳುತ್ತವೆ. ವಾಸ್ತವದ ಹಿನ್ನೆಲೆಯಲ್ಲಿಯೆ ರಚನೆಗೊಂಡಿದ್ದರೂ ಪ್ರಾಣಿ ಜಗತ್ತಿನಲ್ಲಿ ಫೋನುಗಳ ಬಳಕೆಯು ಕಾಣಿಸಿಕೊಂಡು ಫ್ಯಾಂಟಸಿಯನ್ನು ತೆರೆದಿಡುತ್ತದೆ. ಮಾನವ ಜಗತ್ತಿನಂತೆ ಪ್ರಾಣಿಜಗತ್ತು ಕೂಡ ವ್ಯವಹಾರಿಕವಾಗಿ ಕಾಣಿಸಿಕೊಳ್ಳುವುದರ ಮೂಲಕ ಫ್ಯಾಂಟಸಿಯು ತಾನಾಗಿಯೇ ಸಹಜವಾಗಿ ನೆಲೆಗೊಂಡಿರುವುದು ಕಾಣಸಿಗುತ್ತದೆ. ಕಾಯಿಲೆ, ಅದಕ್ಕೆ ಔಷಧೋಪಚಾರ ಮುಂತಾದ ಮಾನವ ಹಿನ್ನೆಲೆಗಳು ಎದುರಾಗುತ್ತವೆ. ಕಾಡಿನ ನಡುವೆ ನಡೆಯುವ ಪಟಾಕಿಯ ಅವಾಂತರಗಳು ಮೂಡಿಬಂದು ಅವಾಸ್ತವವನ್ನು ಸೃಷ್ಟಿಸುತ್ತವೆ. ಇಡೀ ಈ ಸಂಕಲನವು ಪ್ರಾಣಿಗಳು ಮಾನವನಂತೆ ವಾಸ್ತವದ ಬದುಕನ್ನು ಹರಸಿಕೊಂಡು ಬಾಳುವಾಗ

ಉಂಟಾಗುವ ಫ್ಯಾಂಟಸಿಯಿಂದ ಒದಗುವ ರೋಚಕತೆಯನ್ನು ಇಲ್ಲಿ ಕಾಣಬಹದಾಗಿಸಿದ್ದಾರೆ ನೀಲಾಂಬರಿಯವರು. ಇಲ್ಲಿಯು ಜನಪದದ ಕತೆಗಳ ದಟ್ಟವಾದ ಪ್ರಭಾವವನ್ನು ನೋಡುತ್ತೇವೆ. ಆದರೆ ನೀಲಾಂಬರಿಯವರು ಅವುಗಳನ್ನು ವಾಸ್ತವದ ಕತೆಗಳಂತೆಯೆ ಭಾವಿಸುವಂತೆ ಬರೆದಿದ್ದಾರೆ. ಮಕ್ಕಳಿಗೆ ಎಲ್ಲಿಯೂ ನಿರಸವೆನಿಸುವುದಿಲ್ಲ.

**ಸಿಂಗರಾಯನ ಗವಿ:** ಇದು ನೀಲಾಂಬರಿಯವರ ಮತ್ತೊಂದು ಬಗೆಯ ಪ್ರಾಣಿಕತೆ. ಇಲ್ಲಿಯೂ ಸಿಂಹರಾಯನು ಪ್ರಾಣಿಗಳಿಗೆ ಬಂದೊದಗುವ ಅತಿವೃಷ್ಟಿಯಿಂದ ಪಾರುಮಾಡಿ ಸಲುಹುವುದು, ಅದಕ್ಕಾಗಿ ಪ್ರಾಣಿಗಳೆಲ್ಲ ಕೃತಜ್ಞತೆಯಿಂದ ಗವಿಯಬಳಿ ಬಂದಾಗ ಅವನ ಗವಿಯಲ್ಲಿ ಆಸರೆ ನೀಡಿದ್ದು, ಅದೊಂದು ಪವಿತ್ರವಾದ ಜಾಗವಾಗಿ ಪ್ರಾಣಿಗಳಿಗೆ ಮುಂದೆ ಕಾಣಿಸಿಕೊಂಡಿದ್ದು ಎಲ್ಲವು ಇಲ್ಲಿ ಮಾನವನ ವಾಸ್ತವ ಜಗತ್ತಿನ ಸಹಜವಾದ ಸಂಗತಿಗಳು ಕಾಣಿಸಿಕೊಳ್ಳುತ್ತವೆ. ಪ್ರಾಣಿಜಗತ್ತಿಗೆ ಇವು ಹೊಸದಾದ ಫ್ಯಾಂಟಸಿ ಲೋಕವನ್ನು ಎಳೆದಿಡುತ್ತವೆ. ಈ ಕತೆಗೂ ಜನಪದದ ಪ್ರೇರಣೆಯಿದೆ ಎಂಬುದನ್ನು ಅಲ್ಲಗಳೆಯಲಾಗದು.

ಶಶಿಧರ ವಿಶ್ವಾಮಿತ್ರರು ಪ್ರಮುಖ ಮಕ್ಕಳ ಕತೆಗಾರರು. ಇವರ ಕೃತಿಗಳನ್ನು ನೋಡಿದಾಗ ಮೊದಲು ಕಂಡು ಬರುವ ಅಂಶವೆಂದರೆ ಪರಿಸರದ ಸಂಗತಿಗಳು, ಉಸಿರಾಡಿ ಅನುಭವಿಸಿದ ಭಾಷೆ, ಭಾಷೆಯನ್ನು ಪ್ರಸ್ತುತ ಪಡಿಸಿದ ಬಗೆ. ಮಕ್ಕಳ ಕಥಾ ಪ್ರಪಂಚದಲಿ ಫ್ಯಾಂಟಸಿ ರಚನೆಗಳು ಕಂಡು ಬರುವುದೇ ವಿರಳ ಎನ್ನುವ ಕಾಲದಲ್ಲಿ ಅಪರೂಪವೆನಿಸುವ ಹೆಸರು ಶಶಿಧರ ವಿಶ್ವಾಮಿತ್ರರದು. ನಿಶ್ಚಿತವಾಗಿ ಬರೆಯುವ ಅಚ್ಚರಿ ಹಾಗೂ ಹೊಸ ಅನುಭವಗಳನ್ನು ಕಟ್ಟುವ ಮೋಡಿಗಾರಿಕೆ ಅವರದು.

**'ಕತೆಯಾದ ಹುಲಿ'** ಇವರ ದೀರ್ಘವಾದ ನೀಳ್ಗತೆಯಾಗಿದೆ. ಸುಮಾರು ಹದಿನೆಂಟು ಅಧ್ಯಾಯಗಳಲ್ಲಿ ವಿಂಗಡಿಸಿ ಬರೆದಿದ್ದಾರೆ. ಕಾಡು ಪ್ರಾಣಿಯ ಬದುಕಿಗೂ ಮನುಷ್ಯನ ಬದುಕಿಗೂ ಇರುವ ಅಂತರಗಳನ್ನು ಕೆದಕುತ್ತಾ ಹೋಗುವ ಕಥಾ ಹಂದರವಿದು. ಜೊತೆಗೆ ಮನುಷ್ಯ ಮತ್ತು ಪ್ರಾಣಿಗಳ ನಡುವಿನ ಜೀವನ ಸಂಘರ್ಷ ತೆರೆದುಕೊಳ್ಳುವ ಪರಿಯಿದೆ. ಶ್ಯಾಮಣ್ಣನವರ ಮನೆಯಲ್ಲಿ ತಿಥಿಕಾರ್ಯವನ್ನು ಮುಗಿಸಿಕೊಂಡು ದಾರಿಯಲ್ಲಿ ಹೋಗುತ್ತಿದ್ದ ಭೋಜಣ್ಣನು ತಲೆಯ ಮೇಲೆ ಕುಕ್ಕೆ, ಬಗಲಲ್ಲಿ ಒಂದು ಚೀಲ ನೇತುಹಾಕಿಕೊಂಡು ಹೋಗುವಾಗ ಮಧ್ಯಾಹ್ನ ಮುಗಿದಿತ್ತು. ಹುಲಿಯು ಬಂದರೆ ಹೆದರುವುದಿಲ್ಲ ಅದನ್ನು ಧೈರ್ಯವಾಗಿ ಹೆದುರಿಸುತ್ತೇನೆ ಎಂದು ಬರುವ ಭೋಜಣ್ಣನಿಗೆ ದಾರಿಯಲ್ಲಿ ಸಿಗುವ ಕೊಳದ ನೀರಿನಲ್ಲಿ ಹುಲಿಯು ಕಾಣಿಸುತ್ತದೆ. ಅದು ಅವನ ಮೇಲೆ ಎಗರಲಿಲ್ಲ, ಬದಲಾಗಿ ಅದು ಪುಕ್ಕಲು ಹುಲಿಯು ಆಗಿರಲಿಲ್ಲ. ಇಲ್ಲಿ ಮನುಷ್ಯ ಮತ್ತು ಪ್ರಾಣಿಗಳ ನಡುವೆ ಸಂಭಾಷಣೆ ಮತ್ತು ಸಂಬಂಧಗಳು ತೆರೆದುಕೊಳ್ಳುತ್ತವೆ. ಇಬ್ಬರಲ್ಲು ಯೋಚನೆಗಳು ಉಂಟಾಗಿ ಹುಲಿಯು ತನ್ನ ಸ್ವಭಾವವನ್ನು ಹೇಳಿಕೊಂಡು ದಾರಿ ಉದ್ದಕ್ಕೂ ಅವನೊಂದಿಗೆ ಬರುತ್ತದೆ. ಮನುಷ್ಯನನ್ನು ತನ್ನಲ್ಲೆ ಹತ್ತಾರು ಪ್ರಶ್ನೆಗಳು ಏಳುವಂತೆ ಮಾಡಿ, ಗೊಂದಲಗಳಿಗೆ ಸಿಲುಕಿಸಿ ನೋಡುವ ಪ್ರಸಂಗವಿದೆ. 'ರುಡ್ಯಡ್ ಕಿಪ್ಲಿಂಗ್' ನ 'ಜಂಗಲ್‌ಬುಕ್' ಕಾಲ್ಪನಿಕತೆಯನ್ನು ಫ್ಯಾಂಟಸಿಯಾಗಿಸಿ ಕನ್ನಡದಲ್ಲಿ ತಂದು ಸಮೀಕರಿಸಿದಂತೆ ಈ ಕತೆಯು ಕಾಣುತ್ತದೆ. ಈ ಕತೆಯಲ್ಲಿ ಮಕ್ಕಳ ಕಲ್ಪನಾ ಪ್ರಪಂಚ ತೆರೆದುಕೊಂಡು ಕನಸುಗಾರಿಕೆಯನ್ನು, ತಂತ್ರಗಾರಿಕೆಯನ್ನಾಗಿಸಿ ಈ ಕತೆಯಲ್ಲಿನ ಸಾರವನ್ನು

ಹೆಚ್ಚಿಸಲಾಗಿದೆ. ಸರಳ ರೀತಿಯ ಸಂಭಾಷಣೆಗಳಿಂದ ಕೂಡಿದ್ದು ಮಗುವಿನ ಭಾಷಾ ಪರಿಸರದಲ್ಲಿ ಗರಿಗೆದರಿದೆ. ಪ್ರಾಣಿಭಯ, ಆತಂಕ, ದೈವಿಕತೆ, ಮೂಢನಂಬಿಕೆಯಂತಹವುಗಳ ನಡುವೆ ಉಂಟಾಗುವ ತಾತ್ವಿಕ ಅಂಶಗಳು ಸಹಜವಾಗಿ ಮೂಡಿ ಬಂದು ಕೃತಿಯ ಆಶಯವನ್ನು ಸಾಕಾರಗೊಳಿಸಿವೆ. ಇವನ್ನು ಬಿಟ್ಟರೆ ಅಲ್ಲಲ್ಲಿ ಕೆಲವು ಕೃತಿಗಳಲ್ಲಿ ಫ್ಯಾಂಟಸಿಯು ವಿಭಿನ್ನವಾಗಿ ಕಾಣಿಸಿಕೊಂಡಿರುವುದು ಇದೆ. ಆನಂದ ಪಾಟೀಲರು ಫ್ಯಾಂಟಸಿಯನ್ನು ಭಾವಿಸಕೊಳ್ಳುವುದೇ ತಮ್ಮದೇ ಆದ ಅಗತ್ಯಗಳಿಗಾಗಿ. ಅವರು ತಮ್ಮ ದೀರ್ಘ ಕತೆಗಳಲ್ಲಿ, ಕಿರುಕತೆಗಳಲ್ಲಿ, ಪುಟಾಣಿಗಳಿಗಾಗಿರುವ ಕತೆಗಳಲ್ಲಿ ನಾನಾ ಬಗೆಯಲ್ಲಿ ಫ್ಯಾಂಟಸಿಯನ್ನು ತಂದುಕೊಳ್ಳುತ್ತಾರೆ. ಅವೆಲ್ಲ ಜನಪದ ಕತೆಗಳಲ್ಲಿ ಕಾಣಿಸಿಕೊಳ್ಳುವ ಹಾಗೆ ಅದ್ಭುತ ಮಾದರಿಯದಲ್ಲ, ಚಮತ್ಕಾರಿಕವಾದವಲ್ಲ. ಸಹಜವಾಗಿ ನಮ್ಮ ವಾಸ್ತವದ ಬದುಕಿನೊಡನೆ ಹೊಂದಿಕೊಂಡು ಉಂಟುಮಾಡಿಕೊಂಡಿರುವಂತಹವು. ಅವರ ಎರಡು ಕಾದಂಬರಿಗಳಲ್ಲೂ ಫ್ಯಾಂಟಸಿ ಕಾಣಿಸಿದೆ.

**ಡಂಡಂ ಊರಿಗೆ ಡಿಂಡಿಂ ಗಾಡಿ** ಎಂಬ ಕೃತಿಯಲ್ಲಿ ಮಕ್ಕಳೆಲ್ಲ ಆಟದಲ್ಲಿ ಗಾಡಿ ಮಾಡಿಕೊಂಡು ಊರ ಹೊರಗಿನ ಗುಡ್ಡಕ್ಕೆ ಹೋದಾಗ, ಅಲ್ಲಿನ ಗುಹೆಯ ಬಳಿ ಇದ್ದಕಿದ್ದ ಹಾಗೆ ಕಾಣಿಸಿಕೊಳ್ಳುವ ಹುಡುಗ ಫ್ಯಾಂಟಸಿ ಲೋಕದವನಾಗಿರುತ್ತಾನೆ. ಯಾವತ್ತೂ ಬದಲಾವಣೆಗಳು ಸಂಭವಿಸದ, ಯಾವ ಏರುಪೇರುಗಳೂ ಕಾಣಿಸದ, ಸ್ವಚ್ಛಂದದ ವಿನಾಶವನ್ನೇ ಕಾಣದ ಲೋಕದ ಮಾತುಗಳನ್ನು ಆಡುತ್ತಾನೆ. ಹಾಗೆಯೇ ತನ್ನೊಡನೆ ಬರುವಂತೆ ಎಲ್ಲರನ್ನು ಕರೆಯುತ್ತಾನೆ. ಕೆಲವೆಲ್ಲ ಮಕ್ಕಳು ತಯಾರಾಗಿ ಬಿಡುತ್ತಾರೆ. ಆದರೆ ಟುಮ್ಯಾನ ಅಕ್ಕ, ಕತೆಯ ನಿರೂಪಕಿ ಸಿದ್ಧವಾಗುವುದಿಲ್ಲ. ಅವಳಿಗೆ ತನ್ನ ಮನೆಯಲ್ಲಿ ನರಳುತ್ತ ಬಹುದಿನಗಳಿಂದ ಕತ್ತಲ ಕೋಣೆಯಲ್ಲಿ ಒರಗಿರುವ ಆಯಿಯ ನೆನಪು ಕಾಡುತ್ತದೆ. ಅವಳು ಫ್ಯಾಂಟಸಿ ಜಗತ್ತನ್ನು ಅದಕ್ಕಾಗಿಯೇ ನಿರಾಕರಿಸಿ ವಾಪಸಾಗಲು ಹವಣಿಸುತ್ತಾಳೆ. ಉಳಿದವರು ಮೌನವಾಗಿ ಅವಳನ್ನು ಹಿಂಬಾಲಿಸುತ್ತಾರೆ. ಹೀಗೆ ಅವರ ಆಟದ ಪಯಣ ಗಂಭೀರವಾಗಿ ತನ್ನ ಸುತ್ತಲಿನ ಮಕ್ಕಳ ಸೂಕ್ಷ್ಮದ ಸಂವೇದನೆಗಳ ವಾಹಕವಾಗುತ್ತದೆ. ಪಾಟೀಲರ ಇನ್ನೊಂದು ಕಾದಂಬರಿಯಲ್ಲು ಫ್ಯಾಂಟಸಿ ಹರಡಿಕೊಂಡಿದೆ. ಅದು ಬೆಳದಿಂಗಳಿನ ವರ್ಣನೆಯೊಂದಿಗೆ ಕಾಣಿಸಿಕೊಂಡಿದೆ.

**'ಬೆಳದಿಂಗಳು'** ಬೆಳದಿಂಗಳಿನ ವಿಚಿತ್ರ ಪರಿಣಾಮಗಳಿಂದ ಭಯಂಕರ ಆಕಾರದ ಕಲ್ಲುಗಳು ಹಗುರಾಗಿ ಕೈಯಿಂದ ಕದಲುವಂತಾಗುವ ಸಂಗತಿಯನ್ನು ಇಟ್ಟುಕೊಂಡು ಇಬ್ಬರು ಹುಡುಗರ ಕುತೂಹಲದ ಹುಡುಕಾಟವಾಗಿ ತೆರೆದು ಕೊಳ್ಳುತ್ತಾ ಹೋಗುತ್ತದೆ. ಇಲ್ಲಿಯೂ ಕೂಡ ಈ ಮಕ್ಕಳ ಪಯಣ ತಲುಪುವುದು ರೋಚಕತೆಯ ಜೊತೆಗೆ, ನೋವಿನ ಸಂಗತಿಗಳನ್ನು. ಆ ಕೋಟೆಯಲ್ಲಿ ಹಿಂದೊಮ್ಮೆ ಇವರಂಥವನೇ ಒಬ್ಬ ಹುಡುಗ ಪ್ರವೇಶಿಸಿ ಅತ್ಯಂತ ಭಾರೀ ಕಾಯದವನಾಗಿ ಬೆಳೆಯುತ್ತ, ಹುಚ್ಚನಂತಾಗಿ ತಿರುಗಿ ಬದುಕನ್ನೇ ದುರ್ಭರವಾಗಿಸಿಕೊಳ್ಳುತ್ತ, ಜನರಿಂದ ದೂರ ಉಳಿಯುವ ದಾರುಣ ಸನ್ನಿವೇಶಕ್ಕೆ ಈಡಾಗುವ ಪ್ರಸಂಗ, ಅದನ್ನು ಅವನು ಕಲ್ಲುಗಳ ಮೇಲೆ ಬರದು ಹೋಗಿರುವ ಪ್ರಸಂಗವಾಗಿ ಮಾನವೀಯ ತಿರುವಿನಲ್ಲಿ ಕತೆ ಮುಕ್ತಾಯ ಕಂಡುಕೊಂಡಿದೆ. ಆನಂದ ಪಾಟೀಲರ ಹಲವಾರು ಚಿಕ್ಕ ಕತೆಗಳಲ್ಲಿ ಫ್ಯಾಂಟಸಿ ನಾನಾ ಬಗೆಗಳಲ್ಲಿ ಕಾಣಿಸಿಕೊಂಡಿದೆ. 'ಹತ್ತು ಹತ್ತು ಇಪ್ಪತ್ತು' ಕೃತಿಯಲ್ಲಿನ ಮೊದಲಿನ ಎರಡು ಭಾಗಗಳಲ್ಲಿ ಫ್ಯಾಂಟಸಿಯನ್ನು ತಂದುಕೊಂಡಿದ್ದು ಇವೆಲ್ಲ ಕತೆಗಳು ಮಾನವೀಯ ಸಂವೇದನೆಗಳ, ಬಾಲ

ಮನೋಭಾವಗಳ ವಿಭಿನ್ನ ಚಿತ್ರಣಗಳಾಗಿಯೇ ಕಾಣುತ್ತವೆ. ಜನಪದ ಕತೆಗಳಂತೆ ಚಕಿತಗೊಳಿಸುವ, ಮಾಂತ್ರಿಕ ಸಂಗತಿಗಳಂತಲ್ಲ. ಪ್ರಾಣಿಗಳು ಮಾತನಾಡುತ್ತ ವ್ಯವಹರಿಸುವುದು, ಅವು ಮಕ್ಕಳೊಡನೆ ತಾವೂ ಒಂದಾಗುವುದು, ಸ್ಪಂದಿಸುವುದು ಇಲ್ಲೆಲ್ಲ ಕಾಣುತ್ತದೆ. ಇದೊಂದು ಬಗೆಯಲ್ಲಿ ಅದ್ಭುತವೆನ್ನುವ ಫ್ಯಾಂಟಸಿಯಲ್ಲ, ಬದಲಿಗೆ ತೀರ ಸಹಜದ ವ್ಯಾಪಾರಗಳಾಗಿ ನಮ್ಮ ನಡುವೆ ಮಾನವೀಯ, ಸೂಕ್ಷ್ಮದ ಮನೋವ್ಯಾಪಾರಗಳಾಗಿ ತೋರಿಕೊಳ್ಳಲು ಕಂಡುಕೊಂಡ ದಾರಿಗಳಾಗಿವೆ. ಗೊಂಬೆ ತನ್ನ ಹಿಂದಿನ ಪ್ರಸಂಗಗಳನ್ನೆಲ್ಲ ನೆನಪು ಮಾಡಿಕೊಳ್ಳುವುದು, ನಾಯಿಯೊಂದು ಒಂದು ಪುಟ್ಟ ಡೈರಿಯನ್ನು ಅದರ ಒಡೆಯ ಹುಡುಗನಿಗೆ ತಲುಪಿಸಲು ಪಾಪ ಪ್ರಜ್ಞೆಯಿಂದ ಹುಡುಕುತ್ತಲೇ ದಿನ ಕಳೆಯುವುದು, ಹತಾಶೆಗೊಳ್ಳುವುದು, ಹಂದಿಯೊಂದು ಇದ್ದಕಿದ್ದ ಹಾಗೆ ಮನೆಯನ್ನು ಪ್ರವೇಶಿಸಿ ತನ್ನ ಬಾಲ್ಯದ ಕತೆಯನ್ನು ಹೇಳಿಕೊಳ್ಳುವುದು ಮುಂತಾಗಿ ನಾನಾ ಬಗೆಯ ಹೊಸ ದಾರಿಗಳನ್ನು ಅವಾಸ್ತವದ ಸಾಧ್ಯತೆಗಳಾಗಿ ಕಂಡುಕೊಂಡುವಾಗಿವೆ. ಇವರ ಪ್ರಮುಖವಾದ ಮತ್ತೊಂದು ಕೃತಿ 'ಎದ್ದು ನಿಂತ ಬಾಲ' ವಾಸ್ತವದ ಚಿತ್ರಣದೊಂದಿಗೆ ಅಲ್ಲಲ್ಲಿ ಅಗತ್ಯವಾಗಿ ಕಾಣಿಸಿಕೊಳ್ಳುವ ಫ್ಯಾಂಟಸಿಯು ತಣ್ಣನೆಯ ಅನುಭವಗಳನ್ನು ತರುತ್ತದೆ. ಹುಡುಗನು ತನ್ನ ಕೊಠಡಿಯೊಳಗೆ ಚಿತ್ರವನ್ನು ಬಿಡಿಸುವಾಗ ಹಂದಿಯು ಪ್ರವೇಶಿಸಿ ಅದನ್ನು ನೋಡಲು ಬಯಸುತ್ತದೆ. ಇಲ್ಲಿ ಹುಡುಗ ಮತ್ತು ಹಂದಿಯು ವಾಸ್ತವವಾಗಿ ಸಂಧಿಸಿದರು, ಆ ಹಂದಿಯ ಬಯಕೆಗಳು, ಮಾತುಗಳು ಫ್ಯಾಂಟಸಿಯನ್ನು ಹೇಳುತ್ತವೆ. ಅದು ತನ್ನ ಬಗ್ಗೆ ಹೇಳಿಕೊಳ್ಳುವ ಸಂಗತಿಗಳು ಜನರಲ್ಲಿ ಹಂದಿಯ ಬಗೆಗೆ ಇರುವ ಕಲ್ಪನೆಗಿಂತ ವಿರುದ್ಧವಾದವುಗಳಾಗಿವೆ. 'ನನ್ನನ್ನು ಮಿಸ್ಟರ್ ಪಿಗ್, ಎಂದು ಕರೆಯುವುದು ನನಗಿಷ್ಟ' ಎಂದು ಕೇಳಿಕೊಳ್ಳುವುದು ವಾಸ್ತವಕ್ಕೂ ಮೀರಿದ ಆಧುನಿಕ ಫ್ಯಾಂಟಸಿಯ ಬಗೆಯಾಗಿದೆ. ಅವರ ಪುಟಾಣಿ ಎಂಬ ಕತೆಯಲ್ಲಿ ಕಾಣಿಸಿಕೊಳ್ಳುವ ಫ್ಯಾಂಟಸಿಯು ಮತ್ತೊಂದು ತೆರನಾದುದು. ಕಪ್ಪೆಯು ಮನೆಯೊಳಗೆ ಬಂದಾಗ ಅಜ್ಜಿಯು ವಿಚಲಿತಳಾಗದೆ, ಅದನ್ನು ಓಡಿಸಲು ಯತ್ನಿಸದೆ ಅದರ ಮೇಲೆ ಪಂಚೆ ಎಸೆದು ಅದನ್ನು ಹೊರ ಹಾಕುವುದಿದೆ. ಕಪ್ಪೆ ನಗುವುದು, ಮಲಗುವಂತೆ ಹೇಳಿದೊಡನೆ ಮಲಗುವುದು, ಮನುಷ್ಯನ ಮಾತುಗಳನ್ನು ಅದು ಅರ್ಥಮಾಡಿಕೊಳ್ಳುವುದು ಎಲ್ಲವೂ ಇಲ್ಲಿ ಸಾಧ್ಯವಾಗಿದೆ. ಆನಂದ ಪಾಟೀಲರ 'ಕಾಗದಗಳು ಬರುತ್ತಿವೆ' ಎಂಬ ಬಿಡಿ ಬಿಡಿಯಾದ ಬರೆಹಗಳಲ್ಲಿಯು ಫ್ಯಾಂಟಸಿಯನ್ನು ಹರಡಿಕೊಂಡು ನೋಡುವುದಿದೆ. ಪ್ರಾಣಿಗಳಿಗೆ ಪತ್ರಗಳ ಮೂಲಕ ಹೇಳುವುದು, ಅವು ಪತ್ರ ಬರೆದು ತಮ್ಮ ಅನಿಸಿಕೆಗಳನ್ನು ಹೇಳಿಕೊಳ್ಳುವುದಾಗಿ ಕಾಣಿಸಿಕೊಂಡಿವೆ. 'ಪಿಟ್ಟೂನ ಡೈರಿ'ಯು ಸಹ ಇಂತಹದೆ ಅಗತ್ಯದ ಫ್ಯಾಂಟಸಿಯಾಗಿದೆ. ಹುಡುಗನ ಬಳಿಯಿರುವ ಡೈರಿಯು ಬಣ್ಣ ಬಣ್ಣದಿಂದ ಕೂಡಿದ್ದು ಅದನ್ನು ಪಡೆಯಲು ನಾಯಿಯೊಂದು ಹಂಬಲಿಸುವ ಸಂಗತಿಗಳವೆ ಇವೆಲ್ಲವೂ ವಾಸ್ತವದಂತಿದ್ದರೂ ಅವುಗಳಿಗೆ ತದ್ವಿರುದ್ಧತೆಯನ್ನು ಹೇಳುತ್ತವೆ. ಅವರದೇ ಮತ್ತೊಂದು ಕತೆ 'ಗುಬ್ಬಿ ಕತೆಗಳು' ಸಹ ಫ್ಯಾಂಟಸಿಯನ್ನು ಹೇಳುವಂತದಿದೆ. ಆಫೀಸಿನಲ್ಲಿ ಕುಳಿತ್ತಿದ್ದಾಗ ಬರುವ ಗುಬ್ಬಿಯ ನೆಗೆದಾಟ, ಹಾರಾಟಗಳಿರುವಂತೆಯೆ ಅದು ಅವರು ನೋಡಲಿ ಎಂದು ಕಾಲನ್ನು ಎತ್ತಿ ಕುಣಿಯುವುದು, ಹಾಡು ಹೇಳುವುದು ವಾಕಿಂಗ್ ಮಾಡುವುದು ಇಂತಹ ಮನುಷ್ಯ ಸಹಜವಾದ ವರ್ತನೆಗಳನ್ನು ಅದು ಮಾಡುವುದಿದೆ. 'ಕತ್ತೆಯವರು' ಸಹ ಅವರ ಫ್ಯಾಂಟಸಿಯನ್ನು ಹೇಳುವ ಪ್ರಕಾರವಾಗಿದೆ. ಹುಡುಗನನ್ನು

ವಾಕಿಂಗ್ ಹೋಗುವಾಗ ಕೂಗಿ ನಿಲ್ಲಿಸಿ ಮಾತನಾಡುವ ಕತ್ತೆಯು ಸಹ ತನ್ನಲ್ಲಿಯು ಇರುವ ವಾಕಿಂಗ್ ಪ್ರೇಮವನ್ನು ಪ್ರಕಟಿಸುತ್ತದೆ. ಅದರ ಭಾವನೆಗಳನ್ನು ಅವನಲ್ಲಿ ವಿಶೇಷವಾಗಿ ಪ್ರಕಟಿಸಲು ಯತ್ನಿಸುತ್ತದೆ. ಇಂತಹ ಪ್ರಾಣಿಗಳಲ್ಲಿನ ಅಸಹಜವಾದ ಭಾವತೀವ್ರತೆಯನ್ನು ಪಾಟೀಲರ ಫ್ಯಾಂಟಸಿಗಳಲ್ಲಿ ಕಾಣಬಹುದು.

**'ಹಾರೋ ಹನುಮ'** ಎಸ್.ವಿ.ಶ್ರೀನಿವಾಸರಾವ್ ಅವರು ರಚಿಸಿದ ಕೃತಿ. ಒಂದು ಬಲೂನು ತನ್ನ ಕತೆಯನ್ನು ಹೇಳಕೊಂಡು ಸಾಗುತ್ತ ಫ್ಯಾಂಟಸಿಯ ಲೋಕವನ್ನು ಹಬ್ಬಿಸಿಕೊಂಡಿದೆ. ಬೊಂಬೆಯಾಟದವರ ಗುಂಪಿನಲ್ಲಿ ಸೇರಿಕೊಂಡು ಹನುಮನಾಗಿ ಅಲ್ಲಿಂದ ತಪ್ಪಿಸಿಕೊಂಡು ಏನೇನೆಲ್ಲ ಕಷ್ಟಕ್ಕೆ ಸಿಕ್ಕಿಹಾಕಿಕೊಂಡು, ಸಾಹಸವನ್ನೂ ತೋರಿಸುವುದು ಸಾಧ್ಯವಾಗಿಸಿದೆ. ಆದರೆ ಈ ಇಡೀ ಫ್ಯಾಂಟಸಿ ನಮ್ಮ ಸುತ್ತಲಿನ ವಾಸ್ತವದ ವಾತಾವರಣದಲ್ಲಿ ಅರಳಿದೆ. ಕೇವಲ ರಂಜನೆಯ ಉದ್ದೇಶಕ್ಕಾಗಿ ಅಲ್ಲ. ಬಡತನ, ಅದರಿಂದುಂಟಾಗುವ ಪಡಿಪಾಟಲು, ದೊಡ್ಡವರ ವ್ಯತಿರಿಕ್ತ ನಡವಳಿಕೆಗಳು ಇವೆಲ್ಲ ಈ ಕಥಾನಕದಲ್ಲಿ ಚಿತ್ರಣಗೊಳ್ಳುತ್ತ ಹೋಗಿವೆ. ಹಾಗಾಗಿ ಇಲ್ಲಿನ ಕತೆ ಅತ್ತ ಫ್ಯಾಂಟಸಿಯಾಗುತ್ತಲೂ, ವಾಸ್ತವದ ಬದುಕನ್ನು ಚಿತ್ರಿಸುತ್ತ ತನ್ನ ಅಸ್ತಿತ್ವವನ್ನು ಕಂಡುಕೊಂಡಿದೆ.

ಮತ್ತೂರು ಸುಬ್ಬಣ್ಣ ನವರು ಕೂಡ ಆಧುನಿಕ ಕಲ್ಪನೆಗಳೊಂದಿಗೆ ಫ್ಯಾಂಟಸಿಯನ್ನು ಭಾವಿಸಿಕೊಂಡು ಬರೆದಿರುವುದು ನಮ್ಮ ಮುಂದಿದೆ. ಅವರ **'ಇರುವೆ ಮತ್ತು ರಾಜ ಕುಮಾರಿ'** ಕತೆಯು ಫ್ಯಾಂಟಸಿಯನ್ನು ತಂದುಕೊಂಡು ಜನಪದ ಕತೆಗಳಂತಿದ್ದು, ಅದರಿಂದ ಭಿನ್ನತೆಯನ್ನು ಇರಿಸಿಕೊಂಡು ಕಾಣಿಸಿಕೊಂಡಿದೆ. ಮತ್ತೊಂದು ಕತೆಯಾದ ಕಾಲ್ಪನಿಕ ಲೋಕದ ನಿಗೂಢತೆಯನ್ನು ಹೇಳುವ ರೋಚಕತೆಯನ್ನು ತಂದಿರಿಸಿದ **ಅಂಶು ಮತ್ತು ರೋಬೋ'** ಅದ್ಭುತವಾದ ಕಲ್ಪನೆಗಳೊಂದಿಗೆ ಮೂಡಿಬಂದ ಹೊಸ ಫ್ಯಾಂಟಸಿಯನ್ನು ಮಕ್ಕಳ ಮುಂದಿರಿಸಿದೆ. ಅಂಶುವಿನ ಸಾಗರದ ತಳದಲ್ಲಿನ ಸಾಹಸಗಳಿಗೆ ರೋಬೋ ನೆರವಾಗುವುದು ಮತ್ತು ಅಲ್ಲಿನ ವಿಸ್ಮಗಳನ್ನು ರಸವತ್ತಾಗಿ ವಿವರಿಸುವುದು ಈ ಕಾದಂಬರಿಯಲ್ಲಿದ್ದು ವೈಜ್ಞಾನಿಕವಾದ ಹಿನ್ನೆಯಲ್ಲಿ ಮೂಡಿಬಂದಿದೆ.

## ೫.೮ ಫ್ಯಾಂಟಸಿಯ ವಿವಿಧ ಬಗೆಗಳು

ದೇಶ ಮತ್ತು ಕಾಲಾತೀತ ಘಟನೆಗಳನ್ನು ಆಧಾರವಾಗಿಸಿಕೊಂಡು ಫ್ಯಾಂಟಸಿಯ ಸ್ವರೂಪವನ್ನು, ಅದು ಬಳಕೆಯಾಗುವ ಕಥಾವಸ್ತುಗಳನ್ನು ಮತ್ತು ಅದರ ಪರಿಣಾಮದ ತೀವ್ರತೆಯನ್ನು ಅನುಸರಿಸಿ ವಿವಿಧ ಬಗೆಗಳಲ್ಲಿ ಅಧ್ಯಯನ ಮಾಡಬಹುದಾಗಿದೆ. ಇಲ್ಲಿ ವರ್ತಮಾನದ ಕಾಲ್ಪನಿಕತೆಯನ್ನು ಮತ್ತು ಭವಿಷ್ಯದ ಊಹೆಯನ್ನು ಪರಿಗಣಿಸಿದಂತೆಯೇ ವಿವಿಧ ಕಾಲಘಟ್ಟದಲ್ಲಿ ಉಂಟಾಗಬಹುದಾದ ಪರಾಕ್ರಮಗಳನ್ನು ಸಹಾ ಗಮನಿಸಬಹುದಾಗಿದೆ. ಕೆಲವೊಮ್ಮೆ ಅದು ಪುರಾಣ, ಐತಿಹಾಸಿಕ ಅಂಶಗಳನ್ನು ಭೂತಕಾಲದ ವರ್ಣನೆಯನ್ನು ಹೇಳುತ್ತದೆ. ನೈಜವಾದ ಕತೆಗಳಿಗೂ ಕೆಲವೊಮ್ಮೆ ಫ್ಯಾಂಟಸಿಯ ಮಿಶ್ರಣವಿಲ್ಲದೆ ನಿರೂಪಿಸಲು ಸಾಧ್ಯವಾಗುವುದಿಲ್ಲ. ಇವೆಲ್ಲಾ ತಾತ್ವಿಕತೆಯನ್ನು ಮುಂದಿಟ್ಟುಕೊಂಡು ಫ್ಯಾಂಟಸಿಯನ್ನು ವರ್ಗೀಕರಿಸಿ ನೋಡಬಹುದಾಗಿದೆ. ಇಂತಹ ಪ್ರಯತ್ನಗಳು ಕನ್ನಡದಲ್ಲಿ ಕಾಣಸಿಗುವುದಿಲ್ಲ. ವಿದೇಶಿಯರು

ಮಾತ್ರ ಈ ರೀತಿಯಿಂದ ವಿಂಗಡಿಸಿಕೊಂಡು ನೋಡಿರುವುದಿದೆ. ಇದು ಮುಂದಿನ ಕನ್ನಡದ ಫ್ಯಾಂಟಸಿ ಲೋಕವನ್ನು ಪ್ರವೇಶಿಸುವ ಆಶಯವನ್ನು ಅಲ್ಲಗಳೆಯಲಾಗುವುದಿಲ್ಲ. ಆದುದರಿಂದ ಇವುಗಳನ್ನು ಅಗತ್ಯವಾಗಿ ಭಾವಿಸಿಕೊಂಡು ನೋಡಬಹುದಾಗಿದೆ.

**ಸಮಕಾಲೀನ ಫ್ಯಾಂಟಸಿ: Currant fantacy**

ಸಮಕಾಲೀನವಾದ ವಾಸ್ತವ ಜಗತ್ತಿನಲ್ಲಿ ಸಾಮಾನ್ಯವಾಗಿ ನೈಜಕತೆ ಗಳನ್ನು ವಿವರಿಸಲು ಬಳಸುವ ಫ್ಯಾಂಟಸಿಯೆಂದು ಇದು ಉಲ್ಲೇಖಿತಗೊಂಡಿದೆ. ಇದರಲ್ಲಿ ಮಾಯಮಂತ್ರಗಳೊಂದಿಗೆ ಮಾಂತ್ರಿಕ ಜೀವಿಗಳು ಕಾಣಿಸಿಕೊಳ್ಳುತ್ತವೆ. ಇವು ನಮ್ಮದೇ ಪ್ರಪಂಚದಲ್ಲಿ ಇಲ್ಲವೇ ಅದೇ ತರಹದ ನಿಗೂಢ ಪ್ರಪಂಚದಲ್ಲಿ ವಾಸಿಸುವುದನ್ನು ಚಿತ್ರಿಸುತ್ತವೆ. ಇದೊಂದು ವಾಸ್ತವಕ್ಕೆ ಹತ್ತಿರದಿಂದ ಕಾಣುವ ಮಾಯ ಜಗತ್ತಿನ ಸೃಷ್ಟಿಯನ್ನು ಕಟ್ಟಿಕೊಡುವುದರಿಂದ ಇದನ್ನು ಆಧುನಿಕ ಫ್ಯಾಂಟಸಿ ಎಂಥಲೂ, ಸ್ಥಳೀಯ ವಸ್ತುಗಳ ವಿನ್ಯಾಸವನ್ನು ಸೃಷ್ಟಿಸುವುದರಿಂದ ಸ್ಥಳೀಯ ಫ್ಯಾಂಟಸಿ ಎಂಥಲೂ ಕರೆಯಬಹುದು.

**ವೀರರ ಫ್ಯಾಂಟಸಿ: Heroic fantasy**

ಈ ಫ್ಯಾಂಟಸಿಯು ಕಾಲ್ಪನಿಕ ಭೂಮಿಯನ್ನು ಸೃಷ್ಟಿಸಿ ಅಲ್ಲಿನ ವೀರರ ಪರಾಕ್ರಮವನ್ನು ಹೇಳಿಕೊಡುತ್ತದೆ. ನಾಯಕನಾದವನಿಗೆ ಗೆಲ್ಲುವ ಹಂಬಲವಿಲ್ಲದಿದ್ದರೂ ಗೆಲುವು ಲಭಿಸಿಬಿಡುತ್ತದೆ. ರಾಜ, ಅವನ ಪೂರ್ವಜರು, ಪೋಷಕರು ಪರಂಪರೆಯಾದಿಯಾಗಿ ವಿಜಯವನ್ನು ಹೊಂದಿದ್ದರು ಅದು ಅವನ ತಿಳುವಳಿಕೆಗೆ ಬಾರದ ರೀತಿಯಲ್ಲಿ ಘಟನೆಗಳನ್ನು ನಿರೂಪಿಸುವ ತಂತ್ರಗಾರಿಕೆ ಕಾಣಿಸಿಕೊಳ್ಳುತ್ತದೆ. ಘಟನೆಗಳು ಘಟಿಸುವಾಗ ನಾಯಕನನ್ನು ವಿನಮ್ರ ಮೂಲದವನಾಗಿ ಚಿತ್ರಿಸಿ ಅವನನ್ನು ಆತನ ನಿರೀಕ್ಷೆಗೂ ಮೀರಿ ನಡೆಸಿಕೊಳ್ಳುತ್ತವೆ. ತನ್ನ ಶಕ್ತಿಮೀರಿದ ಸಾಹಸಗಳಂದ ಅವನು ಅಧ್ಯಾತ್ಮಿಕ ಮತ್ತು ದೈಹಿಕವಾದ ಸವಾಲುಗಳನ್ನು ಎದುರಿಸಿ ವಿಜಯಶಾಲಿಯಾಗುವುದನ್ನು ಇಲ್ಲಿ ಕಾಣಬಹುದು. ಇವು ನಾಯಕ ಕೇಂದ್ರಿಕೃತ ಕತೆಗಳನ್ನು ನಿರೂಪಿಸುತ್ತವೆ. ನಮ್ಮಲ್ಲಿನ ವಿಶ್ವಾಮಿತ್ರನ ಕೃತಕ ಲೋಕಗಳ ಸೃಷ್ಟಿಯಿಂದ ಉಂಟಾಗುವ ತೊಂದರೆಗಳನ್ನು ಸತ್ಯಸಂಧತೆಯ ಮೌಲ್ಯವನ್ನಿರಿಸಿಕೊಂಡು ಅಗತ್ಯಕನುಸಾರವಾಗಿ ಹರಿಶ್ಚಂದ್ರನ ಸಾತ್ವಿಕಗುಣಗಳು ಶಕ್ತಿಮೀರಿ ಜಯಿಸುವುದನ್ನು ಈ ಫ್ಯಾಂಟಸಿಯ ಬಗೆಯಲ್ಲಿ ವರ್ಣಿಸಿರುವುದನ್ನು ತೌಲನಿಕವಾಗಿ ಕಾಣಬಹುದು.

**ಹೈ ಫ್ಯಾಂಟಸಿ: High Fantasy**

ಕಥಾವಸ್ತುವು ತನ್ನದೇ ಆದ ವಿಷಯವನ್ನಿರಿಕೊಂಡು ಪಾತ್ರಗಳನ್ನು ಸಹ ತಾನೇ ಚಿತ್ರಿಸಿಕೊಂಡು, ವಿಶಿಷ್ಟತೆಯಿಂದ ಕೂಡಿದ ಕಾಲ್ಪನಿಕ ಜಗತ್ತಿನಲ್ಲಿ ನಡೆಯುವ ಸಂಗತಿಗಳನ್ನು ಇದು ವ್ಯಾಖ್ಯಾನಿಸುತ್ತದೆ. ಕಥಾವಸ್ತುವಿನ ವಿಷಯದಲ್ಲಿನ ಗಂಭೀರತೆಯನ್ನು ಸಾದರಪಡಿಸಲು ಇದನ್ನು ಅನುಸರಿಸಬಹುದಾದುದರಿಂದ ಇದನ್ನು ಹೈ ಫ್ಯಾಂಟಸಿ ಎಂಥಲೂ ಕರೆಯುತ್ತಾರೆ.

**ಐತಿಹಾಸಿಕ ಫ್ಯಾಂಟಸಿ: Historical fantasy**

ನೈಜ ಸಂಗತಿಗಳಿಂದ ಕೂಡಿದ, ನಿರ್ದಿಷ್ಟ ವಸ್ತು ವಿಷಯವುಳ್ಳ ಅಂಶಗಳನ್ನು ರೋಚಕವಾಗಿ ಪ್ರಸ್ತುತಪಡಿಸುವ ಗುಣವುಳ್ಳ ಫ್ಯಾಂಟಸಿಯು ಐತಿಹಾಸಿಕ ಫ್ಯಾಂಟಸಿ ಎನಿಸುತ್ತದೆ. ಇದು ರಾಜ ಮಹಾರಾಜರ ಕತೆಯನ್ನು, ಆದರ್ಶಗಳನ್ನು, ಪರಾಕ್ರಮವನ್ನು, ಯುದ್ಧಸಂಗತಿಗಳನ್ನು, ಅವರ ಆಳ್ವಿಕೆಯ ಬಗೆಯನ್ನು, ಕೊಡುಗೆಯನ್ನು, ಅವರ ವ್ಯಕ್ತಿತ್ವವನ್ನು, ದಾಂಪತ್ಯವನ್ನು, ಕೌಟುಂಬಿಕ ಸಂಗತಿಗಳನ್ನು, ದಾಳಿಗಳನ್ನು, ರಾಜ್ಯವಿಸ್ತರಣೆಯನ್ನು ವಸ್ತು ನಿಷ್ಠವಾಗಿ ವಿವರಿಸುತ್ತದೆ. ಇತಿಹಾಸವನ್ನು ಹೇಳುವಾಗ ಉಂಟಾಗುವ ಪರಿಣಾಮಗಳನ್ನು ಹೇಳುವಂತೆ ಸಮಸ್ಯೆಗಳನ್ನು, ಅವರು ಕಂಡುಕೊಂಡ ಪರಿಹಾರಗಳನ್ನು ನಿರೂಪಿಸಲು ಇದು ಸಮರ್ಥವಾದ ಫ್ಯಾಂಟಸಿಯಾಗಿದೆ.

**ಮಧ್ಯಕಾಲೀನ ಫ್ಯಾಂಟಸಿ: Medieval fantasy**

ಮಧ್ಯಕಾಲೀನ ಯುಗದಲ್ಲಿ ಉಂಟಾದ ಸಾಹಿತ್ಯಕ ಬದಲಾವಣೆಗಳಲ್ಲಿ ಕಂಡುಕೊಂಡ ಫ್ಯಾಂಟಸಿಯು ಇದಾಗಿದ್ದು ಹೆಚ್ಚಿನ ಬಗೆಯ ಫ್ಯಾಂಟಸಿ ಸ್ವರೂಪವುಳ್ಳದಾಗಿದೆ. ಕೆಲವೊಮ್ಮೆ ಅದ್ಭುತಗಳನ್ನು ಹೇಳದಂತೆ ಕಂಡುಬಂದರು ಐತಿಹಾಸಿಕ ಘಟನೆಗಳ ಕಾಲ್ಪನಿಕ ಆವೃತ್ತಿಯನ್ನು ಕೆಲವೊಮ್ಮೆ ನಿರೂಪಿಸಲು ಬಳಕೆಯಾಗುವ ಸೂಕ್ತ ಫ್ಯಾಂಟಸಿ ಇದಾಗಿದೆ. ಪಾತ್ರಾಭಿನಯ, ಘಟನೆಗಳು, ವ್ಯಕ್ತಿ ವರ್ಣನೆ, ಪಠ್ಯಾಧಾರಿತ ನಾಟಕಗಳು, ನಾಯಕನ ಶೃಂಗಾರ ವಿಲಾಸಗಳು ಮುಂತಾದವುಗಳ ನಿರೂಪಣೆಗೆ ಬಳಕೆಯಾಗುವ ಫ್ಯಾಂಟಸಿಯಾಗಿದೆ.

**ಒವುಕ್ಸಿಯಾ: Wuxia**

ಫ್ಯಾಂಟಸಿಯು ಮಾರ್ಷಲ್ ಆರ್ಟ್ಸ್ ಪ್ರಕಾರದ ವಿಶಿಷ್ಟ ಫ್ಯಾಂಟಸಿಯ ಉಪಪ್ರಕಾರವಾಗಿದೆ.

**ತರುಣರ ಫ್ಯಾಂಟಸಿ: Juvenile fantasy**

ಮಕ್ಕಳ ಸಾಹಿತ್ಯಗಳನ್ನೊಳಗೊಂಡಂತೆ ಓದುವ ಹವ್ಯಾಸವುಳ್ಳ, ಇನ್ನೂ ವಯಸ್ಕರಲ್ಲದ ತರುಣ ಓದುಗರಿಗಾಗಿ ಉದ್ದೇಶಿಸಿ ರಚಿತವಾದ ಫ್ಯಾಂಟಸಿಯು ಇದಾಗಿದೆ. ಮಕ್ಕಳನ್ನು ಮುಖ್ಯ ಪಾತ್ರಧಾರಿಗಳನ್ನಾಗಿಸಿ ಅಸಾಮಾನ್ಯವಾದ ಸಾಮರ್ಥ್ಯಗಳನ್ನು ಅವರಲ್ಲಿ ತುಂಬಿರುವಂತೆ ಚಿತ್ರಿಸಿ, ಅವರಲ್ಲಿ ಶಕ್ತಿಯನ್ನು ಅಪರಿಮಿತವಾಗಿ ಪ್ರದರ್ಶನಗೊಳ್ಳುವಂತೆ ಮಾಡಿ ಎದುರಾಳಿಯನ್ನು ಸದೆಬಡಿಯುವಂತೆ ಮಾಡುವ ಕತೆಗಳ ನಿರೂಪಣೆಯು ಇಲ್ಲಿ ಕಾಣಿಸಿಕೊಳ್ಳುತ್ತದೆ. ತರುಣರ ಭಾವನೆಗಳು, ಕನಸುಗಳನ್ನು, ವಾಸ್ತವಾತೀತವಾಗಿ ರೋಚಕತೆಯಲ್ಲಿ ಹಿಡಿದಿಡಲು ಇದು ಸಹಕಾರಿಯಾಗಿದೆ.

**ದಂತಕತೆ ಗಳ ಫ್ಯಾಂಟಸಿ: Legends**

ಈ ಬಗೆಯ ಫ್ಯಾಂಟಸಿಯು ಕತೆ ಗಳಲ್ಲಿ ಕಾಲ್ಪನಿಕ ವಸ್ತುಗಳನ್ನು ಒಳಗೊಂಡಿದ್ದು ಮೂಲವಾಗಿ ದೇಶಭಕ್ತಿ, ರಾಷ್ಟ್ರೀಯತೆ, ರಾಷ್ಟ್ರ ನಾಯಕನ, ಪ್ರಸಿದ್ಧ ಜಾನಪದ ವ್ಯಕ್ತಿಯ ಚಿತ್ರಣವನ್ನು ಅವರ ಸಾಹಸದ ಹಿಂದಿನ ರೋಚಕತೆಗಳನ್ನು ಬಣ್ಣಿಸಲು ಸಹಕಾರಿಯಾದುದಾಗಿದೆ. ಇದರಲ್ಲಿ ಪುರಾಣದ ಪುಣ್ಯಪುರುಷರ

ಬಗೆಗಿನ ಗುಣಗಾನಗಳನ್ನು ಹೇಳುವಂತೆ ಐತಿಹಾಸಿಕ ವ್ಯಕ್ತಿಗಳ ಬಗೆಗಿನ ಸ್ವಾರಸ್ಯಕರ ಸಂಗತಿಗಳು ಹೇಳಲ್ಪಡುತ್ತವೆ.

**ಲೋ ಫ್ಯಾಂಟಸಿ : Low fantasy**

ತಾರ್ಕಿಕ ಜಗತ್ತಿನಲ್ಲಿ ಸಂಭವಿಸುವ ನೈಜತೆಯಿಂದ ಕೂಡಿರದ, ವಿವೇಚನಾ ಶೀಲತೆಯನ್ನು ಒಳಗೊಳ್ಳದ, ಓದಬಹುದಾದ ಸಂಗತಿಗಳಿಂದ ಕೂಡಿದ, ನೈಜ ಜಗತ್ತಿನಲ್ಲಿನ ಸಂಗತಿಗಳಿಗೆ ಭಿನ್ನವೆನಿಸುವುದನ್ನು ವಿವರಿಸುವ ಫ್ಯಾಂಟಸಿಯು 'ಲೋ ಫ್ಯಾಂಟಸಿ' ಎನಿಸುತ್ತದೆ.

**ಕಾಮಿಕ್ ಫ್ಯಾಂಟಸಿ : Comic fantasy**

ಈ ಫ್ಯಾಂಟಸಿಯು ಮುಖ್ಯವಾಗಿ ಉದ್ದೇಶ ಮತ್ತು ದಾಟಿಗಳಲ್ಲಿ ಹಾಸ್ಯವನ್ನು ಸಾದರಪಡಿಸುತ್ತದೆ. ಸಾಮನ್ಯವಾಗಿ ಕಾಲ್ಪನಿಕತೆಯನ್ನೇ ಜೀವಳವಾಗಿರಿಸಿಕೊಂಡು ಹಾಸ್ಯದಿಂದ ರಂಜಿಸುತ್ತದೆ. ಹಾಸ್ಯವು ಇದರಲ್ಲಿ ಬಹು ಪ್ರಧಾನವಾಗಿದ್ದು ಮಕ್ಕಳನ್ನು ಸೆಳೆಯುವಂತದಾಗಿರುತ್ತದೆ. ಮಹಾಕಾವ್ಯ ಫ್ಯಾಂಟಸಿ ಮುಂದೆ ಇದು ಹೋಲಿಕೆಗೆ ಸಿಕ್ಕಾಗ ಇದನ್ನು ಗಂಭೀರವಲ್ಲದ ಕಿರಿಫ್ಯಾಂಟಸಿ ಎನ್ನಬಹುದಾಗಿದೆ. ಇಲ್ಲಿ ಅವಾಸ್ತವತೆಯು ಎದ್ದುಕಾಣುತ್ತದೆ. ಅನ್ಯೆಜತೆಯು ಇದರ ಭಾಗವಾಗಿದೆ. ರಂಜನೆಯ ಪರಿಗಣನೆಯಲ್ಲಿ ಇದಕ್ಕೆ ಪ್ರಾಮುಖ್ಯತೆ ಲಭಿಸುತ್ತದೆ.

**ಮಾಂತ್ರಿಕತೆಯ ಫ್ಯಾಂಟಸಿ : Magical fantasy**

ಮಾಂತ್ರಿಕ ಶಕ್ತಿಯನ್ನು ಉಪಯೋಗಿಸಿಕೊಂಡು ದುಷ್ಟಶಕ್ತಿಯೊಂದಿಗೆ ಹೋರಾಡುವ, ಮಾಂತ್ರಿಕ ಲೋಕದ ಅನಾವರಣತೆಯುಳ್ಳ ವಸ್ತುಗಳಿಂದ ಕೂಡಿರುತ್ತದೆ. ದುಷ್ಟಶಕ್ತಿಗಳ ಅಬ್ಬರ, ಕೃತಕವಸ್ತುಗಳ ಸೃಷ್ಟಿ, ಮಂತ್ರ ಚಮತ್ಕಾರಗಳು, ಮರೆವು, ಜಾಣ್ಮೆಗಳು, ತಂತ್ರ ಪ್ರತಿತಂತ್ರಗಳು ಮೇಳೈಸಿರುವುದನ್ನು ನೋಡುತ್ತೇವೆ. ಇದು ಜಪಾನಿನ ಸಾಹಿತ್ಯದಲ್ಲಿ ಹೇರಳವಾಗಿ ಕಾಣಿಸುತ್ತದೆ. ಭಾರತದ ಜನಪದ ಸಾಹಿತ್ಯದಲ್ಲೂ ಕಾಣಸಿಗುತ್ತದೆ.

**ಪೌರಾಣಿಕತೆಯ ಫ್ಯಾಂಟಸಿ : Mythic fiction**

ಇವು ನಗರದ ಕಾಲ್ಪನಿಕತೆಯ ಅಂಶಗಳಿಂದ ಕೂಡಿದ್ದು ಪುರಾಣ, ಜನಪದಗಳಲ್ಲಿನ ಕಾಲ್ಪನಿಕತೆಯನ್ನು ಒಳಗೊಂಡ ಕತೆಗಳನ್ನು ನಿರೂಪಿಸಬಲ್ಲವು. ಪುರಾಣ ಕಾಲದ ನಗರದ ವೈಭವ, ಭೋಗಜೀವನ ಕಲಾ ನೈಪುಣ್ಯತೆ, ವ್ಯವಹಾರಗಳನ್ನು ವಸ್ತುವಾಗಿರಿಸಿಕೊಂಡು ವಿವರಿಸುತ್ತವೆ.

**ರೊಮ್ಯಾಂಟಿಕ್ ಫ್ಯಾಂಟಸಿ : Romantic fantasy**

ಇದು ಸಾಮನ್ಯವಾಗಿ ಮಾನವನ ಶೃಂಗಾರಪರ ಪ್ರಣಯವಿಲಾಸಗಳು, ರಸಜೀವನ, ದಾಂಪತ್ಯ ಸರಸ, ರಾಜಮಹಾರಾಜರ ಶೃಂಗಾರ ಬದುಕುಗಳನ್ನು ಹೇಳುವಂತೆಯೇ ಅವುಗಳ ಅಣಕ, ವ್ಯಂಗ್ಯ, ಅಪಹಾಸ್ಯ ಕತೆಗಳನ್ನು ವರ್ಣಿಸಲು ಬಳಕೆಯಾಗುವ ರೀತಿಗಳನ್ನು ಅನುಸರಿಸುತ್ತವೆ.

**ವೈಜ್ಞಾನಿಕ ಫ್ಯಾಂಟಸಿ : Science fantasy**

ವೈಜ್ಞಾನಿಕವಾಗಿ ವಿವರಿಸಬಹುದಾದ ಅಥವಾ ವೈಜ್ಞಾನಿಕ ಅಂಶಗಳನ್ನು ಒಳಗೊಂಡಂತೆ ಸಂಯೋಜಿಸಬಹುದಾದ ಫ್ಯಾಂಟಸಿಯು ವೈಜ್ಞಾನಿಕ ಫ್ಯಾಂಟಸಿ ಎನಿಸುತ್ತದೆ. ಸಂಶೋಧನೆ, ಆವಿಷ್ಕಾರ, ಅನ್ವೇಷಣೆಗಳಂತಹ ಅಂಶಗಳನ್ನು ಇಲ್ಲಿ ಊಹಿಸಿಕೊಳ್ಳುವ ಪರಿಯನ್ನು ಕಾಣುತ್ತೇವೆ. ಭೂಮಿಯ ಮೇಲೆ ನಡೆಯುವ ವರ್ತಮಾನಗಳನ್ನು ಇತರ ಆಕಾಶಕಾಯಗಳಲ್ಲಿಯು ಕಾಣುವ ಹಂಬಲವನ್ನು ಇದು ತೋರಿಸುತ್ತದೆ. ಇವು ಕೆಲವು ಬಾರಿ ಸತ್ಯಶೋಧನೆಗೆ ನೆರವಾಗಲೂ ಬಹುದಾಗಿವೆ. ಅನ್ಯಗ್ರಹ ಜೀವಿಗಳ ಶೋಧ, ಅವುಗಳ ಸಂಭಾಷಣೆ, ಜೀವನ ಶೈಲಿಯನ್ನು ಇಲ್ಲಿ ಕಲ್ಪಿಸಿಕೊಳ್ಳಲು ಅವಕಾಶವಿರುತ್ತದೆ. ಅನ್ಯಗ್ರಹ ಯಾನಮಾಡಿ ಬರುವ ಕಲ್ಪನೆಗಳು ಇಲ್ಲಿ ಗರಿಗೆದರುತ್ತವೆ.

**ಸ್ವೋರ್ಡ್ ಮತ್ತು ಪ್ಲಾನೆಟ್ : Sword and planet**

ಈ ಪ್ರಕಾರವು ಇತರ ಗ್ರಹಗಳ ಮೇಲೆ ಹುಟ್ಟಿಕೊಂಡ ಸಾಹಸ ಕತೆಗಳನ್ನು ಒಳಗೊಂಡಿದೆ. ಸಾಮಾನ್ಯವಾಗಿ ಮನುಜರನ್ನು ಮುಖ್ಯ ಪಾತ್ರಧಾರಿಗಳಾಗಿ ತೋರಿಸುತ್ತಾರೆ. ಕತ್ತಿ ಮತ್ತು ಗ್ರಹ ಹಾಗೂ ಗ್ರಹದಲ್ಲಿನ ಪ್ರಣಯಗಳ ಸಮಂಜಸವಾದ ಅತಿಕ್ರಮಣವನ್ನು ಕಾಣಬಹುದು. ಬಾಹ್ಯಾಕಾಶದ ಪ್ರಣಯ ಭಾಗವೇ ಅತಿರಂಜನೀಯವಾಗಿ ಮೂಡಿಬಂದಿರುತ್ತದೆ. ಇದು ಹೆಚ್ಚು ವೈಜ್ಞಾನಿಕವೂ, ತಾಂತ್ರಿಕವು ಆಗಿರುತ್ತದೆ.

**ಅರ್ಬನ್ ಫ್ಯಾಂಟಸಿ : Urban fantasy**

ಅದ್ಭುತವಾದ ನಿರೂಪಣೆಯನ್ನೊಳಗೊಂಡಿದ್ದು ಸಮಕಾಲೀನ ಸಮಾಜದ ನಗರದ ಸೆಟ್ಟಿಂಗ್, ಕಾಲ್ಪನಿಕ ನಗರಗಳು ಮತ್ತು ಅಲೌಕಿಕ ಅಂಶಗಳನ್ನು ಒಳಗೊಂಡ ಕತೆಗಳು ಐತಿಹಾಸಿಕ, ಆಧುನಿಕ ಅಥವಾ ಭವಿಷ್ಯದ ಅವಧಿಗಳಲ್ಲಿ ಕಾಲ್ಪನಿಕತೆಯನ್ನು ಒಳಗೊಂಡಿರುತ್ತದೆ. ಇವುಗಳ ಎಲ್ಲಾ ವಸ್ತುವು ನಗರ ಪರಿಸರದ ವಾತಾವರಣವನ್ನು ಬಿಂಬಿಸುವಂತವಾಗಿರುತ್ತವೆ.

**ಡಾರ್ಕ್ ಫ್ಯಾಂಟಸಿ : Dark fantasy**

ಭಯಾನಕ ಅಂಶಗಳನ್ನು ಸಂಯೋಜಿಸುವ ಸಾಹಿತ್ಯವು ಇದಾಗಿದ್ದು ಕಲಾತ್ಮಕ ಮತ್ತು ಚಲನಚಿತ್ರಗಳನ್ನು ಉಲ್ಲೇಖಿಸುವ ಒಂದು ಉಪಜಾತಿಯೂ ಆಗಿದೆ. ಕತ್ತಲು ಮತ್ತು ಮಂದಬೆಳಕಿನ ಭಯದ ವಾತಾವರಣವನ್ನು ಮೂಡಿಸುತ್ತದೆ. ಹೊಸ ಸನ್ನಿವೇಶ ಹಾಗೂ ಶಬ್ಧಗಳನ್ನು ಹುಟ್ಟು ಹಾಕುವ ಕೃತಿಗಳಲ್ಲಿ ಈ ಫ್ಯಾಂಟಸಿ ಕಾಣಿಸಿಕೊಳ್ಳುತ್ತದೆ.

**ಫೇಬಲ್ಸ್: Fables**

ಉಪಯುಕ್ತವಾದ ಸತ್ಯವನ್ನು ನಿರೂಪಿಸುವ ಪ್ರಕಾರ ಇದಾಗಿದೆ. ಪ್ರಾಣಿಗಳು ಮಾನವರಂತೆ ಮಾತನಾಡುವ ಅಲೌಕಿಕ ಕತೆಗಳನ್ನು ವರ್ಣಿಸಲು ಇದು ಬಳಕೆಯಾಗುತ್ತದೆ. ಇಲ್ಲಿ ಮಾನವನ ಧರ್ಮ, ನೀತಿ, ಸತ್ಯ, ಪ್ರಾಮಾಣಿಕತೆಗಳನ್ನು ಪ್ರಾಣಿಗಳು ಅನುಸರಿಸುತ್ತವೆ.

**ಫೇರಿಟೇಲ್ ಫ್ಯಾಂಟಸಿ: Fairytale fantasys**

ಇದು ಜಾನಪದೀಯ ಲಕ್ಷಣಗಳಂದ ಕೂಡಿದ, ಇತರ ವಿಧಾನಗಳಗಿಂತ ಇದು ಭಿನ್ನತೆಯನ್ನು ಪ್ರದರ್ಶಿಸಿಕೊಳ್ಳುವ ವಿಶಿಷ್ಟವಾದ ಫ್ಯಾಂಟಸಿ ಪ್ರಕಾರವಾಗಿದೆ. ಜನಪದ ಕತೆಗಳನ್ನು ಪ್ರಸ್ತುತಿ ಪಡಿಸುವ ಕಲೆಗಾರಿಕೆಗೆ ಹೆಚ್ಚು ಪ್ರಯೋಜನಕಾರಿ ಇದಾಗಿದೆ.

**ಹಾರ್ಡ್ ಫ್ಯಾಂಟಸಿ: Hard fantasy**

ಇದು ತರ್ಕಬದ್ಧವಾದ ಮತ್ತು ಜಗತ್ತಿನ ಪ್ರಸಿದ್ಧ ಸ್ಥಳಗಳ ಮಾಹಿತಿಯನ್ನು ಒಳಗೊಂಡಂತೆ ನಿರೂಪಿಸುತ್ತದೆ. ಪರಿಚಿತ ಸ್ಥಳಗಳ ಬಗೆಗೆ ಹೆಚ್ಚಾಗಿ ಕೇಂದ್ರೀಕರಿಸಿ ಹೇಳುವುದರಿಂದ ಹೆಚ್ಚು ಪ್ರಯೋಜನಕಾರಿಯೂ ಆಗಿದೆ. ಇದು ವೈಜ್ಞಾನಿಕವಾದ ಕಾಲ್ಪನಿಕತೆನ್ನು ಸ್ಥಳ ಪುರಾಣಗಳೊಂದಿಗೆ ಸೇರಿಸಿ ಹೇಳುವುದಾಗಿದೆ.

**ಡಯಿಂಗ್ ಅರ್ಥ್: Dying Earth**

ಈ ಪ್ರಕಾರವು ಜೀವನದ ಅಂತ್ಯ ಮತ್ತು ಭೂಮಿಯ ಅಂತ್ಯವನ್ನು ಬಣ್ಣಿಸಿ ಹೇಳಲು ಬಳಕೆಯಾಗುತ್ತದೆ. ಸ್ವತಃ ಬ್ರಹ್ಮಾಂಡದ ನಿಯಮಗಳನ್ನು, ಅವುಗಳು ವಿಫಲವಾಗುವ ಬಗೆಯನ್ನು ತಿಳಸುತ್ತದೆ.ಚ ಇದು ವೈಜ್ಞಾನಿಕ ಫ್ಯಾಂಟಸಿಯ ಉಪಜಾತಿಯಾಗಿ ಕಾಣಿಸಿಕೊಳ್ಳುತ್ತದೆ. ಕೃತಿಯಲ್ಲಿನ ಕಾಲ್ಪನಿಕತೆಯನ್ನು ಸಾದರಪಡಿಸುವಾಗ ದೂರದ ಭವಿಷ್ಯದಲ್ಲಿನ ಸ್ಥಗಿತಗಳು, ಪ್ರಪಂಚದ ಸವೆಯುವಿಕೆ, ಗಾಯಗೊಳ್ಳುವ ಬಗೆಯನ್ನು ತಿಳಸುತ್ತದೆ. ತನ್ನ ಸಂಪತ್ತನ್ನೆಲ್ಲ ಕಳೆದುಕೊಳ್ಳುವ ರೀತಿ ಮತ್ತು ಅದನ್ನು ಮರಳ ಗಳಸಿಕೊಳ್ಳುವ ಬಗೆಯನ್ನು ಇಲ್ಲಿ ಅಗತ್ಯವಾಗಿ ಕಾಣಬಹುದಾಗಿದೆ.

**ಶೆನ್ಮೋ ಫ್ಯಾಂಟಸಿ: Shenmo fantasy**

ಚೀನ ಮತ್ತು ಪೂರ್ವ ಏಷ್ಯಾದ ಪುರಾಣಗಳನ್ನು ಒಳಗೊಂಡಂತೆ ನಿರೂಪಿಸುವ ಫ್ಯಾಂಟಸಿಯ ಬಗೆಯು ಇದಾಗಿದೆ. ಅಲ್ಲಿನ ಪುರಾಣ ಜನರ ಧಾರ್ಮಿಕತೆ, ನಂಬಿಕೆಗಳನ್ನು ಸಾದರಪಡಿಸಲು ಇದು ಬಳಕೆಯಾಗುತ್ತದೆ.

**ಖಡ್ಗ ಮತ್ತು ವಾಮಾಚಾರ : Sword and sorcery**

ಇದೊಂದು ವೀರೋಚಿತವಾದ ಫ್ಯಾಂಟಸಿಯಾಗಿದೆ. ಸಾಹಸ ಪ್ರದರ್ಶನದ ಜೊತೆಗೆ ಆಗಾಗ ಕಾಡುವ ಭಯಂಕರ ಮೂರ್ತರೂಪನ ವಿರುದ್ಧ ಶಕ್ತಿಯುತವಾದ ಹೋರಾಟ ನಡೆಸುವ ನಾಯಕ ಯೋಧನ ಚಿತ್ರಣವನ್ನು ಒಳಗೊಂಡ ಬಗೆಯಾಗಿದೆ ಕುಲ್ ಆಫ್ ಅಟ್ಲಾಂಟಿಸ್, ಕಾನನ್ ದಿ ಮರಿಯಾನ್, ಪಿಟೀಸ್‌ಕಿಂಗ್, ಬ್ರಾನ್, ಮ್ಯಾಕ್‌ಮೋರ್ನೆಗಳನ್ನು ರಚಿಸಿದ ರಾಬರ್ಟ್ ಇ ಹಾವರ್ಡ್ ಎಂಬುವನು ಖಡ್ಗ ಮತ್ತು ವಾಮಾಚಾರದ ಪ್ರಕಾರಗಳನ್ನು ರಚಿಸಿ ನಿರೂಪಿಸಿದನು.

**ಬ್ಯಾಂಗ್ಸಿಯನ್: Banxian fantacy**

ಪ್ರಸಿದ್ಧ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಅಥವಾ ಐತಿಹಾಸಿಕ ವ್ಯಕ್ತಿಗಳನ್ನು ಅವರ ಮರಣದ ನಂತರದ ಜೀವನದಲ್ಲಿನ ಕ್ರಿಯೆಗಳನ್ನು ಕಾಳಜಿವಹಿಸುವುದಾಗಿದೆ. ಸಾವಿನ ನಂತರದ ಬದುಕಿನ ಕಾಲ್ಪನಿಕತೆಯನ್ನು ವಾಸ್ತವ ಜೀವಿಗಳಿಗೆ ಕಟ್ಟಿಕೊಡುವುದು ಈ ಪ್ರಕಾರದ ಪ್ರಮುಖ ಉದ್ದೇಶವಾಗಿದೆ. ಈ ಪ್ರಕಾರದಲ್ಲಿ ಸಲೀಸಾಗಿ ಬರೆಯಬಲ್ಲ ಪ್ರಖ್ಯಾತವಾದ ಹೆಸರೆಂದರೆ 'ಜಾನ್ ಕೆಂಡ್ರಿಕ್ ಬ್ಯಾಂಗ್ಸ್'ನದು. ಆದುದರಿಂದಲೇ ಇದು ಬ್ಯಾಂಗ್ಸಿಯನ್ ಫ್ಯಾಂಟಸಿ ಎನಿಸುತ್ತದೆ.

# ಅಧ್ಯಾಯ: ೬

## ವಾಸ್ತವ ಸ್ವರೂಪದ ಕತೆಗಳ ಅರ್ಥ, ಅಗತ್ಯ, ಪ್ರಯೋಗಗಳು, ಲಕ್ಷಣಗಳು, ಉದ್ದೇಶಗಳು, ಭಿನ್ನತೆಗಳು, ಮಿತಿಗಳು

## ಅಧ್ಯಾಯ : ೬

# ವಾಸ್ತವ ಸ್ವರೂಪದ ಕತೆಗಳ ಅರ್ಥ, ಅಗತ್ಯ, ಪ್ರಯೋಗಗಳು, ಲಕ್ಷಣಗಳು, ಉದ್ದೇಶಗಳು, ವಿಭಿನ್ನತೆಗಳು, ಮಿತಿಗಳು

ವಾಸ್ತವ ಕತೆಗಳು ಮಾನವನ ಬದುಕಿನಲ್ಲಿ ನಡೆಯುವ ಕ್ರಿಯೆ ಮತ್ತು ಪ್ರತಿಕ್ರಿಯೆಗಳ ಅಭಿವ್ಯಕ್ತರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಜನಪದದ ಸೊಗಡಿಂದ ಕೂಡಿದ ಭಾರತದ ಕತೆಗಳು ಬದುಕಿನ ವಾಸ್ತವದ ಸಮಸ್ಯೆಗಳಿಗೆ ಸ್ಪಂದನೆಯಾಗಿ ಬಂದುದು ಮೊದಲು ಹಿರಿಯರ ಸಾಹಿತ್ಯದಲ್ಲಿ. ಮಕ್ಕಳ ಸಾಹಿತ್ಯದಲ್ಲಿಯು ಅದು ನಂತರ ಕಾಣಿಸಿಕೊಂಡಿತು. ಇದು ವ್ಯಾಪಕವಾಗಿಯು ಹರಡಿಕೊಂಡು ವಸ್ತುವಿನಲ್ಲಿಯು ವಿಸ್ತಾರವನ್ನು ಅನುಭವಿಸಿ ಮಕ್ಕಳ ಲೋಕದ ಭಾವನೆಗಳನ್ನು, ನೋವು, ನಲಿವುಗಳನ್ನು, ಶಿಕ್ಷಣದ ಅನುಭವಗಳನ್ನು ಹೇಳುವ ಮೂಲಕ ತನ್ನನ್ನು ಕಂಡುಕೊಂಡಿತು. ಇಷ್ಟೆಲ್ಲಾ ಬೆಳೆದು ಬಂದ ಮೇಲೆ ಮಕ್ಕಳ ವಾಸ್ತವದ ಕತೆಗಳು ಮಕ್ಕಳ ಕತೆಗಳ ಸ್ವರೂಪವನ್ನು ಪ್ರತ್ಯೇಕವಾಗಿ ಹೊಂದಿದಂತೆ ಕಾಣಿಸಿಕೊಂಡು ಬಂದವು. ಆದುದರಿಂದಾಗಿ ಅವುಗಳ ಅಗತ್ಯ, ವ್ಯಾಖ್ಯಾನ, ಸ್ವರೂಪ, ಲಕ್ಷಣಗಳು ಮುಂತಾದವುಗಳೊಂದಿಗೆ ಅವುಗಳ ಉದ್ದೇಶ, ವಿಭಿನ್ನತೆಗಳು, ಮಿತಿಗಳನ್ನು ಕನ್ನಡದಲ್ಲಿ ಅವುಗಳ ಪ್ರಾಮುಖ್ಯತೆಯೊಂದಿಗೆ ನೋಡುವುದು ಅಗತ್ಯವಾಗಿದೆ. ವಾಸ್ತವದ ಕತೆಗಳು ಫ್ಯಾಂಟಸಿಗಿಂತ ಹೇಗೆ ಭಿನ್ನತೆಯನ್ನು ಹೊಂದಿವೆ ಎನ್ನುವುದನ್ನು ತೌಲನಿಕವಾಗಿ ಕಾಣುವ ಅಗತ್ಯವನ್ನು ಇಲ್ಲಿ ನೋಡಬಹುದು. ಅವಾಸ್ತವದ ಕತೆಗಳನ್ನು ಅನುಭವಿಸಿದ ಜನಪದ ಲೋಕವು ಹೇಗೆಲ್ಲಾ ವಾಸ್ತವದ ಕತೆಗಳನ್ನು ಅರಗಿಸಿಕೊಂಡಿತು ಎಂಬುದನ್ನು ಈ ಅಧ್ಯಯನದಲ್ಲಿ ನೋಡಿದೆ.

### ೬.೧ ವಾಸ್ತವ ಕತೆಗಳ ಅರ್ಥ

ವಾಸ್ತವ ಕತೆಗಳು ಹಲವು ರೀತಿಯಲ್ಲಿ ನಮ್ಮ ಮಕ್ಕಳ ಮುಂದಿವೆ. ನಾವು ಅಂತಹ ವಾಸ್ತವ ಬದುಕಿನ ಅನುಭವಗಳನ್ನು ಓದಿ, ಕೇಳಿ, ಅನುಭವಿಸಿ ತಿಳಿದುಕೊಂಡಿರುವುದನ್ನು ಕಾಣುತ್ತೇವೆ. ಮಕ್ಕಳ ಕತೆಗಳೆಂದರೆ ಕೇವಲ ಊಹೆ, ಕಲ್ಪನೆ, ಕಟ್ಟುಕತೆಗಳಲ್ಲ. ಅವುಗಳು ವಾಸ್ತವ ಬದುಕಿಗೆ ಮಕ್ಕಳನ್ನು ತಯಾರು ಮಾಡುವ ಸಲುವಾಗಿಯು ಹುಟ್ಟಿಕೊಂಡಿರುವುದನ್ನು ಕಾಣುತ್ತೇವೆ. 'ವಾಸ್ತವ ಕತೆ'ಗಳಿಗೆ ವಿವರವಾಗಿ ಅರ್ಥ ಕಂಡುಕೊಳ್ಳುವುದಾದರೆ, ಅದು 'ಮಾನವನ ಬದುಕಿನಲ್ಲಿ ತನ್ನ ಪರಿಸರದೊಡನೆ ನಡೆಸುವ ಜೀವಂತ ಸ್ಪಂದನೆಯೆ ಆಗಿದೆ'. ಪರಿಸರ ಎಂದಾಗ ಅದು ಪ್ರಕೃತಿ ದತ್ತವಾದುದು ಆಗಿರಬಹುದು ಇಲ್ಲವೇ ಮಾನವನೇ ಕಂಡುಕೊಂಡದು ಆಗಿರಬಹುದು, ಅವನ ವ್ಯವಹಾರ ಇವುಗಳೊಂದಿಗೆ ನಡೆದ ನಡೆಯುತ್ತದೆ. ವರ್ತಮಾನದಲ್ಲಿ ನಿಂತು ಮಾನವನು ಮಾಡುವ ಎಲ್ಲಾ ಕಾರ್ಯಗಳು ವಾಸ್ತವವೇ ಆಗಿರುವುದರಿಂದ 'ವರ್ತಮಾನದಲ್ಲಿ ಘಟಿಸುವ ಎಲ್ಲಾ ಸಂಗತಿಗಳು ವಾಸ್ತವ ಕತೆಗಳೆನಿಸುತ್ತವೆ.' ಮಾನವನು ಭಾವಜೀವಿ, ಬುದ್ಧಿಜೀವಿ, ಸಂಘಜೀವಿಯಾದುದರಿಂದ ವಾಸ್ತವದಲ್ಲಿ ಘಟಿಸುವ ಎಲ್ಲಾ ಘಟನೆಗಳು ಈ ಪ್ರಮುಖವಾದ

ಮೂರು ಸ್ತರಗಳನ್ನು ಹೊಂದಿರುತ್ತವೆ. ಅವನ ಭಾವನಾತ್ಮಕ ಅಂಶಗಳನ್ನು ಹೇಳುವ ಆಲೋಚನೆ, ನೋವು, ನಲಿವು, ಸಂಬಂಧಗಳು, ಪ್ರೀತಿ, ವಾತ್ಸಲ್ಯ, ಮಮಕಾರ, ಪ್ರಣಯ, ಅಂತೆಯೇ ದ್ವೇಷ, ಅಸೂಯೆ, ಸೇಡು, ಪ್ರತೀಕಾರ ಮುಂತಾದವುಗಳನ್ನು ಅವನು ಪ್ರಕಟಿಸುತ್ತಾನೆ. ಅವನು ಬುದ್ಧಿಜೀವಿಯಾದುದರಿಂದ ವಿವೇಚನೆಯಿಂದ ತನಗೆ ಅಗತ್ಯವಾದ, ಪರಿಸರದಲ್ಲಿ ದೊರೆಯುವ ವಸ್ತುಗಳ ಹುಡುಕಾಟದಿಂದ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಲು ಪೂರಕವಾದ ವಸ್ತುಗಳನ್ನು, ತನ್ನದೇ ಪರಿಸರವನ್ನು ಕಂಡುಕೊಳ್ಳುವಲ್ಲಿ ನಿರತನಾಗುತ್ತಾನೆ. ಇದರಿಂದ ಶೋಧನೆಗಳುಂಟಾಗುತ್ತವೆ. ಮನುಷ್ಯನು ಸಂಘಜೀವಿಯಾದುದರಿಂದ ತನ್ನಂತೆಯೇ ಇತರ ಮನುಷ್ಯರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ, ಬೆರೆತು ಬಾಳುವ ಸಲುವಾಗಿ ಮಾಡಿಕೊಂಡ ಸಿದ್ಧತೆಗಳು. ಸಾಂಸ್ಕೃತಿಕ, ಧಾರ್ಮಿಕ ಪರಿಸರ, ಜಾಗತಿಕ ಪರಿಸರ, ವ್ಯವಹಾರಿಕ ಪರಿಸರಗಳು ಒಳಗೊಂಡಂತೆ ವಾಸ್ತವ ಜಗತ್ತು ಬೆಳಕು ಚೆಲ್ಲುವುದನ್ನು ಕಾಣುತ್ತೇವೆ. ಮಾನವನ ವಾಸ್ತವ ಲೋಕವು ವರ್ತಮಾನದ ಅಂಶಗಳ ಸಂಗತಿಗಳಿಂದ ತುಂಬಿ ಹೋಗಿರುವಂತೆ ಅವನದೇ ಚಿಕ್ಕ ರೂಪವಾದ ಮಕ್ಕಳ ಜಗತ್ತನ್ನು ಕೂಡ ಆವರಿಸಿದೆ. ಮಕ್ಕಳ ವಾಸ್ತವ ಜಗತ್ತು ಕೂಡ ಮಾನವನ ವಾಸ್ತವ ಜಗತ್ತಿನಂತೆ ವಿಶಾಲವಾದುದಾಗಿದೆ. ಅನೇಕ ಅವಶ್ಯಕ ಅಂಶಗಳಿಂದ ಅದು ತುಂಬಿರುವಂತೆ ಮಕ್ಕಳ ಅಗತ್ಯತೆಗಳು, ಬೇಡಿಕೆಗಳು, ಪೂರೈಕೆಗಳು, ಆಸೆಗಳು ಮಕ್ಕಳ ಲೋಕವನ್ನು ಆವರಿಸಿ ಅವರದೇ ಆದ ಪರಿಸರವು ನಿರ್ಮಾಣವಾಗಿದೆ. ಆಟಿಕೆಗಳು, ಶೈಕ್ಷಣಿಕ ಪರಿಕರಗಳು, ಮಕ್ಕಳ ಒಡನಾಟದ ಪರಿಸರ, ದೊಡ್ಡವರೊಂದಿಗಿನ ಸಂಬಂಧಗಳು, ಧಾರ್ಮಿಕ ನಂಟು, ಸಾಂಸ್ಕೃತಿಕ ಆಚರಣೆಗಳು, ಪ್ರಯಾಣಗಳು, ಮಾಧ್ಯಮಗಳ ಬಳಕೆ, ಮಕ್ಕಳ ಓದು, ಬರೆಹ, ಶೋಧನೆಗಳು, ಕ್ರೀಡೆಗಳು ಇವೆಲ್ಲವೂ ಅವರ ಪರಿಸರದ ವಸ್ತುಗಳೇ ಆಗಿವೆ. ಈ ಎಲ್ಲಾ 'ಮಕ್ಕಳ ಪರಿಸರದ ವರ್ತಮಾನದ ಸರಕುಗಳನ್ನು ಕುರಿತಾದ ವಾಸ್ತವದ ಸ್ಪಂದನೆಯ ಸಂಗತಿಗಳೇ ಮಕ್ಕಳ ವಾಸ್ತವ ಕತೆಗಳೆನಿಸುತ್ತವೆ'. ಇಲ್ಲಿ ಮಕ್ಕಳ ನೋವು ನಲಿವುಗಳಿರುವಂತೆ, ಅವರ ಹಸಿವು, ಒಲವುಗಳ ಇಂಗಿತವಿರುತ್ತದೆ. ಆಕಾಂಕ್ಷೆಗಳಿರುವಂತೆ, ಹತಾಶೆಗಳು ಇರುತ್ತವೆ. ಅನಿಸಿಕೆಗಳಿರುವಂತೆ ಅನುಭವಗಳಿರುತ್ತವೆ. ಶೈಕ್ಷಣಿಕ ಸಾಧನೆಗಳು, ಶೋಧನೆಯ ಪ್ರೇರಣೆಗಳು, ಪ್ರಯಾಣದ ಅನುಭವಗಳು, ಕನಸಿನ ನನಸುಗಾರಿಕೆ, ಕನಸಿನ ಭಗ್ನತೆ, ಅನಾಥ ಪ್ರಜ್ಞೆ, ತಾಯಿಯ ವಾತ್ಸಲ್ಯದ ಹಂಬಲ, ತಂದೆಯ ವರ್ತನೆ, ಏಕಾಂಗಿತನದ ಖಿನ್ನತೆ, ತೊಳಲಾಟ ಬಳಲಾಟ, ಕ್ರೀಡೆಗಳು, ಪ್ರಾಣಿಪ್ರೀತಿ, ಪರಿಸರ ಕಾಳಜಿ, ಬಂಧನ, ಬಿಡುಗಡೆ ಎಲ್ಲವೂ ಇಲ್ಲಿ ವಸ್ತುಗಳಾಗಿ ವಾಸ್ತವ ಜಗತ್ತಿನ ಭಾವತಲ್ಲಣಗಳನ್ನು ಮಕ್ಕಳ ಮುಂದಿರಿಸುತ್ತವೆ. ಭಾರತೀಯ ಜನಪದದ ಕತೆಗಳು ಮಕ್ಕಳನ್ನು ರಂಜನೀಯವಾಗಿರಿಸುವಲ್ಲಿ ಯಶಸ್ವಿಯಾದಂತೆ ಮಕ್ಕಳ ಭಾವನೆಗಳನ್ನು ವಿಸ್ತಾರಗೊಳಿಸುವ ಕಾರ್ಯವನ್ನು ಪರೋಕ್ಷವಾಗಿ ಮಾಡಿವೆ. ಆದರೆ ಇವು ಮಕ್ಕಳ ವರ್ತಮಾನದ ಬದುಕಿಗು ಕತೆಯಲ್ಲಿ ವಸ್ತುವಿಗೂ ಅಂತರವನ್ನು ಕಾಯ್ದುಕೊಂಡು ಬಂದಿವೆ. ವಾಸ್ತವವೇ ಬೇರೆ ಜನಪದದಲ್ಲಿನ ಜಗತ್ತೇ ಬೇರೆಯಾಗಿ ಮಕ್ಕಳ ಮುಂದೆ ನಿಲ್ಲುತ್ತಿದ್ದುದ್ದನ್ನು ಕಾಣಬಹುದಾಗಿದೆ. ದೊಡ್ಡವರಿಗೂ, ಮಕ್ಕಳಿಗೂ ಸಾಕಷ್ಟು ದೈಹಿಕ ಮತ್ತು ಮಾನಸಿಕ ಅಂತರಗಳಿವೆ. ಅಂತೆಯೇ ಅವರ ಬದುಕಿಗೂ, ಮಕ್ಕಳ ಬದುಕಿಗೂ ವ್ಯತ್ಯಾಸವನ್ನು ನೋಡುತ್ತೇವೆ. ಮಕ್ಕಳ ಮತ್ತು ದೊಡ್ಡವರ ನಡುವಿನ ಪರಿಸರವು ಒಂದು ತೆರನಾದುದಾದರೆ, ಮಕ್ಕಳು ಮತ್ತು ಮಕ್ಕಳ ನಡುವಿನ ಪರಿಸರವು

ತೀರ ಭಿನ್ನವಾದುದು. ದೊಡ್ಡವರ ನಡುವೆ ಮಕ್ಕಳು ಕಾಣುವ ಅನುಭವವೇ ಬೇರೆ, ಮಕ್ಕಳ ನಡುವೆ ನಡೆಯುವ ಸಂಗತಿಗಳೇ ಬೇರೆ. ಈ ಎಲ್ಲಾ ಕಡೆಗಳಲ್ಲಿಯೂ ಮಕ್ಕಳಿಗೆ ತಮ್ಮ ಬದುಕಿನ ಪರಿಪಾಡನ್ನು ನೈಜವಾಗಿ ಹೇಳಿಕೊಳ್ಳುವ ಅವಕಾಶಗಳನ್ನು ಒದಗಿಸಿಕೊಡುವ ಅನಿವಾರ್ಯವಾಗಿ ಮಕ್ಕಳ ವಾಸ್ತವ ಕತೆಗಳು ತುಡಿಯುತ್ತವೆ.

ಭಾರತದ ಮಕ್ಕಳ ಸಾಹಿತ್ಯವು ಈ ಕ್ಷೇತ್ರದಲ್ಲಿ ತೀರ ವಿಳಂಬವಾಗಿ ಪ್ರವೇಶಿಸಿದೆ ಎನ್ನಬಹುದು. ಪಾಶ್ಚ್ಯಾತ್ಯರಲ್ಲಿ ಇವು ಘಟಿಸಿರುವುದು ಕಾಣಿಸುತ್ತವೆ. ಮಕ್ಕಳಿಗೆ ವಾಸ್ತವವನ್ನು ವಸ್ತುವಾಗಿಸಿಕೊಂಡು ಬರೆಹವನ್ನು ನಮ್ಮವರು ಕಂಡುಕೊಂಡುದ್ದು ನವೋದಯದಲ್ಲಿಯೇ ಆಗಿದೆ. ನವೋದಯದ ಕಾಲದಲ್ಲಿ ನಮ್ಮ ಲೇಖಕರಿಗೆ ಸಿಕ್ಕಿದ ಹೊಸ ಓದು, ಹೊಸ ಸಾಮಾಗ್ರಿಯೂ ಮಕ್ಕಳ ಕತೆಗಳ ಹೊಸತನಕ್ಕಾಗಿಯೂ ತುಡಿದಿರುವುದು ಗಮನಾರ್ಹ.

## ೬.೨ ವಾಸ್ತವ ಕತೆಗಳ ಅಗತ್ಯ

ಮಕ್ಕಳ ಕತೆಗಳ ಅನೇಕ ಸ್ವರೂಪಗಳಲ್ಲಿ ವಾಸ್ತವಕತೆಗಳು ಪ್ರಮುಖವಾದವುಗಳಾಗಿವೆ. ಸಾಮಾನ್ಯವಾಗಿ ಮಕ್ಕಳ ಕತೆಗಳೆಂದರೆ ವಾಸ್ತವ ಬದುಕಿಗೆ ಸಂಬಂಧಿಸಿದಂತೆ ಮೌಲ್ಯಗಳನ್ನು ಕಟ್ಟುವ ಸಲುವಾಗಿದ್ದು, ಕತೆಯು ಯಾವುದೇ ಕಾಲದಲ್ಲಿ ಘಟಿಸಿದ್ದರು ಇವತ್ತಿನ ವಾಸ್ತವ ಬದುಕಿಗೆ ಹೊಂದಾಣಿಕೆ ಮಾಡಿಕೊಂಡು ಹೇಳುವುದನ್ನು ಕಾಣುತ್ತೇವೆ. ಮಕ್ಕಳಗಷ್ಟೆಯಲ್ಲದೆ ಪ್ರಬುದ್ಧರ ಕತೆಗಳಗೂ ವಾಸ್ತವವು ಅಗತ್ಯವಾಗಿ ಕಾಣಿಸಿಕೊಳ್ಳುತ್ತದೆ. ಅವಾಸ್ತವ ಕತೆಗಳು ರಂಜನೀಯತೆಯನ್ನು, ರೋಚಕತೆಯನ್ನು ಸೃಷ್ಟಿಸಿದಂತೆ ವಾಸ್ತವ ಕತೆಗಳು ಬದುಕಿನ ಸಾರವನ್ನು, ಜೀವನದ ಶೈಲಿಯನ್ನು ಕಟ್ಟಿಕೊಳ್ಳಲು ನೆರವಾಗುತ್ತವೆ. ಜನಪದ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುವುದು ಅವಾಸ್ತವದ ಹಿನ್ನೆಲೆಯ ಕತೆಗಳಾದರೂ ವಿರಳವಾಗಿ ವಾಸ್ತವ ವಸ್ತುವುಳ್ಳವು ನಮಗೆ ದೊರೆಯುತ್ತವೆ. ಆದರೆ ಇವೆಲ್ಲವು ದೊಡ್ಡವರಿಗಾಗಿ ಮಾತ್ರ, ಮಕ್ಕಳಿಗೆ ಪ್ರತ್ಯೇಕವಾಗಿ ಸಿಗುವುದಿಲ್ಲ. ಇಲ್ಲಿಯೂ ಹಿರಿಯರ ಕತೆಗಳನ್ನೇ ಮಕ್ಕಳಗಾಗಿ ಸುಲಭೀಕರಿಸಿ ಹೇಳದನ್ನು ಕಾಣುತ್ತೇವೆ. ಮಕ್ಕಳನ್ನು ದೊಡ್ಡವರ ತಯಾರಿಗಾಗಿ ಹಿರಿಯರಂತೆ ಬಾಳುವ ಆಶಯವನ್ನು ಮುಂದಿರಿಸಿಕೊಂಡು ಹೇಳರುವುದಿದೆ. ತೀರ ಪುಟಾಣಿ ಮಕ್ಕಳಿಗೆ ಅವಾಸ್ತವದ ವಸ್ತು ರುಚಿಸುವುದು. ಆದರೆ ಹದಿಹರೆಯದ ಮಕ್ಕಳಿಗೆ ಅವೆಲ್ಲವು ಅತಾರ್ಕಿಕವೆನಿಸಿ ವಾಸ್ತವ ವಸ್ತುವಿನ ಕತೆಗಳು ಇಷ್ಟವೆನಿಸುತ್ತದೆ. ಇದಕ್ಕೆ ಕಾರಣವೆಂದರೆ ಹರೆಯದ ಹೊಸ್ತಿಲಲ್ಲಿರುವ ಮಕ್ಕಳಿಗೆ ಸಮಾಜದ ಪರಿಚಯವಾಗುತ್ತಿರುತ್ತದೆ. ಸಮಾಜದ ಬೇಕು ಬೇಡಗಳು ಅವರಿಗೆ ಅರಿವಿನಲ್ಲಿ ಸಿಗುತ್ತದೆ. ಅವರ ಆಲೋಚನ ಕ್ರಮಗಳು ಬದುಕಿನ ವಸ್ತುಗಳೊಂದಿಗೆ ಹೊಂದಿಕೊಳ್ಳಲು ಯತ್ನಿಸುತ್ತಿರುತ್ತವೆ. ಇದು ಓದು ಬರೆಹ ಬಲ್ಲ ಮತ್ತು ಸ್ವಯಂ ಓದಿಕೊಳ್ಳುವ ಸಾಮರ್ಥ್ಯವಿರುವವರು ಬಯಸುವ ಅಭಿರುಚಿ ಎನ್ನಬಹುದು. ಇವರು ಮುಂದಿನ ವಯಷ್ಕ ಹಂತದ ತಯಾರಿಯಲ್ಲಿದ್ದು ಯೋಚನಕ್ರಮಗಳು ಪ್ರಬುದ್ಧತೆಯ ಕಡೆಗೆ ವಾಲುತ್ತಿರುತ್ತವೆ. ಇಂತಹ ಮಕ್ಕಳ ನಿರೀಕ್ಷೆಗಳಗಾಗಿ ವಾಸ್ತವದ ಕತೆಗಳು ಮೂಡಿಬಂದವು ಎನ್ನಬಹುದು. ಹದಿಹರೆಯದ ಮಕ್ಕಳು ಸಹಜವಾಗಿ ತಮ್ಮ ಸುತ್ತಲಿನ ವಾಸ್ತವದ ಸಂಗತಿಗಳಿಗೆ ಆಕರ್ಷಿತರಗುತ್ತಾರೆ, ಅವರ

ನಡುವಿನ ನೂರೆಂಟು ಗೊಂದಲಗಳು, ಆಡಂಬರಗಳು, ಸಾಂಸ್ಕೃತಿಕ ಪರಿಸರದ ವಸ್ತುವಿನ್ಯಾಸಗಳು, ರಾಜಕೀಯದ ಸಹಜ ಬದಲಾವಣೆಗಳು, ಕುಟುಂಬ, ಸಮಾಜದ ವಿವಿಧ ತೆರನಾದ ಸಮಸ್ಯೆಗಳು, ಪ್ರೀತಿ, ಪ್ರೇಮದಂತಹ ಸನ್ನಿವೇಶಗಳು, ವಿವಾಹ, ಸಾವು ನೋವಿನ ಸಂದರ್ಭಗಳು ಮಕ್ಕಳ ಮನಸ್ಸಿನ ಮೇಲೆ ಗಾಢವಾದ ಪ್ರಭಾವವನ್ನು ಈ ವಯೋಮಾನದಲ್ಲಿ ಬೀರುತ್ತವೆ. ಆದುದರಿಂದ ಮಕ್ಕಳ ಕತೆಗಳಿಗೆ ಇಂತಹ ವಸ್ತುಗಳನ್ನೊಳಗೊಂಡ ವಾಸ್ತವ ಚಿತ್ರಣದ ಅಗತ್ಯವುಳ್ಳ ಸರಕುಗಳು ಕತೆಗಳಾಗಿ ಸೆಳೆಯುತ್ತವೆ. ಆದುದರಿಂದ ಮಕ್ಕಳಿಗೆ ವಾಸ್ತವದ ಕತೆಗಳ ಅಗತ್ಯವಿದೆ ಎಂದು ಭಾವಿಸುತ್ತೇವೆ. ಈ ವಯಸ್ಸಿನಲ್ಲಿ ಮಕ್ಕಳು ಶಾಲೆಯ ಪರಿಸರದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವುದರಿಂದ ಆ ವಾತಾವರಣವನ್ನು ಸೂಕ್ಷ್ಮ, ಹಾಗೂ ಬೆರಗುಗಣ್ಣಿನಿಂದ ನೋಡುತ್ತಾರೆ. ಅನೇಕ ತೆರನಾದ ಪ್ರಶ್ನೆಗಳು ಅವರ ಮನಸ್ಸಿನಲ್ಲಿ ಮೂಡುತ್ತವೆ. ಅಂತೆಯೇ ಅನೇಕ ಅನುಮಾನಗಳು ಅವರನ್ನು ಕಾಡುತ್ತವೆ. ಸಿಟ್ಟು ಆಕ್ರೋಶಗಳು ಉಂಟಾಗುತ್ತವೆ. ನಮ್ಮ ನಡುವಿನ ಹಿರಿಯರು ಇವುಗಳನ್ನು ಸರಿಯಾಗಿ ಗಮನಿಸದೆ ಅವರ ಭಾವನೆಗಳಿಗೆ ತಕ್ಕಂತೆ ಸ್ಪಂದಿಸದಿದ್ದಾಗ ಅನೇಕ ಅಪಾಯಗಳು ಬಂದೊದಗುತ್ತವೆ. ಸೋಲು ಇಲ್ಲಿ ಹತಾಶೆಯಾಗಿಯು, ಗೆಲುವು ಬಹುಮುಖ್ಯವಾದ ಚೈತನ್ಯವಾಗಿಯು ಕಾಣಿಸಿಕೊಳ್ಳುವ ವಯಸ್ಸು ಇದಾಗಿರುತ್ತದೆ. ಮಾನಸಿಕ ಅಶಾಂತಿ ಒತ್ತಡಗಳು, ಸಾಮಾಜಿಕ ಚಟುವಟಿಕೆಗಳು, ದುಶ್ಚಟಗಳು, ಅಸಹಜವಾದ ವರ್ತನೆಗಳು, ಸಾಮಾಜಿಕ ವ್ಯಸನಗಳ ಸೆಳೆತ, ಅನಿರೀಕ್ಷಿತವಾದ ತಿರುವುಗಳು ತಂದೊಡ್ಡಬಹುದಾದ ಸಮಸ್ಯೆಗಳಿಗೆ ಸೂಕ್ತವಾದ ಹಿರಿಯರ ಮಾರ್ಗದರ್ಶನವು ಅಗತ್ಯವಾದ ಚಿಕಿತ್ಸಕಾರ್ಯವನ್ನು ಮಾಡುತ್ತದೆ. ನಮ್ಮ ಸಾಮಾಜಿಕ ಅಸಮತೋಲನಗಳು, ಅನಿವಾರ್ಯವಾಗಿ ತರುವ ನಿರ್ಬಂಧಗಳು, ಇಂದಿನ ನಾಗರಿಕ ಸಮಾಜದ ತುಡಿತಗಳು ಮಕ್ಕಳ ಮನಸ್ಸಿನ ಬೆಳವಣಿಗೆಯನ್ನು ಸರಿಯಾದ ಕ್ರಮದಲ್ಲಿ ಉತ್ತೇಜಿಸುವ ಅಗತ್ಯವಾಗಿ ವಾಸ್ತವದ ಕತೆಗಳು ನಿಲ್ಲುತ್ತವೆ. ಕನ್ನಡದ ಮಕ್ಕಳ ಕತೆಗಳು ಇದುವರೆಗೆ ಅವಾಸ್ತವದ ಹಾದಿಯನ್ನು ಅನುಸರಿಸಿ ಬಂದಿರುವುದು ಹೆಚ್ಚಾಗಿ ಕಾಣುತ್ತೇವೆ. ಆದರೆ ವಾಸ್ತವದ ಕಾಲಕ್ಕೂ ಕತೆಗಳ ವಸ್ತುವಿನ ಕಾಲಕ್ಕೂ ಅಂತರವನ್ನು ತೋರಿಸುತ್ತಾ ಕತೆಯು ಕಾವುದೋ ಕಾಲದಲ್ಲಿ ಸಂಭವಿಸಿ ಹೋಗಿರುವುದನ್ನು ಹೇಳುತ್ತವೆ. ವಾಸ್ತವದ ಕತೆಗಳು ಬದುಕಿಗೆ ತೀರ ಹತ್ತಿರವಾದ ಘಟನೆಗಳನ್ನು ಹೇಳುವುದರಿಂದ ಮಕ್ಕಳಿಗೆ ಹಿಡಿಸುತ್ತವೆ ಮತ್ತು ಪ್ರಯೋಜನಕಾರಿಯೂ ಆಗಿವೆ. ಜನಪದದಲ್ಲಿ ಕಾಣಿಸಿಕೊಂಡ ಸರಕನ್ನೇ ಬಹುಕಾಲದ ವರೆಗೆ ಅನುಭವಿಸಿದ ಮಕ್ಕಳ ಕತೆಗಳು ಹೊಸದಾದ ಬದಲಾವಣೆಯನ್ನು ಬಯಸಿದ್ದನ್ನು ವಾಸ್ತವದ ಸ್ವರೂಪದಲ್ಲಿ ಕಂಡುಕೊಂಡಿರುವುದನ್ನು ಕಾಣಬಹುದು. ಮಕ್ಕಳಿಗಾಗಿ ಬರೆದ ಗದ್ಯವಾಗಲಿ, ಪದ್ಯವಾಗಲಿ ಆಧುನಿಕ ಕಾಲದಲ್ಲಿ ಕಾಣಿಸಿಕೊಂಡಾಗಲು ಉತ್ಸಾಹಿ ಬರೆಹಗಾರರು ಸಹ ಸಾಂಪ್ರದಾಯಿಕವಾದ ಸರಕನ್ನು ಅವಲಂಭಿಸಿದಂತೆ ವಾಸ್ತವದ ಸರಕನ್ನು ತರುವಲ್ಲಿ ಆಸ್ಥೆವಹಿಸಲಿಲ್ಲ ಎನ್ನಬಹುದು. ನಮ್ಮ ಸುತ್ತಮುತ್ತಲಿನ ವಾಸ್ತವ ಎನ್ನುವಾಗ ಬದುಕಿಗೆ ಸ್ಪಂದಿಸುವ ಬರವಣಿಗೆ ಅಷ್ಟಾಗಿ ಕಾಣಿಸಿಕೊಳ್ಳಲಿಲ್ಲ. ನೆರೆಹೊರೆಯ, ಸುತ್ತಮುತ್ತಲಿನ ಸಮಾಜದ ನೋವು ನಲಿವುಗಳಿಗೆ ದೊಡ್ಡವರ ಸಾಹಿತ್ಯ ಸ್ಪಂದನೆ ನೀಡಿದಂತೆ ಮಕ್ಕಳ ಕತೆಗಳು ನೀಡಲಿಲ್ಲ. ತುಸು ಬೆಳೆದಂತಹ ಮಕ್ಕಳಿಗೆ ಸಮಾಜದ ಸಂಗತಿಗಳ ಬಗೆಗೆ ಸಹಜವಾದ ತುಡಿತ

ಇದ್ದೇ ಇರುತ್ತದೆ. ಸುತ್ತಲಿನ ಸಂಗತಿಗಳಿಗೆ ಕಣ್ಣಾಯಿಸುವ ಮನೋಭಾವ, ಹಂಬಲವನ್ನು ಹೊಂದಿರುವ ಮಕ್ಕಳಿಗೆ ವಾಸ್ತವದ ಅರಿವನ್ನು ಕಟ್ಟಿಕೊಡುವ ಸಾಹಿತ್ಯವಾಗಿ ಕತೆಗಳು ನಿಲ್ಲುವ ಅಗತ್ಯವಿದೆ.

ಭಾರತದಂತಹ ದೇಶದಲ್ಲಿ ಅನುಭವಕ್ಕೆ ಬರುವ ವಾಸ್ತವಾಂಶಗಳು ಎಂದರೆ ಬಡತನ, ಸಿರಿತನ, ವರ್ಣ, ಜಾತಿಯವ್ಯವಸ್ಥೆ, ಪರಂಪರೆಗಳು, ಧಾರ್ಮಿಕ ವಿಚಾರಗಳು, ಸಾವು ನೋವುಗಳು, ಹಸಿವು, ಸಿರಿತನ, ಲೈಂಗಿಕತೆ, ಪ್ರೀತಿ, ಕೊಲೆ, ಕಳ್ಳತನ, ವರದಕ್ಷಿಣೆ ಪದ್ಧತಿ, ಬಾಲ್ಯವಿವಾಹಗಳು, ನಗರದ ಜೀವನ, ಗ್ರಾಮೀಣ ಬದುಕು, ಸಿನಿಮಾ ಮಾಧ್ಯಮಗಳು, ಪತ್ರಿಕೆಗಳು, ಸಮಾಜದ ಅನಿಷ್ಟ ಪದ್ಧತಿಗಳ ವಿರುದ್ಧವಾದ ಸಂಗತಿಗಳ ಮೇಲೆ ಬೆಳಕು ಹರಡುವ ವಾಸ್ತವ ಸತ್ಯಗಳನ್ನು ಮಕ್ಕಳಿಗೆ ತಿಳಿಸಿ ಹೇಳುವ ಅನಿವಾರ್ಯತೆ ಮಕ್ಕಳ ಕತೆಗಳಿಗೆ ಇದೆ ಎಂದು ಭಾವಿಸಿದ ಲೇಖಕರ ವರ್ಗವು ಈ ತೆರನಾದ ಸರಕುಗಳಿಗೆ ಮಣೆಹಾಕಿ ಬರೆಯುವ ಅಗತ್ಯವನ್ನು ಕಂಡುಕೊಂಡಿತು. ಮಕ್ಕಳನ್ನು ಸತ್ಪ್ರಜೆಗಳನ್ನಾಗಿಸಬೇಕೆಂದು ಹಂಬಲಿಸಿದ ಸಮಾಜದ ವರ್ಗವು ಆದರ್ಶದ ಪುರಾಣದ ಕತೆಗಳನ್ನು ಮುಂದಿಡುತ್ತಾ ಬೆಳದು ಬಂದಿದೆ. ಇದನ್ನೇ ಮುಂದುವರೆಸುವ ಪರಂಪರೆ ಆಧುನಿಕ ಮಕ್ಕಳ ಕಥಾ ಸಾಹಿತ್ಯಕ್ಕೆ ಇಂದು ಅನಿವಾರ್ಯವಲ್ಲ. ನಮ್ಮ ನಡುವೆ ಆಗುವ ಬದಲಾವಣೆಗಳ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆಯೂ ಗಮನ ಹರಿಸುವ ಮೂಲಕ ಗಟ್ಟಿತನದ ವ್ಯಕ್ತಿತ್ವ ರೂಪಿಸುವ, ಆರೋಗ್ಯಪೂರ್ಣತೆಯೆಡೆಗೆ ಮಕ್ಕಳನ್ನು ತರುವ ಸಾಹಿತ್ಯದ ಅಗತ್ಯವಿದೆ. ಇತರ ಭಾರತೀಯ ಭಾಷೆಗಳಲ್ಲಿ ನಡೆದಿರುವ ಪ್ರಯೋಗಗಳಂತೆಯೇ ಕನ್ನಡದ ಕಥಾಲೋಕ ಬೆಳವಣಿಗೆಯನ್ನು ಕಾಣಬೇಕಾದ ಅಗತ್ಯತೆಯೂ ಇದೆ. ಕಾರಣ ಅವುಗಳು ಈಗಾಗಲೇ ವಾಸ್ತವದ ವಸ್ತುಚಿತ್ರಣವನ್ನು ಆಧಾರಿಸಿ ಕತೆಗಳನ್ನು ತಂದಿವೆ. ನಾವು ಅವುಗಳ ಸಂಪರ್ಕವನ್ನು ಸಾಧಿಸಿ, ಪ್ರಭಾವಗಳನ್ನು ಅರಗಿಸಿಕೊಳ್ಳುವ ಅಗತ್ಯವೂ ಇದೆ.

ಹಿಂದಿ ಭಾಷೆಯಲ್ಲಿ ತೊಡಗಿಸಿಕೊಂಡು ಬರೆಯುತ್ತಿರುವ ಡಾ. ಹರಿಕೃಷ್ಣ ದೇವಸರೆ ಅವರ ಲೇಖನಗಳಲ್ಲಿ ಹೇಳಿರುವಂತೆ 'ಹಿಂದಿಯಲ್ಲಿಯೂ ವಾಸ್ತವದ ಅಗತ್ಯದ ಕಥಾಜಗತ್ತು ನಿರೀಕ್ಷಿತಾ ಪ್ರಮಾಣದಲ್ಲಿ ಬರುತ್ತಿಲ್ಲ'[೩೮]. ದೇಶಾದ್ಯಂತ ಹೇರಳವಾಗಿ ಹಬ್ಬಿರುವ ಹಿಂದಿ ಸಾಹಿತ್ಯದಲ್ಲಿಯೇ ಮಕ್ಕಳ ಬಗೆಗಿನ ವಾಸ್ತವ ವಸ್ತುವಿನ ಕಾಳಜಿ ಕಡಿಮೆಯಿದೆ ಎನ್ನುವುದಾದರೆ ಕನ್ನಡದಲ್ಲಿ ಅದು ಹೊಸತಾಗಿಯಾದರೂ ಪ್ರವೇಶಿಸುತ್ತಿರುವುದು ಗಮನಾರ್ಹ.

ಆಷ್ಟ್ರೇಯಾದ ನಿತಾಬೆರ್ರಿ ಯವರು ಗಮನಿಸಿರುವಂತೆ ಅಲ್ಲಿನ ಮಕ್ಕಳ ವಾಸ್ತವ ಕಥಾ ಜಗತ್ತು ಒಳಗೊಂಡಿರುವುದು ಸಮಕಾಲೀನ ಸಮಸ್ಯೆಗಳಾದ ಹಿಂಸೆ, ನಿರುದ್ಯೋಗ, ಮಾದಕವಸ್ತುಗಳು, ಅಪರಾಧಗಳು, ವಿಚ್ಛೇದನಗಳು, ಸ್ತ್ರೀ ಪುರುಷ ಸಂಬಂಧದ ಕೌಟುಂಬಿಕ ವಿಷಯಗಳು, ಅಪ್ರಾಪ್ತವಯಸ್ಸಿನ ತಾಯ್ತನ, ಏಯ್ಡ್ಸ್ ನಂತಹ ಕಾಯಿಲೆಗಳು, ಸಾವು, ವೃದ್ಧರ ಸಮಸ್ಯೆಗಳು, ಏಕಾಂಗಿತನ, ಮಾನಸಿಕ ಅಸ್ವಸ್ಥತೆ ಮೊದಲಾದ ಸಾಮಾಜಿಕ ಪಿಡುಗುಗಳನ್ನು ಕುರಿತು.[೩೯] ಇಂತಹ ಅನೇಕ ಬಗೆಯ ವಾಸ್ತವ ಅಂಶಗಳನ್ನು ಜಾಗತಿಕ ಮಕ್ಕಳ ಕಥಾ ಲೋಕ ಅಗತ್ಯವಾಗಿಸಿಕೊಂಡಿದೆ. ಆದರೆ ಭಾರತದಂತಹ ದೇಶದಲ್ಲಿ ಸಮಕಾಲೀನ ಸಮಸ್ಯೆಗಳನ್ನು ಮತ್ತು ಮುಜುಗರದ ಸಂಗತಿಗಳನ್ನು ಮಕ್ಕಳ ಮುಂದಿಡಲು

---

[೩೮] ಅಲರು, ಮಕ್ಕಳ ಸಾಹಿತ್ಯ ಕುರಿತು, ಲೇ: ಆನಂದ ವಿ ಪಾಟೀಲ, ಪುಟ ೨೭, ೨೦೧೦.

[೩೯] ಅದೇ ಪುಟ

ಅನುಮಾನಿಸುತ್ತಲೇ ಕಥಾ ಜಗತ್ತು ಬೆಳೆಯುತ್ತಿದೆ. ಇನ್ನೂ ಆದರ್ಶ, ನೀತಿಗಳನ್ನು ಹೇಳುವ ಸೋಗಿನಲ್ಲೇ ಅದು ಮುಳುಗಿದ್ದು ವಾಸ್ತವದ ಅಗತ್ಯವನ್ನು ಕಂಡುಕೊಂಡಿಲ್ಲವಾಗಿದೆ. ಒಟ್ಟಾರೆಯಾಗಿ ಭಾವಿಸಬಹುದಾದುದು ವಾಸ್ತವ ಕತೆಗಳನ್ನು ಮುಂದಿರಿಸುವಾಗ ಮಕ್ಕಳ ಸಮಕಾಲೀನ ಪರಿಸರ ಅವರಿಗೆ ಎದುರಾಗಬೇಕು. ಕನ್ನಡ ಮಕ್ಕಳ ವಾಸ್ತವ ಕಥಾಜಗತ್ತು ಈ ವಿಷಯದಲ್ಲಿ ತೀರ ಅಭಾವವನ್ನು ಹೊಂದಿದೆ ಎನ್ನಬಹುದು. ಇಲ್ಲಿ ಪ್ರತಿಭಾವಂತ ಲೇಖಕರು ಕಾಣಿಸಿಕೊಂಡಿದ್ದರೂ ಅವರೆಲ್ಲಾ ಜನಪದದ ಸರಕನ್ನು ಮತ್ತು ಅವಾಸ್ತವದ ಫ್ಯಾಂಟಸಿಯನ್ನು ತಂದು ಮಕ್ಕಳ ಮುಂದಿರಿಸಿರುವುದನ್ನು ನೋಡುತ್ತೇವೆ. ಈ ಬಗೆಯ ನಿರ್ಲಕ್ಷ್ಯಕ್ಕೆ ಕಾರಣವಾದುದು ಮಕ್ಕಳ ಮುಂದೆ ಮುಜುಗರದ ಸಂಗತಿಗಳನ್ನು ತರಬಾರದೆಂಬ ಮನಸ್ಥಿತಿಯಾಗಿದೆ. ಇದು ಭಾರತದ, ಕನ್ನಡದ ಲೇಖಕರ ಅಭಿಪ್ರಾಯವು ಸಹ ಆಗಿದೆ. ಭಾರತದ ಆದರ್ಶ, ನೀತಿ ಪರಂಪರೆಯು ಹೇರಿದ ಮಿತಿಯು ಆಗಿದೆ. ಪಂಚತಂತ್ರ, ಪ್ರಾಣಿಕತೆಗಳು, ಅರೆಬಿಯನ್ ನೈಟ್ಸ್ ಕತೆಗಳು, ಈಸೋಪನ ನೀತಿಕತೆಗಳು ಸಹ ಒಂದು ಕಾಲದ ವಾಸ್ತವ ಕತೆಗಳಾಗಿ ಅರಳಿರಬಹುದು. ಆ ಕಾಲದ ಮಕ್ಕಳು ವರ್ತಮಾನದಲ್ಲಿ ಅನುಭವಿಸಿರಬಹುದು. ಆದರೆ ಅವು ಆಯಾಕಾಲದ ಪರಿಸ್ಥಿತಿಯನ್ನು ವಿವರಿಸಬಲ್ಲವೇ ವಿನಹ ಇಂದಿನ ಬದುಕಿನ ಅಗತ್ಯಗಳಿಗೆ, ಭಾವಸೂಕ್ಷ್ಮತೆಗೆ ತಕ್ಕವಾಗಿ ಸಮಕಾಲೀನ ಮಕ್ಕಳ ಅಗತ್ಯವನ್ನು ನೀಗಿಸಲಾರವು ಎನ್ನುವುದನ್ನು ಮನಗಾಣಬೇಕಿದೆ.

ಇಂದಿನ ಮಕ್ಕಳು ವಿಭಿನ್ನ ಮನೋಧರ್ಮ, ಸಾಮಾಜಿಕವಾಗಿ ಭಿನ್ನತೆಯುಳ್ಳ ವರ್ಗಗಳಿಂದ ಬಂದವರು, ಆರ್ಥಿಕ ಅಸಮತೋಲನ ಪರಿಸರದಿಂದ ಕೂಡಿದವರು, ಓದಿನ ಸಾಧ್ಯತೆಗಳಿದ್ದು, ಸಾಮಾಗ್ರಿಗಳ ಲಭ್ಯತೆಯಿಲ್ಲದೆ ಇರುವವರು, ಜೊತೆಗೆ ಆಧುನಿಕ ಕಾಲದ ಮಾಧ್ಯಮಗಳ ಸಂಪರ್ಕತೆಯುಳ್ಳವರು, ಹಿರಿಯ ಮನಸ್ಸುಗಳಿಂದ ಅವರ ಬೇಡಿಕೆಗೆ ಸ್ಥಗಿತತೆ ಅನುಭವಿಸುವ, ಅನುಭವಿಸದ ನಾನಾ ತೆರನಾದ ಪರಿಸರದ ಪ್ರಭಾವವನ್ನು ಉಳ್ಳ ಸಮಾಜ ನಮ್ಮ ಮುಂದಿದೆಯಾದುದರಿಂದ ಅವರೆಲ್ಲರ ಅಭಿರುಚಿಯನುಸಾರ ವಾಸ್ತವದ ಅಗತ್ಯತೆಯನ್ನು ಕಂಡುಕೊಳ್ಳಬೇಕಿದೆ. ಏನೋ ಓದಿದ ಮಗು ತನ್ನೊಳಗೆ ಉಂಟಾಗುವ ಭಾವ ತುಮುಲಗಳಿಗೆ ಸಾಮಾಜಿಕ ಸ್ಪಂದನೆಯನ್ನು ಬಯಸಿದಾಗ ಉದ್ಭವಿಸುವ ಪ್ರಶ್ನೆಗಳಿಗೆ ಉತ್ತರವಾಗಿ ವಾಸ್ತವ ಕಥಾಜಗತ್ತಿನ ಸಾಂತ್ವಾನ ಬೇಕಿದೆ. ಶೈಕ್ಷಣಿಕ ವ್ಯವಸ್ಥೆಯಲ್ಲಿನ ಮಧ್ಯಮ, ಕೆಳವರ್ಗದ ಜನರ ನಡುವಿನ ಬದುಕಿನ ಅನುಭವಗಳನ್ನು ಮಗುವು ತನ್ನ ಬೆರಗುಗಣ್ಣಿನಿಂದ ಕಂಡಾಗ ಅದಕ್ಕೆ ಅಗತ್ಯವಾದ ಮಾರ್ಗದರ್ಶನವನ್ನು ನೀಡುವ ವಸ್ತುವಾಗಿ ಕತೆಗಳು ಕಾಣಿಸುವ ಅಗತ್ಯವಿದೆ. ಮಗುವಿನ ಮನಸ್ಸಿನಲ್ಲುಂಟಾಗುವ ಭಾವ ತಲ್ಲಣಗಳಿಗೆ ಚೇತೋಹಾರಿಕೆಯನ್ನು ಉಂಟುಮಾಡಿ ಮಕ್ಕಳ ಮನಸ್ಸನ್ನು ಹಗುರಗೊಳಿಸಿ, ಹೊಂದಿಕೊಳ್ಳುವ, ಪರಿಸರಕ್ಕೆ ತನ್ನ ಕೊಡುಗೆ ನೀಡುವ ಗುಣಗಳನ್ನು ಹೊಂದುವಂತೆ ಮಾಡಲು ವಾಸ್ತವದ ಪ್ರಜ್ಞೆಯುಳ್ಳ ಮನಸ್ಥಿತಿ ಅಗತ್ಯವಾಗಿದೆ.

### ೬.೩. ಭಾರತದ ಇತರ ಭಾಷೆಗಳಲ್ಲಿ ವಾಸ್ತವ ಕತೆಗಳ ಪ್ರಯೋಗಗಳು

ಆರಂಭದಲ್ಲಿ ಮಕ್ಕಳ ಮಾನಸಿಕ ಅಗತ್ಯಗಳನ್ನು ಪೂರೈಸಲು ಅಂದಿನ ಪರಿಸ್ಥಿತಿಯಲ್ಲಿ ಪಂಚತಂತ್ರದ ಕತೆಗಳು, ಅರೆಬಿಯನ್ ನೈಟ್ಸ್, ವಿಕ್ರಮ ಬೇತಾಳ, ಜನಪದ ಕತೆಗಳು ಸೃಷ್ಟಿಯಾಗಿದ್ದವು.

ಆದರು ಇವು ಅಂದಿನ ಸಾಮಾಜಿಕ ಪರಿಸ್ಥಿಯನ್ನು ಕುರಿತು ಮಕ್ಕಳಿಗೆ ಹೇಳಿದವುಗಳಲ್ಲ ಎನ್ನುವಂತಿವೆ. ಸಾಮಾಜಿಕ ಅಗತ್ಯಗಳನ್ನು ಇವು ಪೂರೈಸಿರಲು ಸಾಧ್ಯವಾಗಿಲ್ಲ. ಬದುಕಿನ ಸೂಕ್ಷ್ಮತೆಗಳಿಗೆ ಅವು ಸ್ಪಂದನೆ ನೀಡಿಲ್ಲ. ಕೇವಲ ಮಕ್ಕಳನ್ನು ರಂಜಿಸುವ ಉದ್ದೇಶವನ್ನು ಆಕರ್ಷಣೆಯ ಕಾರಣವನ್ನು ಮುಂದೊಡ್ಡಿಕೊಂಡು ಪ್ರಾಣಿ ಪಕ್ಷಿಗಳ ಪ್ರೀತಿಯನ್ನು ಅವು ಹೇಳಿವೆ. ಮಗುವಿನ ಭಾವನೆಗಳಿಗಿಂತ ಪಂಚತಂತ್ರಗಳು ಪ್ರಾಣಿಗಳ ಭಾವನೆಗಳನ್ನು ಉಣಬಡಿಸಿರುವುದು ಹೆಚ್ಚು ಪ್ರಯೋಗವಾಗಿ ಕಾಣಿಸಿದೆ. ಅಲ್ಲಿ ಪ್ರಾಣಿಗಳ ಓಡಾಟ, ವ್ಯವಹಾರ, ಮಾನವನಂತೆ ಬಾಳಿದ ನಿದರ್ಶನಗಳನ್ನು ಕಟ್ಟಿಕೊಡಲಾಯಿತು. ಅಪ್ರತ್ಯಕ್ಷವಾಗಿ ಮಕ್ಕಳ ಬದುಕಿಗೆ ಅನುಭವಗಳನ್ನು ಒದಗಿಸಿವೆ. ಮಾನವನ ಭಾವನೆಗಳನ್ನು ಪ್ರಾಣಿಗಳು ಹೊಂದಿ ಮಾನವನ ಮಗುವಿಗೆ ಬದುಕಿನ ಪಾಠವನ್ನು ಹೇಳುವುದು ಪರೋಕ್ಷವಾದ ಬದುಕನ್ನು ಮುಂದಿಟ್ಟು ನೋಡಿವೆ. ಆ ಜಗತ್ತಿನಿಂದ, ವರ್ತಮಾನದಿಂದ ಮಗುವನ್ನು ಮರೆಮಾಚಿಸಿ ನೋಡಲಾಗಿದೆ. ಗಲಿವರನ ಪ್ರಯಾಣದ ಕತೆಗಳು, ಅರೆಬಿಯನ್ ನೈಟ್ಸ್, ಆಲಿಸಳ ಕತೆ ಇವೆಲ್ಲವು ಅನಿರೀಕ್ಷಿತ ಸಂಗತಿಗಳು, ಅವಾಸ್ತವದ ವಸ್ತುಗಳು. ಇವು ಸೃಷ್ಟಿಸುವ ಮೋಹಕತೆಯನ್ನು, ಆಹ್ಲಾದವನ್ನು ಆಕರ್ಷಣೀಯ ಕಣ್ಣುಗಳಿಂದ ಮಕ್ಕಳು ಅನುಭವಿಸಿದಂತೆ ವಾಸ್ತವದ ಬದುಕಿನ ಭಾಗವಾಗಿ ಕಾಣಲಾಗಲಿಲ್ಲ. ಇನ್ನು ಈಸೋಪನ ನೀತಿ ಕತೆಗಳಾಗಲಿ, ಜನಪದದ ಆದರ್ಶಪ್ರಾಯದ ಕತೆಗಳಾಗಲಿ ಮಕ್ಕಳಿಗಿಂತ ಹಿರಿಯರ ಆಸೆಯಂತೆ ಮಕ್ಕಳಿಗೆ ಸಿಕ್ಕಿದವು. ನಿಯಂತ್ರಿತ ಸಮಾಜದ ಕಟ್ಟುಪಾಡುಗಳಿಗೆ ಮಕ್ಕಳನ್ನು ಹೊಂದಿಕೊಳ್ಳುವಂತೆ ಮಾಡಲು ಇವುಗಳನ್ನು ಆಯ್ದು ನೀಡಲಾಗುತ್ತಿತ್ತು. ಆಯುವಾಗಲು ಮಕ್ಕಳ ಬೇಕು ಬೇಡಗಳನ್ನು ನಿರ್ಧರಿಸುತ್ತಿದ್ದವರು ಹಿರಿಯರೇ ಆದುದರಿಂದ ಅಲ್ಲಿಯು ಮಕ್ಕಳ ಭಾವನೆಗೆ ತಕ್ಕಂತೆ ಆರಿಸಿಕೊಳ್ಳುವ ಸ್ವತಂತ್ರ್ಯವನ್ನು ನೀಡಲಾಗದ ಕಾರಣ ಅವರ ಮನಸ್ಸಿನ ಮೇಲೆ ಅಗತ್ಯವಾದ ಪರಿಣಾಮಗಳನ್ನು ಅವು ತರಲಾರವುಗಳಾಗಿ ಹೋಗಿವೆ ಎನಿಸುತ್ತದೆ. ಅವು ಸಮಾಜದ ಸೀಮಿತವಾದ ಸತ್ಯಗಳನ್ನು ಕಟ್ಟಿಕೊಡುವ ಗುರಿಗಳಾಗಿ ನಿಂತವು. ಇಲ್ಲಿಯೂ ಅವು ಅವಾಸ್ತವ ಘಟನೆಗಳಾಗಿ ಮಕ್ಕಳಿಗೆ ಕುತೂಹಲದ ತಿರುವುಗಳನ್ನು, ಅದ್ಭುತ ಸಂಗತಿಗಳನ್ನು ಹೇಳಿದವೇ ಹೊರತು ವರ್ತಮಾನದ ಕಾಲದಲ್ಲಿ ಸಂಗತಿಗಳಿಗೆ ತೆರೆದುಕೊಳ್ಳಲಿಲ್ಲ. ಇಂದಿನ ಮಕ್ಕಳು ವಿಭಿನ್ನವಾದ ಮನೋಧರ್ಮ, ಹಲವು ರೀತಿಯ ಸಾಮಾಜಿಕ ವರ್ಗಗಳು, ಆರ್ಥಿಕ ಹಿನ್ನೆಯ ಕಲ್ಪನೆಗಳು, ಶೈಕ್ಷಣಿಕ ಬಗೆಗಳಲ್ಲಿ ಹಂಚಿಹೋಗಿರುವುದನ್ನು ಓದಿನ ಸಾಧ್ಯತೆ ಇರುವ ಮಕ್ಕಳು, ಓದಿನ ಸಾಮಾಗ್ರಿಯುಳ್ಳ ಮಕ್ಕಳು ಮುಂತಾದವುಗಳನ್ನು ಗಂಭೀರವಾಗಿ ಗಮನಿಸುವ ಅಗತ್ಯವಿದೆ. ಜೊತೆಗೆ ಆಧುನಿಕ ಮಾಧ್ಯಮಗಳು, ಹೊಸ ಹೊಸ ಆಟಗಳು ಮುಂತಾದವುಗಳನ್ನು ನೋಡಬೇಕಿದೆ. ವಿಕೋಪಕ್ಕೆ ತಿರುಗುವ ಹಿರಿಯರ ಮನಸ್ಥಿತಿಗಳು ಮಕ್ಕಳ ಮೇಲೆ ಬೀರುವ ಪರಿಣಾಮಗಳು, ಮಕ್ಕಳ ಬೇಡಿಕೆಗಳನ್ನು ಕಡೆಗಣನೆ ಮಾಡುವುದು, ತಾಯಿಯ ಲಾಲಿತ್ಯ, ಪೋಷಣೆ, ಹೆಣ್ಣುಮಕ್ಕಳ ಸಮಸ್ಯೆಗಳು, ಮಕ್ಕಳೊಳಗೆ ಏಳುವ ಸ್ಪಷ್ಟವಾದ ಹಾಗೂ ಅಸ್ಪಷ್ಟವಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲಾಗುವ ಸಾಹಿತ್ಯದ ತುಡಿತ ಈಗ ಅವಶ್ಯವಾಗಿ ಆಗಬೇಕಿದೆ. ಮಧ್ಯಮ ಹಾಗೂ ಕೆಳವರ್ಗದವರ ಮಕ್ಕಳ ತಲ್ಲಣಗಳು, ಸಂವೇದನೆಗಳು, ಗ್ರಾಮೀಣ ಭಾಗದ ಬದುಕು, ನಗರದ ಬದುಕಿನ ವೈರುಧ್ಯಗಳನ್ನು ಪರಿಗಣಿಸುವ ಅನಿವಾರ್ಯತೆಯಿದೆ. ಹದಿಹರೆಯದ ನಮ್ಮ ಸುತ್ತಮುತ್ತಲಿನ ಮಕ್ಕಳಿಗೆ ವಾಸ್ತವ ಬದುಕಿನ ಸಂಗತಿಗಳು ಮನಸೆಳೆಯುತ್ತವೆ. ನಮ್ಮ

ನಡುವಿರುವ ಅನೇಕ ಗೊಂದಲಗಳು, ರಾಜಕೀಯದ ಪರಿಸ್ಥಿತಿಗಳು, ಆಡಂಬರದ ಬದುಕಿನ ಸೆಳೆತ, ಅನ್ಯಲಿಂಗಗಳೊಂದಿಗಿನ ಆಕರ್ಷಣೆ, ಮುಜುಗರದ ಸಂಗತಿಗಳು ಎದುರಾಗಿ ನಿಲ್ಲುವುದರಿಂದ ಅವುಗಳೆಗೆಲ್ಲ ಪರಿಹಾರವನ್ನು ಹುಡುಕುವ ಸಾಹಿತ್ಯದ ಪ್ರಯೋಗಗಳು ನಮ್ಮಲ್ಲಿ ನಡೆಯುವ ಅಗತ್ಯವನ್ನು ನಾವು ಕಂಡುಕೊಳ್ಳಬೇಕಿದೆ.

'ಕಷ್ತಾಂಕ' ಎಂಬುದು ಆಂಟನ್ ಚೆಕಾಫರು ಬರೆದಿರುವ ದೀರ್ಘವಾದ ಪಾಶ್ಚ್ಯಾತ್ಯ ದೇಶದ ಕತೆ ಇದಾಗಿದೆ. ಇದರಲ್ಲಿ ವಾಸ್ತವದ ಎಲ್ಲಾ ಲಕ್ಷಣಗಳು ಮೊದಲಿಗೆ ನಮಗೆ ಸ್ಪಷ್ಟವಾಗಿ ಗೋಚರಿಸುವುವು. ಇದು ಸಾಕು ನಾಯಿಯ ಕುರಿತಾದ ನೈಜ ಸನ್ನಿವೇಶಗಳಂದ ಮೂಡಿಬಂದಿದ್ದು ಭಾವನೆಗಳನ್ನು, ಪ್ರೀತಿ, ವಾತ್ಸಲ್ಯವನ್ನು ಬಯಸುವ ಆಶಯವನ್ನು ತಂದಿರಿಸುತ್ತದೆ. ಬಡಗಿಯ ಮನೆಯಲ್ಲಿ ಸಾಕಿದ ನಾಯಿಯು ಅವನ ವಾತಾವರಣದಲ್ಲಿ ಸಿಗುವ ವಸ್ತುಗಳಾದ ಗೋಂದು, ವಾರ್ನಿಸು, ಮರದ ಸಿಪ್ಪೆಯ ವಾಸನೆಗೆ ಹೊಂದಿಕೊಂಡು ಜೀವಿಸುವ ಅನಿವಾರ್ಯತೆಯನ್ನು ಕಂಡುಕೊಂಡಿರುತ್ತದೆ. ಒಣಗಿದ ರೊಟ್ಟಿಗಳನ್ನು ಮಾತ್ರ ತಿಂದು ಬದುಕುತ್ತಿರುತ್ತದೆ. ಅವನ ದೃಷ್ಟಿಯಲ್ಲಿ ನಾಯಿ ಕೇವಲ ಒಂದು ಜೀವಿಯಾಗಿ ಕಾಣಿಸಿಕೊಂಡು ಅದನ್ನು ಅವನು ಲೆಕ್ಕಿಸುವುದಿಲ್ಲ ಅದು ಯಾವಾಗಲು ಸುಮ್ಮನೆ ಅಲ್ಲಿಯೇ ಅವನು ಕೆಲಸ ಮಾಡುವಲ್ಲಿ ಮಲಗಿಕೊಂಡಿರುತ್ತದೆ. ಒಂದು ದಿನ ಪೇಟೆಯ ಕಡೆಗೆ ಅವನು ಹೋದಾಗ ಹಿಂಬಾಲಿಸಿಕೊಂಡು ಹೋಗಿ ಜನರ ಜಂಗುಳಿಯೊಳಗೆ ತಪ್ಪಿಸಿಕೊಳ್ಳುತ್ತದೆ. ದಾರಿ ತಿಳಿಯದೆ ಪೇಚಾಡುವಾಗ ಪಟ್ಟಣದ ವಿಭಿನ್ನವಾದ ವೇಷಧಾರಿ, ಕೋಟು ಬೂಟಿನ ಮನುಷ್ಯನು ಅದನ್ನು ಕರೆದು ಆಶ್ರಯವನ್ನು ನೀಡುತ್ತಾನೆ. ಬಗೆಬಗೆಯದಾದ ರುಚಿಕರವಾದ ಆಹಾರವನ್ನು ಅವನು ಅದಕ್ಕೆ ತಿನ್ನಿಸುತ್ತಾನೆ. ಪ್ರೀತಿಯ ಮಾತುಗಳನ್ನು ಆಡುತ್ತಾ ಮೈಸವರಿ ಮುದ್ದಿಸುತ್ತಾನೆ. ಇದೊಂದು ವಿಚಿತ್ರವಾದರು ಬಡಗಿಗಿಂತ ಇವನು ನಾಯಿಗೆ ಪ್ರಿಯನಾಗುತ್ತಾನೆ. ಅವನ ಮನೆಯಲ್ಲಿ ನಾಯಿಯ ಜೊತೆಗೆ ಹಂದಿ, ಬಾತುಕೋಳಿಗಳು ಜೊತೆಯಾಗುತ್ತವೆ. ಬೀದಿ ನಾಯಿಕಂಡರೆ ಬೊಗುಳುತ್ತಿದ್ದ ಇದು ಅವುಗಳ ಜೊತೆಗೆ ಹೊಂದಿಕೊಳ್ಳುವುದು ಅನಿವಾರ್ಯವಾಗುತ್ತದೆ. ಅವನೊಬ್ಬ ಸರ್ಕಸ್ಸು ನಡೆಸುವನಾಗಿದ್ದು, ಅವನು ಮಾಡಿಸುವ ಎಲ್ಲಾ ಸರ್ಕಸ್ಸುಗಳಿಗೆ ನಾಯಿಯು ನಿಧಾನವಾಗಿ ಹೊಂದಿಕೊಳ್ಳುವ ಪ್ರಯತ್ನ ಮಾಡುತ್ತದೆ. ಈಗ ಅದು ಚೆನ್ನಾಗಿ ತಿಂದು ದಷ್ಟಪುಷ್ಟವಾಗಿ ಬೆಳೆಯುತ್ತದೆ. ರಿಂಗ್ ಮಾಷ್ಟರ್‌ನು ಬೀಸುವ ಚಾಟಿಯ ತುದಿಗೆ ತಕ್ಕಂತೆ ಓಡುತ್ತದೆ. ಸಂಗೀತಕ್ಕೆ ಹದವಾಗಿ ಕುಂಯಿಗುಡುವುದು, ಗಂಟೆ ಬಾರಿಸುವುದು, ಪಿರಮಿಡ್ಡ್ ಹಾಕುವುದು, ಬೆಕ್ಕನ್ನು ಹಿಂದಿಕ್ಕಿ ಓಡುವುದು ಎಲ್ಲವನ್ನು ಕಲಿಯುತ್ತದೆ. ಅವನ ಆಜ್ಞೆಗಳನ್ನು ಪಾಲಿಸಲು ಕಲಿಯುತ್ತದೆ. ಉಳಿದ ಪ್ರಾಣಿಗಳ ಬೇಸರ, ಜಿಗುಪ್ಸೆ ಮುಂತಾದವುಗಳನ್ನು ಗುರ್ತಿಸುತ್ತದೆ. ತನ್ನ ಜೊತೆಯಿದ್ದ ಬಾತುಕೋಳಿಯು ಸಾಯುವಾಗ ಅದಕ್ಕೆ ಸಾವು ಅರ್ಥವಾಗುತ್ತದೆ. ಸರ್ಕಸ್ಸಿನ ಒಂದು ದಿನ ಶೋ ನಡೆಯುವ ವೇಳೆಯಲ್ಲಿ ಜನರ ನಡುವೆ 'ಕಷ್ತಾಂಕ' ಎಂದು ಕೂಗಿದ ಹಳೆಯ ಮಾಲೀಕ ಬಡಗಿಯ ದನಿ ಅದಕ್ಕೆ ಚಪ್ಪಾಳೆಗಳ ನಡುವೆಯೂ ಕೇಳಿಸಿ, ಅವನನ್ನು ಗುರ್ತಿಸುತ್ತದೆ. ನಗರದ ಎಲ್ಲಾ ಅನುಕೂಲಗಳನ್ನು ತೆಜಿಸಿ, ಅವೆಲ್ಲವು ಕೆಟ್ಟಿಕನಸೆಂದು ಭಾವಿಸಿ, ಬಡಗಿಯ ಹಿಂದೆ ಹೋಗುತ್ತದೆ. ಅದಕ್ಕೆ ನೆಮ್ಮದಿಯು ಬಡಗಿಯ ಬಳಿಯಲ್ಲಿ ಮಾತ್ರ ಸಿಗುವುದು ಎನಿಸುತ್ತದೆ. ಹೀಗೆ ವಾಸ್ತವ ಅಂಶಗಳನ್ನು ಹದವಾಗಿ ಮಕ್ಕಳಿಗೆ ಕಟ್ಟಿಕೊಡುವಲ್ಲಿ

ಆಂಟನ್ ಚೇಕಾಫ್ ನಿಸ್ಸೀಮರಾಗಿ ಕಾಣಿಸಿಕೊಳ್ಳುತ್ತಾರೆ. ಇವರ ಈ ರೀತಿಯ ಪ್ರಯೋಗವು ಮಕ್ಕಳ ವಾಸ್ತವದ ಕತೆಗಳಿಗೆ ಮಾದರಿಯಾಯಿತು.

'ತಾತನಿಗೊಂದು ಉಡುಗೊರೆ' ಇಂಡೋನೇಷಿಯಾ ಮೂಲದ ಕತೆಯಿದು. ಜುಸ್ರಾನ್ ಸಫಾನೋ ಇದರ ಲೇಖಕ. ಇದು ಹಳ್ಳಿಯ ವಾತಾವರಣದ ಹುಡುಗನನ್ನು ಕುರಿತಾದದು. ಬಕ್ರಿ ಎನ್ನು ಹುಡುಗನು ತೀರ ಚುರುಕು ಬುದ್ಧಿಯ ಸ್ವಭಾವದವನು. ಮುಂಜಾವ ತಪ್ಪದೆ ಮಸೀದಿಯ ಪ್ರಾರ್ಥನೆಗೆ ಹಾಜರಾಗುವನು. ಆತನು ತಾತನೊಂದಿಗೆ ಇರುವವನು. ತಾತನೋ ಕಂಚಿನ ಕಂಠದವನಾಗಿದ್ದು ಅವನ ದನಿಯೆಂದರೆ ಈತನಿಗೆ ಹಿತವೆನಿಸುವುದು. ಒಂದು ದಿನ ತಾತನ ಮೈಗೆ ಹುಷಾರಿಲ್ಲದೆ ತಾತನು ಮನೆಯಲ್ಲಿಯೇ ಉಳಿಯುತ್ತಾನೆ. ಇದರಿಂದ ಅವನು ಕಳವಳಗೊಳ್ಳುವುದು, ಅವನನ್ನು ಕಾಣದೆ ಹುಡುಕಾಡುವುದು ಎಲ್ಲವು ಈ ಕತೆಯಲ್ಲಿವೆ. ತಾತನಿಗೆ ಇಷ್ಟವಾದ ಮನ್‌ಕಾಂಗ್ ಕಾಯಿಗಳನ್ನು ಆಯ್ದು ತೆಗೆದುಕೊಂಡು ಮನೆಗೆ ಬರುವಾಗ ಕಾಯಿಗಳಿಗಾಗಿ ಇತರ ಹುಡುಗರು ಬರುತ್ತಾರೆ. ಅಲ್ಲಿ ಉದುರಿದ್ದ ಕಾಯಿಗಳನ್ನು ಬಕ್ರಿಯು ಆರಿಸಿದ್ದು, ಅವರಿಗೆ ಸಿಗದಾದಾಗ ಅವರು ಇವನನ್ನು ಹಿಡಿಯಲು ಹುಡುಕುತ್ತಾರೆ. ಇವನು ಪೊದೆಯೊಳಗೆ ಅವಿತು ಕುಳಿತುಕೊಳ್ಳುತ್ತಾನೆ. ಅಲ್ಲಿ ಮಕ್ಕಳ ರೋಷ ಆವೇಶಗಳು ಉಂಟಾಗುವ ಸಂಗತಿಗಳು ಇವೆ. ಅದರಲ್ಲಿ ಒಬ್ಬ ಹುಡುಗನಿಗೆ ಇವನ ಬಗ್ಗೆ ಪ್ರೀತಿ ಮೂಡಿ, ಬಕ್ರಿ ಸೋಮರಿಯಲ್ಲ ಅವನು ಮುಂಜಾನೆಯೇ ಬಂದಿರುವವನು ಕಾಯಿಗಳು ಅವನಿಗೆ ನ್ಯಾಯವಾಗಿ ಸಕ್ಕಿವೆ, ಬಿಟ್ಟುಬಿಡೋಣ ಎನ್ನುತ್ತಾನೆ. ಹುಡುಗರು ಹಿಂದಿರುಗಿ ಹೋಗುವಾಗ ಬಕ್ರಿಯು ಓಡಿಬಂದು ಅವರಿಗೂ ಕಾಯಿಗಳನ್ನು ಹಂಚಿಕೊಡುತ್ತಾನೆ. ಇದೊಂದು ಸಾಮಾನ್ಯವಾದ ಘಟನೆಯಾದರು ಮಕ್ಕಳಲ್ಲಿ ಮೂಡುವ ಭಾವನೆಗಳನ್ನು ವಾಸ್ತವವಾಗಿ ಕಟ್ಟಿಕೊಟ್ಟಿದೆ.

ಬಂಗಾಳಿ ಭಾಷೆಯಲ್ಲಿ ನಡೆದ ವಾಸ್ತವದ ಕೆಲವು ಮಹತ್ತರವಾದ ಪ್ರಯೋಗಗಳನ್ನು ಗಮನಿಸುವುದಾದರೆ ಅಲ್ಲಿನ ಶ್ರೇಷ್ಠ ಲೇಖಕಿ ಮಹಾಶ್ವೇತಾದೇವಿಯವರು ಬರೆದ 'ಏತೋ ಮುಂಡಾ ಯುದ್ಧವನ್ನು ಗೆದ್ದ' ಎಂಬುದು ಆದಿವಾಸಿ ಹುಡುಗನನ್ನು ಕುರಿತು ಬರೆದ ಅಪೂರ್ವ ಕತೆಯಾಗಿದೆ. ಅನಕ್ಷರತೆ, ಶೋಷಣೆ, ಬಡತನಗಳ ನಡುವೆ ನಲುಗುವ ಒಂದು ಆದಿವಾಸಿ ಜನಾಂಗದ ಹಿನ್ನೆಲೆಯನ್ನು ಹೇಳುವ ಕತೆಯಾಗಿದೆ. ಜೀತಕ್ಕಿರುವ ಹುಡುಗನು ಪಡುವ ಪಾಡು, ನಿಧಾನವಾಗಿ ಅವನಿಗೆ ಅರಿವಾಗುವ ಸಮಾಜದ ಸ್ಥಿತಿಗತಿಗಳು ಇಲ್ಲಿವೆ. ಅವನು ದಾರಿಯಲ್ಲಿ ಹೋಗುವಾಗ ಸಿಗುವ ಶಾಲೆಯ ಮುಂದೆ ನಿಲ್ಲುತ್ತಾನೆ. ಅಲ್ಲಿನ ಮಾಸ್ತರರು ವರ್ಣಿಸಿ ಹೇಳುವ ಯುದ್ಧದ ಕತೆಗಳನ್ನು ಗಮನವಿಟ್ಟು ಆಲಿಸುತ್ತಾನೆ. ಘೋರ ಯುದ್ಧಗಳ ಬಗೆಗೆ ಇವನ ಕುತೂಹಲ ಹೆಚ್ಚಾಗುತ್ತದೆ. ಅವನು ಬಡತನದ ನಡುವೆಯು ಶಾಲೆಯನ್ನು ಸೇರಲು ಬಯಸುತ್ತಾನೆ. ಮಾಸ್ತರರ ಸಹಕಾರದಿಂದ ಅರಿದ ಚಡ್ಡಿಯಲ್ಲಿಯೇ ಶಾಲೆಗೆ ಬಂದು ಕಲಿಯುತ್ತಾನೆ. ತನ್ನ ಅಜ್ಜನ ಮುರುಕಲು ಗುಡಿಸಲಿನಲ್ಲಿ ಇದ್ದುಕೊಂಡು ಮಾಸ್ತರರು ಹೇಳಿದಂತೆ ವಕೀಲನಾಗುವ ಕನಸು ಕಾಣುತ್ತಾನೆ. ಆದರೆ ವಾಸ್ತವವಾಗಿ ಕ್ರೂರವಾದ ಸಮಾಜವು ಅವನನ್ನು ಶಾಲೆಗೆ ಹೋಗಲು ಬಿಡುವುದಿಲ್ಲ. ಮರಬಿದ್ದು ಅವನ ತಾತನು ಕೈಕಾಲು ಮುರಿದುಕೊಳ್ಳುತ್ತಾನೆ ಎಳೆಯ ವಯಸ್ಸಿನ ಇವನೆ ಅವನ ತಾತನನ್ನು ಸಾಕುತ್ತಾನೆ. ಅಜ್ಜನಿಂದ ಅವರ ಜನಾಂಗದ ಹಿರಿಯರ ಸಾಹಸದ ಕತೆಗಳನ್ನು

ಕೇಳುತ್ತಾನೆ. ಮನೆಗೆಲಸಕ್ಕೆ ಹೋಗುವುದಿಲ್ಲವೆಂದು ಪ್ರತಿಭಟಿಸುತ್ತಾನೆ. ಬದುಕು ಅವನ ಮುಂದೆ ಯುದ್ಧದಂತೆಯೇ ಕಾಣಿಸಿಕೊಳ್ಳುತ್ತದೆ. ಕೆರೆ, ಹೊಳೆ, ಕಾಡಿನ ನಡುವೆ ಒಂದುದಿನ ಓಡುತ್ತಾನೆ ಕೆಲಸದಿಂದ ಬಿಡುಗಡೆಯನ್ನು ಹೊಂದಿದವನಂತೆ ಕುಣಿಯುತ್ತಾನೆ. ಪ್ರಕೃತಿಯು ಕೂಗಿ ಹೇಳುತ್ತದೆ ಅವನು ಬದುಕಿನ ಯುದ್ಧವನ್ನು ಗೆದ್ದು ಬಿಡುಗಡೆ ಹೊಂದಿದನೆಂದು. ಹೀಗೆ ಈ ಕತೆಯು ವಾಸ್ತವ ಬದುಕಿನಲ್ಲಿ ಮಕ್ಕಳ ಸಮಸ್ಯೆಗಳನ್ನು ಎಳೆಎಳೆಯಾಗಿ ಚಿತ್ರಿಸಿದೆ. ಮಹಾಶ್ವೇತಾದೇವಿಯವರ ಈ ಕತೆಯಲ್ಲಿ ಮಕ್ಕಳ ಸಾಹಿತ್ಯವು ಅಗತ್ಯವಾಗಿ ಅನುಭವಿಸಬೇಕಾದ ವಾಸ್ತವವಸ್ತುವಿನ ಅಂಶಗಳ ಪ್ರಯೋಗತೆಯನ್ನು ಗಮನಿಸಬಹುದು. 'ಬಾರಾಪಾಣಿ' ಒಂದು ವಿಶೇಷವಾದ ಹಂದರವುಳ್ಳ ಕತೆಯಾಗಿದೆ. ಲೀಲಾ ಮುಜುಮ್‌ದಾರ್ ಇದರ ಲೇಖಕಿ. ಪ್ರಕೃತಿಯ ಮೇಲಿನ ಪ್ರೇಮ, ಬದುಕಿನ ಅನನ್ಯವಾದ ಪ್ರೀತಿಗಳು ಇಲ್ಲಿನ ವಸ್ತು. ಬಂಗಾಳ ಭಾಷೆಯಲ್ಲಿ ನಡೆದ ವಾಸ್ತವ ಕತೆಯ ನವಿರಾದ ಪ್ರಯೋಗವಿದು. ಖುಷಿಯಾಗಿ ಕೈಗೆತ್ತಿಕೊಂಡು ಓದುವಂತಹ ಹದವಾದ ಬರೆವಣಿಗೆ ಇಲ್ಲದೆ. 'ಕಾನು' ದಟ್ಟವಾದ ಪ್ರಕೃತಿಯ ನಡುವೆ ಬೆಳೆಯುವ ಹುಡುಗ. ಆತನ ಜೀವನ ಸಂಗಾತಿಯಾಗಿ ಸಿಗುವ ಅವನ 'ನಾನಾ' ಎಲ್ಲವನ್ನು ತಿಳಿಸಿ ಹೇಳುವ ಅನುಭವಿಯವನು. ಕಾಡಿನ ನಡುವೆ ನಡೆಯುವ ನೂರೆಂಟು ಕತೆಗಳನ್ನು ಅವನು ಕೇಳುತ್ತಾನೆ, ಅವೆಲ್ಲವೂ ಬದುಕಿನ ಪಾಠಗಳಾಗಿ ಕಾಣಿಸಿಕೊಳ್ಳುತ್ತವೆ. ವೃದ್ಧನಾದ 'ನಾನಾ' ಬದುಕಿನ ಕಹಿ ಘಟನೆಯನ್ನು ಸಹಿಸಲಾಗದೆ ಕಾಣೆಯಾಗಿಬಿಡುತ್ತಾನೆ. ಕಾನುವಿನ ತಾಯಿಯು ಇದಕ್ಕೆ ಕಾರಣಳಾಗುತ್ತಾಳೆ. ಕಾನುವಿನೊಂದಿಗೆ ಹೋಗಿ ನಾನಾನನ್ನು ಹುಡುಕಾಡುತ್ತಾಳೆ. ಕೊನೆಗೆ ನಾನಾ ಸಿಗುತ್ತಾನೆ. ಅವನ ಕೈಯ್ಯಲ್ಲಿ ಬೇಟೆಗಾರನಿಗೆ ಸಿಕ್ಕಿ ಗಾಯಗೊಂಡಿದ್ದ ಹಕ್ಕಿಯೊಂದು ಇರುತ್ತದೆ. ಕತೆಯು ಈ ರೀತಿಯ ಅನಿರೀಕ್ಷಿತವಾದ ತಿರುವುಗಳಿಂದ ಮುಕ್ತಾಯವನ್ನು ಅನುಭವಿಸುತ್ತದೆ. ಇಲ್ಲೆಲ್ಲಾ ಬದುಕಿನಲ್ಲಿ ನಡೆಯುವ ಘಟನೆಗಳು ಸುಳಿದಾಡಿ ಭಾವನೆಗಳನ್ನು ಜಾಗೃತಗೊಳಿಸುವ ವಾಸ್ತವತೆಯ ಹಂದರಗಳಿವೆ.

ಹಿಂದಿಯ ಪ್ರೇಮಚಂದ್ರರ ಬರೆವಣಿಗೆಯಲ್ಲಿ ಸಿಗುವ ಪ್ರಮುಖ ವಾಸ್ತವದ ಕತೆಯೆಂದರೆ 'ಇದಿಗಾ' ಗಮನಿಸಬಹುದು. ಇದು ಪುಟ್ಟಕತೆಯಾದರು ಬಡತನದ ಹುಡುಗನ ಹಿಂದೆ ಅರಳಿದ ಕತೆಯಾಗಿದೆ. ಹಮೀದ್ ಎನ್ನುವ ಹುಡುಗ ಈ ಕತೆಯನಾಯಕನಾಗಿದ್ದು ರಂಜಾನ್ ಹಬ್ಬಕ್ಕೆ ಈದ್ಗಾಕ್ಕೆ ಬರುತ್ತಾನೆ. ಅವನ ಗೆಳೆಯರೆಲ್ಲರು ಬಣ್ಣಬಣ್ಣದ ಗೊಂಬೆಗಳನ್ನು ಕೊಳ್ಳುತ್ತಾರೆ. ಅವನಲ್ಲಿ ಇರುವ ಕಡಿಮೆ ಕಾಸಿಗೆ ಅವನೊಂದು ಸುಡುವ ರೌಗುಣಿಯನ್ನು ಕೆಳಗಿಳಿಸಲು ಅಜ್ಜಿಗೆ ಅಗತ್ಯವೆನಿಸಿದ ತುಂಡು ಪಾತ್ರೆಯನ್ನು ಕೊಳ್ಳುತ್ತಾನೆ. ಇದು ಮಕ್ಕಳಲ್ಲಿರುವ ವಾಸ್ತವ ಬದುಕಿನ ಪ್ರಜ್ಞೆಗೆ ಸಾಕ್ಷಿಯಾಗಿ ಕಾಣಿಸಿಕೊಳ್ಳುತ್ತದೆ.

ಇಂಗ್ಲೀಷಿನಿಂದ ತರ್ಜುಮೆಯಾಗಿ ಕನ್ನಡದಲ್ಲಿ ಕಾಣಿಸಿಕೊಂಡ ಅನಿತಾದೇಸಾಯಿಯವರ ಮಹತ್ತ್ವವಾದ ಕತೆ 'ಕಡಲ ತೀರದ ಗ್ರಾಮ'. ಸಣ್ಣವಯಸ್ಸಿನಲ್ಲಿಯೇ ಅನೇಕ ಸಮಸ್ಯೆಗಳಿಂದಾಗಿ ಮಕ್ಕಳು ಸಂಸಾರದ ಜವಾಬ್ದಾರಿಗಳನ್ನು ಹೇಗೆ ನಿಭಾಯಿಸುತ್ತಾರೆ ಎಂಬುದು ಇಲ್ಲಿನ ಕತೆಯ ವಸ್ತುವಾಗಿದೆ. ಜೀವನದಲ್ಲಿ ಕನಿಷ್ಟವಾದ ಅಗತ್ಯಗಳು ಸಿಗದೆ ಪರದಾಡುವ ಜನರಿಂದ ಕೂಡಿದ ಕಡಲ ತೀರದ ಒಂದು ಗ್ರಾಮದ ಕತೆಯಿದು. ಅಲ್ಲೊಂದು ಕುಟುಂಬದಲ್ಲಿ ಕುಡುಕ ಅಪ್ಪ, ಹಾಸಿಗೆ ಹಿಡಿದಿರುವ ತಾಯಿ, ಅವರ ಮೂರು ಮಕ್ಕಳು ಅನುಭವಿಸುವ ಯಾತನೆಗಳು ಊರಿನ ಜನರ ಪಾಡನ್ನು ದನಿಸುತ್ತವೆ. ಇಂತಹ ಸ್ಥಿತಿಯಲ್ಲೂ

ಶಾಲೆಯ ಕನಸು ಚಿಗುರೊಡೆದು ಹಿರಿಯವನಾದ ಮಗ ಸಂಸಾರದ ಹೊಣೆಗಾರಿಕೆಯನ್ನು ಹೊತ್ತು ಉಳಿದಿಬ್ಬರನ್ನು ಓದಲು ಪ್ರೇರೇಪಿಸುವುದು, ಈ ನಡುವೆ ಔಷಧಿಯ ಖರ್ಚಿಗಾಗಿ ತುಂಡು ಜಮೀನಿನಲ್ಲಿ ಬೆಳೆದ ತೆಂಗಿನಕಾಯಿಯನ್ನು ಮಾರುವುದು ನಡುವೆ ಮುಂಬೈನ ನಂಟು ತೆರೆದುಕೊಳ್ಳುತ್ತದೆ. ಮುಂದೆ ಸಹೋದರರಿಗೆ ಉದ್ಯೋಗ ದೊರಕುತ್ತದೆ. ಇದ್ದ ಗುಡಿಸಲುಗಳ ನಡುವೆ ಕಾರ್ಖಾನೆ ಎದ್ದು ಗ್ರಾಮ ನಾಶವಾಗುತ್ತದೆ. ಇವೆಲ್ಲವುಗಳ ನಡುವೆಯು ಮುಂಬೈಗೆ ವಲಸೆ ಹೋಗಿ ಬದುಕು ಕಟ್ಟಿಕೊಳ್ಳುವ ಹುಡುಗರ ಸಮಸ್ಯೆಗಳನ್ನು ಚಿತ್ರಿಸಿರುವುದನ್ನು ಕಾಣುತ್ತೇವೆ.

'ಮೇಡಂನ ಬಸ್ಸ್ ಸವಾರಿ' ತಮಿಳಿನ ವೆಣ್ಣಿಕಣ್ಣನ್ ರಚಿಸಿದಕತೆಯಾಗಿದ್ದು ಕನ್ನಡಕ್ಕೆ ಅನುವಾದಿಸಲಾಗಿದೆ. ವೆಳ್ಳಿಯಮ್ಮ ಎನ್ನುವ ಹಳ್ಳಿಯ ಹುಡುಗಿಯು ಕಾಣುವ ಕನಸುಗಳು ಮತ್ತು ಅವಳ ಮನಸ್ಸಿನ ಸುತ್ತ ಅರಳಿರುವ ಕತೆಯಿದು. ದಿನವೂ ಮನೆಯ ಮುಂದೆ ಸಂಚರಿಸುವ ಬಸ್ಸು, ಅವಳ ಕುತೂಹಲವನ್ನು ಕೆದುಕುತ್ತದೆ. ಎಂದಾದರು ಒಂದು ದಿನ ಆ ಬಸ್ಸಿನಲ್ಲಿ ಪ್ರಯಾಣ ಮಾಡುವ ಹಂಬಲ ಅವಳಿಗೆ ಬಲವಾಗುತ್ತಾ ಹೋಗುತ್ತದೆ. ಅದು ಹಳ್ಳಿಯನ್ನು ದಾಟಿ, ನಗರ ತಲುಪಿ, ಮತ್ತೆ ಹಳ್ಳಿಗೆ ವಾಪಸ್ಸಾಗುವುದರಿಂದ ಹೋಗಿ ಹಿಂದಿರುಗಿ ಬರಬಹದಾದ ಅವಳ ಆಸೆ ಮತ್ತಷ್ಟು ಚಿಗುರೊಡೆಯುತ್ತಾ ಬಲವಾಗುತ್ತದೆ. ಒಂದು ದಿನ ಬಸ್ಸು ಹತ್ತಿ ಒಬ್ಬಳೇ ಹೋದಾಗ ಕಂಡಕ್ಟರ್ ಇವಳನ್ನು ಅಮ್ಮಾವ್ರೆ ಎಂದು ಕರೆದುದು ಇವಳಿಗೆ ಹಿತವೆನಿಸುತ್ತದೆ. ಸೀಟು ಲಭ್ಯವಿದ್ದರೂ ಕೂರದೆ ನಿಂತುಕೊಂಡೆ ಸುತ್ತಮುತ್ತಲಿನ ಜಗತ್ತನ್ನು ಬೆರಗುಗಣ್ಣಿನಿಂದ ನೋಡುತ್ತಾಳೆ. ಬಸ್ಸು ಪಟ್ಟಣ ತಲುಪಿದರೂ ಇಳಿಯುವುದಿಲ್ಲ, ಅನೇಕ ರೀತಿಯ ಜನರು ಬಂದು ಹೋಗುವುದನ್ನು ಬೆರಗುಗಣ್ಣಿಂದ ನೋಡುತ್ತಾಳೆ. ದಾರಿಯಲ್ಲಿ ಹೋಗುವಾಗ ಕಾಣಿಸುವ ದೃಶ್ಯಗಳನ್ನು ಕಣ್ತುಂಬಿ ಕೊಳ್ಳುತ್ತಾಳೆ. ಆ ಬಸ್ಸು ಹಿಂದಿರುಗಿ ಬರುವಾಗ ದಾರಿಯಲ್ಲಿ ನಿಂತ ಹಸುವಿನ ಸಾವಿಗೆ ಕಾರಣವಾಗುತ್ತದೆ. ಇದು ಅವಳಿಗೆ ನೋವಾಗುತ್ತದೆ. ಇತ್ತಕಡೆಯಿಂದ ಹೋದಾಗ ಇದ್ದ ಖುಷಿ ಅವಳಲ್ಲಿ ಬರುವಾಗ ಉಳಿದಿರುವುದಿಲ್ಲ. ಹೀಗೆ ಕತೆಯು ಹುಡುಗಿಯೊಬ್ಬಳ ಮನಸ್ಸಿನ ಸುತ್ತ ಎಣೆದುಕೊಳ್ಳುತ್ತದೆ.

ಈ ಎಲ್ಲಾ ಕತೆಗಳಲ್ಲಿ ನಡೆದಿರುವ ಪ್ರಯೋಗಗಳನ್ನು ಗಮನಿಸಿದಾಗ ಮಕ್ಕಳದೇ ವಸ್ತು ಅವರದೇ ಪ್ರಪಂಚ, ಅವರದೇ ಭಾವನೆಗಳನ್ನು ಸೊಗಸಾಗಿಕಟ್ಟಿ ಕತೆಯಾಗಿಸಿರುವುದು ಸಿಗುತ್ತದೆ. ಮಕ್ಕಳ ಮನಸ್ಸು, ಮನೆ, ಶಾಲೆ, ಪರಿಸರ, ಪ್ರಾಣಿ ಪಕ್ಷಿಗಳು, ಆಟಿಕೆಗಳು ಮುಂತಾದವುಗಳನ್ನು ಪರಿಗಣಿಸುವ ವಸ್ತುಗಳಿಂದ ಕೂಡಿದ ಕತೆಗಳಿವೆ. ಲೇಖಕರು ಹಿರಿತನದಲ್ಲಿ ನಿಂತು ನೋಡಿದಾಗಲು ಅವರ ಬಾಲ್ಯದ ಅನುಭವಗಳನ್ನು ಆಧರಸಿಯೆ ಬರೆಯುವುದರಿಂದ ವಾಸ್ತವವನ್ನು ಚೆನ್ನಾಗಿಸಿ ಅನುಭವಿಸಿ ದಾಖಲಿಸಲು ಸಾಧ್ಯವಾಗುತ್ತದೆ. ಇಂತಹ ಪ್ರಯತ್ನಗಳು ಪ್ರಯೋಗಗಳು ದೇಶದ ಹೊರಗೆ ಈಗಾಗಲೆ ನಡೆದಿರುವುದನ್ನು ಕಾಣುತ್ತೇವೆ. ದೇಶದ ಒಳಗೂ ಹಿರಿಯ ಹೆಸರಾಂತ ಲೇಖಕರು ಅನ್ಯಭಾಷಾ ಪರಿಸರದಲ್ಲಿಯು ಕಂಡುಕೊಂಡಿದ್ದಾರೆ. ಕನ್ನಡದ ಒಳಗೂ ವಿರಳವಾಗಿ ಇಂತಹ ಪ್ರಯತ್ನಗಳನ್ನು ಕಾಣುತ್ತೇವೆ. ಇವೆಲ್ಲವೂ ಹೊರಗಿನ ಓದನ್ನು ಸಾಧ್ಯವಾಗಿಸಿಕೊಂಡವರಿಂದ ಕನ್ನಡದಲ್ಲಿ ನಡೆದಿವೆ. ಪ್ರತ್ಯಕ್ಷವಾಗಿ, ಇಲ್ಲವೇ ಪರೋಕ್ಷವಾಗಿಯು, ಪ್ರಯತ್ನ ಪೂರ್ವಕವಾಗಿಯು ಕನ್ನಡದಲ್ಲಿ ಇವುಗಳ ಪ್ರಭಾವವನ್ನು ಅಲ್ಲಗಳೆಯುವಂತಿಲ್ಲ. ಭಾರತದಲ್ಲಿ ಬಡತನ, ಹಸಿವು, ನಿರುದ್ಯೋಗದ ಪರಿಣಾಮಗಳು, ಅಸಮತೋಲನ ಸ್ಥಿತಿ, ಶೋಷಣೆ, ಜಾತಿವ್ಯವಸ್ಥೆ, ಲಿಂಗ

ತಾರತಮ್ಯ, ಹಿರಿಯರ ಕಿರುಕುಳ, ಮಕ್ಕಳ ಖಿನ್ನತೆ ಮುಂತಾದ ಸಮಸ್ಯೆಗಳು ತುಂಬಿತುಳುಕುತ್ತಿವೆ. ಇವು ಮಕ್ಕಳ ಬದುಕಿನಲ್ಲಿ ಪ್ರವೇಶಿಸಿ ಅವರ ಮೇಲೆ ಗಾಢವಾದ ಪರಿಣಾಮವನ್ನು ಬೀರಿವೆ. ಕುಡಿತದ ತಂದೆ, ಸಂಸಾರದ ಹೊಣೆ ಹೊರುವ ತಾಯಿ, ಅವಳಿಗೆ ನೆರವಾಗುವ ಮಕ್ಕಳು, ಮಕ್ಕಳ ದುಡಿಮೆ, ಬಾಲ್ಯವಿವಾಹ, ಮಕ್ಕಳ ಮಾರಾಟ ಮುಂತಾದ ಸಾಮಾಜಿಕ ಪಿಡುಗುಗಳಿಗೆ ಉತ್ತರವಾಗುವ ವಸ್ತುಗಳು ನಮ್ಮ ಸುತ್ತಮುತ್ತಲಿನ ಮಕ್ಕಳನ್ನು ಆಕರ್ಷಿಸುತ್ತವೆ. ಇಂತಹವುಗಳಿಗೆ ಪರಿಹಾರ ನೀಡುವ ವಾಸ್ತವದ ಕತೆಗಳು ನಮ್ಮಲ್ಲಿ ಮೂಡುವ ಅಗತ್ಯವಿದ್ದು ಲೇಖಕರು ಈ ಹಾದಿಯಲ್ಲಿ ಯೋಚಿಸಬೇಕಿದೆ. ಮಕ್ಕಳ ಅನುಭವಗಳನ್ನು ಕುರಿತು ಬರೆದು ಮಕ್ಕಳ ಸಾಹಿತ್ಯಾಸಕ್ತರನ್ನು ಸಂತೈಸ ಬಲ್ಲವರು ರಸ್ಕಿನ್ ಬಾಂಡ್ ರವರು. ಇವರ ಹಲವಾರು ಕತೆಗಳನ್ನು ಗಮನಿಸಿದಾಗ ಅವರು ಹುಟ್ಟಿ ಬೆಳೆದ ಪ್ರಕೃತಿಯಲ್ಲಿನ ಪರಿಸರ, ಬೆಟ್ಟಗುಡ್ಡಗಳ ಒಡನಾಟ, ಪ್ರಕೃತಿಯೊಡನೆ ಮಾತುಕತೆಯನ್ನು ಕಾಣಬಹುದು. ರಸ್ಕಿನ್ ಬಾಲ ಮನಸುಗಳನ್ನು ಅರಿಯುವುದರಲ್ಲಿ ನುರಿತರು. ಇವರ ಪ್ರಭಾವ ಮತ್ತು ಇವರ ಸಾಹಿತ್ಯದ ಪ್ರೇರಣೆಯನ್ನು ಕನ್ನಡದ ವಾಸ್ತವ ಜಗತ್ತು ಅಗತ್ಯವಾಗಿ ಅನುಭವಿಸಿದೆ.

ಬ್ರಿಟೀಷರು ಭಾರತದಲ್ಲಿ ಇದ್ದಷ್ಟು ಕಾಲ ಮಕ್ಕಳ ಸಾಹಿತ್ಯವು ದೇಶಾದ್ಯಾಂತ ಅವರ ಸಾಹಿತ್ಯದ ಪ್ರಭಾವವನ್ನು ಪಡೆಯಿತು. ಅವರು ಭಾರತ ಬಿಟ್ಟು ಹೋದಾಗ ಆದ ಪರಿಣಾಮವು ಸಹ ಇನ್ನೊಂದು ತೆರನಾದ ವಾತಾವರಣವನ್ನು ಹುಟ್ಟುಹಾಕಿತು. ಇಲ್ಲಿಯೇ ಹುಟ್ಟಿಬೆಳೆದ ಆಂಗ್ಲೋ ಇಂಡಿಯನ್ ಕುಟುಂಬಗಳು ಭಾರತದ ಮಕ್ಕಳ ಪರಿಸರದಿಂದ ಪ್ರತ್ಯೇಕತೆಯನ್ನು ಅನುಭವಿಸುವಂತಾಯಿತು. ಅವರ ಸ್ವತಂತ್ರ ಜೀವನದ ಹಂಬಲಗಳು, ಭಾರತೀಯ ಸಮಾಜದ ಸ್ಥಿತಿಗಳನ್ನು ಕುತೂಹಲದಿಂದಲೂ, ಕಟ್ಟು ಪಾಡುಗಳಿಂದಲು ಕಾಣುವಂತಾಯಿತು. ಹಿರಿಯರ ಬಂಧನಗಳು, ಪ್ರೀತಿ, ಕರುಣೆ, ಸ್ನೇಹಗಳು, ಮೋಹ ಜಗತ್ತಿನ ಆಡಂಬರಗಳು ಕಾಣಿಸಿಕೊಂಡವು. ಪ್ರಕೃತಿಯ ಮೇಲಿನ ಆಸ್ವಾದಗುಣ, ಹೊಸತನವನ್ನು ಅನುಭವಿಸುವ ಬೆರಗು ಇವೆಲ್ಲವೂ ರಸ್ಕಿನ್‌ನ ಸಾಹಿತ್ಯದ ವಸ್ತುಗಳಾಗಿ ಕಾಣಿಸಿಕೊಂಡವು. ಇವುಗಳ ದಟ್ಟವಾದ ಪ್ರಭಾವವು ಭಾರತೀಯರ ಮೇಲೆ ಉಂಟಾಗಿ ಅದು ನಮ್ಮ ಸಾಹಿತ್ಯದಲ್ಲಿಯು ಕಾಣಿಸಿ ಕೊಳ್ಳುವಂತಾಯಿತು. ಡೆಹರಾ ಡ್ಯೂನನ ನ ಪರಿಸರದಲ್ಲಿ ಅವರ ಕತೆಗಳು ಅರಳಿವೆ. ಮಕ್ಕಳ ಏಕಾಂಗಿತನ, ದೊಡ್ಡವರು ಮಕ್ಕಳ ಸೂಕ್ಷ್ಮತೆಗಳನ್ನು ನಿರ್ಲಕ್ಷ್ಯ ಮಾಡುವುದು, ಇದರಿಂದ ನೋವು ಅನುಭವಿಸುವುದು, ಸಹಜ, ಸ್ವಚ್ಛಂದ ಬದುಕಿನ ದುಡಿಯುವ ಮನಸ್ಸುಗಳು ಎಲ್ಲವೂ ರಸ್ಕಿನ್‌ರ ಕತೆಗಳಲ್ಲಿ ಕಾಣುವ ಸಂಗತಿಗಳಾಗಿವೆ.[೪೦]

---

೪೦ ಮಕ್ಕಳ ಸಾಹಿತ್ಯ: ಮಾತುಕತೆ, ರಸ್ಕಿನ್ ಬಾಂಡ್‌ನ Room on the roof ಕತೆ ಕುರಿತು, ಅಂತರ್ಜಾಲ ಪತ್ರಿಕೆಯ ಅಂಕಣ, ಸಂ: ಡಾ. ಆನಂದ ಪಾಟೀಲ.

## ೬.೫ ಕನ್ನಡದಲ್ಲಿ ವಾಸ್ತವ ಕತೆಗಳ ಪ್ರಯೋಗಗಳು

ಭಾರತದ ಮಕ್ಕಳ ಸಾಹಿತ್ಯವು ಈ ಎಲ್ಲಾ ಪ್ರಯೋಗಗಳಿಂದ ಪ್ರೇರಣೆಗೊಂಡಂತೆ ಕನ್ನಡದ ಮಕ್ಕಳ ಸಾಹಿತ್ಯವು ಸಹ ಅನುಭವಿಸಿತು. ಇದರ ಫಲವಾಗಿ ನಮ್ಮಲ್ಲಿಯು ಕೆಲವು ವಾಸ್ತವ ವಸ್ತುವುಳ್ಳ ಕತೆಗಳು ಮಕ್ಕಳಿಗಾಗಿ ಅರಳಿದವು. ವಾಸ್ತವ ಬದುಕು ಅಷ್ಟು ಸ್ಪಷ್ಟವಾಗಿ ಕಾಣಿಸಿಕೊಳ್ಳದಿದ್ದರೂ ವಿರಳವಾಗಿ ಮೂಡಿದವು. ಕೆಲವು ಮಹತ್ತರದ ಪ್ರಯತ್ನಗಳು ನಡೆದಿರುವುದು ಶ್ಲಾಘನೀಯವಾಗಿ ಕಾಣಿಸುತ್ತದೆ. ಮಲೆನಾಡಿನ ಮಡಿಲಲ್ಲಿ ಬೆಳೆದ ನಾ. ಡಿಸೋಜರು ಕನ್ನಡದಲ್ಲಿ ಇಂತಹ ಬರೆಹ ಸಾಹಸಗಳಿಗೆ ಕೈಹಾಕಿದ್ದು ಆಶಾದಾಯಕವಾದ ಬೆಳವಣಿಗೆಯಾಗಿದೆ. ಅವರು 'ಮರಾಠಿ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿ ಬಂದಾಗ ಅಲ್ಲಿನ ಮಕ್ಕಳ ಸಾಹಿತ್ಯದ ಪುಸ್ತಕಗಳನ್ನು ನೋಡಿ, ಪ್ರೇರಣೆಯುಂಟಾಗಿ ಬರೆದೆ' ಎಂದು ಅವರು ವಾಸ್ತವ ಕತೆಗಳ ವಿಚಾರದ ಅವರ ನಡೆಯನ್ನು ಕುರಿತು ಹೇಳಿಕೊಳ್ಳುತ್ತಾರೆ. ಅವರ ಬರೆಹದಲ್ಲಿ ಕಾಣಿಸಿಕೊಳ್ಳುವುದು ಮಲೆನಾಡಿನ ಮಕ್ಕಳ ಮನೋಲೋಕವಾಗಿದೆ. ಅಲ್ಲಿನ ಮಕ್ಕಳ ಅಪ್ರಬುದ್ಧತೆಯ ಏಳುಬೀಳುಗಳು, ಪರಿಸರದ ನಡುವಿನ ಹೊಂದಾಣಿಕೆಗಳು, ಸಾಹಸಗಳು, ಪರಿಸರ ಪ್ರೇಮ, ಪ್ರಾಣಿಯ ಮೇಲಿನ ಸಹಜ ಪ್ರೀತಿಗಳನ್ನು ಅವರು ವಾಸ್ತವದ ಕತೆಯಾಗಿಸಿ ಕಂಡುಕೊಂಡಿದ್ದಾರೆ. 'ಗೋಪಿಯ ಗೊಂಬೆ' ಇಂತಹ ಪ್ರಯೋಗಕ್ಕೆಸಾಕ್ಷಿಯಾಗಿ ಕಾಣಿಸಿಕೊಳ್ಳುತ್ತದೆ. ಗೋಪಿಯ ಬಾಲ್ಯದಲ್ಲಿ ಒಂದು ಗೊಂಬೆಯು ವಹಿಸುವ ಪಾತ್ರವನ್ನು ವಸ್ತುವಾಗಿ ಇಲ್ಲಿ ಕಾಣಬಹುದು. ಅಂಗಡಿಯಲ್ಲಿ ಕೊಳ್ಳುವವರಿಗಾಗಿ ಕಾಯ್ದುಕುಳಿತಿದ್ದ ಗೊಂಬೆಯು ಸಿರಿವಂತಿಕೆಯುಳ್ಳ ಕೃತಕ ಆಡಂಬರದ ಹೆಣ್ಣುಮಗಳ ಮನೆಯನ್ನು ಸೇರಿ, ಅವಳ ಶೋಕೇಸಿನ ಒಳಗೆ ಅಲಂಕಾರಿಕ ವಸ್ತುಗಳ ಜೊತೆಗೆ ಬಂಧಿಯಾಗುತ್ತದೆ. ಗೊಂಬೆಯ ನಿಜವಾದ ಉದ್ದೇಶವು ಈಡೇರದೆ ಅದೊಂದು ವಸ್ತುವಿನಂತೆ ಅಲ್ಲಿ ಸಿಕ್ಕಿಕೊಳ್ಳುತ್ತದೆ. ಅವಳ ಮನೆಗೆ ಅಕ್ಕನ ಮನಗನಾದ ಗೋಪಿಯು ಬಂದಾಗ, ಗೊಂಬೆಗೆ ಜೀವಕಳೆ ಬರುತ್ತದೆ. ಗೋಪಿಯ ಬಾಲ್ಯವು ಆ ಗೊಂಬೆಯೊಂದಿಗೆ ಕಳೆಯುತ್ತಾ ಸಾಗುತ್ತದೆ. ಅವನಂತಯೇ ಗೊಂಬೆಯು ಜೀವಂತಿಕೆಯನ್ನು ಅನುಭವಿಸುತ್ತಾ ಅವನ ಸಂಗಾತಿಯಾಗಿ ಯಾವಾಗಲು ಜೊತೆಯಾಗಿರುತ್ತದೆ. ಗೊಂಬೆಯು ಮಲೆನಾಡಿನ ಕೆರೆಯ ದಂಡೆಯಲ್ಲಿ ಕಳೆದು ಹೋಗಿ, ಗೋಪಿಯು ಅನುಭವಿಸುವ ಯಾತನೆಯನ್ನು ಇಲ್ಲಿ ಸೊಗಸಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಕೊನೆಗೆ ಗೊಂಬೆಯು ಸಿಕ್ಕಿ ಅವನು ಪಡುವ ಆನಂದವನ್ನು ಸಹ ನೋಡುತ್ತೇವೆ. ಮಕ್ಕಳ ಮನಸ್ಸಿನಲ್ಲಿ ಗೊಂಬೆಯು ಪಡೆಯುವ ಸ್ಥಾನ, ರೂಪ, ಜೀವಂತಿಕೆ ಎಲ್ಲವನ್ನು ಇಲ್ಲಿ ಸಹಜವಾಗಿ ಡಿಸೋಜರು ಕಾಣಿಸಿದ್ದಾರೆ. ಅವರ ಮತ್ತೊಂದು ಗಮನಾರ್ಹವಾದ ಕತೆಯೆಂದೆ 'ಕಾಡಾನೆಯ ಕೊಲೆ'. ಮಲೆನಾಡಿನಲ್ಲಿನ ಪ್ರಾಣಿಗಳು ಮತ್ತು ಮಾನವ ಸಂಘರ್ಷವು ಸಹಜವಾದ ಸಂಗತಿಯಾಗಿದ್ದು, ಇದನ್ನು ಮಕ್ಕಳ ಪರಿಸರ ಸ್ವೀಕರಿಸುವ ಸ್ವಭಾವಿಕತೆಯನ್ನು ಈ ಕತೆಯ ಮೂಲಕ ಸಾದರಪಡಿಸಿರುವುದನ್ನು ಕಾಣುತ್ತೇವೆ. ದಂತಕ್ಕಾಗಿ ನಡೆಯುವ ಆನೆಗಳ ಹತ್ಯೆಯು ನಮ್ಮ ಪರಿಸರದಲ್ಲಿ ಕಾಣುವ ಸಮಸ್ಯೆಗಳಲ್ಲಿ ಒಂದಾಗಿದೆ. ಹತ್ಯೆಯನ್ನು ತಡೆಯಲು, ಶಿಕ್ಷಿಸಲು ಪ್ರತ್ಯೇಕವಾದ ಇಲಾಖೆಯೇ ನಮ್ಮಲ್ಲಿದೆ. ಆದರೆ ಮಕ್ಕಳು ಅವರನ್ನು ಪತ್ತೆಹಚ್ಚಿ ಕೊಡುವ ಮೂಲಕ ಆನೆಗಳ ಹತ್ಯೆಯನ್ನು ತಡೆದು ಕಾಡುಪ್ರಾಣಿಗಳನ್ನು ಪ್ರೀತಿಯಿಂದ ಕಾಣಬೇಕೆನ್ನುವ ಎಳೆಯರ ಮನಸ್ಸು ಇಲ್ಲಿ ಸಹಜವಾಗಿ ಅರಳಿರುವುದು ಕತೆಯ ವಿಶೇಷತೆಯನ್ನು ಹೇಳುತ್ತದೆ. ಅವರ ಕೆಲವು ಕಾದಂಬರಿಗಳು ಸಹ

ವಾಸ್ತವ ವಸ್ತುವುಳ್ಳ ಕತೆಗಳಿಂದ ಬಂದವಾಗಿವೆ. ಬೆಳಕಿನೊಡನೆ ಬಂತು ನೆನಪು, ಆನೆ ಬಂತೊಂದಾನೆ, ವಿನು, ಸುನ್ನಿ ಗೆಳೆಯರು ಮುಂತಾದವುಗಳವೆ. ಮತ್ತೋರ್ವ ವಾಸ್ತವವದ ಕತೆಗಳ ಪ್ರಮುಖ ಲೇಖಕರೆಂದರೆ ನೀಲಾಂಬರಿಯವರು. ಅವರು ಎಲ್ಲಾ ಕ್ಷೇತ್ರಗಲಲ್ಲಿಯು ಸೈ ಎನಿಸಿ ಬರೆಯುವಂತೆ ವಾಸ್ತವದ ಕತೆಗಳನ್ನು ಬರೆದಿದ್ದಾರೆ. 'ಸ್ಕೂಟರ್ ಅಂಕಲ್' ಮಕ್ಕಳ ವಾಸ್ತವ ಬದುಕಿನ ಹಿನ್ನೆಯಲ್ಲಿ ಚಿತ್ರಿತವಾಗಿರುವ ನೀಲಾಂಬರಿಯವರ ಕತೆಯಾಗಿದೆ. ನಗರ ಜೀವನದ ವಾಹನ ದಟ್ಟಣೆಯ ನಡುವೆ ತೆರೆದುಕೊಳ್ಳುವ ವಸ್ತು, ಅನಂತ ಎಂಬ ಹುಡುಗನ ಸುತ್ತ ನಿಲ್ಲುವ ಕತೆಯಾಗಿದೆ. ಸಂಜೆ ಶಾಲೆಯು ಮುಗಿದ ಮೇಲೆ ತಮ್ಮ ತಮ್ಮ ಮನೆಗಳಿಗೆ ಬಸ್ಸು ಹಿಡಿದು ಹೋಗುವ ಮಕ್ಕಳ ಸಂಗತಿಗಳವೆ. ಬಸ್ಸು ಸಿಗದಿದ್ದಾಗ ಸ್ಕೂಟರ್ ಗಳಿಗೆ ಕೈತೋರಿಸಿ ಲಿಫ್ಟ್ ಕೇಳುವ ಪ್ರಸಂಗಗಳವೆ. ಅನಂತನು ಒಂದು ದಿನ ಸಂಜೆ ಬಸ್ಸು ಕಾಯುತ್ತಾ ನಿಂತಿರುವಾಗ ಸೋನೆ ಮಳೆ ಆರಂಭವಾಗುತ್ತದೆ. ಅವನು ಮನೆಗೆ ಹೋಗುವ ಮಲ್ಲೇಶ್ವರಂ ಕಡೆಯ ಬಸ್ಸು ಜನರಿಂದ ತುಂಬಿಹೋಗಿರುತ್ತದೆ. ಆಗ ದಾರಿಯಲ್ಲಿ ಬರುವ ಅಂಕಲ್‌ನ ಸ್ಕೂಟರ್ಗೆ ಕೈತೋರಿಸುತ್ತಾನೆ. ಅವನು ನಿಲ್ಲಿಸಿ ಅರ್ಧದಾರಿಗಷ್ಟೆ ಬಿಡುವುದಾಗಿ ಹೇಳುತ್ತಾನೆ. ಅಲ್ಲಿಂದ ಮುಂದೆ ಹೋಗುವ ಲೆಕ್ಕಾಚಾರ ಹಾಕುತ್ತಾ ಅನಂತ ಬೈಕ್ ಏರುತ್ತಾನೆ. ಮುಂದೆ ಸಾಗುವಾಗ ಹಿಂದಿನಿಂದ ಬಂದ ವಾಹನ ಇವರಿಗೆ ಡಿಕ್ಕಿ ಹೊಡೆದು ಅನಂತನಿಗೆ ಗಾಯಗಳಾಗುತ್ತವೆ. ಅನಂತರ ಬೈಕಿನವನು ಅವನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಕೊಡಿಸಿ, ಮತ್ತೆ ಮನೆಯ ವರೆಗೂ ಬಿಡಲು ಹೋಗುತ್ತಾನೆ. ತಡವಾಗಿ ಬಂದ ಮಗನನ್ನು ಮತ್ತು ಕರೆದುಕೊಂಡು ಹೋದ ಬೈಕಿನವನನ್ನು ವಿಚಾರಿಸದೆ ಅವನ ತಂದೆಯು ಬೈಕಿನವನಿಗೆ ಬೈದು ಅವನೇ ಅಪಘಾತ ಮಾಡಿ, ಕರೆದುಕೊಂಡು ಬಂದಿರುವುದಾಗಿ ನಿಂದಿಸುತ್ತಾನೆ. ಬೈಕಿನವನು ಬೇಸರದಿಂದ ಹಿಂದಿರುಗುತ್ತಾನೆ. ಆದರೆ ಅನಂತ ಮಾತ್ರ ಸ್ಕೂಟರ್ ಅಂಕಲ್ ಎಂದಾದರೂ ದಾರಿಯಲ್ಲಿ ಸಿಗಬಹುದಾ ಎಂದು ಹುಡುಕುತ್ತಿರುತ್ತಾನೆ. ಮಕ್ಕಳ ಮನೋ ಲೋಕದ ಹುಡುಕಾಟದೊಂದಿಗೆ ಕತೆಯು ಮುಗಿಯುತ್ತದೆ. ಇಲ್ಲಿ ದೊಡ್ಡವರ ಆಲೋಚನೆಗಳ ನಡುವೆ ಚಿಕ್ಕವರ ಆಲೋಚನೆಗಳು ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ. ನೀಲಾಂಬರಿಯವರ ಕತೆಗಳಲ್ಲಿ ಇಂತಹ ಸಂಗತಿಗಳು ಮಕ್ಕಳ ಮನಸ್ಸಿಗೆ ಪೂರಕವಾಗಿ ಮೂಡುವುದನ್ನು ಕಾಣಬಹುದು.

'ಹಳ್ಳಿ ಹುಡುಗ' ಕತೆಯು ಸಹ ನೀಲಾಂಬರಿಯವರ ವಾಸ್ತವ ವಸ್ತುವಿನ ಹಂದರದ ಕತೆಯಾಗಿದೆ. ಹಳ್ಳಿಯಿಂದ ಬರುವ ಹುಡುಗನು ನಗರದ ವಾತಾವರಣಕ್ಕೆ ಹೊಂದಿಕೊಳ್ಳುವ ಅನುಭವ ಇಲ್ಲಿ ಕಾಣಿಸಿಕೊಳ್ಳುತ್ತದೆ. ಹಳ್ಳಿಯ ಸೋದರತ್ತೆಯ ಮನೆಯಲ್ಲಿ ಸುಖವಾಗಿದ್ದ ಅವನಿಗೆ ನಗರ ಜೀವನದಲ್ಲಿನ ಉಡುಪುಗಳು, ಮಕ್ಕಳ ನಡವಳಿಕೆ, ತಿಳವಳಿಕೆ, ಚುರುಕುತನ ಎಲ್ಲವೂ ಇವನಿಗೆ ಕಷ್ಟದ ಸಂಗತಿಗಳಾಗಿ ಕಾಡುತ್ತವೆ. ದಾಂಡಿಗ ಹುಡುಗರ ಕೀಟಲೆ, ಅರ್ಥವಾಗದ ಪಾಠಗಳು, ವಾತಾವರಣದ ಗಲಿಬಿಲಿಯಲ್ಲಿ ಹಳ್ಳಿಯೇ ಚಂದ ಎನಿಸಿ ಹಿಂದಿರುಗಲು ಯತ್ನಿಸುವನು. ಆದರೆ ನಿಧಾನವಾಗಿ ಬದಲಾಗಿ ಹುಡುಗರು ಗೆಳೆಯರಾಗುವರು. ಇವನು ಶಂಕರ ಎಂದು ದಾರಿಯಲ್ಲಿ ಸಿಗುವ ಕುರುಡು ಹುಡುಗಿಗೆ ಪರಿಚಯವಾಗುವನು. ಅವಳು ಶಾರದ ಎಂದು ಇವನಿಗೆ ತಿಳಿಯುವುದು. ಅವಳಿಗೆ ಸಹಾಯ ಮಾಡಲು

ಮುಂದಾಗುವನು. ಹಾಗೆಯೇ ದಿನವೂ ಇತರರಿಗೆ ಸ್ಪಂದಿಸುವ ಗುಣ ಹೊಂದುವನು. ಒಂದು ದಿನ ಕುರುಡಿಯನ್ನು ಕೈಹಿಡಿದು ರಸ್ತೆ ದಾಟಿಸಿ ಅವಳ ಮನೆಯವರೆಗೂ ತಲುಪಿಸಿ ಬಂದು ಸಂತೋಷ ಪಟ್ಟನು. ಅಂಗವಿಕಲರ ದಿನದಂದು ಪತ್ರಿಕೆಯ ಮುಖಪುಟದಲ್ಲಿ ಒಂದು ಫೋಟೋ ಪ್ರಕಟವಾಗಿತ್ತು. ಮುಖ್ಯಶಿಕ್ಷಕರು ಬೆಳಗಿನ ಅವಧಿಯ ಪ್ರಾರ್ಥನೆಯ ಸಮಯದಲ್ಲಿ ಎಲ್ಲರಿಗೂ ಹೆಮ್ಮೆಯಿಂದ ಅದನ್ನು ತೋರಿಸುತ್ತಿದ್ದಾಗ ಇವನೂ ನೋಡಿದನು. ಅದು ಇವನು ಆ ದಿನ ಕುರುಡಿಯನ್ನು ಕರೆದುಕೊಂಡು ಹೋದ ಫೋಟೋ ಅದಾಗಿತ್ತು. ಎಲ್ಲರೂ ಅವನನ್ನು ಹೊಗಳಿದರು, ಕೊಂಡಾಡಿದರು. ಮನೆಯಲ್ಲಿಯೂ ಇವನ ಪೋಷಕರು ಸಂತೋಷ ಪಟ್ಟರು. ಇಲ್ಲಿಯ ಎಲ್ಲಾ ಸಂಗತಿಗಳು ಸಹ ಮಾನವ ಬದುಕಿನ ಸಹಜವಾದ ಸನ್ನಿವೇಶಗಳನ್ನು ಹೇಳುತ್ತವೆ.

ಗಣೇಶ ಪಿ ನಾಡೋರರ 'ಆಟ' ವಾಸ್ತವದ ಹೊಸ ಬಗೆಯನ್ನು ತೆರೆದುಕೊಳ್ಳುವಂತೆ ಬರೆದಿರುವ ಕಾದಂಬರಿಯಾಗಿದೆ. ಕತೆಗೆ ಸಂಬಂಧಿಸಿದ ಪಾತ್ರವು ಮಗುವಿನ ಸೋದರ ಅತ್ತೆಯದಾಗಿದೆ. ಆತ್ಮ ಕಥನಾ ದಂತೆ ಇದು ಮಕ್ಕಳ ಕತೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಪ್ರಾಣಿಗಳನ್ನು ಹೊರತುಪಡಿಸಿ, ಆತ್ಮಕಥನದಂತೆ ಬರೆದ ಮಕ್ಕಳ ಸಾಹಿತ್ಯ ಕನ್ನಡದಲ್ಲಂತೂ ಇಲ್ಲ. ಇದು ಈ ಕಾರಣಕ್ಕಾಗಿಯೇ ಹೊಸ ಬಗೆಯದು ಎನ್ನಬಹುದು. ಈ 'ಆಟ' ಎಂಬ ಮಕ್ಕಳ ಕಾದಂಬರಿಯಲ್ಲಿ, ಹೈದರಾಬಾದಿನ 'ಮದರ್ಸ್ ಸ್ಕೂಲ್'ನಲ್ಲಿ ಎಲ್.ಕೆ.ಜಿ. ಓದುತ್ತಿರುವ ನಾಲ್ಕೂವರೆ ವಯಸ್ಸಿನ ತನ್ಮಯಿ ಎಂಬ ಪುಟ್ಟ ಮಗು, ಜನ್ಮದಿನದಿಂದಲೇ ಆತ್ಮಕತೆ ಹೇಳಲಾರಂಭಿಸುತ್ತಾಳೆ. ಅಮವಾಸ್ಯೆಯಂದು ಭೂಮಿಗೆ ಪ್ರವೇಶ ಪಡೆದ ಕ್ಷಣದಿಂದ ಕುಮಟಾದ ಪಂಡಿತರ ಆಸ್ಪತ್ರೆಯಲ್ಲಿ ಮೊತ್ತಮೊದಲ ಬಾರಿಗೆ ಸಾಬೂನು ಹಚ್ಚಿ ಸ್ನಾನ ಮಾಡಿಸಿದ್ದ, ಹಾಲು ಕುಡಿಸಬಯಸುವ ಅಮ್ಮನ ಬೇಡಿಕೆಯನ್ನೂ ನಿರ್ಲಕ್ಷಿಸಿ ಇನ್‌ಕ್ಯುಬೇಟರ್‌ನಲ್ಲಿ ಇರಿಸಿದ್ದ ನರ್ಸ್ ನೆನಪೂ ಆಕೆಗಿದೆ. ಮುದ್ದು ಮಾಡಲೆಂದು ಎತ್ತಿಕೊಂಡ ಜಟ್ಟಜ್ಜನ ಬಾಯಿಯಿಂದ ಹೊರಸೂಸಿದ ಸಾರಾಯಿಯ ಗಬ್ಬುವಾಸನೆಯ ನೆನಪೂ ಇದೆ. ಮಾತ್ರವಲ್ಲ, ತಾಯಿಗರ್ಭದಲ್ಲಿ ಏಳುತಿಂಗಳ ಮಗುವಾಗಿದ್ದಾಗ, ಸೀಮಂತ ಮಾಡಿಸಿಕೊಂಡ ಅಮ್ಮ, ಯಲ್ಲಾಪುರದಲ್ಲಿದ್ದ ಅಪ್ಪನ ಮನೆಯಿಂದ ಕುಮಟಾದಲ್ಲಿರುವ ತವರಿಗೆ ಹೆರಿಗೆಗೆಂದು ಸ್ಥಳಾಂತರಗೊಂಡಿದ್ದರ ವಿವರಗಳೂ ಗೊತ್ತಿವೆ. ಆದರೆ, ಹತ್ತಿಯಂತೆ ಮೃದುವಾಗಿರುವ ಕಸವನ್ನು ತಿನ್ನುವುದನ್ನೇ ಚಟ ಮಾಡಿಕೊಂಡಿರುವ ಕಿರಿಯ ಸೋದರಿ ಅದಿತಿಯ ಜೊತೆಗೆ ಆಡುವ ಮಕ್ಕಳಾಟದ ವಿವರಗಳಲ್ಲಿ, 'ಹುಟ್ಟಿದ ಕ್ಷಣದಿಂದ ಘಟಿಸಿರುವ ಸಂಗತಿಗಳೆಲ್ಲ ಈ ಪುಟ್ಟ ಮಗುವಿಗೆ ನೆನಪಿರಲು ಸಾಧ್ಯವೇ' ಎಂಬ 'ದೊಡ್ಡವರ' ಪ್ರಶ್ನೆಗಳೆಲ್ಲ ಅಪ್ರಸ್ತುತವಾಗಿಬಿಡುವಂತೆ ನಾಡೋರರು ಕತೆ ಹೆಣೆದಿದ್ದಾರೆ.

ಮಕ್ಕಳ ಕತೆ–ಕಾದಂಬರಿಗಳೆಂದ ಕೂಡಲೇ ಕಾಗೆ, ಕೋಗಿಲೆ, ಗಿಳಿ, ನವಿಲು, ಜಿಂಕೆ, ಹುಲಿ, ಆನೆಗಳೇ ಓಡಾಡಬೇಕೆಂಬ ಹಟ ಈ ಕಾದಂಬರಿಯಲ್ಲಿ ಕಾಣಿಸುವುದಿಲ್ಲ. ಆಂಗ್ಲ ಮಾಧ್ಯಮದ ಮಕ್ಕಳೂ ಚಪ್ಪರಿಸಿಕೊಂಡೇ ಓದಬಹುದಾದ, ಕೇಕು, ಟ್ಯೂಷನ್ ಕ್ಲಾಸು, ಬ್ರೇಕು, ಹೆಡ್ ಮಿಸ್ಸು, ಸ್ಟಾರ್ಟ್, ಹ್ಯಾಪಿ ಬರ್ಥ್ ಡೇ, ಬ್ಯೂಸಿ, ಎಡ್ಮಿಟ್, ಎಕ್ಸೈಟು, ಫಂಕ್ಷನ್ನು, ಕ್ಲಿಕ್, ಸರ್ಪ್ರೈಜ್, ಸ್ಯಾಶೇಗಳೂ ಇಲ್ಲಿ ಸಾಕಷ್ಟಿವೆ. "ಬೆಳೆಯುತ್ತಿರುವ, ಓದನ್ನು ರೂಢಿಸಿಕೊಂಡ, ಹದಿಹರೆಯಕ್ಕೆ ಕಾಲಿಡುತ್ತಿರುವ, ಸುತ್ತಲಿನ ವಾತಾವರಣವನ್ನು ಕುತೂಹಲದಿಂದ ವೀಕ್ಷಿಸುತ್ತ ಒಳಗೊಳಗೇ ಲೆಕ್ಕ ಹಾಕತೊಡಗುವ ವಯಸ್ಸಿನ ಮಕ್ಕಳ ಓದಿಗೆ, ಈ ಬಗೆಯ

ಕಥಾಲೋಕ ಅಗತ್ಯದ ಆಸರೆಯಾಗಬಲ್ಲುದು' ಎಂಬುದಾಗಿ. ಇದೇ ಕತೆಗಾರರ 'ಕರಿಮುಖ' ಕಾದಂಬರಿಗೆ ಮುನ್ನುಡಿ ಬರೆಯುತ್ತಾ ಆನಂದ ವಿ. ಪಾಟೀಲರು ಹೇಳಿರುವ ಮಾತುಗಳು ಈ 'ಆಟ' ಕಾದಂಬರಿಗೂ ಅನ್ವಯವಾಗುತ್ತದೆ. ಸುನಂದಾ ಕಡಮೆ ಅವರ 'ಚಕ್ರಬಂಡಿ' ಎಂಬ ಸಂಕಲನದಲ್ಲಿ ಹದಿಮೂರು ಕತೆಗಳಿವೆ. ಎಲ್ಲಾ ಕತೆಗಳು ಲೇಖಕಿಯ ಬಾಲ್ಯದ ನೆನಪುಗಳನ್ನು ಹೆಕ್ಕಿ ತೆಗೆದಂತಿವೆ. ಚಕ್ರಬಂಡಿ ಕತೆಯಲ್ಲಿ ಬಡದಲಿತ ಹುಡುಗನೊಬ್ಬ ಗ್ರಾಮೀಣ ಭಾಗದಲ್ಲಿ ನಡೆವ ಬಂಡಿಹಬ್ಬದ ಸಂದರ್ಭದಲಿ ತನ್ನ ಮುಗ್ಧತೆಯಿಂದ ದೇವಸ್ಥಾನದ ಗರ್ಭಗುಡಿ ಪ್ರವೇಶಿಸುವ, ಆನಂತರ ನಡೆಯುವ ವಿದ್ಯಮಾನಗಳು ಈ ಕತೆಯ ವಸ್ತುವಾಗಿವೆ. ಅಸ್ಪೃಶ್ಯತೆಯನ್ನು ಮೀರಿದ ಧಾರ್ಮಿಕ ಭಾವನೆಗಳು ಮಕ್ಕಳನ್ನು ಹೇಗೆ ಕಾಡುತ್ತವೆ ಎಂಬುದು ಸಹ ಕತೆಯ ಹೂರಣವಾಗಿದೆ. 'ಮಲಿನ ಕೊಡೆ' ಕತೆಯಲ್ಲಿ ಶಾಲೆಗೆ ಬರುವ ಮಕ್ಕಳಲ್ಲಿ ಮಳೆಗಾಲದಲ್ಲಿ ಬಳಸುವ ಬಣ್ಣದ ಕೊಡೆ ಹಾಗೂ ಮಲಿನ ಕೊಡೆಗಳಲ್ಲಿ ಇರುವ ಬಡವ ಬಲ್ಲದರ ತಾರತಮ್ಯಗಳು ಹೇಗೆ ಬಾಲಕಿಯೊಬ್ಬಳಿಗೆ ನೋವು ಕೊಡುತ್ತದೆ ಹಾಗೂ ಅವಳು ಅದರಿಂದ ಹೊರ ಬರಲು ತನ್ನ ಭಾವನಾತ್ಮಕ ಜಗತ್ತಿನಿಂದ ಬಿಡುಗಡೆ ಕಂಡುಕೊಳ್ಳುವುದಿದೆ

'ಪೂರ್ವಿ' ಎಂಬುದು ಗಣೇಶ ಪಿ. ನಾಡೋರ ಅವರು ಮಕ್ಕಳಿಗಾಗಿ ಬರೆದ ಕಾದಂಬರಿ. ಕರಾವಳಿ ತೀರದ ಮೀನುಗಾರ ಸಮುದಾಯದ ಪುಟ್ಟ ಹೆಣ್ಣುಮಗುವಿನ ಕತೆ. ತೀರಿಹೋದ ತಂದೆಗೆ ಹಂಬಲಿಸುವ ಮಗುವಿನ ಕಥಾವಸ್ತು ಹೊಂದಿರುವ ಈ ಕಾದಂಬರಿ ತೀರ ಹೃದಯಸ್ಪರ್ಶಿಯಾಗಿದೆ.

ತಂದೆಯಿಲ್ಲದ ಮಗು ತಂದೆ ಪ್ರೀತಿಗಾಗಿ ಹಂಬಲಿಸುತ್ತ ತನ್ನ ದೊಡ್ಡಪ್ಪನ ಜೊತೆ ಒಡನಾಡುತ್ತಾಳೆ. ಅವಳ ಮನೆಗೆ ಬಂದ ದೊಡ್ಡಪ್ಪ ಅವಳ ಮೇಲೆ ಪ್ರೀತಿಯ ಮಳೆಯನ್ನೇ ಸುರಿಸುತ್ತಾನೆ. ಅವಳಿಗೆ ಬೇಕು ಬೇಕಾದ ತಿಂಡಿ ತೆಗೆಸಿಕೊಡುತ್ತಾನೆ. ತಿರುಗಾಡಲು ಕರೆದೊಯ್ಯುತ್ತಾನೆ. ಕುತೂಹಲಕಾರಿ ಕತೆಗಳನ್ನು ಹೇಳುತ್ತಾನೆ. ಆದರೆ ಕೊನೆಯಲ್ಲಿ ತನ್ನ ದೊಡ್ಡಪ್ಪ ಅಪ್ಪನ ಹಾಗೆ ಮನೆಯಲ್ಲಿ ಖಾಯಂ ಇರುವವನಲ್ಲ, ಅವನು ಹೊರಟುಹೋಗುತ್ತಾನೆ ಎಂಬ ಸತ್ಯ ಅರಿವಾಗುವ ಸಮಯ ಮನಕಲಕುವಂತಿದೆ. ಪ್ರಾದೇಶಿಕ ಮಹತ್ತ ವನ್ನು ಹೊಂದಿರುವ ಈ ಕಾದಂಬರಿ ಪ್ರಾದೇಶಿಕ ಮೀನುಗಾರರ ಭಾಷೆಯ ಬಳಕೆಯಿಂದ ಗಮನ ಸೆಳೆಯುತ್ತದೆ. ಸಾಮಾಜಿಕ ವಿಘಟನೆಯಿಂದ ಒಂಟಿಯಾಗಿ ಬಾಳುವ ಹೆಂಗಸರು, ಅವರ ಮಕ್ಕಳ ನೋವು ನಲಿವುಗಳು, ಮೀನುಗಾರರ ಅನಿಶ್ಚಿತ ಬದುಕು, ಸಂಕಟಗಳು ಮಾರ್ಮಿಕವಾಗಿ ಮೂಡಿ ಬಂದಿವೆ.

### ೬.೫ ಮಕ್ಕಳ ವಾಸ್ತವ ಕತೆಗಳಲ್ಲಿನ ಲಕ್ಷಣಗಳು

ಮಕ್ಕಳ ವಾಸ್ತವ ಕತೆಗಳೆಂದರೆ, ಆಡುಮಾತು, ಲಯಗಾರಿಕೆ, ಮುಗ್ಧತೆಯ ಅನಾವರಣ ಮತ್ತು ವಾಸ್ತವದ ಪರಿಸರ, ಮಕ್ಕಳ ಲೋಕದ ಸಂವೇದನೆ, ಅವರ ಭಾವ ಸೂಕ್ಷ್ಮತೆ, ಕಲಾತ್ಮಕತೆಯ ನೇಯ್ಗೆ ತುಂಬಿರುವಂತಹ ಲಕ್ಷಣಗಳಿರುವುದು ಮುಖ್ಯ. ಪಾತ್ರಗಳು ಸಹಜ ಸ್ವಭಾವ ಹಾಗೂ ಸಾಮರ್ಥ್ಯಗಳಿಂದ ಕೂಡಿದ್ದು, ಕೃತಕ ಮತ್ತು ಉದ್ದೇಶ ಪೂರ್ವಕ ಒತ್ತಾಯಗಳಿರದೆ ಓದುಗನ ತನ್ಮಯತೆಯನ್ನು

ಸಾಧಿಸುವಂತಿರಬೇಕೆಂದು ಎಂದು ಆನಂದ ಪಾಟೀಲರು ಅಭಿಪ್ರಾಯಿಸುತ್ತಾರೆ.[೪೧] ಅದು ಮಕ್ಕಳದೇ ಆದ ಪರಿಪೂರ್ಣಲ ಮನಸ್ಸು ಅನುಭವಿಸುವುದನ್ನು ಹಿರಿಯರಿಂದ ಭಿನ್ನವಾಗಿ, ಪ್ರತ್ಯೇಕವಾಗಿ ಸಿಗುವ ವೈಶಿಷ್ಟಗಳನ್ನು ಕುರಿತು ಅರಳಿರುವ ಲೋಕವನ್ನು ಹೊಂದಿರುತ್ತದೆ. ಅದು ದೊಡ್ಡವರ ಲೋಕದೊಡನೆಯು ಸಂಪರ್ಕಸಾಧಿಸಿಕೊಳ್ಳುವ ಲಕ್ಷಣಗಳನ್ನು ಪ್ರಕಟಿಸುತ್ತದೆ. ಅಲ್ಲಿ ಅಧಮ್ಯವಾದ ಕುತೂಹಲ, ಆಸಕ್ತಿಗಳು ಚಿಗುರೊಡೆಯುತ್ತವೆ. ನೈಜ ಜಗತ್ತಿನ ಎಲ್ಲಾ ಸಂಗತಿಗಳು ಅಲ್ಲಿ ಹೇರಳವಾಗಿ ಅಭಿವ್ಯಕ್ತಗೊಳ್ಳುತ್ತವೆ. ಅನುಭವ ಮತ್ತು ಸಂಸ್ಕೃತಿಯು ಮಕ್ಕಳ ಮುಂದೆ ಹರಿದಾಡುವ ಗುಣವುಳ್ಳವಾಗಿ ಕಾಣಿಸಿಕೊಳ್ಳುತ್ತವೆ. ಮಕ್ಕಳ ಕಥಾ ಸಾಹಿತ್ಯವು ಹೊಸ ಸಂವೇದನೆಗಳಿಗೆ ತನ್ನನ್ನು ಒಡ್ಡಿಕೊಂಡ ಮೇಲೆ, ತನ್ನ ವಸ್ತುವಿನ ಹರಿವು ಮತ್ತು ತನ್ನ ವೈವಿಧ್ಯತೆಯಿಂದ ಅನೇಕ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದು ಬಂದಿತು. ಅನೇಕ ಪ್ರತಿಭಾವಂತ ಲೇಖಕರು ಹೊಸಗಾಲದ ಪ್ರಯೋಗಶೀಲತೆಗೆ ತಮ್ಮನ್ನು ತೊಡಗಿಸಿಕೊಂಡು ಮಕ್ಕಳ ಕತೆಗಳಲ್ಲಿ ಗಣನೀಯವಾದ ಬದಲಾವಣೆ ಬಯಸಿದ ಮೇಲೆ ಅವರು ದೃಷ್ಟಿಹರಿಸಿದ ಲಕ್ಷಣಗಳನ್ನು ಕೆಳಗಿನಂತೆ ಕಾಣಬಹುದು.

೧ ವಾಸ್ತವ ಕತೆಗಳಲ್ಲಿ ಮನುಷ್ಯರು, ಮಕ್ಕಳ ಪರಿಸರ, ಸಾಕು ಪ್ರಾಣಿಗಳೊಂದಿಗೆ ಭಾವನಾತ್ಮಕ ಸಂಬಂಧವಿರುತ್ತದೆ.

೨ ಮಕ್ಕಳೇ ಪಾತ್ರಗಳಾಗಿದ್ದು ದೊಡ್ಡವರಂತೆ ಸಹಜ ಬದುಕನ್ನು ಹೊಂದಿದ್ದು ಅವರದೇ ವಸ್ತುಗಳು ಬಳಕೆಯಲ್ಲಿರುತ್ತವೆ.

೩ ವಾಸ್ತವ ಲೋಕಕ್ಕೆ ಹೊಂದಿಕೊಂಡಿರುವ ಸತ್ಯ, ವರ್ತಮಾನದ ಬದುಕು ಇಲ್ಲಿ ಇರುತ್ತದೆ.

೪ ವಾಸ್ತವ ಪ್ರಪಂಚದ ವರ್ತಮಾನಗಳಗೂ ಕತೆಯಲ್ಲಿನ ಕಾಲಘಟ್ಟಕ್ಕು ಅಂತರವಿಲ್ಲದೆ ಎರಡೂ ಒಂದೇ ಎನಿಸುತ್ತವೆ.

೫ ವಾಸ್ತವದ ಪ್ರಜ್ಞೆಯುಳ್ಳ ಪಾತ್ರಗಳಂದ ಕೂಡಿದ್ದು, ಬದುಕಿನ ತೀರ ವಿಡಂಬನೆಗಳು, ಹಸಿವು, ಬಡತನ, ನೋವು, ನಲಿವು, ಸಮಕಾಲೀನ ರಾಜಕೀಯ, ಶಿಕ್ಷಣ, ಪರಿಸರ ಪ್ರಜ್ಞೆಗಳು, ಮಾನವ ಸಂಬಂಧಗಳು ನೈಜವಾಗಿ ತೆರೆದುಕೊಳ್ಳುತ್ತವೆ.

೬ ವಾಸ್ತವದ ಪ್ರಜ್ಞೆಯೊಂದಿಗೆ ಪಾತ್ರಗಳು ವರ್ತಿಸುತ್ತವೆ. ಕುಟುಂಬ ಮತ್ತು ಸಮಾಜದ ಸ್ಪಂದನೆಯೆ ಜೀವಾಳವಾಗಿರುತ್ತದೆ.

೭ ವಾಸ್ತವದಲ್ಲಿ ಸಮಸ್ಯೆಗಳಿಗೆ ಕಾರಣ ಮತ್ತು ಪರಿಹಾರಗಳನ್ನು ಕಂಡುಕೊಳ್ಳುವ, ಬದುಕಿನ ಅರ್ಥ ಕಂಡುಕೊಳ್ಳುವ ತಾತ್ವಿಕತೆಯ, ಮಾನವೀಯತೆಯ ಹುಡುಕಾಟಗಳಿರುತ್ತವೆ.

೮ ವಾಸ್ತವದಲ್ಲಿ ಸತ್ಯ ಘಟನೆಗಳು, ಇತಿಹಾಸದ ನಡೆದ ಸಂಗತಿಗಳು ರೋಚಕವಾಗಿ ಹೇಳುವ ಸಂಗತಿಗಳಿರುತ್ತವೆ.

೯ ವಾಸ್ತವ ಲೋಕದ ವ್ಯಾಪ್ತಿಯು ಮಗುವಿನ ಅನುಭವ ಪರಿಸರದ ಪರಿಮಿತಿಯನ್ನು ಹೊಂದಿದೆ. ಕೆಲವು ಸೀಮಿತ ಪರಿಸರದಲ್ಲಿ ನಡೆಯುತ್ತದೆ.

---

[೪೧] ಮಕ್ಕಳ ಸಾಹಿತ್ಯ ಸಂಪುಟ ೯, ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಸಂ: ಬಸು ಬೇವಿನಗಿಡ. ಪುಟ ೨೫೬, ೨೦೧೫

೧೦ ವಾಸ್ತವವು ಸೃಷ್ಟಿಸಿಕೊಳ್ಳುವ ನೋಟಕ್ಕೆ ಅನುಭವಗಳ ಇತಿಮಿತಿಗಳ ನಿರ್ಬಂಧವಿದೆ.

೧೧ ಹದಿಹರೆಯಕ್ಕೆ ಸಂಬಂಧಿಸಿ ನಡೆಯುವ ಮಾತುಕತೆಗಳು, ಪ್ರೇಮದ ಸೆಳಕು, ಹುಸಿಪ್ರೇಮ ಮುಂತಾದ ಸಹಜ ವಸ್ತುಗಳು ಕಾಣಿಸಿಕೊಳ್ಳುತ್ತವೆ.

೧೨ ಬಾಲ ಕಾರ್ಮಿಕರು, ಬಾಲ್ಯವಿವಾಹ, ಮನೆಯಲ್ಲಿನ ಜಗಳ, ಶೋಷಣೆ, ಲೈಂಗಿಕ ದೌರ್ಜನ್ಯಗಳು, ಅಸಡ್ಡೆ, ಅಪಮಾನದಂತಹ ಗಂಭೀರವಾದ ವಿಚಾರಗಳು ವಸ್ತುವಾಗಿ ಕಾಣಿಸಿಕೊಳ್ಳುತ್ತವೆ.

## ೬.೭ ವಾಸ್ತವದ ಕತೆಗಳ ಉದ್ದೇಶಗಳು

ಮಕ್ಕಳ ಮಾನಸಿಕವಾದ ಎತ್ತರ, ಬೌದ್ಧಿಕತೆಯ ವಿಸ್ತಾರವನ್ನು ವಾಸ್ತವ ಜಗತ್ತಿನೊಂದಿಗೆ ಸರಿದೂಗಿಸಿ ನೋಡುವ ಬೆಳವಣಿಗೆ ಕಾಣಿಸಿಕೊಂಡು ಮಕ್ಕಳ ಸಾಹಿತ್ಯವು ಸಹ ಪ್ರಬುದ್ಧರ ಸಾಹಿತ್ಯದಂತೆ ವಿಷಯ ಗಂಭೀರತೆಯನ್ನು ಅನುಭವಿಸಿದ್ದು ವಾಸ್ತವದ ಜೀವಿಯಾಗಿ ಮಗುವನ್ನು ಭಾವಿಸಿಕೊಂಡ ನಂತರವೇ ಎನ್ನಬಹುದು. ನವೋದಯ, ನವ್ಯ, ನವ್ಯೋತ್ತರ ಪ್ರಬುದ್ಧರ ಸಾಹಿತ್ಯವು ಅನುಭವಿಸಿದ ವೈವಿಧ್ಯತೆಯನ್ನು ಮಕ್ಕಳ ಸಾಹಿತ್ಯವು ಸಹ ಅನುಭವಿಸಿದ್ದು, ಮಗು ಸಹ ದೊಡ್ಡವರಂತೆಯೇ ಭಾವಜೀವಿ, ಸಂಘಜೀವಿ, ಸಮಾಜದ ಒಡನಾಡಿ ಎಂದು. ಮಕ್ಕಳ ಭಾವನೆಗಳಿಗೂ ಮನ್ನಣೆ ಬಂದುದು ಪಾಶ್ಚ್ಯಾತ್ಯರ ಮಕ್ಕಳ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವವನ್ನು ಅರಗಿಸಿಕೊಂಡು ಹೊಸ ತಲೆಮಾರಿನ ಲೇಖಕರು ಒಪ್ಪಿಕೊಂಡು, ಕೆಲವು ಉದ್ದೇಶಗಳನ್ನು ಅವರು ಮಕ್ಕಳ ವಾಸ್ತವ ಕತೆಗಳನ್ನು ನೀಡುವ ಸಲುವಾಗಿ ಕಂಡುಕೊಂಡರು. ಕತೆಗಳಲ್ಲಿ ವಾಸ್ತವ ಅಂಶವು ಬರುವುದರಿಂದ ಮಕ್ಕಳಿಗೆ ಹಾಗೂ ಮಕ್ಕಳ ಮೂಲಕ ಸಮಾಜಕ್ಕೆ ಉಂಟಾಗುವ ಲಾಭದಾಯಕವಾದ ಅಂಶಗಳಿಂದಲೇ ಅದರ ಉದ್ದೇಶಗಳನ್ನು ಅರಿಯಬಹುದಾಗಿದೆ. ಮಗುವಿನ ವಯಸ್ಸಿನ ಬೆಳವಣಿಗೆಯನ್ನು ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಸರಿಯಾದ ಕ್ರಮದಲ್ಲಿ ಬೆಳೆಸಲು ವಾಸ್ತವ ಕತೆಗಳೂ ಸಹ ನೆರವಾಗುತ್ತದೆ. ಕೆಳಗಿನ ಉದ್ದೇಶಗಳಿಗಾಗಿ ಮಕ್ಕಳ ವಾಸ್ತವ ಕತೆಗಳು ಅಸ್ತಿತ್ವವನ್ನು ತಳೆದಿವೆ ಎನ್ನಬಹುದು.

೧ ಜಾಗತಿಕ ಹಾಗೂ ತನ್ನ ಸುತ್ತಲಿನ ಪರಿಸರದಲ್ಲಿನ ವರ್ತಮಾನದ ಸ್ಪಂದನೆಗೆ ಹೊಂದಿಕೊಳ್ಳಲು ಮಗುವಿಗೆ ಪೂರಕವಾದ ಜ್ಞಾನವನ್ನು ನೀಡುವುದು ವಾಸ್ತವದ ಕತೆಗಳ ಉದ್ದೇಶವಾಗಿದೆ.

೨ ಮಗುವಿನ ಮನಸ್ಸಿನಲ್ಲಿ ಹುದುಗಿರುವ ಭಾವನಾತ್ಮಕ ತುಡಿತಗಳನ್ನು, ಸಂಜ್ಞಾನಾತ್ಮಕ ವಿಕಾಸವನ್ನು ಸಕಾರಗೊಳಸಲು ವಾಸ್ತವ ಪ್ರಜ್ಞೆಯನ್ನು ಮುಂದಿಡುವ ಉದ್ದೇಶವನ್ನು ಹೊಂದಿದೆ.

೩ ಬದುಕಿನ ವರ್ತಮಾನದ ಹೊಂದಾಣಿಕೆ ಹಾಗೂ ಹಿರಿಯರ ಅನುಕರಣೆಯಿಂದ ಆದರ್ಶಪ್ರಾಯ ಸಮಾಜದ ಪ್ರಜೆಯಾಗುವಂತೆ ಮಾಡುವುದು.

೪ ಅನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳುವ, ತಪ್ಪುಗಳಿಂದ ಸರಿಯಾದುದನ್ನು ಸಂಯೋಜಿಸುವ ತಂತ್ರಗಾರಿಕೆಯನ್ನು ಮಗು ರೂಢಿಸಿಕೊಂಡು ತನ್ನ ಬದುಕಿಗೆ ಅಗತ್ಯವಾದ ಅಂಶಗಳನ್ನು ಮೈಗೂಡಿಸಿಕೊಳ್ಳುವುದು.

೫ ಭ್ರಮೆಗಳಿಲ್ಲದ ವಾಸ್ತವ ಬದುಕಿನ ನೈಜತೆಯನ್ನು ಅನುಭವಿಸುವ ಜ್ಞಾನ ಹೊಂದುವುದು. ಹಿಂದಿನ ಅನುಭವಗಳಿಂದ ಕಲಿತುದನ್ನು ಮುಂದಿನ ನಡೆಯಲ್ಲಿ ಅನುಸರಿಸಲು ಕಲಿಯುವಂತೆ ಮಾಡುವುದು.

೬ ಬದುಕಿನ ಗುರಿಗಳನ್ನು ಹೊಂದುವ ಮತ್ತು ಸಾಕಾರಗೊಳಿಸಿಕೊಳ್ಳುವ ಹಂಬಲವನ್ನು ಮಕ್ಕಳಲ್ಲಿ ಆರಂಭಿಕವಾಗಿ ನೀಡುವುದು.

೭ ಮಾನವ ಮತ್ತು ತನ್ನ ಪರಿಸರದ ಇತರ ಜೀವಿಗಳ ನಡುವೆ ಸಾಮರಸ್ಯ ಏರ್ಪಡಿಸುವ ಜೊತೆಗೆ. ಅವುಗಳ ಉಳಿವಿಗಾಗಿ ತಾನು ಶ್ರಮಿಸುವ ಮನೋಭಾವವನ್ನು ಬೆಳೆಸುವುದು.

೮ ಮಾನವ ಬದುಕಿನ ವಿವಿಧ ಸಂಬಂಧಗಳ ಜೊತೆಗೆ ನಾಗರಿಕ ಪ್ರಜ್ಞೆಯೊಂದಿಗೆ ತಾನು ಬದುಕುವ ಮತ್ತು ಇತರರನ್ನು ಬದುಕಲು ಬಿಡುವ, ಪರಿಸರದ ಉಳಿವಿಗಾಗಿ ಶ್ರಮಿಸುವ ಅಗತ್ಯ ಜ್ಞಾನ ಹೊಂದುವುದು.

೯ ತನ್ನ ಸುತ್ತಮುತ್ತಲ ಪರಿಸರ, ಜಾಗತಿಕ ಪರಿಸರ ಹಾಗೂ ಮಾನವನ ಸಂಬಂಧಗಳ ಮಹತ್ತ್ವವನ್ನು ತಿಳಿದು ಬದುಕುವಂತೆ ಪ್ರೇರೇಪಿಸುವುದು.

೧೦ ಜಾಗತಿಕ ಜೀವಿಯಾಗಿ, ಇತರ ಜೀವಿಗಳ ರಕ್ಷಣೆ, ಹೊಣೆಗಾರಿಕೆ, ಮುಂದಿನ ಪೀಳಿಗೆಗೆ ತಮ್ಮ ಕೊಡುಗೆ ನೀಡುವುದು.

೧೧ ತಂದೆ ತಾಯಿ, ಹಿರಿಯರು, ವೃದ್ಧರು, ದುರ್ಬಲರ ಬಗ್ಗೆ ಕರುಣೆ, ಪ್ರೀತಿ ತೋರುವುದು.

೧೨ ವೈಜ್ಞಾನಿಕ ಶೋಧಗಳು, ಅವುಗಳ ಉಪಯೋಗಗಳು, ಮಿತಿಗಳನ್ನು ಅರಿತು ವ್ಯವಹರಿಸುವುದು.

## ೬.೭ ಭಿನ್ನತೆಗಳು

ವಾಸ್ತವದ ಕತೆಗಳು ಇತರ ಪ್ರಕಾರದ ಕತೆಗಳಿಗಿಂತ ಭಿನ್ನತೆಗಳನ್ನು ಹೊಂದಿವೆ. ಫ್ಯಾಂಟಸಿಯು ಮಕ್ಕಳಲ್ಲಿ ಅವಾಸ್ತವವನ್ನು ತಂದಿಡುವಂತೆ ಇಲ್ಲದ ಲೋಕದ ಸಂಗತಿಗಳ ಸೃಷ್ಟಿಯು ಇಲ್ಲಿ ಸಾಧ್ಯವಿರುವುದಿಲ್ಲ. ಬದಲಾಗಿ ಇದು ತಮ್ಮದೇ ಪರಿಸರದ ವರ್ತಮಾನದ ಸಂಗತಿಗಳನ್ನು ತೆರೆದಿಡುತ್ತದೆ. ಇದು ವರ್ತಮಾನದಿಂದ ಅಂತರವನ್ನು ಕಾಯ್ದುಕೊಳ್ಳದೆ ತಾನು ಈ ಜಗತ್ತಿನ ಇಂದಿನ ಜೀವಿ ಎಂಬ ಭಾವನೆಯನ್ನು, ಸ್ಪಂದನೆಯನ್ನು ಒದಗಿಸುವುದರಿಂದ ಬದುಕಿನ ಸಂಗತಿಗಳನ್ನು ಜೀವಂತವಾಗಿಸುತ್ತದೆ. ಫ್ಯಾಂಟಸಿಯು ಹೇಳುವ ಅವಾಸ್ತವವನ್ನು, ಊಹೆಯನ್ನು ಮೂರ್ತಗೊಳಿಸುವ ಸಂಶೋಧನೆಗಳಿಗೆ ಇದು ತುಡಿಯುತ್ತದೆ ಮತ್ತು ಆವಿಷ್ಕಾರಗಳ ಬೆನ್ನಟ್ಟುವುದನ್ನು ಪ್ರಚೋದಿಸುತ್ತದೆ. ವೈಜ್ಞಾನಿಕ ಸಂಶೋಧನೆಗಳಿಗೆ ಫ್ಯಾಂಟಸಿಯು ಕಲ್ಪನೆಗಳನ್ನು ನೀಡಿದರೆ ವಾಸ್ತವವು ಅದನ್ನು ಸಾಕಾರಗೊಳಿಸಿಕೊಳ್ಳಲು ನೆರವಾಗುತ್ತದೆ.

## ೬.೮ ಮಿತಿಗಳು

ವಾಸ್ತವದ ಕತೆಗಳು ಮಕ್ಕಳಿಗೆ ಬದುಕನ್ನು ವಿವರಿಸಿ ಹೇಳುವಲ್ಲಿ ಪ್ರಧಾನ ಪಾತ್ರವಹಿಸಿದರೂ ಅವುಗಳು ಪೂರ್ಣಪ್ರಮಾಣದಲ್ಲಿ ಮಕ್ಕಳನ್ನು ತಲುಪಲು ಸಾಧ್ಯವಾಗಿಲ್ಲ. ಅವು ಅನುಭವಿಸಿದ ಮಿತಿಯು ಸಹ ಇದಕ್ಕೆ ಕಾರಣವಾಗಿದೆ. ಸಹಜವಾಗಿ ಮಕ್ಕಳನ್ನು ಸೆಳೆಯುವಲ್ಲಿ ವಾಸ್ತವದ ಕತೆಗಳಿಗೆ ಸಾಧ್ಯವಾಗಿಲ್ಲ. ಲೇಖಕರು ಸಹ ಇದಕ್ಕೆ ಒತ್ತುಕೊಟ್ಟು ಬರೆಯುವಲ್ಲಿ ಆಸಕ್ತಿಯನ್ನು ವಹಿಸಿಲ್ಲ. ಈ ಮಾದರಿಯ ಬರೆವಣಿಗೆಯನ್ನು ಸಾಹಿತ್ಯ ವಲಯವೂ ಸಹ ಗಂಭೀರವಾಗಿ ತೆಗೆದುಕೊಂಡಿಲ್ಲ. ಪ್ರಮುಖ ಕಾರಣವೆಂದರೆ ಮಾರುಕಟ್ಟೆಯ ನಿರ್ಲಕ್ಷ್ಯ ಎನ್ನಬಹುದು. ಮಕ್ಕಳ ಈ ಬಗೆಯ ಓದನ್ನು ಉತ್ತೇಜಿಸುವ ಚಿಂತನೆಯೊಂದಿಗೆ ಯಾವುದೇ ಪ್ರಕಾಶಕರು ಮುಂದೆ ಬರಲಿಲ್ಲ. ಅವರು ಮಾರುಕಟ್ಟೆಯಲ್ಲಿ ಸಿದ್ಧರೂಪದಲ್ಲಿ ಸಿಗುತ್ತಿದ್ದ ಪಾರಂಪರಿಕ ಸರಕುಗಳಿಗೆ ಮುಗಿಬಿದ್ದು ಪ್ರಕಟಿಸಿದರು. ಇದರಿಂದಾಗಿ ವಾಸ್ತವದ ಕತೆಗಳು ಮಿತಿಯಾದ ಪ್ರಕಟಣೆಯನ್ನು ಹೊಂದಿದವು. ಇವು ಪಂಚತಂತ್ರ ಕತೆಗಳಂತೆ ಮಕ್ಕಳಿಗೆ ಮತ್ತು ಪೋಷಕರಿಗೆ ಇಷ್ಟವಾಗಲಿಲ್ಲ. ಇದರ ಅವಶ್ಯಕತೆಯನ್ನು ಅವರು ಅರಿಯಲಿಲ್ಲ ಎನ್ನಬಹುದು. ಲೇಖಕರು ಸಹ ಮಾರುಕಟ್ಟೆಯ ಸರಕನ್ನು ಅವಲಂಭಿಸಿ ಪ್ರಕಾಶಕರ ಅಭಿರುಚಿಗೆ ತಕ್ಕಂತೆ ನಡೆದುಕೊಂಡು ಹಳೆಯ ಸರಕನ್ನು ಮುಂದುವರೆಸಿದರು. ವಾಸ್ತವದ ಅಗತ್ಯವನ್ನು ಇವರು ಮನಗಾಣಲಿಲ್ಲ. ವ್ಯಾಪಾರಿ ಮನೋಭಾವವು ಮಾರುಕಟ್ಟೆಯನ್ನು ವ್ಯಾಪಿಸಿತು ಇದರಿಂದ ಪೌರಾಣಿಕ, ಜನಪದದ ಸರಕುಗಳು ಹರಿದಾಡಿದವು ಇವೆಲ್ಲವುಗಳ ನಡುವೆ ವಾಸ್ತವದ ಕತೆಗಳು ಕಾಣಿಸಿಕೊಳ್ಳಲಾಗಲಿಲ್ಲ. ಪ್ರಾದೇಶಿಕ ಭಾಷೆಯಲ್ಲಿ ವಿಸ್ತಾರವಾದ ಮಾರುಕಟ್ಟೆಯು ತೆರೆದುಕೊಳ್ಳದೆ ಹೋದುದು ಓದಿನ ವೈವಿಧ್ಯತೆಗಳನ್ನು ಕಂಡುಕೊಳ್ಳಲಾಗಲಿಲ್ಲ. ವಿದೇಶಿಯ ಓದನ್ನು ಆರಂಭಿಕ ಲೇಖಕರು ಹಗುರವಾಗಿ ಭಾವಿಸಿದ್ದು ಸಹ ವಿಸ್ತಾರವಾದ ನೋಟಕ್ಕೆ ಅವಕಾಶವಾಗಲಿಲ್ಲ. ಭಾರತೀಯ ಶಿಕ್ಷಣ ವ್ಯವಸ್ಥೆಯು ಸಹ ವಾಸ್ತವದ ಕತೆಗಳನ್ನು ಮಿತಿಗೊಳ್ಳುವಂತೆ ಮಾಡಿದೆ. ಶಿಕ್ಷಣವೆಂದರೆ ಮಕ್ಕಳನ್ನು ಆದರ್ಶಗೊಳಿಸುವುದು, ನೀತಿ ಹೇಳುವ ಮೂಲಕ ಸರಿದಾರಿಗೆ ತರುವ ಸಾಧನವಾಗಿ ಕಾಣಿಸಿಕೊಳ್ಳಬೇಕೆಂದು ಶಿಕ್ಷಣವ್ಯವಸ್ಥೆಯು ಭಾವಿಸುದುದರಿಂದ ವಾಸ್ತವದ ಕತೆಗಳು ವರ್ತಮಾನದ ಸ್ಪಂದನೆಗಳೊಂದಿಗೆ ಬರಲಿಲ್ಲ. ಬದಲಾಗಿ ಅವು ಆದರ್ಶಪುರುಷರ ಜೀವನವನ್ನು ಮಾದರಿಯಾಗಿ ಮುಂದಿರಿಸಿಕೊಂಡು ಬಂದವು. ನೀತಿ ಕತೆಗಳನ್ನು ಶಿಕ್ಷಣ ಪದ್ಧತಿಯು ಪಠ್ಯವಾಗಿ ಹೊರತಂದಿತು. ಭಾರತದ ಸಂಪ್ರದಾಯದ ಹೆಸರಿನಲ್ಲಿ ಅವುಗಳ ವೈಭವವನ್ನು ಕಟ್ಟಲಾಯಿತು. ವಾಸ್ತವದ ಕತೆಗಳನ್ನು ಹೇಳಲು ಹಿಂಜರಿಕೆಯನ್ನು ಶಿಕ್ಷಣ ವ್ಯವಸ್ಥೆಯು ಅನುಭವಿಸಿತು. ಭಾರತದ ಶಿಕ್ಷಣ ಪದ್ಧತಿಯಂತೆಯೇ ಕನ್ನಡದ ಶಿಕ್ಷಣವು ಸಹ ಮುಂದುವರೆದು ವಾಸ್ತವವನ್ನು ಬದಿಗಿರಿಸಿತು. ಕನ್ನಡದ ಮಕ್ಕಳು ಕೂಡ ತಮ್ಮ ನೆಲದ ಸಂಪ್ರದಾಯವನ್ನು ಪಠ್ಯದಲ್ಲಿ ದೇಸಿಯವಾಗಿ ಕಂಡರು. ವಿದೇಶಿಯ ಓದು ದಕ್ಕಿದ ಕೆಲವು ಲೇಖಕರಿಂದ ಅಲ್ಲಲ್ಲಿ ಕೆಲವು ಪ್ರಯೋಗಗಳಾದುದನ್ನು ಬಿಟ್ಟರೆ ವಾಸ್ತವದ ಕತೆಗಳು ಅಗತ್ಯದ ಸರಕಾಗಿ ಕಾಣಿಸಿಕೊಳ್ಳಲಿಲ್ಲ. ಅಲ್ಲಿಯೂ ಇವುಗಳು ಕಂಡಷ್ಟು ಟೀಕೆಯನ್ನು ಅನುಭವಿಸಿದವು. ಇದರಿಂದಾಗಿ ಪರಂಪರೆಯ ಮನಸ್ಸುಳ್ಳ ಶಿಕ್ಷಕರಿಂದ ಇವು ದೂರ ಉಳಿಯುವಂತಾಯಿತು. ಇಂತಹದನ್ನೇ ಹೇಳಬೇಕು ಎನ್ನುವ ಮೊಂಡತನದ ಪ್ರವೃತ್ತಿಯುಳ್ಳವರಿಂದ ವಾಸ್ತವವು ತಿರಸ್ಕಾರವನ್ನು ಅನುಭವಿಸಿತು. ಹಿಂದಿಯ

ಮಕ್ಕಳ ಸಾಹಿತ್ಯದಲ್ಲಿ ವಾಸ್ತವದ ಗಾಳಿಯು ನಿಧಾನವಾಗಿ ಬೀಸತೊಡಗಿದ ಮೇಲೆ ಇದು ಕನ್ನಡಕ್ಕೂ ಕಾಲಿರಿಸಿತು. ಆದರೆ ನಿರೀಕ್ಷೆಯಂತೆ ಕಾಣಿಸಿಕೊಳ್ಳಲಿಲ್ಲ. ಲೇಖಕರೇ ಸೃಷ್ಟಿಸಿದ ವಾತಾವರಣವು ಹಲವಾರು ಅಸ್ಪಷ್ಟತೆಯನ್ನು ಹುಟ್ಟುಹಾಕಿತು. ನಿರ್ದಿಷ್ಟವಾಗಿ ವಾಸ್ತವದ ಕತೆಗಳ ಲಕ್ಷಣಗಳನ್ನು ಮತ್ತು ಅನುಕೂಲಗಳನ್ನು ಅರ್ಥೈಸುವಲ್ಲಿ ಲೇಖಕರು ವಿಫಲತೆಯನ್ನು ಅನುಭವಿಸಿದರು. ಪ್ರತಿಭಾವಂತ, ಸೃಜನಶೀಲ ಲೇಖಕರು ಮಕ್ಕಳಿಗಾಗಿ ಬರೆಯುವುದೆಂದರೆ ಮನ್ನಣೆ ಸಿಗುವುದಿಲ್ಲ, ತಮ್ಮ ಪ್ರತಿಭೆಗೆ ಅದು ವೇದಿಕೆಯಲ್ಲ ಎಂದು ಭಾವಿಸಿದ್ದು ಕೂಡ ಇಂತಹ ಮಿತಿಗಳಿಗೆ ಕಾರಣವಾಯಿತು. ಇನ್ನು ವಿಮರ್ಶಕ ಸಮೂದಾಯವು ಈ ಕಡೆಗೆ ತಿರುಗಿಯೂ ನೋಡಲಿಲ್ಲದ ಕಾರಣ ಮಕ್ಕಳ ಕತೆಗಳಿಗೆ ಒಳನೋಟಗಳು ದಕ್ಕದೆ ಅದು ಸೊರಗುವಂತಾಯಿತು. ಇದರಿಂದಾಗಿ ಮಕ್ಕಳ ಕಥಾ ಲೋಕವು ಪ್ರಬುದ್ಧರ ಸಾಹಿತ್ಯದಂತೆ ಸೂಕ್ತವಾದ ಸ್ಥಾನಮಾನಗಳನ್ನು ಗಳಿಸದೇ ಹೋದದು ಮಕ್ಕಳ ಕತೆಗಳ ವಿಕಾಸಕ್ಕೆ ತಡೆಯನ್ನುಂಟುಮಾಡಿತು. ಕೆಲವರು ಮಕ್ಕಳ ಸಾಹಿತಿಗಳೆನಿಸಿಕೊಳ್ಳುವ ಭರಾಟೆಯಲ್ಲಿ ಹಳೆಯ ಸರಕುಗಳನ್ನು ತಮ್ಮತನದೊಂದಿಗೆ ಒಗ್ಗಿಸಿಕೊಂಡು ಬರೆದು ಮಕ್ಕಳ ಕಥಾ ಲೋಕವನ್ನು ವಿಸ್ತರಿಸಿದರೆ ವಿನಹ ಪ್ರಯೋಗಶೀಲತೆಯಿಂದ ಕಾಣಲಿಲ್ಲ. ಪತ್ರಿಕಾ ವಾತಾವರಣವು ಸಹ ಇಂತಹ ಸರಕನ್ನೇ ಆಶ್ರಯಿಸಿಕೊಂಡು ಪ್ರಚಾರ ಮಾಡುತ್ತಿರುವುದು ಸಹ ನಾವೀನ್ಯತೆಗೆ ಅವಕಾಶವನ್ನು ನೀಡದಂತಾಯಿತು. ಭಾರತೀಯ ಅನೇಕ ಭಾಷೆಗಳಲ್ಲಿ ಪತ್ರಿಕೆಗಳು ನಡೆದುಕೊಂಡು ಬಂದ ಮಾದರಿಯನ್ನೇ ಕನ್ನಡದ ವಾತಾವರಣದಲ್ಲಿಯೂ ಅನುಸರಿಸಲಾಯಿತು. ಅಲ್ಲಿಯೂ ಇದೆ ಮಾದರಿಯಿದ್ದು ಹೊಸತನ ಸುಳಿಯಲಿಲ್ಲ. ಇವು ಅನ್ಯಭಾಷೆಗಳನ್ನು ಆಶ್ರಯಿಸಿದಷ್ಟು ಪ್ರಯೋಗಶಿಲತೆಗೆ ತೆರೆದುಕೊಂಡು ಅವು ವಾಸ್ತವದತ್ತ ಹೊರಳನೋಡದೆ ಹೋದುದು ಸಹ ವಾಸ್ತವದ ಕತೆಗಳ ಮಿತಿಗೆ ಕಾರಣವಾಗಿವೆ.

# ಅಧ್ಯಾಯ: ೭

## ಕಾಮಿಕ್ಸ್ ಸ್ವರೂಪದ ಕತೆಗಳು

೭.೧ ಕಾಮಿಕ್ಸ್‌ನ ಅರ್ಥ

೭.೨ ಭಾರತದಲ್ಲಿ ಕಾಮಿಕ್ಸ್‌ನ ಹಿನ್ನೆಲೆ

೭.೩ ಭಾರತದಲ್ಲಿ ಕಾಮಿಕ್ಸ್‌ನ ಬೆಳವಣಿಗೆ

೭.೪ ಪ್ರಯೋಗಗಳು

೭.೫ ಕೆಲವು ಕಾಮಿಕ್ಸ್ ಮಾದರಿಗಳು

## ಅಧ್ಯಾಯ : ೭

# ಕಾಮಿಕ್ಸ್ ಸ್ವರೂಪದ ಕತೆಗಳು

## ಅರ್ಥ, ಹಿನ್ನೆಲೆ, ಬೆಳವಣಿಗೆ, ಪ್ರಯೋಗಗಳು

ಕತೆಗಳ ಅನೇಕ ಸ್ವರೂಪಗಳಲ್ಲಿ 'ಕಾಮಿಕ್ಸ್' ಸಹ ಪ್ರಮುಖವಾದದು. ಭಾರತೀಯರಿಗೆ ಇವುಗಳ ಪರಿಚಯ ಪುರಾತನ ಕಾಲದಿಂದಲೂ ಇದೆ. ಚಿತ್ರಗಳ ಮೂಲಕ ಭಾವನೆಗಳ ಅಭಿವ್ಯಕ್ತಿಯು ತೀರ ಹಿಂದೆಯೇ ನಮ್ಮಲ್ಲಿ ಕಾಣಿಸಿಕೊಂಡಿದೆ. ಹರಪ್ಪ, ಮೆಹಂಜಾದಾರೋ ನಗರಗಳಲ್ಲಿಯೂ ಚಿತ್ರಗಳ ಮೂಲಕ ಸಂವಹನ ನಡೆಯುತ್ತಿದ್ದುದನ್ನು ಇತಿಹಾಸದಲ್ಲಿ ಗಮನಿಸಬಹುದು. ಸಿಂಧು ಕೊಳ್ಳದ 'ಉರೂಕ್' ಸಂಸ್ಕೃತಿಯ ಕಾಲದಲ್ಲಿ ಮೊದಲಿಗೆ ವಾಸ್ತುಕಲೆಯು ಕಾಣಿಸಿದೆ. ಅರಮನೆಯ ಅಲಂಕಾರ, ವಿನ್ಯಾಸಗಳಲ್ಲಿ ಚಿತ್ರಗಳು ಬಳಕೆಯಾಗಿವೆ. ಈ ಕಾಲದಲ್ಲಿ ಧಾರ್ಮಿಕ, ಮತೀಯ ಕಾರಣಗಳಿಗಾಗಿ ಕಾಣಿಸಿಕೊಂಡು ಬಂದಿರುವುದನ್ನು ನೋಡುತ್ತೇವೆ. ರಾಜರು, ಪುರೋಹಿತರು ನಿರ್ದೇಶಿಸಿದಂತೆ ಶಿಲ್ಪಗಳು ರಚನೆಗೊಳ್ಳುತ್ತಿದ್ದವು[೧]. ಶಿಲ್ಪಿಯ ಇಚ್ಛೆಗೆ ಇಲ್ಲಿ ಅವಕಾಶವಿಲ್ಲದಿದ್ದರೂ ಅವನು ಇತರರ ಭಾವನೆಗಳನ್ನು ಚಿತ್ರಗಳಲ್ಲಿ ಮೂಡಿಸುವ ಸೊಗಸುಗಾರಿಕೆಯನ್ನು ತರುತ್ತಿದ್ದನು. ಅಷ್ಟೆ ಅಲ್ಲ. ಜಗತ್ತಿನ ಎಲ್ಲಾ ಪುರಾತನ ನಾಗರಿಕತೆಯಲ್ಲೂ ಚಿತ್ರಲಿಪಿಗಳ ಮೂಲಕ ಭಾಷೆಯ ಅಭಿವ್ಯಕ್ತಿಯಾಗಿರುವುದನ್ನು ಕಾಣುತ್ತೇವೆ. ಚೀನಾ ದೇಶದಲ್ಲಿ ಬೌದ್ಧಧರ್ಮ ಕಾಣಿಸಿಕೊಂಡ ಮೇಲೆ ಚೀನಾ ಭಾರತೀಯ ಸಂಪ್ರದಾಯದ ಮಿಶ್ರಿತ ವಾಸ್ತು ಶಿಲ್ಪದ ರೂಪದಲ್ಲಿ ಚಿತ್ರ ಲಿಪಿಗಳು ಕಾಣಿಸಿಕೊಂಡು ಬುದ್ಧನ ಕತೆಗಳನ್ನು ವಿವರಿಸಿವೆ. ಅಶೋಕನ ಕಾಲದಲ್ಲಿಯೂ ಇಂತಹ ರಚನೆಗಳು ನಡೆದಿರುವುದು ಭಾರತದ ವಿವಿಧ ಭಾಗಗಳಲ್ಲಿ ನಮಗೆ ಸಿಗುತ್ತವೆ. ಭಾರತದಲ್ಲಿಯು ಚಿತ್ರಲಿಪಿಗಳನ್ನು ಬಳಸಿರುವುದು ನಮಗೆ ಕಾಣಿಸಿಕೊಂಡಿದೆ. ಹಿಂದಿನ ಕಾಲದ ರಾಜ ಮಹಾರಾಜರು ಸಹ ತಮ್ಮ ಕಲೆಯ ಅಭಿರುಚಿಯನ್ನು ದೇವಾಲಯಗಳ ಭಿತ್ತಿಯ ಮೇಲೆ ಚಿತ್ರಗಳನ್ನು ಕೆತ್ತಿಸುವ ಮೂಲಕ ತೋರಿಸಿದ್ದಾರೆ. ಇಲ್ಲಿ ಗಮನಿಸಬೇಕಾದುದು ಆ ಚಿತ್ರಗಳು ಚಿತ್ರವಾಗಿರದೆ ಅವು ಘಟನೆಗಳನ್ನು, ಸಂಗತಿಗಳನ್ನು, ಕತೆಗಳನ್ನು ಹೇಳುವಂತಿರುವುದು. ರಾಮಾಯಣ, ಮಹಾಭಾರತ, ಭಾಗವತ ಪುರಾಣ, ದಶಾವತಾರದ ಕತೆಗಳು, ಅವುಗಳ ಪಾತ್ರಗಳು ನಮಗೆ ಭಿತ್ತಿಚಿತ್ರಗಳಲ್ಲಿ ಸಿಗುತ್ತವೆ. ಅಜಂತ, ಎಲ್ಲೋರ, ಕೊನಾರ್ಕ, ಬೇಲೂರು, ಹಳೆಬೀಡು ಮುಂತಾದ ದೇವಾಲಯಗಳಲ್ಲಿ ಪ್ರಮುಖವಾಗಿ ಕಾಣಿಸಿಕೊಂಡಿವೆ. ಅಲ್ಲದೆ ರಾಜ ಮಹಾರಾಜರ ಯುದ್ಧದ ವರ್ಣನೆಗಳಿರುವ ಚಿತ್ರಗಳನ್ನು ಅರಮನೆಯ ಗೋಡೆಗಳ ಮೇಲೆ ಕಾಣುತ್ತೇವೆ. ಬೇಲೂರಿನ ದೇವಾಲಯದ ಗೋಡೆಗಳ ಮೇಲೆ ಕುಮಾರ ಲಕ್ಷ್ಮಣನ ಯುದ್ಧದ ನಂತರ ನಡೆದ ಸಂಗತಿಗಳನ್ನು ಕೆತ್ತಿರುವುದನ್ನು ಕಾಣುತ್ತೇವೆ. ಇವು ಭಾರತೀಯ ರಾಜರಲ್ಲಿದ್ದ ಚಿತ್ರಕತೆಯ ಅಭಿರುಚಿಯನ್ನು ಹೇಳುತ್ತವೆ. ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ರಾಜರವಿವರ್ಮನ, ಕಲಾವಿದ ವೆಂಕಟಪ್ಪನು ಚಿತ್ರಿಸಿರುವ ಸೀತಾಪಹರಣದ ಸಂಗತಿಯನ್ನು ಹೇಳುವ, ಮಹಾಲಯ

---

೧ ವಿಷ್ಣಾದ ವಾಸ್ತುಶಿಲ್ಪ ಕಲೆ, ಅಂತರ್ಜಾಲ ಲೇಖನ, kn.m.wikipedia.org

ಅಮಾವಾಸ್ಯೆಯಂದು ದೀಪ ಹಿಡಿದು ದೇವಾಲಯ ಪ್ರವೇಶಿಸುವ ಸ್ತ್ರೀಯ, ಶಕುಂತಲೆಯ ವಿರಹವನ್ನು ಹೇಳುವ ಭಿತ್ತಿಚಿತ್ರಗಳವೆ. ಬಾದಾಮಿಯ ಗುಹಾಂತರ ದೇವಾಲಯಗಳಲ್ಲಿಯೂ ನರ್ತಿಸುತ್ತಿರುವ ಶಿವನ ವಿಗ್ರಹವಿದೆ. ಅದು ಚಾಲುಕ್ಯರ ಆಶ್ರಯದಲ್ಲಿದ್ದ ಬಿಲ್ಹಣ್ಣ ಕವಿಯ ವಿಕ್ರಮಾಂಕದೇವ ಚರಿತೆಯನ್ನು ಹೇಳುವ ಸಂಗತಿಯನ್ನು ಒಳಗೊಂಡಿದೆ. ಪಟ್ಟದಕಲ್ಲು, ಐಹೊಳೆಗಳಲ್ಲಿಯು ಇಂತಹ ಅನೇಕ ವಾಸ್ತುಶಿಲ್ಪಗಳು ಕತೆಯನ್ನು ಹೇಳುವುದಿದೆ. ಶೃಂಗಾರದ ಕತೆಗಳನ್ನು ಹೇಳಲು ಸಹ ಭಿತ್ತಿಚಿತ್ರಗಳನ್ನು ಕೆತ್ತಿರುವ ನಿದರ್ಶನಗಳನ್ನು ಹೊಯ್ಸಳರ ಚನ್ನಕೇಶವ ದೇವಾಲಯ ಬೇಲೂರಿನಲ್ಲಿ ನೋಡುತ್ತೇವೆ. ಮಣ್ಣಿನಿಂದ ಮಾಡಿದ, ಕಂಚುವಿನಿಂದ ಕೆತ್ತಿದ, ಮರದ, ಕಲ್ಲುಕಂಬಗಳ ಮೇಲೆ ಇಂತಹ ರಚನೆಗಳರುತ್ತಿದ್ದವು. ದ್ರಾವಿಡ, ವೇಸರ, ಗಾಂಧಾರ, ನಾಗಾರ ಮುಂತಾದ ಶೈಲಿಗಳು ಹುಟ್ಟಿಕೊಂಡು ದೇವಾಲಯಗಳನ್ನು ಅಲಂಕರಿಸಲು ನೆರವಾಗುತ್ತಿದ್ದವು. ಕಂಚಿ, ತಂಜಾವೂರು, ಭುವನೇಶ್ವರಗಳಲ್ಲಿ ಇವು ಕಾಣಿಸುತ್ತವೆ. ಕರ್ನಾಟಕದಲ್ಲಿಯೂ ಚಾಲುಕ್ಯ, ಹೊಯ್ಸಳ, ಕದಂಬರು ತಮ್ಮ ಆಡಳತದ ಕಾಲದಲ್ಲಿ ಇವುಗಳನ್ನು ಬೆಳೆಸಿದರು. ಜೈನರು, ಮುಸಲ್ಮಾನರು, ಪಾರ್ಸಿಗಳು, ಕ್ರೈಸ್ತರು, ಹಿಂದುಗಳು ತಮ್ಮ ತಮ್ಮ ಧರ್ಮದ ಪ್ರಚಾರಕ್ಕಾಗಿ ಇಂತಹ ಚಿತ್ರಕಲೆಗಳನ್ನು ಬಳಸಿಕೊಂಡು ಬೆಳೆಸಿದನ್ನು ಕಾಣುತ್ತೇವೆ. ವೀರಗಲ್ಲು, ಮಾಸ್ತಿಕಲ್ಲು, ನಿಷಧಿಕಲ್ಲುಗಳಲ್ಲಿನ ಚಿತ್ರಗಳು ಕೆಲವು ಕತೆಗಳನ್ನು ಹೇಳುವ ಸಾಂಕೇತಿಕೆಗಳಾಗಿವೆ. ಶಾಸನಗಳಲ್ಲಿಯೂ ಚಿತ್ರಗಳು ನಿರೂಪಿತವಾಗಿದ್ದು ವಿವರಣೆಯನ್ನು ಹೊಂದಿವೆ. ಕೆಲವು ರಾಜರ ಲಾಂಛನಗಳಲ್ಲಿಯೂ ಪ್ರಾಣಿ ಪಕ್ಷಿಗಳನ್ನು ಬಳಸಿ ತಮ್ಮ ಅಸ್ಮಿತೆಯನ್ನು ಪ್ರದರ್ಶಿಸಿಕೊಂಡಿರುವುದು ಚಿತ್ರಕತೆಯ ಪರಿಚಯವು ಭಾರತೀಯರಿಗಿತ್ತು ಎನ್ನುವುದನ್ನು ಹೆಳುತ್ತವೆ.

## ೭.೧ ಕಾಮಿಕ್ಸ್‌ನ ಅರ್ಥ

ಕಾಮಿಕ್ಸ್‌ಗೆ ಸಂವಾದಿಯಾದ ಪದ ಕನ್ನಡದಲ್ಲಿ ಸಿಗುವುದಿಲ್ಲ. ಆದುದರಿಂದ ಅದನ್ನು ಕಾಮಿಕ್ಸ್ ಎಂದು ಕರೆಯುವುದೇ ಸೂಕ್ತವಾಗಿದೆ. ಇದು ಸಹ ನಮಗೆ ಹೊರಗಿನಿಂದ ಬಂದ ಶಬ್ದವೇ ಆಗಿದೆ. ಅದರ ಮಹತ್ತ್ವ ಮತ್ತು ವ್ಯಾಪ್ತಿಯಿಂದ ನಮ್ಮ ಪರಿಸರದಲ್ಲಿ ಅದು ಹೆಚ್ಚು ಬಳಕೆಯಲ್ಲಿರುವ, ಪರಿಚಿತವಾದ ಪದವೇ ಆಗಿದೆ. ಕಾಮಿಕ್ ಎಂಬ ಶಬ್ದವು 'ನಗಿಸುವ ಅಥವಾ ನಗು ತರಿಸುವ' ಎನ್ನುವ ಅರ್ಥವನ್ನು ನೀಡುತ್ತದೆ. ಅದು ಮುಂದುವರೆದು ಕಾಮಿಡಿ ಎಂಬ ರೂಪದ ಅರ್ಥದಲ್ಲಿ ಕಾಣಿಸಿಕೊಳ್ಳುತ್ತದೆ. ಕಾಮಿಡಿ ಎಂದರೆ ಹಾಸ್ಯ. ಕಾಮಿಡಿಯನ್ ಎಂದು ಹಾಸ್ಯಗಾರನಿಗೆ ಹೇಳುವುದಾಗಿದೆ. ಕಾಮಿಕ್ಸ್ ಎನ್ನುವುದು ಆಲೋಚನೆಗಳನ್ನು ಚಿತ್ರಗಳ ರೂಪದಲ್ಲಿ ಹೊರ ತರುವುದಾಗಿದೆ. ವಿಷಯವನ್ನು, ದೃಶ್ಯದ ರೂಪದ ಮಾಹಿತಿಯನ್ನು ಹೊರಹಾಕುವುದೂ ಆಗಿದೆ. ಇಂಗ್ಲಿಷ್‌ನ ಶಬ್ದಕೋಶದಲ್ಲಿನ ಪ್ರಕಾರ ಅದು 'ತಮಾಷೆ' ಅಥವಾ 'ನಗುವಂತೆ ಮಾಡುವ ಸಾಧನವಾಗಿದೆ'. ಇದು ಕೆಲವು ಸಲ ನಗಲು ಕಾರಣವಾಗುವ, ನಗಿಸುವ ವಸ್ತುವಿಗೂ. 'ದ್ವಂದ್ವ ನಿವಾರಣೆ' (Disambiguation), ಉದ್ದೇಶ ಪೂರ್ವಕವಾಗಿ ತಮಾಷೆ ಮಾಡು (Intentionlly funny) ಎಂಬ ಅರ್ಥದಲ್ಲಿಯೂ ಬಳಕೆಯಾಗಿರುವುದು ಇದೆ. ಕಾರ್ಟೂನ್ ಮತ್ತು ಅದಕ್ಕೆ ಸಮನಾದ ವಿವರಣೆಯುಳ್ಳ ಸಾಮಾನ್ಯವಾದ ವಿಷಯಗಳ ಚಿತ್ರಗಳಗೂ ಕಾಮಿಕ್ಸ್ ಎಂದು

ಬಳಕೆಯಾಗಿರುವುದನ್ನು ನೋಡುತ್ತೇವೆ. ಪತ್ರಿಕೆಯಲ್ಲಿ ಬರುವ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸುವ ಅಂಕಣಗಳಿಗೂ ಕಾಮಿಕ್ಸ್ ಎಂದೇ ಬಳಸುತ್ತಾರೆ. ಇವೆಲ್ಲವನ್ನು ನೋಡಿದಾಗ ಕಾಮಿಕ್ಸ್ ನ ಅರ್ಥವನ್ನು ವಿವಿಧ ರೀತಿಯಲ್ಲಿ ಗ್ರಹಿಸಲು ನೆರವಾಗುತ್ತದೆ.

"ಚಿತ್ರಗಳ ಮೂಲಕ ಕತೆಯನ್ನು ಸಾದರಪಡಿಸಬಲ್ಲ, ವಿವಿಧ ಸನ್ನಿವೇಶಗಳನ್ನು, ಕಥಾ ವಸ್ತುವನ್ನು, ಸಂಗತಿಗಳನ್ನು, ಕತೆಯ ಮೂಲ ಆಶಯವನ್ನು ಆಕರ್ಷಕವಾಗಿ ಮನಮುಟ್ಟುವಂತೆ ಅಭಿವ್ಯಕ್ತಿಸಬಲ್ಲ ಕಥನಾ ವಿಧಾನವನ್ನೇ 'ಚಿತ್ರಕಥಾ' ಅಥವಾ ಕಾಮಿಕ್ಸ್ ಎನ್ನಬಹುದಾಗಿದೆ." ವಿಷಯ ವಸ್ತುವನ್ನು, ವಿಷಯದ ವಿವರಣೆಯನ್ನು (Illustration) ವ್ಯಂಗ್ಯ, ಹಾಸ್ಯದೊಂದಿಗೆ ಚಿತ್ರಗಳ ಮೂಲಕ ಅಭಿವ್ಯಕ್ತವಾಗುವ ಬಗೆಯನ್ನು ಕಾಮಿಕ್ಸ್ ಎನ್ನಲಾಗುತ್ತದೆ. ಇಲ್ಲಿ ಕತೆಯು, ಸಂಗತಿಯು, ವಿವರಣೆಯು ಚಿತ್ರಗಳ ಬಾಯಿಂದ ಮೂಡುವಂತಿದ್ದು, ಚಿತ್ರಗಳೇ ಮಾತನಾಡುವುದನ್ನು ಕಾಣುತ್ತೇವೆ. ಸಂಭಾಷಣೆಯ ಒಕ್ಕಣೆಯು ಸಂಬಂಧಿಸಿದ ಚಿತ್ರದ ಪಕ್ಕದಲ್ಲಿರುವ ವೃತ್ತದಲ್ಲಿಯೋ ಇಲ್ಲವೆ ಸುರುಳಿಯಲ್ಲಿಯೋ ಕಾಣಿಸಿಕೊಳ್ಳುತ್ತದೆ. ಚಿತ್ರಗಳು ಸಹ ಸಹಜವಾಗಿರದೆ ವಿಶಿಷ್ಟವಾಗಿ ಮೂಡಿಬಂದಿರುತ್ತವೆ. ಮುಖದ ಚಹರೆಯು ದಪ್ಪಹಲ್ಲು, ಅಗಲವಾದ ಬಾಯಿ, ಉದ್ದವಾದ ಮೂಗು, ಹೊರಳುವಂತಿರುವ ಕಣ್ಣುಗಳು ಇದ್ದು, ಕೈ ಕಾಲು ಸಣ್ಣದಾಗಿದ್ದು ದೇಹ ದಢೂತಿಯುಳ್ಳ ಚಿತ್ರಗಳನ್ನು ಕಾಣಬಹುದು. ವಸ್ತುವಿಗೆ ತಕ್ಕನಾದ ಆಕಾರಗಳು ಚಿತ್ರದಲ್ಲಿ ಮೂಡಿಬರುತ್ತವೆ. ಪ್ರಾಣಿಗಳ ವಿಷಯದಲ್ಲಿಯೂ ಮಾನವ ಬದುಕನ್ನು ಅವು ಬದುಕುವುದನ್ನು ತೋರಿಸುವಂತೆಯೇ ಚಿತ್ರಿಸಲಾಗಿರುತ್ತದೆ. ಸಹಜವಾಗಿ ನಾವು ನೋಡಿದ ಪ್ರಾಣಿ ಪಕ್ಷಿಗಳಂತೆ ಅವು ಕಾಣಿಸಿಕೊಳ್ಳದೆ ವ್ಯಂಗ್ಯ, ಹಾಸ್ಯದ ಸರಕಿನಂತೆ ಕಾಣಿಸಿಕೊಳ್ಳುತ್ತವೆ. ಮನುಷ್ಯರಂತೆಯೇ ಮಾತನಾಡುತ್ತವೆ, ವ್ಯವಹರಿಸುತ್ತವೆ. ಆದುದರಿಂದಲೇ ಇವುಗಳು ರಂಜಿಸಬಲ್ಲವು. ಮಕ್ಕಳನ್ನೂ ಆಕರ್ಷಣೀಯವಾಗಿ ರಂಜಿಸಬಲ್ಲ, ಅವರ ಆಸಕ್ತಿಯನ್ನು ಕೆರಳಿಸಬಲ್ಲ ಶಕ್ತಿ ಇರುವುದರಿಂದ ಇದು ವಿವಿಧ ಕಥಾ ಸ್ವರೂಪಗಳಲ್ಲಿ ಮಹತ್ತರವಾದುದು. ಚಿತ್ರದೊಂದಿಗೆ ಚಿತ್ರವು ಮಾತನಾಡಬೇಕಾದ ಸಂಭಾಷಣೆಯ ತುಣುಕುಗಳನ್ನು ಒಳಗೊಂಡಿರುವುದರಿಂದ ಕತೆಯು ತನ್ನ ಸೊಗಸನ್ನು ಹೆಚ್ಚಿಸಿಕೊಂಡು ಓದುಗನ ಮನಸ್ಸಿಗೆ ಬಹುಬೇಗನೆ ತಲುಪುತ್ತದೆ. ಆದ್ದರಿಂದ ಮಕ್ಕಳಿಗೂ ಆತ್ಮೀಯವಾಗಿ ಮನಮುಟ್ಟುತ್ತದೆ. ಇತರ ಕತೆಗಳ ಓದಿನಲ್ಲಿ ದಕ್ಕುವ ಆನಂದಕ್ಕಿಂತ ಇಲ್ಲಿ ಚಿತ್ರ ಸಹಿತ ಮೂಡುವ ಮೂರ್ತರೂಪದ ಅನುಭವವು ಮಕ್ಕಳಿಗೆ ದೀರ್ಘಕಾಲದವರೆಗೆ ನೆನಪಿನಲ್ಲಿ ಉಳಿಯುವಂತಾಗಿ ರಂಜಿಸುತ್ತದೆ. ಮುಂದಿನ ಓದಿಗೂ ಮಕ್ಕಳನ್ನು ಅನುವುಗೊಳಿಸುತ್ತದೆ.

## ೭.೨ ಭಾರತದಲ್ಲಿ ಕಾಮಿಕ್ಸ್ ಹಿನ್ನೆಲೆ

ಸ್ವಾತಂತ್ರ್ಯದ ನಂತರ ಭಾರತದಲ್ಲಿ ಉಂಟಾದ ನಗರೀಕರಣ ಮತ್ತು ಆಧುನಿಕ ಶಿಕ್ಷಣ ವ್ಯವಸ್ಥೆಯನ್ನು ಜನರು ಬಹುಬೇಗನೆ ಸ್ವಾಗತಿಸಿದರು. ಪಾಶ್ಚ್ಯಾತರು ಭಾರತ ಬಿಟ್ಟರೂ ಅವರ ಜೀವನಶೈಲಿಯು ಭಾರತೀಯರನ್ನು ಸೆಳೆಯದೇ ಬಿಡಲಿಲ್ಲ. ವಿದೇಶಿವಸ್ತುಗಳು ಮಾರುಕಟ್ಟೆಯನ್ನು

ಪ್ರವೇಶಿಸಿದವು. ಯಂತ್ರಗಳ ಆಗಮನದಿಂದಾಗಿ ಯಾಂತ್ರಿಕಯುಗ ಆರಂಭವಾಯಿತು. ಕೈಗಾರಿಕೆಗಳು ಭಾರತವನ್ನು ಹೆಚ್ಚಾಗಿ ಮುತ್ತಿದವು. ಜನರಿಗೆ ಉದ್ಯೋಗ ಸೃಷ್ಟಿಯಾಗಿ ಕೈಗಾರಿಕೆಗಳಿರುವತ್ತಾ ಜನರು ನೆಲೆಸಲಾರಂಭಿಸಿದರು. ಅಲ್ಲಲ್ಲಿ ನಗರಗಳು ಹುಟ್ಟಿಕೊಂಡು ಬಹುಬೇಗನೆ ಬೆಳೆದವು. ಇದರ ಪರಿಣಾಮವಾಗಿ ಹಳ್ಳಿಗರು ನಗರದತ್ತ ವಲಸೆ ಹೋದರು. ಇದರಿಂದ ವಯೋವೃದ್ಧರು ಹಳ್ಳಿಯಲ್ಲಿಯೇ ಉಳಿಯುವಂತಾಯಿತು. ಅಜ್ಜ-ಅಜ್ಜಿಯರಿಂದ ದೂರವಾದ ಮಕ್ಕಳು ಅಜ್ಜಿಕತೆ ಗಳಿಂದಲೂ ವಂಚಿತರಾದರು. ಆಗತಾನೆ ಭಾರತಕ್ಕೆ ಕಾಲಿಡುತ್ತಿದ್ದ ಪಾಶ್ಚಾತ್ಯರ ಕಾಮಿಕ್ಸ್ ಶೈಲಿಯು ಶಿಕ್ಷಣ ರೂಪದಲ್ಲಿ ಅನಿವಾರ್ಯವಾಗಿ ಮಕ್ಕಳಿಗೆ ತಲುಪಿತು. ಇದರಿಂದ ಆಕರ್ಷಿತರಾದ ಮಕ್ಕಳು ಪಾಶ್ಚಾತ್ಯರ ಇತಿಹಾಸ, ಪುರಾಣ, ದಂತಕತೆಗಳ ಸೊಗಸಿಗೆ ಮರುಳಾದರು. ವಿದೇಶಿಯ ಜೀವನಶೈಲಿಯನ್ನು ಸ್ವೀಕರಿಸಿದ ಭಾರತೀಯರಿಗೆ ಅವರ ಶಿಕ್ಷಣ ವಿಧಾನವು ಅನಿವಾರ್ಯವಾಯಿತು. ಅವರ ಸಂಸ್ಕೃತಿಯು ಶಿಕ್ಷಣದ ನೆಪದಲ್ಲಿ ಭಾರತವನ್ನು ಪ್ರವೇಶಿಸಿತು. ಈ ಸಂದರ್ಭದಲ್ಲಿ ದೆಹಲಿಯಲ್ಲಿ ನೆಡೆದ ಮಕ್ಕಳ ರಸಪ್ರಶ್ನಾ ಕಾರ್ಯಕ್ರಮದಲ್ಲಿ ಪಾಶ್ಚಾತ್ಯರ ವಿಚಾರಗಳಿಂದ ಕೂಡಿದ ಪ್ರಶ್ನೆಗಳಿಗೆ ಉತ್ತರಿಸಿದ ಮಕ್ಕಳು ಭಾರತದ ವಿಚಾರಗಳ ವಿಷಯದಲ್ಲಿ ಹಿಂದೆ ಬಿದ್ದಿರುವುದನ್ನು ಅನಂತಪೈ ಅವರು ಮನಗೊಂಡರು.[೪೩] ವಿದೇಶಿ ವಿಚಾರಗಳನ್ನು ಕುರಿತಾದ ತಿಳಿವಳಿಕೆಯುಳ್ಳ ಮಕ್ಕಳಿಗೆ ಭಾರತೀಯ ವಿಚಾರಗಳು ತಿಳಿಯದಿರುವುದು ಪೈ ಅವರ ಗಮನಕ್ಕೆ ಬಂದುದರಿಂದ ಅವರು ಅದಕ್ಕೆ ಕಾರಣವನ್ನು ತಿಳಿದುಕೊಳ್ಳಲು ಉತ್ಸುಕರಾದರು. ಅನಂತ ಪೈ ರವರು ಭಾರತದ ಪುರಾಣ, ಇತಿಹಾಸ, ದಂತಕತೆಗಳ ಸಂಗತಿಗಳನ್ನೊಳಗೊಂಡ ಕಾಮಿಕ್ಸ್ ಅನಿವಾರ್ಯತೆಯನ್ನು ಅರಿತುಕೊಂಡರು. ಮಕ್ಕಳಿಗಾಗಿ 'ಅಮರಚಿತ್ರಕಥಾ' ಸರಣಿಯನ್ನು ಪ್ರಕಟಿಸಿದರು.[೪೪]

ಇದು ಭಾರತದ ಮಕ್ಕಳ ಜ್ಞಾನ ವೃದ್ಧಿಯ ಜೊತೆಗೆ ಮನೋರಂಜನೆ ಸಾಧನವಾಗಿ ಅಚ್ಚಳಿಯದೇ ಉಳಿಯಿತು. ನಗರಗಳಲ್ಲಿ ಅಜ್ಜ ಅಜ್ಜಿಯರಿಂದ ದೂರ ಉಳಿದ ಮಕ್ಕಳಿಗೆ ಅಜ್ಜಿಕತೆಯ ಕೊರತೆಯನ್ನು ನೀಗಿಸುವ ಸಾಧನವಾಗಿ ಕಾಮಿಕ್ಸ್‌ಗಳನ್ನು ನೀಡಿದ ಅನಂತ ಪೈ ರವರು 'ಅಂಕಲ್ ಪೈ' ಎಂದೇ ಹೆಸರಾದರು. ಅವರ ಅವಿರತವಾದ ಶ್ರಮದಿಂದಾಗಿ ಮನೆಮಾತಾಗುವಂತಾದರು. ಇವರ ಈ ಅಮರಚಿತ್ರಕಥಾ ಸರಣಿಯು ಭಾರತದ ಇಪ್ಪತ್ತು ಭಾಷೆಗಳಲ್ಲಿ ಮೂರು ಮಿಲಿಯನ್‌ನಷ್ಟು ಪುಸ್ತಕಗಳು ಮಾರಾಟವಾದವು. ಇದಕ್ಕು ಮುನ್ನ ಡನ್‌ಲಪ್ ಟೈರ್ ಕಂಪೆನಿಯವರು ಕೆಲ ದಶಕಗಳ ಹಿಂದೆಯೆ ರಾಮಾಯಣ, ಮಹಾಭಾರತ, ಅವುಗಳ ಪಾತ್ರಗಳ ಆಧಾರಿತ ಕಾಮಿಕ್ಸ್ ಸರಣಿಗಳನ್ನು ತಂದಿದ್ದರು. ಇವೇ ಭಾರತದ ಮೊದಲ ಕಾಮಿಕ್ಸ್ ಎನ್ನಬಹುದು[೪೫]. ಇವು ಭಾರತದ ತುಂಬೆಲ್ಲ ಜನಪ್ರಿಯವಾಗಿದ್ದವು. ನಂತರ ಟೈಮ್ಸ್ ನವರು 'ಇಂದ್ರಜಾಲ' ಹೆಸರಿನಲ್ಲಿ ಅಮೇರಿಕಾ ಮೂಲದ ಕಾಮಿಕ್ಸ್ ಶುರು ಮಾಡಿದರು. ೧೯೬೧ ರಲ್ಲಿ ಅನಂತ ಪೈ ರವರು ಇಂದ್ರಜಾಲ ಕಾಮಿಕ್ಸ್ ನ ಸಂಪಾದಕರಾಗಿ ನೇಮಕಗೊಂಡ ಮೇಲೆ ಇದಕ್ಕೆ ಭಾರತೀಯತೆಯ ಸ್ಪರ್ಶ ನೀಡಿದರು. ಅಮೇರಿಕಾ ಮೂಲದ ಕಾಮಿಕ್ಸ್ ಪ್ರಕಟಿಸುತ್ತಿದ್ದ ಟೈಮ್ಸ್ ನಲ್ಲಿ ಕೆಲಸ

---

[೪೩] 'ಮುಗುಳು' ಮಕ್ಕಳ ಸಾಹಿತ್ಯ ಕುರಿತು, ಲೇ: ಆನಂದ ಪಾಟೀಲ, ಪುಟ ೩೬., ೨೦೧೨

[೪೪] ಅದೇ ಪುಟ.

[೪೫] ಅದೇ ಪುಟ.

ಮಾಡುತ್ತಿದ್ದ ಕುಂಜು ಪಿಳ್ಳೈ ಎನ್ನುವವರು ಭಾರತೀಯ ಪಾತ್ರ ಆಧಾರಿತ ಕಾಮಿಕ್ಸ್ ಆರಂಭಿಸಲು ಪ್ರಸ್ತಾವನೆ ಸಲ್ಲಿಸಿದರು. ಅದು ಸ್ವೀಕಾರವಾಗದಿದ್ದಾಗ ಅವರು ಬೇಸರಗೊಂಡು ಟೈಮ್ಸ್ ನಿಂದಲೇ ಹೊರಬಂದರು. ಇದರಿಂದ ಪಿಳ್ಳೈ ಅವರಲ್ಲಿ ಆಸಕ್ತಿ ಮತ್ತಷ್ಟು ಹೆಚ್ಚಿತು. ಭಾರತೀಯ ಮೂಲದ ಕಾಮಿಕ್ಸ್‌ನ ಇಂಗಿತ ಮಾತ್ರ ಅವರಲ್ಲಿ ಎಂದಿಗೂ ಕಡಿಮೆಯಾದಂತೆ ತೋರಲಿಲ್ಲ. ಆಗ ಅವರು ಇಂಡಿಯಾ ಬುಕ್ ಹೌಸ್‌ನ ನೆರವಿನಿಂದ ಅಮರ ಚಿತ್ರಕಥಾ ಸರಣಿಯನ್ನು ಶುರುಮಾಡಿ ೧೯೬೭ ರಲ್ಲಿ ಪ್ರಚಾರಕ್ಕೆ ತಂದರು. ೧೯೮೯ ರಲ್ಲಿ 'ರಂಗರೇಖಾ ಫೀಚರ್ಸ್ ಪ್ರೈವೆಟ್ ಲಿಮಿಟೆಡ್' ಎನ್ನುವ ಸಂಸ್ಥೆ ಪ್ರಾರಂಭಿಸಿ ಸುಮಾರು ೭೦ ಪತ್ರಿಕೆಗಳಿಗೆ ಕಾಮಿಕ್ಸ್ ಸರಣಿಗಳನ್ನು ನೀಡತೊಡಗಿದರು. ಭಾರತದ ಮಟ್ಟಿಗೆ ಇದೊಂದು ದೊಡ್ಡ ಸಾಧನೆಯೇ ಆಯಿತು.

ಕಪೀಶ್ (Kapish), ರಾಮು ಮತ್ತು ಶ್ಯಾಮು, (Ramu and Shamu), Fun time, Fact fantacy ಇವರಿಂದ ಮುಂತಾದವು ಹೊರ ಬಂದವು. ನಂತರ ಅವರೂ ಸಹ ವಿದೇಶಿಯರ ಕಾಮಿಕ್ಸ್‌ನ ತಂತ್ರಗಾರಿಕೆಯನ್ನು ಅಳವಡಿಸಿಕೊಂಡು ಭಾರತೀಯ ಮೂಲದ ಸರಕನ್ನು ಬೆರಸಿ ನೂತನ ಪ್ರಯೋಗಗಳನ್ನು ಅನುಸರಿಸಿದರು. ಈಗಾಗಲೇ ಮಾರುಕಟ್ಟೆಯಲ್ಲಿ ಗಮನಸೆಳೆದಿದ್ದ ಹಾಸ್ಯ ಪ್ರಿಯ, ಸಾಹಸ ಪ್ರಿಯ ಕಾಮಿಕ್ಸ್‌ನ ಜನಪ್ರಿಯತೆ ಹೆಚ್ಚಿದ್ದರಿಂದ ಇವುಗಳಿಗೆ ಒತ್ತು ಕೊಟ್ಟರು. ಆದರೆ ವಸ್ತುಗಳಲ್ಲಿ ದೇಶಿಯತೆಯನ್ನು ಉಳಿಸಿಕೊಂಡುಬಂದರು. ಇದನ್ನು ಗಮನಿಸಿದ ಭಾರತದ ಪ್ರಸಿದ್ಧ ಐಬಿಎಚ್ ಪ್ರಕಾಶನ ಇವರ ಕಾಮಿಕ್ಸ್‌ಗಳಿಗೆ ವ್ಯಾಪಕವಾದ ಮಾರುಕಟ್ಟೆಯನ್ನು ಒದಗಿಸಿತು. 'ಸ್ಟಾರ್ ಕಾಮಿಕ್ಸ್' ನವರು 'ಸೂಪರ್ ಮ್ಯಾನ್ ಕಾಮಿಕ್ಸ್'ನ ಬೇಡಿಕೆ ಇಟ್ಟಾಗ ಪೈ ಅವರು ಫ್ಯಾಂಟಮ್ ಸರಣಿಯನ್ನು ಆಯ್ದುಕೊಂಡರು. ಫ್ಯಾಂಟಮ್ ವಸಾಹತಿಕರಣಕ್ಕೆ ಒಳಗಾದ ಆಫ್ರಿಕಾದ ಕಾಡುಗಳಲ್ಲಿನ ಕತೆಯಾದ್ದರಿಂದ ಆಗತಾನೆ ಗುಲಾಮ ಗಿರಿಯಿಂದ ಹೊರಬಂದ ಭಾರತೀಯರಿಗೆ ಇಷ್ಟವಾಗುತ್ತದೆ ಎಂದು ಪೈ ರವರು ಈ ಕಾಮಿಕ್ಸ್ ರೂಪವನ್ನು ಆಯ್ಕೆ ಮಾಡಿಕೊಂಡರು ಎನಿಸುತ್ತದೆ. ಆದರೆ ಅಮರ ಚಿತ್ರಕಥಾ ಸರಣಿಯ ಮುಂದೆ ಫ್ಯಾಂಟಮ್ ಸೋತಿತು. ಮುಸುಕುದಾರಿ, ಬಿಳಿ ತ್ವಚೆಯ ನಾಯಕ ಪರಕೀಯರಂತೆ ಕಂಡುಬಂದುದು ಭಾರತೀಯರಿಗೆ ಇಷ್ಟವಾಗಲಿಲ್ಲ. ಈಗಾಗಲೇ ಮುಸುಕಿಲ್ಲದ ನಾಯಕರು, ಭಾರತದ ಪಾತ್ರಧಾರಿಗಳು ಆದವರು ಬ್ರಿಟಿಷರ ವಿರುದ್ಧ ಸೆಣಸಾಡಿದ ಭಾರತೀಯರು 'ಅಮರ ಚಿತ್ರಕಥಾ'ದಲ್ಲಿ ಹೀರೋಗಳಾಗಿ ಮಿಂಚಿದರು. ಪ್ರತಿ ಕಾಮಿಕ್ಸ್‌ನಲ್ಲೂ ಬೇರೆಬೇರೆ ನಾಯಕರನ್ನು ಮಕ್ಕಳು ಇಷ್ಟಪಟ್ಟರು. ಈ ಪಾತ್ರಗಳನ್ನು ಕೇವಲ ಹೋರಾಟದ ದೃಷ್ಟಿಯಿಂದ ರೂಪಿಸದೆ ಮಕ್ಕಳಲ್ಲಿ ನಾಯಕತ್ವ ಗುಣ, ಆದರ್ಶತತ್ವ, ಜೀವನ ಮೌಲ್ಯಗಳನ್ನು ಸಾರುವ ಭಾರತೀಯರ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪರಿಚಯಿಸುವ ತತ್ವದ ಆಧಾರದ ಮೇಲೆ ರೂಪಿಸಲಾಗಿತ್ತು. ಇವೆಲ್ಲವುಗಳ ಮುಂದೆ ಫ್ಯಾಂಟಮ್ ಸ್ಪರ್ಧೆ ಎದುರಿಸಲಾಗದೆ ಹಿನ್ನಡೆಯಾಯಿತು.

ನಂತರದ ದಿನಗಳಲ್ಲಿ ಭಾರತದ ಮೇಲೆ ಆಧುನೀಕತೆ ಆವರಿಸಿ, ಆಧುನಿಕ ಜೀವನಶೈಲಿಗೆ ಮಾರುಹೋದವರು, ದುಡಿಮೆಗೆ ಹೆಚ್ಚು ಒತ್ತು ಕೊಟ್ಟು, ತಂದೆ ತಾಯಿ ಇಬ್ಬರೂ ಮಕ್ಕಳಿಂದ ದೂರಾಗುವ ಸಂಗತಿಗಳು ಹೆಚ್ಚಾದವು. ದುಡಿಮೆಯ ಧಾವಂತದಲ್ಲಿ ಕುಟುಂಬಗಳು ಚಿಕ್ಕದಾಗುತ್ತಾ ಮಕ್ಕಳಲ್ಲಿ ಏಕಾಂಗಿತನ ಆವರಿಸಲು ಶುರುವಾದಾಗ ಅನಂತಪೈ ರವರು ಕಾಮಿಕ್ಸ್‌ಗಳ ಮೂಲಕ ಮಕ್ಕಳಿಗೆ ಜೊತೆಯಾಗಿ ಮತ್ತು ಆತ್ಮೀಯರೂ ಆದರು. ಇದರಿಂದಾಗಿ ಮಾರುಕಟ್ಟೆಯಲ್ಲಿ ಸೋವಿಯತ್ ರಾಷ್ಟ್ರಗಳಿಂದ

ಸುಲಭ ಬೆಲೆಗೆ ಬರುತ್ತಿದ್ದ ಪುಸ್ತಕಗಳು ಸಹ ಭಾರತೀಯತೆಯ ಕಾಮಿಕ್ಸ್‌ಗಳ ಮುಂದೆ ಮಂಕಾದವು. ಮಕ್ಕಳೊಂದಿಗೆ ಬಿಡುವಿನ ವೇಳೆಯಲ್ಲಿ ಪೋಷಕರು ಸಹ ಭಾರತದ ಪುರಾಣ ಕತೆಗಳನ್ನು ಆಧಾರಿಸಿದ ಕಾಮಿಕ್ಸ್‌ಗಳನ್ನು ಓದಲಾರಂಭಿಸಿದ ಕಾರಣ ಭಾರತದಲ್ಲಿ ಕಾಮಿಕ್ಸ್‌ಗಳು ಹೆಚ್ಚಾಗಿ ಪುರಾಣವಸ್ತು ಕೇಂದ್ರಿತ ಕಾಮಿಕ್ಸ್‌ಗಳಾಗಿ ಬದಲಾದವು. ಇದರಿಂದಾಗಿ ಮಾರುಕಟ್ಟೆಯಲ್ಲಿ ಲಾಭದಾಯಕ ವಸ್ತುವಾಗಿ ಕಾಮಿಕ್ಸ್‌ಗಳು ಕಾಣಿಸಿಕೊಂಡವು. ಆರಂಭದ ನಾಲ್ಕು ವರ್ಷಗಳಲ್ಲಿ ೧೯೭೩ ರ ಹೊತ್ತಿಗೆ ಪ್ರತಿ ಎರಡು ತಿಂಗಳಿಗೆ ಪುನರ್ ಮುದ್ರಣವಾಗ ತೊಡಗಿದವು. ಹೀಗೆ ಕಾಮಿಕ್ಸ್‌ಗಳ ಅಬ್ಬರ ಭಾರತೀಯ ಮಾರುಕಟ್ಟೆಯಲ್ಲಿ ಸದ್ದು ಮಾಡತೊಡಗಿತು. ನಂತರದ ದಿನಗಳಲ್ಲಿ ಕೃಷ್ಣಕಥಾ ಮಾಲಿಕೆ, ಶಿವಲೀಲಾ ಕತೆಗಳು, ಕಲೀಫನ ಕತೆಗಳಾಗಿ ಭಾರತದ ಕಾಮಿಕ್ಸ್ ತನ್ನ ವ್ಯಾಪ್ತಿ ವಿಸ್ತಾರ ಮಾಡಿಕೊಂಡಿತು. ಅದು ಈಗ ಕ್ಲಾಸಿಕ್ ಅನ್ನುವ ಮಟ್ಟಕ್ಕೆ ಬೆಳೆದು ಬಂದಿದೆ.

## ೭.೩ ಭಾರತದಲ್ಲಿ ಕಾಮಿಕ್ಸ್ ಬೆಳವಣಿಗೆ

ಭಾರತದ ಎಲ್ಲಾ ರಂಗದಲ್ಲೂ ಬದಲಾವಣೆಯ ಗಾಳಿ ಬೀಸಿಬಂದುದು ಸ್ವಾತಂತ್ರ್ಯದ ನಂತರದಲ್ಲಿ, ಅದು ಮಕ್ಕಳಸಾಹಿತ್ಯದಲ್ಲೂ ಸುಳಿಯಿತು. ೧೯೫೫ ರಲ್ಲಿ ಚಿಲ್ಡ್ರನ್ ಫಿಲ್ಮ್ ಸೊಸೈಟಿ ಆರಂಭವಾಯಿತು. ೧೯೫೭ ರಲ್ಲಿ ಚಿಲ್ಡ್ರನ್ ಬುಕ್ ಟ್ರಸ್ಟ್ ಪ್ರಾರಂಭವಾಯಿತು. ೧೯೬೧ ರಲ್ಲಿ NCERT ಶುರುವಾಯಿತು. ೧೯೬೪ರಲ್ಲಿ National Book Trust ತನ್ನಕಾರ್ಯ ಪ್ರಾರಂಭಿಸಿತು. ೧೯೬೭ರಲ್ಲಿ ದೆಹಲಿಯ ಬಿ.ಸಿ.ರಾಯ್ ಗ್ರಂಥಾಲಯ ಹುಟ್ಟಿಕೊಂಡಿತು. ಈ ಎಲ್ಲಾ ವಾತಾವರಣ ನಿರ್ಮಾಣದಿಂದಾಗಿ ಮಕ್ಕಳ ಸಾಹಿತ್ಯದ ಒಲವು ಭಾರತೀಯರಲ್ಲಿ ಹೆಚ್ಚಾಯಿತು. ಕಲ್ಕತ್ತಾದಲ್ಲಿ ನಡೆದ ಮೊದಲ ಭಾರತೀಯ ಪುಸ್ತಕ ಮೇಳದಲ್ಲಿ ಸೋವಿಯತ್‌ನ ಮಕ್ಕಳ ಪುಸ್ತಕಗಳು ಭಾರತಕ್ಕೆ ಬಂದವು. ಇದರಿಂದಾಗಿ ಭಾರತೀಯ ಮಕ್ಕಳಸಾಹಿತ್ಯವು ವಿದೇಶಿ ಸಾಹಿತ್ಯದಂತೆ ಬದಲಾಗುವ ಅನಿವಾರ್ಯತೆಯ ವಾತವರಣ ನಿರ್ಮಾಣವಾಯಿತು. ಇದರಿಂದಾಗಿ ಅಂಕಲ್‌ಪೈ ಅವರು ತಮ್ಮ ಅಮರ ಚಿತ್ರಕಥಾ ಸರಣಿಯಲ್ಲಿನ ಬದಲಾವಣೆಗಳನ್ನು ಕಂಡುಕೊಂಡರು. ಕಾಮಿಕ್ಸ್‌ಗಳಲ್ಲಿ ಮತೀಯತೆಯ ಭಾವನೆ, ಮೂಢನಂಬಿಕೆ, ಅಸಹಿಷ್ಣುತೆ ಮುಂತಾದ ಅಂಶಗಳು ನುಸುಳದಂತೆ ಎಚ್ಚರಿಕೆವಹಿಸಿದರು. ಇದರಿಂದಾಗಿ ಮಕ್ಕಳೊಂದಿಗೆ ಹಿರಿಯರಿಗೂ ಇವು ಹಿಡಿಸಿ, ಕುಟುಂಬಗಳು ಪ್ರೋತ್ಸಹಿಸಿದವು, ಶಿಕ್ಷಣ ಸಂಸ್ಥೆಗಳು, ಅಧಿಕಾರಿಗಳು, ರಾಜಕಾರಿಣಿಗಳು ಭಾಗವಹಿಸುವ ಮೂಲಕ ಸಂಚಿಕೆಗಳು ಶೋಭಾಯಮಾನವಾಗಿ ಹೊರಬಂದವು. ಪುರಾಣ, ಭಾರತೀಯ ಪರಂಪರೆ, ಸಂಸ್ಕೃತಿ, ಆಚಾರ ವಿಚಾರಗಳೆ ಕಾಮಿಕ್ಸ್‌ನ ಕಥಾ ವಸ್ತುಗಳಾದ ಮೇಲೆ ವೇದ, ಉಪನಿಷತ್ತಗಳ ಪರಿಚಯವು ಭಾರತೀಯರಿಗೆ ರುಚಿಸಿತು. ಮೊದಲ ತಲೆಮಾರಿನಲ್ಲಿ ಇವು ಕೇವಲ ಒಂದು ವರ್ಗಕ್ಕೆ ಸೀಮಿತ ಎನ್ನುವಂತೆಯೇ ಕಾಣಿಸಿಕೊಂಡವು. ಇದಕ್ಕೆ ಕಾರಣವೆಂದರೆ ಕಾಮಿಕ್ಸ್‌ಗಳು ಹೆಚ್ಚಾಗಿ ವಿಷ್ಣುವಿನ, ಕೃಷ್ಣನ ಅವತಾರಾಧಾರಿತವಾಗಿಯೆ ಮೂಡಿಬಂದುದರಿಂದ ಬ್ರಾಹ್ಮಣರನ್ನು ಹಾಗೂ ವೈಷ್ಣವರನ್ನು ಮಾತ್ರ ಮೇಲ್ಮಟ್ಟಕ್ಕೆ ಕೂರಿಸಿ ಬರೆಯಲಾಗುತ್ತಿದೆ ಎಂದು ಕೆಲವು ಶೈವಪಂಥದವರಿಂದ ದೂಷಣೆಗೊಳಪಟ್ಟವು. ಇದರಿಂದಾಗಿ ಶಿವನ ಆರಾಧಿಸುವ ಜನರು ಕಾಮಿಕ್ಸ್‌ಗಳನ್ನು ಸ್ವಲ್ಪ

ಅನುಮಾನದಿಂದಲೇ ನೋಡುವಂತಾಯಿತು. ಇಂತಹ ಪರಿಸ್ಥಿತಿಯನ್ನು ಅರಿತು ಭಾರತೀಯ ಕಾಮಿಕ್ಸ್ ಲೋಕವು ಬದಲಾವಣೆಯನ್ನು ಅನಿವಾರ್ಯವಾಗಿ ತಂದುಕೊಂಡಿತು. ಇದಾದ ಮೇಲೆ ಶಿವಲೀಲಾ ಸರಣಿಯು ಮೂಡಿಬಂತು ಎನ್ನಬಹುದಾಗಿದೆ. ಆದರೆ ಮುದ್ರಣದಲ್ಲಿಯೂ, ಪಾತ್ರಚಿತ್ರಣದಲ್ಲಿಯು ವಿಷ್ಣುವಿನ ಪಾತ್ರದಷ್ಟು ಕಾಳಜಿವಹಿಸಿದಂತೆ ಶಿವನ ಕುರಿತ ಕಾಮಿಕ್ಸ್ ಪಾತ್ರಗಳಲ್ಲಿ ಕಾಳಜಿವಹಿಸಿರುವುದು ಕಂಡು ಬರಲಿಲ್ಲ ಅನ್ನುವ ಮಾತು ಕೂಡ ಕೇಳಬಂದಿತು. ಭಾರತೀಯ ಕಾಮಿಕ್ಸ್‌ನ ಅಂದವಾದ ಚಿತ್ರಗಳು ಸ್ಪುರದ್ರೂಪಿ ನಾಯಕನ ಹಾಲುಗೆನ್ನೆಯನ್ನು, ತಿಳಿವರ್ಣವನ್ನು, ಶ್ವೇತವರ್ಣವನ್ನು ಬಿಂಬಿಸುವಂತೆ ಚಿತ್ರಿಸಲಾಗುತಿತ್ತು. ಇದು ಬ್ರಾಹ್ಮಣ ಸಂಸ್ಕೃತಿಯನ್ನು ತೋರುತ್ತದೆಂದು ಕೇರಳದ ಮೂಲದ ಕಪ್ಪು ಜನಾಂಗವು ಪ್ರತಿಭಟಿಸಿತು[೪೬]. ರಾಮ ಮತ್ತು ಕೃಷ್ಣನ ಪಾತ್ರಗಳಿಗೆ ಕಪ್ಪು ಬಣ್ಣದ ಬದಲಾಗಿ ನೀಲಿ ಬಣ್ಣದ ಬಳಕೆಯಾದುದು ಸಹ ಇದಕ್ಕೆ ಪುಷ್ಠಿನೀಡಿದಂತೆ ಕಂಡು ಬಂದಿತು. ಖಳನಾಯಕನ ಪಾತ್ರ ಚಿತ್ರಿಸುವಾಗ ಮುಸಲ್ಮಾನರನ್ನು ಹೋಲುವ ಗಡ್ಡಧಾರಿಗಳನ್ನು ಚಿತ್ರಿಸಲಾಗುತಿತ್ತು. ಇದು ಸಹ ಹಿಂದು ಮುಸಲ್ಮಾನರ ನಡುವೆ ಅಂತರವನ್ನು ತರುವುದು ಎಂಬ ಆತಂಕಗಳನ್ನು ಮುಂದಿರಿಸಿಕೊಂಡು ನೋಡಲಾಯಿತು. ಇದು ಧಾರ್ಮಿಕ ಭಾವನೆಯನ್ನು ಕದಡಲು ಕಾರಣವಾಗಿ ಹಿಂದೂ ಕುಟುಂಬದ ಮಕ್ಕಳಿಗೆ ಮಾತ್ರ ತಲುಪಿತೆ ವಿನಹ ಬೇರೆ ಧರ್ಮದ ಮಕ್ಕಳಿಗೆ ತಲುಪುವಲ್ಲಿ ಮಿತಿಯನ್ನು ಅನುಭವಿಸಿತು. ಕೆಲವು ಸಮಾಜ ವಿರೋಧಿಯಾದ ಆಗಂತುಕ ರಾಕ್ಷಸಪಾತ್ರಗಳ ಸೃಷ್ಟಿಯು ಗುಡ್ಡಗಾಡಿನ ಜನರನ್ನು ಹೋಲುತ್ತಿದ್ದರಿಂದ ದ್ರಾವಿಡ ಮೂಲ ಜನಾಂಗದಿಂದ ಬೆಳೆದುಬಂದವರಿಗೆ ಅವಮಾನವಾಗಿ ಕಾಣಿಸಿಕೊಂಡಿತು. ಇಂತಹವರಿಂದ ತಿರಸ್ಕರಿಸಲ್ಪಟ್ಟು ಅವರ ಮಕ್ಕಳಿಗೆ ತಲುಪದಾಯಿತು. ಕೇವಲ ಬ್ರಾಹ್ಮಣ ಮತ್ತು ಕೆಲವು ಶೈವಕುಟುಂಬಗಳಿಗೆ ಮಾತ್ರ ಕಾಮಿಕ್ಸ್‌ನ ಲಾಭವು ದೊರಕುತ್ತಿತ್ತು. ಇದರಿಂದ ಬಹು ಸಂಖ್ಯಾತರಾಗಿದ್ದ ಸಮುದಾಯದ ಜನರಿಗೆ ಇವುಗಳು ಮರೀಚಿಕೆಯಾಗಿ ಕಾಣಿಸಿಕೊಂಡವು. ಅವರು ಮತ್ತು ಅವರ ಮಕ್ಕಳು ಇವುಗಳಿಂದ ದೂರ ಉಳಿಯುವಂತಾಯಿತು. ಇವೆಲ್ಲವು ಸಮಾಜದ ಮೇಲು ಕೀಳು ವ್ಯವಸ್ಥೆಯನ್ನು ಪರೋಕ್ಷವಾಗಿ ಎತ್ತಿತೋರುವಂತೆ ಕಾಮಿಕ್ಸ್ ಮೂಡಿಬಂದುದರಿಂದ ಬಹು ಜನರನ್ನು ತಲುಪುವಲ್ಲಿ ಸೋತಿತು. ಈ ಸಂದರ್ಭವನ್ನರಿತ ವಿಜ್ಞಾನ ವಿದ್ಯಾರ್ಥಿಯಾಗಿದ್ದ 'ಮಾರ್ಗಿ ಶಾಸ್ತ್ರಿ' ಯವರು ಪ್ರಗತಿವಾದಕ್ಕೆ ಮುನ್ನುಡಿ ಬರೆದು ಭಾರತದ ಬಾಹ್ಯಾಕಾಶ ವಿಜ್ಞಾನಿಯಾದ ಕಲ್ಪನ ಚಾವ್ಲಾರ ಶೀರ್ಷಿಕೆಯಲ್ಲಿ ಕಾಮಿಕ್ಸ್ ರೂಪಿಸಿದರು. ಇದು ಸ್ವಲ್ಪ ಮಟ್ಟಿಗೆ ಜನರ ಮನಸ್ಸಿನಲ್ಲಿ ಸಮಾಧಾನವನ್ನು ತಂದಿತು. ಮಲಯಾಳಂನಲ್ಲೂ ಈ ಪ್ರಯೋಗವನ್ನು ಕಮಲಾ ಚಂದ್ರಕಾಂತರು ನಡೆಸಿದರು.

ಮೈಸೂರಿನ ಸುಬ್ಬರಾವ್ ಶಿಕ್ಷಕವೃತ್ತಿಯಲ್ಲಿದ್ದುಕೊಂಡು ಸಾಮಾಜಿಕ ಮೌಲ್ಯಗಳುಳ್ಳ ಹೊರಗಿನಿಂದ ಬರುವ ಕಾಮಿಕ್ಸ್‌ಗಳನ್ನು ಸಂಗ್ರಹಿಸಿ ಸಂಪಾದಕರಿಗೆ ನೀಡಿ ಸಹಕರಿಸುತ್ತಿದ್ದರು. ಇತಿಹಾಸದ ವಸ್ತುವಾಧಾರಿತವಾದ ಕಾಮಿಕ್ಸ್‌ಗಳು ಹಾಗೂ ಜಾನಪದ ವಸ್ತುವಿಷಯಗಳನ್ನು ಕಾಮಿಕ್ಸ್ ರೂಪದಲ್ಲಿ ಹೊರತರುವಲ್ಲಿ ಮಹತ್ತ್ವವಹಿಸಿದರು. ಇವರ ಈ ರೀತಿಯ ಕೊಡುಗೆಯು ಕಾಮಿಕ್ಸ್‌ನ ಬೆಳವಣಿಗೆಗೆ

[೪೬] 'ಅಂಕಲ್ ಪೈ ಗೆ ವಿದಾಯ ಹೇಳುತ್ತಾ.' ಅಂತರ್ಜಾಲ ಲೇಖನ. ಲೇ: ಆನಂದ ಪಾಟೀಲ. ೨೦೧೨

ಮಹತ್ತರದ ಕೊಡುಗೆಯಾಯಿತು. ೧೯೭೮ರಲ್ಲಿ ದೆಹಲಿಯಲ್ಲಿ ಶಾಲಾ ಮಕ್ಕಳಿಗಾಗಿ ಕಾಮಿಕ್ಸ್ ಕುರಿತಾದ ವಿಚಾರ ಸಂಕಿರಣ ನಡೆಸುವಲ್ಲಿ ಅವರ ಪಾತ್ರ ಹಿರಿಯದಾಯಿತು. ಈ ಕಾರ್ಯದಿಂದ ಶೈಕ್ಷಣಿವಾಗಿ ಮಕ್ಕಳಲ್ಲಿ ಗಣನೀಯವಾಗಿ ಬದಲಾವಣೆ ಕಂಡುಬಂದಿತು. ಇಲ್ಲಿಯ ವರೆಗಿನ ಕಾಮಿಕ್ಸ್‌ಗಳ ಕಲ್ಪನೆಯು ಬದಲಾದುದ್ದು ಲೂಯಿ ಫರ್ನಾಂಡಿಸ್‌ರು ತಮ್ಮ ಸಂಪಾದಕತ್ವದಲ್ಲಿ ಪಂಚತಂತ್ರ, ಜಾತಕಕತೆಗಳನ್ನು ಆಧರಿಸಿ ಕಾಮಿಕ್ಸ್ ರೂಪಿಸಿದ ಮೇಲೆ. ಗೋವಾದ ಕ್ರೈಸ್ತರಾದ ಇವರಿಗೆ ಭಾರತದ ಜಾನಪದದ ಬಗೆಗೆ ಆಸಕ್ತಿ ಇದ್ದರೂ ಭಾಷೆಯ ಹಿಡಿತವು, ಜನಪದದ ಶಬ್ದಗಳು ಅಷ್ಟಾಗಿ ಸಿದ್ಧಿಸದ ಕಾರಣದಿಂದಾಗಿ ಬರಹ ಕಡಿಮೆ ಮಾಡಿ, ಚಿತ್ರಗಳೇ ಮಾತನಾಡುವಂತೆ ಮಾಡಿ ಚಿತ್ರಕ್ಕೆ ಹೆಚ್ಚು ಒತ್ತು ನೀಡಿದರು. ಅಲ್ಲಿಯವರೆಗಿದ್ದ ಹೇರಳವಾದ ಬರಹ ರೂಪದ ಕಾಮಿಕ್ಸ್‌ಗಳು ಕ್ರಮೇಣ ಕಡಿಮೆಯಾಯಿತು. ಈ ಬದಲಾವಣೆಯು ಮಕ್ಕಳಿಗೆ ಓದಿನ ಹೊರೆಯನ್ನು ತಗ್ಗಿಸಿ, ಚಿತ್ರಗಳು ಹೆಚ್ಚು ಇಷ್ಟವಾದವು. ಇದರಿಂದಾಗಿ ಸುಬ್ಬರಾವ್ ಮತ್ತು ಕಮಲಾ ಚಂದ್ರಕಾಂತರ ಟಿಂಕಲ್ ಕಾಮಿಕ್ಸ್ ಕಳೆಗುಂದಿತು ಎನ್ನಬಹುದಾಗಿದೆ. ಇದು ದೇಸಿಯ ಮೂಲದವರ ಮೇಲೆ ಹೊಡೆತವನ್ನು ಒಡ್ಡಿತು. ಈ ಸವಾಲಿನಿಂದ ಹೊರಬರಲು ಹೊಸತನದ ಹುಡುಕಾಟದೊಂದಿಗೆ ನಗರದ ಮಕ್ಕಳ ಓದಿನ ಅಭಿರುಚಿಗೆ ತಕ್ಕಂತೆ ಟಿಂಕಲ್ ಸರಣಿ ಬದಲಾವಣೆ ಕಂಡುಕೊಂಡು ತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಮುಂದುವರಿಯಬೇಕಾದ ಅನಿವಾರ್ಯತೆ ನಿರ್ಮಾಣವಾಯಿತು. ಧರ್ಮದ ವಿಚಾರಗಳಿಗೆ ಸೀಮಿತವಾಗಿದ್ದ ವಸ್ತು ವಿನ್ಯಾಸವು ವಿಚಾರದ ಹುಡುಕಾಟದಲ್ಲಿ ಹೊಸತನವನ್ನು ಅನುಭವಿಸಿತು. ಈ ಬದಲಾವಣೆಯಿಂದಾಗಿ ಧರ್ಮನಿರಪೇಕ್ಷತೆಯಿಂದ ವಿಚಾರಧಾರೆಯೆಡೆಗೆ ಕಾಮಿಕ್ಸ್ ತನ್ನ ವಸ್ತುವಿಸ್ತಾರವನ್ನು ಹರಡಿಕೊಂಡು ದೇಸಿಯತೆಯ ಹಾಗೂ ವಾಸ್ತವ ಬದುಕಿನ ಕಡೆಗೆ ಒಲುವು ತೋರಿತು. ಭಾರತೀಯ ಕಾಮಿಕ್ಸ್ ಮಹರಾಷ್ಟ್ರ, ಕರ್ನಾಟಕ, ಕೊಂಕಣಿ ರಾಜ್ಯಗಳಲ್ಲಿ ರಾಷ್ಟ್ರೀಯತೆಯ ವಸ್ತುವಿರಿಸಿಕೊಂಡು ಬಂದಂತೆ ಪಂಜಾಬಿ, ಮಲಯಾಳ, ತಮಿಳನಲ್ಲಿ ಪ್ರಾದೇಶಿಕತೆಯೇ ವಸ್ತುವಾಗಿ ಬೆಳೆಯಿತು. ಮುಂದೆ ಇದರ ವ್ಯಾಪ್ತಿಯು ವಿಸ್ತಾರವಾಗುತ್ತಾ ಹೋರಾಟ, ಕದನ, ಅಹಿಂಸೆ, ಅನ್ಯಾಯ, ಕ್ರೌರ್ಯ ಮುಂತಾದ ಸಾಮಾಜಿಕ ವಿಚಾರಗಳೆಡೆಗೆ ತುಡಿದು ಮಕ್ಕಳ ಮುಂದೆ ಅನಾವರಣಗೊಂಡವು. ಕಾಮಿಕ್ಸ್ ಭಾರತದ ಮಕ್ಕಳಿಗೆ ರಾಷ್ಟ್ರೀಯತೆ ಮೂಡಿಸುವ ಸಾಧನವೂ ಆಗಿ ಬೆಳವಣಿಗೆ ಕಂಡಿತು. ಸ್ವಾತಂತ್ರ್ಯದ ಸಂದರ್ಭದಲ್ಲಿ ಬ್ರಿಟೀಷರ ಬಿಳಿಯ ತ್ವಚೆಯನ್ನು ಹಂಗಿಸುವ, ದೇಸಿಯತೆಯನ್ನು ಬಿಂಬಿಸುವ ಕಾಮಿಕ್ಸ್‌ಗಳು ಕಾಣಿಸಿಕೊಂಡು ಪರೋಕ್ಷವಾಗಿ ಸ್ವಾತಂತ್ರ್ಯ ಚಳುವಳಿಗೂ ಸಹಕರಿಸಿರುವುದನ್ನು ಕಾಣುತ್ತೇವೆ. ಆದರೆ ಇವು ಹಿರಿಯರಿಗೆ ಅರ್ಥವಾದಂತೆ ಮಕ್ಕಳ ಮುಂದೆ ಕಾಣಿಸಿಕೊಳ್ಳದೆ ಕೇವಲ ಕಾಮಿಕ್ಸ್ ಸ್ವರೂಪದಲ್ಲಿ ಮಕ್ಕಳು ಆಸ್ವಾದಿಸಲು ಸಿಗದಿರುವುದು ವಿಷಾದವೇ ಎನ್ನಬಹುದು.

ಭಾರತೀಯ ಕಾಮಿಕ್ಸ್‌ಗಳು ನವ ಆವಿಷ್ಕಾರಗಳೊಂದಿಗೆ ವಿಶೇಷವಾದ ಗ್ರಾಫಿಕ್ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಬೆಳೆದು ಬಂದವು. ಭಾರತೀಯ ಸಂಸ್ಕೃತಿಯನ್ನು ಆಧರಿಸಿ ಭಾರತೀಯ ಇತರ ಭಾಷೆಗಳಲ್ಲಿಯೂ, ಇಂಗ್ಲಿಷಿನಲ್ಲಿಯು ಪ್ರಕಟಗೊಂಡವು. ಭಾರತದಲ್ಲಿ ಇಂತಹ ಪ್ರಯತ್ನಗಳಿಗೆ ನೂರಾರು ವರ್ಷದ ಹಿನ್ನೆಲೆಯಿದೆ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಚಿತ್ರಕಥಾ ಸಣಿಯನ್ನು ಭಾರತದಲ್ಲಿ

ಓದುಗ ಪರಂಪರೆಗೂ ಬರವಿಲ್ಲದಂತೆ ಮೂಡಿಬಂದಿರುವುದು ಅದರ ಮಹತ್ತ್ವವನ್ನು ಹೇಳುತ್ತದೆ. ಮೇಲಿನ ಅಂಶಗಳೆಲ್ಲವೂ ಸಾಮಾನ್ಯವಾಗಿ ಕಂಡುಕೊಳ್ಳುವ ತಾತ್ವಿಕತೆಯು ಇದು ಧಾರ್ಮಿಕ ಪರಂಪರೆಯನ್ನು ಅವಲಂಭಿಸಿದ್ದು, ಇದನ್ನು ಬೆಳೆಸಿದ್ದು ಎನ್ನಬಹುದು. ದೈವಲೀಲೆಯ ಮಹತ್ತ್ವವನ್ನು ಸಾರಲು ಬಹಳ ಹಿಂದೆಯೇ ಚಿತ್ರಕಲಾವಿದರು ಈ ವಿಧಾನವನ್ನು ಅನುಸರಿಸಿದ್ದರು ಎನ್ನಬಹುದು. ಜನಪದದ ಕತೆಗಳು, ನೀತಿಕತೆಗಳು, ಪಂಚತಂತ್ರಕತೆಗಳು ಬಳಕೆಯಾದುದು ಸಹ ಇದೇ ಕಾರಣಕ್ಕಾಗಿಯೆ. ಕಾಮಿಕ್ಸ್ ಪ್ರಕಟಣೆಯು ಉತ್ತುಂಗವನ್ನು ಕಂಡದ್ದು ೧೯೮೦ ರಿಂದ ೧೯೯೦ರ ದಶಕದಲ್ಲಿ. ಇವುಗಳ ಕಥಾಸರಣಿಯ ಮುದ್ರಣವು ಐದು ಲಕ್ಷದ ಗಡಿಯನ್ನು ತಲುಪಿತ್ತು. ಈಗ ಇವುಗಳ ಸಂಖ್ಯೆಯು ಕ್ಷೀಣಿಸಿದೆ ಎನ್ನಬಹುದು. ಕೇವಲ ಐವತ್ತು ಸಾವಿರದಷ್ಟು ಮಾತ್ರ ಪ್ರಸಾರದಲ್ಲಿರುವ ಈ ಸರಣಿಗಳು ಮಕ್ಕಳ ಕಾಮಿಕ್ಸ್ ಕ್ಷೇತ್ರಕ್ಕೆ ಆತಂಕವನ್ನು ಸಹ ಉಂಟುಮಾಡಿವೆ. ಆಧುನಿಕ ಯುಗದಲ್ಲಿ ಕಾಮಿಕ್ಸ್ ಅವಶ್ಯಕತೆ ಕುಂಟಿತವಾಗಲು ಅದರ ಹಿಂದಿರುವ ಕಾರಣಗಳು ಅನೇಕ ಇವೆ. ದೂರದರ್ಶನದ ಪ್ರಭಾವವು ಸಹ ಇದರ ಕುಸಿತಕ್ಕೆ ಕಾರಣವಾಗಿದೆ. ಇದರಲ್ಲಿ ಮೂಡಿಬರುವ ಮಕ್ಕಳ ಚಾನಲ್‌ಗಳು ವೈವಿಧ್ಯತೆಯ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಮಕ್ಕಳನ್ನು ಬಹು ರಂಜಿತವಾಗಿ, ಕಣ್ಣಿಗೆ ಕಟ್ಟುವಂತೆ ದೃಶ್ಯಗಳನ್ನು ರೂಪಿಸಿ ಸೆಳೆಯುತ್ತಿರುವುದು ಅವರ ಓದಿನ ಆಸಕ್ತಿಯನ್ನು ಕಸಿಯುತ್ತಿವೆ. ಇದರಿಂದಾಗಿ ಕಾಮಿಕ್ಸ್ ಪುಸ್ತಕ ಕೊಳ್ಳುವವರ ಸಂಖ್ಯೆಯು ಇಳಮುಖವಾಗಿದೆ. ಆಧುನಿಕ ಜೀವನಶೈಲಿಯಲ್ಲಿ ಮೊಬೈಲ್ ತಂತ್ರಜ್ಞಾನವು ಪರಿಣಾಮಕಾರಿಯಾಗಿದೆ. ಇಲ್ಲಿ ಮೂಡಿಬರುವ ವಿಡಿಯೋ ಗೇಮ್‌ಗಳು ವಿಶೇಷವಾಗಿ ಮಕ್ಕಳ ಅವಶ್ಯಕತೆಗಳಗನುಸಾರವಾಗಿ ರೂಪಿತಗೊಂಡಿದ್ದು ಅವರ ಆಸಕ್ತಿಯನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿವೆ. ಇಲ್ಲಿನ ಸೆಳೆತವು ಮಕ್ಕಳನ್ನು ಕಾಮಿಕ್ಸ್‌ನಿಂದ ದೂರಾಗುವಂತೆ ಮಾಡಿವೆ. ಆಧುನಿಕ ಶಿಕ್ಷಣ ವ್ಯವಸ್ಥೆಯು ಮಕ್ಕಳನ್ನು ಭವಿಷ್ಯದ ಉದ್ಯೋಗಿಯನ್ನಾಗಿ ರೂಪಿಸುವ ಆಶಯವನ್ನು ಹೊಂದಿ ಮಕ್ಕಳನ್ನು ನಿರಂತರವಾಗಿ ಪಠ್ಯದ ಓದಿಗೆ ಹಚ್ಚಿರುವುದು, ಪೋಷಕರು ಸಹ ಇಂತಹ ಸೆಳೆತಕ್ಕೆ ಸಿಲುಕಿರುವುದು ಮಕ್ಕಳ ಕಾಮಿಕ್ಸ್‌ನ ಒಲವು ಕಡಿಮೆಯಾಗಲು ಕಾರಣವಾಗಿದೆ. ಸಂಸ್ಕೃತಿಯನ್ನು ಗ್ರಹಿಸುವ ಆಯಾಮಗಳು ಸಹ ಬದಲಾಗಿ ಜ್ಞಾನ ಸಂಪಾದನೆಯ ಇಂಗಿತದಿಂದಲೂ ಮಕ್ಕಳು ಕಾಮಿಕ್ಸ್ ಪ್ರೇಮದಿಂದ ಹೊರಬಂದಿರುವುದಿದೆ. ಇಷ್ಟೆಲ್ಲಾ ಬೆಳವಣಿಗೆಯ ನಡುವೆಯು ಭಾರತೀಯರಲ್ಲಿ ಕಾಮಿಕ್ಸ್‌ಗಳು ತಮ್ಮ ಅಸ್ತಿತ್ವನ್ನು ಉಳಿಸಿಕೊಂಡು ಬಂದಿರುವುದು ನಮ್ಮ ಮುಂದೆ ದೊಡ್ಡ ಸವಾಲಾಗಿ ಕಾಣಿಸಿಕೊಂಡರೂ ಅದು ನಿರಂತರ ಪ್ರಯೋಗಳಿಗೆ ತನ್ನನ್ನು ತೆರೆದುಕೊಳ್ಳುತ್ತಿದೆ.

## ೭.೪ ಪ್ರಯೋಗಗಳು

ಕಳೆದ ಮೂರು ದಶಕಗಳಿಂದ ಡೈಮಂಡ್ ಕಾಮಿಕ್ಸ್, ರಾಜ ಕಾಮಿಕ್ಸ್, ಟಿಂಕಲ್, ಅಮರ ಚಿತ್ರಕಥಾ ಮುಂತಾದ ಪ್ರಕಾಶನಗಳಿಂದ ಚಿತ್ರಕತಾ ಸರಣಿಗಳು ವಿವಿಧ ಭಾಷೆಗಳಲ್ಲಿ ಇಡೀ ದೇಶಾದ್ಯಂತ ಪ್ರಕಟಗೊಂಡು ಮಾರಾಟವನ್ನು ಕಾಣುತ್ತಿವೆ. ಭಾರತೀಯ ಪರಂಪರೆಯ ಪ್ರಮುಖ ಕಾಮಿಕ್ಸ್ ರೂಪಕರೆಂದರೆ ಅಬಿದ್ ಸುರತಿ, ಅಂಕಲ್ ಪೈ, ಕಾರ್ಟೂನಿಸ್ಟ್ ಪ್ರಣ್‌ಕುಮಾರ್ ಶರ್ಮಾರು ಸೃಜನಶೀಲ

ಕಾಮಿಕ್ಸ್‌ಗಳನ್ನು ರೂಪಿಸಿದವರಾಗಿದ್ದಾರೆ. ಇವರು ಸೃಜಿಸಿದ ಪ್ರಮುಖ ಜನಪ್ರಿಯವಾದ ಪಾತ್ರಗಳೆಂದರೆ ಚಾಚಾ ಚೌಧರಿ, ಬಹದ್ದೂರು, ಪತ್ತೇದಾರಿ ಮೂಚ್ ವಾಲ, ನಾಗರಾಜ, ಸುಸರ್ ಕಮಾಂಡೋ, ಧ್ರುವ, ದೋಗ, ಸುಪ್ಪಂದಿ, ಹಾಗೂ ಶಿಕಾರಿ ಶಂಭು ಮುಂತಾದವುಗಳಾಗಿವೆ.

ಪ್ರಕಟಣೆಯ ಇತಿಹಾಸವನ್ನು ನೋಡುವುದಾದರೆ ಭಾರತೀಯ ಚಿತ್ರಕಥಾ ಸರಣಿಯು ಆರಂಭವಾದುದು ೧೯೬೦ರ ದಶಕದಲ್ಲಿ ಎನ್ನಬಹುದು. 'ದಿ ಟೈಮ್ಸ್ ಆಫ್ ಇಂಡಿಯಾ' ದವರು ಪ್ರಥಮ ಬಾರಿಗೆ 'ಇಂದ್ರಜಾಲ' ಹೆಸರಿನ ಚಿತ್ರಕಥಾ ಸರಣಿಯನ್ನು ಆರಂಭಿಸಿದರು. ಇದು ಭಾರತದ ಕಾಮಿಕ್ಸ್ ಲೋಕದ ಆರಂಭವು ಆಯಿತು. ಇದರ ಪ್ರಚಾರವು ವಿದೇಶಿಯರನ್ನು ಮೀರಿ ದೇಶದಾಚೆಗೂ ಹಬ್ಬಿತು. ಈ ಆರಂಭದಲ್ಲಿ ಶ್ರೀಮಂತ ಮನೆತನದ ಮಕ್ಕಳನ್ನು ಅತೀ ಹೆಚ್ಚು ತಲುಪಿತು. ೧೯೮೦ ರ ದಶಕದ ನಂತರ ವೃತ್ತಪತ್ರಿಕೆಗಳು, ಮಾಸಪತ್ರಿಕೆಗಳು, ವಾರಪತ್ರಿಕೆಗಳು ಇದನ್ನು ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿದ ಮೇಲೆ ಮಧ್ಯಮ ವರ್ಗದ ಮಕ್ಕಳಿಗೂ ತಲುಪುವಂತಾಯಿತು. ಕಾಮಿಕ್ಸ್‌ಗಳು ಮೂಡಿಬಂದ ಕಾಲದ ಆಧಾರದ ಮೇಲೆ ಅವುಗಳನ್ನು ನಾಲ್ಕು ಹಂತಗಳಲ್ಲಿ ವರ್ಗೀಕರಿಸಿ ನೋಡಬಹುದು.

**ಮೊದಲನೆಯ ಹಂತ: (೧೯೫೦ರ ದಶಕ)**

ಈ ಹಂತದಲ್ಲಿ ಮೂಡಿಬಂದ ಕಾಮಿಕ್ಸ್ ಸರಣಿಗಳು ಆರಂಭಿಕವಾಗಿ ಗಮನಸೆಳೆದು ಕಾಮಿಕ್ಸ್‌ಗಳಿಗೆ ಅಡಿಪಾಯವನ್ನು ಹಾಕಿದವು. ಅವುಗಳೆಂದರೆ ಫ್ಯಾಂಟಮ್, ಮ್ಯಾಂಡ್ರೇಕ್, ಫ್ಲಾಶ್ ಗಾರ್ಡನ್, ರಿಪ್ ಕಿರ್ಬೈ ಪ್ರಮುಖವಾದವು. ಇವು ಭಾರತೀಯ ಭಾಷೆಗಳಿಗೆ ಅನುವಾದಗೊಂಡು ಅಪಾರ ಹೆಸರನ್ನು ಗಳಿಸಿದವು.

**ಎರಡನೆಯ ಹಂತ: (೧೯೬೦ರ ದಶಕ)**

ಈ ಹಂತದಲ್ಲಿ ಮೂಡಿಬಂದ ಕಾಮಿಕ್ಸ್‌ಗಳೆಂದರೆ ಅಮರ ಚಿತ್ರಕಥಾ, ಸ್ಪೈಡರ್ ಮ್ಯಾನ್, ಭಾರತೀಯ ಸ್ಪೈಡರ್‌ಮ್ಯಾನ್ ಮುಂತಾದವು. ಈ ಹಂತದಲ್ಲಿ ಕಾಮಿಕ್ಸ್ ಭಾರತೀಯರಲ್ಲಿ ವೈವಿಧ್ಯತೆಯನ್ನು ಅನುಭವಿಸುವಂತೆಯು ಧರ್ಮದ ಸರಕನ್ನು ತಲುಪಿಸುವ ಸಾಧನವಾಗಿಯು ಕಾಣಿಸಿಕೊಂಡು ಜನಪ್ರಿಯತೆಯನ್ನು ಪಡೆಯಿತು.

**ಮೂರನೆಯ ಹಂತ: (೧೯೭೦ರ ದಶಕ ಮತ್ತು ೧೯೮೦)**

ಪಾಶ್ಚಿಮಾತ್ಯರ ಸೃಜನಾತ್ಮಕತೆಯನ್ನು ಅನುಸರಿಸಿ ಬಂದ ಕಾಮಿಕ್ಸ್‌ಗಳನ್ನು ಈ ಹಂತದಲ್ಲಿ ಕಾಣಬಹುದು. ಹಾಗೆಯೇ ಭಾರತೀಯರ ಪುರಾಣದ ಕತೆಗಳು, ಅವುಗಳ ಪಾತ್ರಗಳು ಸರಣಿಯಾಗಿ ಮೂಡಿಬಂದು ಭಾರತೀಯರ ಪರಂಪರೆಯನ್ನು ಸಂಸ್ಕೃತಿಯನ್ನು ಜನರಿಗೆ ತಲುಪಿಸಿ ಬಲವಾಗಿ ಕಾಮಿಕ್ಸ್‌ಗಳನ್ನು ನೆಲೆನಿಲ್ಲುವಂತೆ ಮಾಡಿದ್ದು, ಅಪಾರ ಓದುಗರನ್ನು ಸಂಪಾದಿಸಿಕೊಂಡಿದ್ದು ಈ

ಹಂತದಲ್ಲಿಯೇ ಎನ್ನಬಹುದಾಗಿದೆ. ರಾಮಾಯಣ, ಮಹಾಭಾರತ, ಕೃಷ್ಣಲೀಲೆ, ರಾಮಲೀಲೆ, ತೆನಾಲಿರಾಮ, ಹನುಮಾನ್, ಅಕ್ಬರ್ ಬೀರಬಲ್ಲ, ಭೀಮನ ಸರಣಿಗಳು ಮೂಡಿಬಂದು ಜನಮನ್ನಣೆಗಳಿಸಿಕೊಂಡವು. ಸೃಜನಾತ್ಮಕತೆ ಮತ್ತು ಸ್ವಂತಿಕೆಯಿಂದ ಮಕ್ಕಳಿಗೆ ಹತ್ತಿರವಾಗಿ ನಿಂತವು. ಸೂಪರ್ ಹೀರೋ, ಬತೂಲ್ ದಿ ಗ್ರೇಟ್ ಸರಣಿಗಳು ನಾರಾಯಣ್ ದೇವನಾಥ್‌ರ ಸೃಜನಶೀಲತೆಯಿಂದ ಮೂಡಿಬಂದು ಜನಮನದಲ್ಲಿ ಉಳಿಯುವಂತಾದವು.

## ನಾಲ್ಕನೆಯ ಹಂತ: (೧೯೮೦ರ ನಂತರ)

ಈ ಹಂತವು ಕಾಮಿಕ್ಸ್‌ನ ದೃಷ್ಟಿಯಲ್ಲಿ ಅಪಾರ ಓದುಗರನ್ನು ಸಂಪಾದಿಸಿಕೊಂಡ ಕಾಲವಾಗಿ ನಿಲ್ಲಬಲ್ಲದ್ದಾಗಿದೆ. ಸುಮಾರು ೫.೫ ಮಿಲಿಯನ್ ಸಂಚಿಕೆಗಳು ಮಾರಾಟಗೊಂಡು ಭಾರತೀಯ ಕಾಮಿಕ್ಸ್ ಲೋಕದಲ್ಲಿ ದಾಖಲೆ ನಿರ್ಮಿಸಿರುವುದನ್ನು ಕಾಣಬಹುದು. ಇದರಿಂದ ಪ್ರೇರಣೆಗೊಂಡು ನೂರಾರು ಸಂಸ್ಥೆಗಳು ಕಾಮಿಕ್ಸ್‌ಗಳನ್ನು ತಮ್ಮ ಬಂಡವಾಳ ಮಾಡಿಕೊಂಡು ಮುದ್ರಿಸಲು ಆರಂಭಿಸಿದವು. ವರ್ಜಿಲ್ ಕಾಮಿಕ್ಸ್, ಫೆನಿಲ್ ಕಾಮಿಕ್ಸ್, ಗ್ರೀನ್ ಗೋಲ್ಡ್, ಜೂನಿಯರ್ ಡೈಮಾಂಡ್ ಮುಂತಾದ ಪ್ರಕಾಶನ ಸಂಸ್ಥೆಗಳು ಮುತುವರ್ಜಿಯಿಂದ ಮುಂದೆ ಬಂದವು.

ಆದರೆ ಡಿಜಿಟಲ್ ತಂತ್ರಜ್ಞಾನದಿಂದ ಕೂಡಿದ ಕಾಮಿಕ್ಸ್‌ಗಳು ರೂಪಗೊಂಡು ದೂರದರ್ಶನದಲ್ಲಿ ಪ್ರಸಾರವಾದ ಮೇಲೆ ಇವು ಮರೆಯಾದವು.[೪೭] ವೆಬ್ ಕಾಮಿಕ್ಸ್‌ಗಳು ಇಪ್ಪತ್ತೊಂದನೆಯ ಶತಮಾನದ ಆರಂಭದಲ್ಲಿ ಜನಪ್ರಿಯವಾದವು. ಇದು ಉಚಿತವಾಗಿ ತಲುಪುವ ಸಾಧ್ಯತೆಗಳನ್ನು ವಿಸ್ತರಿಸಿಕೊಂಡ ಮೇಲೆ ಮತ್ತಷ್ಟು ಜನಪ್ರಿಯತೆಯನ್ನು ಗಳಿಸಿಕೊಂಡಿತು. ಇಂಟರ್ ನೆಟ್ ಸೌಲಭ್ಯವಿದ್ದರೆ ಸಾಕು ಸಾವಿರಾರು ಕತೆಗಳು ತೆರೆದುಕೊಳ್ಳುವ ವೆಬ್ ಪುಟಗಳು ಕಾಣಿಸಿಕೊಂಡು ಕಾಮಿಕ್ಸ್ ಲೋಕವು ವಿಸ್ತಾರವನ್ನು ಪಡೆಯಿತು. ಇಂತಹ ಪ್ರಯೋಗಗಳು ಕನ್ನಡದಲ್ಲಿ ತೀರ ವಿರಳವಾಗಿವೆ. ಆದರೆ ಸಾಮಾಜಿಕ ಜಾಗೃತಿಗಾಗಿ, ಸರ್ಕಾರಿ ಕಾರ್ಯಕ್ರಮಗಳ ಪ್ರಕಟಣೆಗಾಗಿ, ಜಾಹಿರಾತಿಗಾಗಿ, ರಾಜಕೀಯ ಸಂಘಟನೆಗಳ, ವಿಶೇಷ ಪ್ರಕಟಣೆಗಳ ಸಂದರ್ಭದಲ್ಲಿ, ಹಾಸ್ಯ ಮಿಶ್ರಿತ ನಿರೂಪಣೆಗಾಗಿ, ಹೆಣ್ಣು ಗಂಡು, ಗಂಡ ಹೆಂಡತಿಯರ ಸಂಬಂಧದ ವ್ಯಂಗ್ಯ ನಿರೂಪಣೆಯ ಸಲುವಾಗಿ ಕಾಮಿಕ್ಸ್‌ಗಳು ಬಳಕೆಯಾಗುತ್ತಿರುವುದನ್ನು ಕಾಣುತ್ತೇವೆ. ಇವು ವೃತ್ತಪತ್ರಿಕೆಗಳು, ಮಾಸಪತ್ರಿಕೆಗಳು, ದೃಶ್ಯಮಾಧ್ಯಮಗಳಲ್ಲಿ ಕೆಲವು ಉದ್ದೇಶಗಳಿಗೆ ಮಾತ್ರ ಸೀಮಿತವಾಗಿ ಬಳಕೆಯಾಗುತ್ತಿವೆ.

ಭಾರತವು ಫೆಬ್ರವರಿ ೨೦೧೧ ರಲ್ಲಿ ಪ್ರಪ್ರಥಮ ಕಾಮಿಕ್ಸ್ ಮೇಳವನ್ನು ಆಯೋಜಿಸಿತ್ತು. ೨೦೧೨ರ ಅಂಕಿ ಅಂಶಗಳ ಪ್ರಕಾರ ಭಾರತದ ಕಾಮಿಕ್ಸ್ ಇಂಡಸ್ಟ್ರಿಯು ಸುಮಾರು ಒಂದು ನೂರು ಮಿಲಿಯನ್ ಡಾಲರ್ ಮೊತ್ತದ ಬಂಡವಾಳವನ್ನು ಈ ಕ್ಷೇತ್ರದಲ್ಲಿ ಹೊಂದಿತ್ತು ಎನ್ನಬಹುದಾಗಿದೆ. ಭಾರತದಲ್ಲಿ ಜನಮನ್ನಣೆಗಳಿಸಿದ 'ಮಂಗ ಹಾಗೂ ಅನಿಮಿ' ಇವು ಜಪಾನ್ ಮಂಗ ಕಥಾಸರಣಿಯಾಗಿ

---

[೪೭] 'Comics publication History' ಕೃಪೆ: ಅಂತರ್ಜಾಲ ಪತ್ರಿಕೆ. ಸಂಗ್ರಹ: ಆನಂದ ಪಾಟೀಲ.

ಪ್ರಭಾವಿತಗೊಂಡು ಮರುನಿರ್ಮಾಣದೊಂದಿಗೆ ಅನೇಕ ಸಂಚಿಕೆಗಳಾಗಿ ಮೂಡಿಬಂದವು. ಭಾರತೀಯ ಮೂಲದ ಹಿಂದೂ ಪುರಾಣಗಳು ಹಿಂದಿನಿಂದಲೂ ಸಾಕಷ್ಟು ಮೂಡಿಬಂದಿರುವಂತೆಯೆ ಈಗಲೂ ಮುಂದುವರೆದಿವೆ. ಇಂದು ಇವು ಸಿಂಗಾಪೂರ್, ಮಲೇಷ್ಯಾ, ಯುರೋಪಿನಲ್ಲಿಯು ಬಲು ಬೇಡಿಕೆಯೊಂದಿಗೆ ಪ್ರಕಟಗೊಳ್ಳುತ್ತಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಪ್ರಮುಖ ಭಾರತೀಯ ಪ್ರಕಟಣೆಗಳು ಮತ್ತು ಪ್ರಕಾಶಕರು:

ಇಂಡಿಯನ್ ಕಾಮಿಕ್ಸ್

- ಅಮರ ಚಿತ್ರಕಥಾ, ಚಂಪಕ, ಚಂದಮಾಮ – ಇಂಡಿಯಾ ಬುಕ್ ಹೌಸ್
- ಬತೂಲ್ ದಿ ಗ್ರೇಟ್ – ನಾರಾಯಣ್ ದೇವನಾಥ್
- ಚಾಚಾ ಚೌಧರಿ – ಪ್ರಾಣ್, ಡೈಮಾಂಡ್ ಕಾಮಿಕ್ಸ್
- ಪತ್ತೇಧಾರಿ ಮೂಚ್ಛ್ ವಾಲ್ – ಅಜಿತ್ ನಿನನ್
- ಇಂದ್ರಜಾಲ ಕಾಮಿಕ್ಸ್ – ದಿ ಟೈಮ್ಸ್ ಆಫ್ ಇಂಡಿಯಾ
- ಕೃಷ್ಣ – ಇಂಡಿಯಾ ಬುಕ್ ಹೌಸ್
- ಮಹಾಭಾರತ _ ಇಂಡಿಯಾ ಬುಕ್ ಹೌಸ್
- ರಾಮಾಯಣ _ ಇಂಡಿಯಾ ಬುಕ್ ಹೌಸ್
- ಸ್ಪೈಡರ್ ಮ್ಯಾನ್ (ಇಂಡಿಯಾ) _ ಗೌತಮ್ ಎಂಟರ್ಟೈನ್‌ಮೆಂಟ್
- ಟಿಂಕಲ್ _ ಇಂಡಿಯಾ ಬುಕ್ ಹೌಸ್

ರಾಜ್ ಕಾಮಿಕ್ಸ್

- ಬಂಕೆಲಾಲ್, ಬೆರಿಯಾ, ಬೋಕಾಲ್, ದೋಗಾ, ನಾಗರಾಜ್, ಫರ್ಮಾನು, ಶಕ್ತಿ, ಸೂಪರ್ ಕಮಾಂಡೋ, ಧ್ರುವ.

- ಟಿ.ಬಿ.ಎಸ್. ಪ್ಲಾನೆಟ್ ಕಾಮಿಕ್ಸ್
- ವೇದ, ವರುಣ್, ಕರ್ಮ, ಯುಗ್.

- ವರ್ಜಿನ್ ಕಾಮಿಕ್ಸ್
- ಶಕ್ತಿ ಲೈನ್

## ೭.೬ ಕೆಲವು ಕಾಮಿಕ್ಸ್ ಮಾದರಿಗಳು

ವಿವಿಧ ಭಾಷೆಯಲ್ಲಿ, ವಿಶೇಷವಾಗಿ ಹಿಂದಿ, ಇಂಗ್ಲೀಷಿನಿಂದ ಬಂದಿರುವ ಕೆಲವು ಕಾಮಿಕ್ಸ್ ಗಳನ್ನು ಚಿತ್ರ ಸಹಿತ ಇಲ್ಲಿ ಗಮನಿಸುವುದು ಅಗತ್ಯವಾಗಿದೆ.

1. Everybody loves kelas, especially when they are 'labhprad'.




2. When Pinki landed herself in a bit of a predicament with her... pussy cat.



3. When Dracula showed how skeletons make the best employees. It's cost efficient too.




4. Their puns are their greatest strength.



5. Where else would you find a whole comic book dedicated to taiji's dosa?




6. They would really get the 80s down to the T.



7. When Guru Gorakhnath saved Superman, Batman and Spiderman's asses.




8. They showed the coolest way to propose, that is if you make it without reaking your bones.



9. Back when the story didn't have product placements, the product placements had shoddy stories.




10. The woman who was also a child, who was also a woman who was also a child?



11. When Swami Vivekananda had to deal with the N word.




12. How much sugar do you need to put to make your sharbat jaalim?



14. And then there was of course...



17. Meet Chipkanand. His arch nemesis, Fevicol.





# चिपकानन्द और झुमरू

18. Even Gulzar wrote comics - Supremo based on Amitabh Bachchan could just be the first metrosexual hero in the world!

The Star event you have been waiting for!

AMITABH BACHCHAN as

SUPREMO

STAR Comics presents Amitabh Bachchan in a new dimension Supremo-the bold, daring, courageous Crime-Fighter. And the master of a beautiful, paradisical island in the Ocean. Far away from the hustle and bustle of the world.

But even Paradise is not free from evil. Many a thief, crook and smuggler seeks to make this island his base and hide-away. But keeping a sharp vigil over the island are Supremo's allies.

Vijay, the prankish 'henchboy' who is always chided by Amitabh for his delightful broken English. He shares a teasing rapport with Amitabh and strives to imitate him in every detail. Sonali, Supremo's pet Golden Whale who guards the Ocean around the island. And Shaheen, the Swift Falcon. At the first sign of trouble brewing on the island, Shaheen unerringly wings its way to Amitabh Bachchan, wherever he is. Amitabh Bachchan then becomes Supremo and zooms away to fight these island invaders.

STAR COMICS presents Amitabh Bachchan as Supremo in "The Lost Idol".

Supremo has been penned by Gulzar.

Printed, Published and Marketed by:
INDIA BOOK HOUSE

IBH



# ಅಧ್ಯಾಯ : ೮

## ದೀರ್ಘಕತೆ, ನೀಳ್ಗತೆ ಮತ್ತು ಕಾದಂಬರಿ ಸ್ವರೂಪ ಪ್ರಯೋಗಗಳು, ಕನ್ನಡದ ಕೆಲವು ಲೇಖಕರ ವಿಶಿಷ್ಟ ಸಾಧನೆಗಳು

೮.೧ ದೀರ್ಘ ಕತೆಗಳು, ನೀಳ್ಗತೆಗಳು ಮತ್ತು ಕಾದಂಬರಿಗಳು
೮.೨ ಕನ್ನಡದ ಪ್ರಯೋಗಗಳು

೮.೩ ಕನ್ನಡದ ಕೆಲವು ಲೇಖಕರ ವಿಶಿಷ್ಟ ಸಾಧನೆಗಳು

## ಅಧ್ಯಾಯ : ೮

# ದೀರ್ಘ ಕತೆ, ನೀಳ್ಗತೆ ಮತ್ತು ಕಾದಂಬರಿ ಸ್ವರೂಪ, ಪ್ರಯೋಗಗಳು, ಕನ್ನಡದ ಕೆಲವು ಲೇಖಕರ ವಿಶಿಷ್ಠ ಸಾಧನೆಗಳು.

ಜನಪದ ಕಥಾ ಪ್ರಕಾರಗಳಿಂದ ತುಂಬಿ ಹೋಗಿದ್ದ ಕನ್ನಡದ ಮಕ್ಕಳ ಕಥಾ ಸಾಹಿತ್ಯವು ಜನಪದ ಪ್ರಕಾರಗಳಿಂದ ಹೊರಬಂದು, ಅನೇಕ ಲೇಖಕರು ವಾಸ್ತವ ಕಥಾವಸ್ತುವುಳ್ಳ ಮಕ್ಕಳ ಕಥಾ ಪ್ರಕಾರವನ್ನು ಬಳಸಿದರು. ಇದು ವಿರಳ ಹರುವುಳ್ಳದಾಗಿದ್ದರೂ ಈ ಪ್ರಕಾರವು ಗಂಭೀರತೆ ಪಡೆದುಕೊಂಡಿರುವುದು ವಿಶೇಷವೆನಿಸುತ್ತದೆ. ನವೋದಯದಲ್ಲಿ ಕಂಡುಕೊಂಡ ಕಥಾ ಸಾಹಿತ್ಯವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಸಾಮಾನ್ಯರ ಸಾಹಿತ್ಯದಂತೆ ಹೊಸಹೊಸ ಪ್ರಯೋಗಗಳಿಗೆ ತನ್ನನ್ನು ಒಗ್ಗಿಸಿಕೊಂಡಿತು. ಕಾದಂಬರಿಯು ಹೊಸಗನ್ನಡದ ಸಾಹಿತ್ಯದ ಒಂದು ಪ್ರಕಾರವಾಗಿ ಬೆಳೆದು ಬಂದ ಮೇಲೆ ಅದು ಮಕ್ಕಳ ಸಾಹಿತ್ಯವನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿತು. ಇದಕ್ಕೆ ಕಾರಣವೆಂದರೆ ಕಾದಂಬರಿಯು ಅನುಭವಿಸಬಹುದಾದ ಸ್ವಚ್ಛಂದ ಮತ್ತು ಸ್ವತಂತ್ರ ವಸ್ತುವಿನ ವಿಹಾರ. ಕತೆಯಲ್ಲಿ ಹಿಡಿದಿಡಲಾಗದನ್ನು, ಕಟ್ಟಿಕೊಡಲಾರದನ್ನು ಇಲ್ಲಿ ವಿಸ್ತಾರವಾಗಿ ಹೇಳಬಹದಾದ ಸಾಧ್ಯತೆಯನ್ನು ಕಂಡುಕೊಂಡಿದ್ದೆ ಕಾದಂಬರಿಯ ಸ್ವರೂಪ ಜನ್ಮತಳೆಯಲು ಅನುವು ಮಾಡಿಕೊಟ್ಟಿತು. ಘಟನೆಗಳನ್ನು ಮತ್ತು ಅವುಗಳೊಡನೆ ನಡೆಯುವ ಕ್ರಿಯೆಗಳನ್ನು ಅನುಭವಿಸಲು ಮಾಡಿಕೊಂಡ ಸುಲಭದ ಹಾದಿ ಇದು. ಪಾತ್ರಗಳ ಸಂಭಾಷಣೆ, ಜೀವನದ ಶೈಲಿ, ಘಟನೆಗಳ ಬಣ್ಣನೆಯನ್ನು ವಿಶಿಷ್ಟವಾದ ದೃಷ್ಟಿಯೊಂದಿಗೆ ನೋಡಲು ಇಲ್ಲಿ ಸಾಧ್ಯವಾಯಿತು. ಇದು ಭಾರತೀಯರಲ್ಲಿ ನೆಲೆಗೊಳ್ಳಲು ಹೊರಗಿನ ಸಾಹಿತ್ಯದ ಓದಿನ ಪ್ರಭಾವವು ಪ್ರಮುಖ ಕಾರಣವಾಯಿತು. ಭಾರತದಲ್ಲಿ ಸಂಸ್ಕೃತವು ಸಹ ಇಂತಹ ವಿಧಾನವನ್ನು ಪರಿಚಯಿಸಿತ್ತು. ಜಾಗತಿಕ ಸಾಹಿತ್ಯದಲ್ಲಿಯು ಕಾದಂಬರಿಗೆ ವಿಶೇಷವಾದ ಮನ್ನಣೆಯು ಲಭಿಸಿತ್ತು. ಕೆಲವು ಕಾದಂಬರಿಗಳು ಗಮನ ಸೆಳೆದಿದ್ದವು. ಟಾಲ್‌ಸ್ಟಾಯ್‌ರವರ 'ವಾರ್ ಅಂಡ್ ಪೀಸ್', ಚಿನುವಾ ಅಚಿಬೆಯವರ 'ಥಿಂಗ್ಸ್ ಫಾಲ್ ಅಪಾರ್ಟ್', ಪ್ರೇಮಚಂದರ 'ಗೋದಾನ', ತಕಳಿ ಶಿವಶಂಕರ್ ಪಿಳ್ಳೆಯವರ 'ಚೆಮ್ಮೀನು', ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ', ರಾವಬಹುದ್ದೂರರ 'ಗ್ರಾಮಾಯಣ', ಕಾರಂತರ 'ಚೋಮನದುಡಿ' 'ಬೆಟ್ಟದಜೀವ', ಮಾಸ್ತಿಯವರ 'ಚಿಕವೀರ ರಾಜೇಂದ್ರ' ಇವು ಹೊಸ ತುಡಿತವನ್ನು, ಪ್ರಭಾವವನ್ನು ಉಂಟುಮಾಡಿ ಪ್ರೇರಣೆಯನ್ನು ಒದಗಿಸಿದವು. ಕನ್ನಡದಲ್ಲಿ ಕಾದಂಬರಿಯ ಬೆಳಸು ಚೆನ್ನಾಗಿ ಆಯಿತು. ಅನಕೃ, ಯಶವಂತ ಚಿತ್ತಾಲ, ತರಾಸು, ಯು.ಆರ್.ಅನಂತಮೂರ್ತಿ, ಎಸ್. ಎಲ್. ಭೈರಪ್ಪ, ವೈದೇಹಿ, ಎಂ.ಕೆ ಇಂದಿರಾ, ಭಾರತೀಸುತ, ಚದುರಂಗ, ಸಾಯಿಸುತೆ ಮುಂತಾದವರು ಇದನ್ನು ಮುಂದುವರೆಸಿದರು. ಇದರ ಪ್ರಭಾವವು ನಿಧಾನವಾಗಿ ಮಕ್ಕಳ ಸಾಹಿತ್ಯದ ಕಡೆಗೆ ಕಾಲಿರಿಸಿತು. ಆದರೆ ಇಲ್ಲಿ ಅದು ಕಾದಂಬರಿಯಂತೆ ದೀರ್ಘವಾಗಿ ಕಾಣಿಸಿಕೊಳ್ಳಲಿಲ್ಲ. ಕತೆಯಂತೆ ಚಿಕ್ಕದಾಗಿಯು ನಿಲ್ಲದೆ ಅಗತ್ಯ ಮಾರ್ಪಾಡುಗಳೊಂದಿಗೆ ನೀಳ್ಗತೆಯಾಗಿ ಕಾಣಿಸಿಕೊಂಡವು. ಕೆಲವರು ಕತೆಯನ್ನು ಮೀರಿದ ಲಕ್ಷಣಗಳನ್ನು

ಕಟ್ಟಿಕೊಟ್ಟು ದೀರ್ಘಕತೆಗಳಾಗಿಸಿದರು. ಕಾದಂಬರಿಯೆಂಬ ಗುಂಗಿನಲ್ಲಿ ಬರೆದು ಮಕ್ಕಳ ದೀರ್ಘಕಾಲಿಕ ಓದನ್ನು ನಿರೀಕ್ಷಿಸಲಾಗದೆ, ಮೊಟುಕುಗೊಳಿಸಿ ಅದನ್ನು ಮಿನಿ ಕಾದಂಬರಿಯಾಗಿಸಿಯು ನೋಡಿದರು. ಇವೆಲ್ಲವೂ ಆರಂಭಿಕ ಪ್ರಯೋಗಗಳಾಗಿ ಕಾಣಿಸಿಕೊಂಡು ಹೊಸ ರೂಪಗಳನ್ನು ತಳೆದವು. ವಸ್ತುವಿನ ಆಯ್ಕೆ, ಓದುಗನ ವಯಸ್ಸು, ಮನಸ್ಥಿತಿಗಳು ಇಲ್ಲಿ ಪ್ರಬುದ್ಧರಿಗಿಂತ ಭಿನ್ನವಾಗಿಕಾಣಿಸಿಕೊಂಡು ಹಿರಿಯರ ಕಾದಂಬರಿಗಿಂತ ಬೇರೆಯೇ ಆದ ಪ್ರಕಾರಕ್ಕಾಗಿ ಹುಡುಕಾಡಿರುವುದನ್ನು ಕಾಣುತ್ತೇವೆ.

## ೮.೧ ದೀರ್ಘ ಕತೆಗಳು, ನೀಳ್ಗತೆಗಳು ಮತ್ತು ಕಾದಂಬರಿಗಳು

ಮಕ್ಕಳ ಬದುಕಿನ ವಾಸ್ತವ ಚಿತ್ರಣಗಳನ್ನು ಅಭಿವ್ಯಕ್ತಿಸಲು ಬಳಸಿಕೊಂಡ ಕಥಾ ಪ್ರಕಾರವು ಸಮರ್ಪಕವಾಗಿ ಮಕ್ಕಳ ಬದುಕನ್ನು ವಿವರಿಸಿ ಹೇಳಲು ಸಾಧ್ಯವಾಗದಿರುವುದನ್ನು ಗಮನಿಸಿದ ಲೇಖಕರು ಕಥಾ ಪ್ರಕಾರಕ್ಕಿಂತಲೂ ಮೀರಿದ ಪ್ರಬುದ್ಧರ ಪ್ರಕಾರವನ್ನು ಹೋಲುವಂತಹ ಕಾದಂಬರಿಯ ಸ್ವರೂಪ ಲಕ್ಷಣಗಳಿಂದ ಕೂಡಿದ ಪೂರ್ಣ ಕಾದಂಬರಿಯ ಲಕ್ಷಣ ಅಲ್ಲದ ಹೊಸ ಪ್ರಕಾರವೊಂದರ ಅನ್ವೇಷಣೆಯಲ್ಲಿರುವಾಗ ಉಂಟಾದುದು ದೀರ್ಘಕತೆ ಮತ್ತು ನೀಳ್ಗತೆ ಹಾಗೂ ಮಿನಿ ಕಾದಂಬರಿ ಎಂಬ ಪ್ರಕಾರಗಳು. ಈ ಪ್ರಕಾರಗಳು ಮಕ್ಕಳ ಭಾವ ತೀವ್ರತೆ, ಬದುಕಿನ ಚಿತ್ರಣ ವಿವರಣೆ, ಮಕ್ಕಳ ಲಾಲಿತ್ಯ ಬದುಕಿನ ರಸಗಳಿಗೆ, ವಿರಸಗಳ ಅಭಿವ್ಯಕ್ತಿಗೆ ಸುಲಭವಾಗಿ ದಕ್ಕುವಂತೆ ಲೇಖಕರು ಈ ಪ್ರಕಾರವನ್ನು ತುಡಿಸಿಕೊಂಡು ಬರೆದರು. ಕನ್ನಡದ ಮಕ್ಕಳ ಕಥಾಜಗತ್ತು ಜನಪದ ಕಥಾಜಗತ್ತಿನಿಂದ ಕವಲೊಡೆದು ಪ್ರತ್ಯೇಕ ನೆಲೆ ಕಂಡುಕೊಳ್ಳುವ ಅನಿವಾರ್ಯತೆಯಲ್ಲೂ ಮಕ್ಕಳಗಾಗಿ ಬರೆಯುವುದೆಂದರೆ ಮಕ್ಕಳ ಕಾವ್ಯ ಇಲ್ಲವೇ ಕತೆ ಎನ್ನುತ್ತಿದ್ದ ಲೇಖಕವರ್ಗ, ಮೈಗೊಡವಿಕೊಂಡು ಎದ್ದುನಿಂತು ಹೊಸಪ್ರಕಾರಗಳ ಶೋಧದಲ್ಲಿ ತೊಡಗಿದುದ್ದು ಮಕ್ಕಳ ಕಥಾ ಸಾಹಿತ್ಯದ ಹೊಸ ತಿರುವಿಗೆ ನಾಂದಿಯಾಯಿತು. ಹಳೆಯ ಸೊಗಡಿನಿಂದ ಹೊರಬರಲು ತವಕಿಸಿ ಜನಪದ, ಪಂಚತಂತ್ರ, ಪುರಾಣ ಕತೆಗಳ, ಪೊರೆ ಕಳಚಿ ಬಂದ ಕಥಾ ಪ್ರಕಾರವು ಕಥಾ ಸಾಹಿತ್ಯದಿಂದ ಭಿನ್ನ ಕವಲುಗಳಾಗಿ ಹಂಬಲಿಸಿ ಬೆಳೆಯಿತು. ಪ್ರಾರಂಭದ ಹಿರಿಯ ಲೇಖಕರು ಸಹ ಹೊಸತನಕ್ಕಾಗಿ ಹೊಂದಿಕೊಂಡು ಹಂಬಲಿಸಿ ಬರೆದರೂ ಹೊಯ್ಸಳರು, ಪಂಜೆಯವರು, ಎಂ.ಎಸ್. ಪುಟ್ಟಣ್ಣರು ಕತೆಗಳ ಸುರಿಮಳೆಗೆರೆದರು, ರಾಜರತ್ನಂ ಗದ್ಯ ಸಾಹಿತ್ಯಕ್ಕೆ ತುಡಿದರು, ದೇವುಡು ಬರೆದರು. ನಂತರ ಬಂದ ಶಿಕ್ಷಕ ಸಮುದಾಯದ ಪ್ರತಿನಿಧಿ ಪಳಕಳ ಸೀತರಾಮಭಟ್ಟರು, ಸಿಸು ಸಂಗಮೇಶರು ಇವರೆಲ್ಲ ಹಳೆಯ ವಸ್ತುಗಳನ್ನೇ ಸೊಗಸಾಗಿ ಹೇಳಿ ಕತೆ ಬರೆದರೆ ವಿನಹಃ ಹೊಸತನಕ್ಕಾಗಿ ಹಂಬಲಿಸಿ ಬರೆದದ್ದು ಕಂಡು ಬರಲಿಲ್ಲ. ಇಂಗ್ಲಿಷ್‌ನ ಮಕ್ಕಳ ಸಾಹಿತ್ಯ ಪರಿಚಯವಿದ್ದ ಒಂದಷ್ಟು ಲೇಖಕರು ಅಲ್ಲಿನ ಪ್ರಯೋಗಗಳನ್ನು ನೋಡಿ ಕನ್ನಡದ ಮಕ್ಕಳ ಸಾಹಿತ್ಯದಲ್ಲಿ ಸ್ವತಃ ಪ್ರಯೋಗಗಳನ್ನು ಮಾಡಲು ಮುಂದಾದರು. ನಾ ಕಸ್ತೂರಿಯವರು ಪ್ರಸಿದ್ಧ ಕತೆಗಳನ್ನು 'ಪಾತಾಳದಲ್ಲಿ ಪಾಪಚ್ಚಿ' ಯಾಗಿ ನೀಡಿದರು. ರಾಜರತ್ನಂ 'ಬ್ಯಾರನ್ ಮಂಕ್ ಹೌಸ್'ನ ಪಯಣಗಳ ಕತೆಗಳನ್ನು ಹೇಳಿದರು. ಇಂಥ ಸಂದರ್ಭದಲ್ಲಿ ನಾ. ಡಿಸೋಜರ ಪ್ರಯತ್ನಗಳು ಅಪರೂಪವೆನಿಸಿದವು. ಹಳೆಯದಾದ ಸರಕುಗಳನ್ನು ಬದಿಗೊತ್ತಿ ಹೊಸತನಕ್ಕಾಗಿ ಸಟೆದು ನಿಂತು ಬರೆದರು. ಹೊಸ ಸಂಗತಿಗಳನ್ನು ಮಕ್ಕಳಿಗೆ ಬರೆದುಣಿಸಿದರು. ಇಂತಹ ಪ್ರಯತ್ನಗಳು

ವಿರಳವಾಗಿ ಮೂಡಿ ಬಂದರೂ ಗಟ್ಟಿಯಾಗಿ ನೆಲೆಯೂರಿದವು. ರಾಜಶೇಖರ ಭೂಸನೂರ ಮಠರು ವೈಜ್ಞಾನಿಕ ವಿಷಯಗಳಾಧಾರಿಸಿ ಬರೆದರು. ಗೀತಾಕುಲಕರ್ಣಿಯವರ ನೇಜಿ ಗುಬ್ಬಚ್ಚಿ ಹೊಸತನದ ಹುಟ್ಟಿಗೆ ಕಾರಣವಾಯಿತು. ವಿವಿಧ ವಿಷಯಗಳತ್ತ ಹರವುಗೊಂಡ ಮಕ್ಕಳ ಕಥಾ ಸಾಹಿತ್ಯ ವಸ್ತುವು ತನ್ನ ಭಿನ್ನತೆಯನ್ನು ವಿಸ್ತರಿಸಿ ಕೊಳ್ಳತೊಡಗಿದಾಗ ನೀಲಾಂಬರಿ ಹೆಸರಿನಲ್ಲಿ ಬರೆದ ಕೆ. ಪಿ. ಸ್ವಾಮಿ ಹಾಸ್ಯದ ವಸ್ತುಗಳಿಗೆ ಮಣೆ ಹಾಕಿದರು. ಇಷ್ಟೆಲ್ಲ ಹೊಸತನಗಳೊಳಗೆ ಗಟ್ಟಿಯಾಗಿ ನೆಲೆ ಕಂಡುಕೊಂಡವರು ಮಾತ್ರ ನಾ.ಡಿಸೋಜರು. ಅವರ ಕಥಾ ವಸ್ತು ವಾಸ್ತವತೆಗೆ ಒತ್ತು ನೀಡಿ ಹಳೆಯ ಜನಪದ ಕತೆಗಳು, ಪಂಚತಂತ್ರ, ಪುರಾಣಗಳು, ನೀತಿಕತೆಗಳು, ಪುರಾಣದ ಕತೆಗಳನ್ನು ಚಿತ್ರಿಸುವ ಬದಲು, ಮಕ್ಕಳ ಆದರ್ಶಮಯ ಪಾತ್ರ ಚಿತ್ರಣ, ಮಕ್ಕಳದೇ ಅನುಭವ ಪ್ರಪಂಚದ ಸನ್ನಿವೇಶಗಳಿಂದ ತೆರೆದುಕೊಂಡ ಮಕ್ಕಳ ಕಥಾ ಪ್ರಕಾರ ಇವೆರಡರ ನಡುವೆ ದೊಡ್ಡ ಅಂತರವೇ ಎದ್ದು ಕಾಣುವಂತಾಯಿತು. ಜನಪದ ವಸ್ತುವಿನ ಕಲ್ಪನಾ ಸಾಮಾಗ್ರಿಯನ್ನು ತಳ್ಳಿಹಾಕದೇ ಚಂದ್ರಶೇಖರ ಕಂಬಾರರು ಮಕ್ಕಳಿಗಾಗಿಯೇ ಎಂತಲೇ ಪ್ರತ್ಯೇಕವಾಗಿ ಕತೆಗಳನ್ನು ಸಂಕಲನವಾಗಿ ನೀಡಿದರು. ಇದರಿಂದ ಬಹುದೀರ್ಘ ತಲೆಮಾರಿನ ಕಥಾವಸ್ತು ನವತಲೆಮಾರಿನ ಮಕ್ಕಳಿಗೆ ರವಾನೆಯಾಯಿತು. ಚಂದಮಾಮನ ಸೃಷ್ಟಿಸಿದ ವಾತಾವರಣ ಇಲ್ಲಿ ಪುನರ್ಜನ್ಮ ಪಡೆದು ನಳನಳಸಿತು ಅಂದಮಾತ್ರಕ್ಕೆ ಹೊಸ ಪ್ರಯೋಗಗಳು, ಪ್ರಯತ್ನಗಳು ನಿಲ್ಲದೆ ಲೇಖಕರು ಮುಂದುವರೆದರು. ಮಕ್ಕಳ ಸುತ್ತಲಿನ ವಾತಾವರಣದಲ್ಲಿ ಅವರದೇ ಕಣ್ಣಿಂದ ನೋಡುವ ಹೊಸದೊಂದು ಅನುಭವ ಜಗತ್ತಿನ ಅನಾವರಣಿಸುವ ಸಾಹಿತ್ಯ ಮಕ್ಕಳಿಗೆ ಬೇಕಿದೆ ಎಂದು ಕಂಡು ಕೊಂಡರು. ಅದು ಮೆಟ್ರೋಪಾಲಿಟನ್ ಸಿಟಿಯಾಗಿರಬಹುದು ಅಥವಾ ನಗರ ಪ್ರದೇಶವಿರಬಹುದು ಇಲ್ಲವೇ ಹಳ್ಳಿಗಾಡಿನ ಮಕ್ಕಳಾಗಿರಬಹುದು ಅನುಕೂಲಸ್ಥರ ಮಕ್ಕಳಾಗಿರಲಿ, ಮಧ್ಯಮ, ಕೆಳವರ್ಗದ ಮಕ್ಕಳಾಗಿರಲಿ ವಿಭಿನ್ನ ಸಾಮಾಜಿಕ ವಾತಾವರಣ ಕಟ್ಟಿಕೊಡುವ ಮಕ್ಕಳ ವೈವಿಧ್ಯ ಸಾಮಾಗ್ರಿಯನ್ನು ಲೇಖಕರು ಅಗತ್ಯವಾಗಿ ಭಾವಿಸಿದರು.[೪೮]

ದೊಡ್ಡವರಿಗಾಗಿ ಇರುವ ಕತೆಗಳಲ್ಲಿಯೂ ಮಕ್ಕಳ ಮೂಲಕ ಕಥಾ ವಸ್ತುವನ್ನು ಕಾಣಿಸಿರುವವರು ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ದೇವನೂರು ಮಹದೇವ, ಶ್ರೀಕೃಷ್ಣ ಆಲನಹಳ್ಳಿ ಅನೇಕರ ರಚನೆಗಳು ನಮಗೆ ಕಾಣಸಿಗುತ್ತವೆ. ಇವೆಲ್ಲ ಮಕ್ಕಳ ಕಥಾ ಸಾಹಿತ್ಯದ ಹರಿವಿಗೆ ನಿರ್ದೇಶನವಾಗಬಲ್ಲವು. ಹೀಗೆ ಕತೆಯು ತನ್ನ ವಿಭಿನ್ನ ಹರಿವು ಪ್ರವಹಿಸಿಕೊಂಡು ತನ್ನ ವಿಸ್ತಾರವಾದ ಬಣ್ಣನೆಯಲ್ಲಿ ಕಾದಂಬರಿ ಲಕ್ಷಣದೆಡೆಗೆ ವಾಲುತ್ತಾ ಬೆಳೆಯುತ್ತಿದೆ, ನೀಳ್ಗತೆಯಾಗುತ್ತದೆ. ಸಂಪೂರ್ಣ ಕಾದಂಬರಿಯ ಸ್ವರೂಪಗಳಿಗೆ ಹೊಂದಿಕೊಳ್ಳದೆ ಮಿನಿಕಾದಂಬರಿಯಾಗಿ ರೂಪ ತಳೆಯುತ್ತದೆ. ಕೆಲವು ಪ್ರಮುಖ ಪ್ರಯೋಗಶೀಲತೆಯಿಂದ ಕೂಡಿದ ಕಾದಂಬರಿಗಳು ದೀರ್ಘಕತೆಗಳು ಅವಲೋಕಿಸುವುದು ಸೂಕ್ತವಾಗಿದೆ. ಕಾದಂಬರಿ, ಸಣ್ಣಕತೆ ಎನ್ನುವಂತಹ ಸಂಗತಿಗಳು ಪ್ರಬುದ್ಧರ ಸಾಹಿತ್ಯದಲ್ಲಿ ನಿರ್ದಿಷ್ಟ ಪ್ರಕಾರಗಳನ್ನು ಕಂಡುಕೊಳ್ಳುತ್ತ, ಗಟ್ಟಿಗೊಳ್ಳುತ್ತಾ ಬಂದುದನ್ನು ಗುರುತಿಸುತ್ತೇವೆ. ಮಕ್ಕಳ ಸಾಹಿತ್ಯದ ಸಂದರ್ಭದಲ್ಲಿ ಹೀಗೆ ಗುರುತಿಸುವಾಗ ಪ್ರತ್ಯೇಕವಾಗಿಯೇನೂ ಭಾವಿಸಬೇಕಾಗಿಲ್ಲ ಎನ್ನುವ ಮನೋಭಾವವೇ ಸರ್ವೆ ಸಾಮನ್ಯವಾಗಿ ನಮ್ಮ ಬರಹಗಾರರಲ್ಲಿ, ಸಾಹಿತ್ಯದ ವಾತಾವರಣದಲ್ಲಿ ಇರುವುದನ್ನು ಕಾಣುತ್ತೇವೆ. ಹಾಗಾಗಿಯೇ ಬಹುಶಃ

---

[೪೮] ಮರವೇ ಮರವೇ ಮರ್ಮರವೇ : ಡಾ. ಚಂದ್ರಶೇಖರ ಕಂಬಾರ, ಮುನ್ನುಡಿಯಿಂದ

ಇವುಗಳನ್ನು ನಿಕೃಷ್ಟತೆ ಒಡ್ಡುವ, ಚಿಂತಿಸುವ ಸಂಗತಿಗಳು ಕಂಡುಬಂದಿಲ್ಲ. ಮಕ್ಕಳ ಸಾಹಿತ್ಯದ ಸಂದರ್ಭದಲ್ಲಿ ಬಹುದೀರ್ಘದ ಸಮಯ, ಹಾಗೂ ಒಟ್ಟಾರೆ ಪರಿಮಾಣದಲ್ಲಿ ಜನಪದ ಕತೆಗಳನ್ನೇ ಬಳಸಿ ಕೊಂಡಿರುವುದರಿಂದ, ಅದರಲ್ಲೂ ಸಾಮಾನ್ಯವಾಗಿ ಹೀಗೆ ಬಳಸಿಕೊಂಡವುಗಳೆಲ್ಲ ಇವು ಕಾದಂಬರಿ ಎಂದು ಭಾವಿಸುವ ಹರಿವಿನ ವಿದ್ಯಾಮಾನ ಹೊಂದಿದ ಹಾಗೆ ಕಾಣುವುದಿಲ್ಲ. ಅವುಗಳಲ್ಲೂ ದೀರ್ಘ ಹರವಿನ ಕತೆಗಳಿದ್ದೇ ಇವೆ, ಜಾನಪದ ಕಥನ ಕಾವ್ಯಗಳಲ್ಲಿ ಸಿಗುವ ಕಥಾ ಪ್ರಸಂಗಗಳು ಬಲು ದೀರ್ಘವಾದವೂ, ಬದುಕಿನ ವಿಸ್ತಾರ ನೋಟದ ಅನುಭವ ಹೊಂದಿವೆ. ಜಾನಪದದಲ್ಲಿ ಕತೆ ಎನ್ನುವುದಷ್ಟೆ ಬಳಕೆಯಗುತ್ತಾ ಬಂದುಬಿಟ್ಟಿದೆ. ಪಾಶ್ಚಾತ್ಯರಿಂದಲೇ ನಮಗೆ ಸಣ್ಣಕತೆ, ಕಾದಂಬರಿ ಮೇಲಾಗಿ ಪ್ರತ್ಯೇಕತೆಗಳು ಗೋಚರಿಸಿದ್ದು. ಜನಪದ ಕತೆಗೂ ಮಕ್ಕಳಿಗೆಂದು ನೀಡಿದಾಗೆಲ್ಲಾ ಅವನ್ನು ಚಿಕ್ಕದಾಗಿಸಿ, ಕುಬ್ಜವಾಗಿಸಿ ನೀಡಿರುವುದೆ ಸಾಮಾನ್ಯವಾಗಿದೆ. ತೀರ ದೀರ್ಘವಾಗಿ ಇಡೀ ಪುಸ್ತಕ ಒಂದೇ ಕತೆ ಹೊತ್ತು ಬಂದಿರುವುದು ತೀರ ಅಪರೂಪ. ಹಿಂದಿಯಲ್ಲಿ ಹರಿಕೃಷ್ಣ ದೇವಸರೆ (ಸುರಖಾಬದ ಗರಿಗಳು-ಅನು; ಪಂಚಾಕ್ಷರಿ ಹಿರೇಮಠ) ಮನು ಭಂಡಾರಿ ಅಂತಹವರು ಪ್ರಯೋಗಿಸಿದ್ದಾರೆ. ಕನ್ನಡದಲ್ಲಿ ಕಡಿಮೆಯಾದರೂ ಕೆಲವು ನೀಡಬಹುದಾದ ಉದಾಹರಣೆಗಳಿವೆ. ದೇವುಡು ಅವರು ನೀಡಿರುವುದುಂಟು ಹಾಗಾಗಿ ಸಣ್ಣ ಪ್ರಮಾಣದ ಕತೆಯೇ ಒಟ್ಟಾಗಿ 'ಕತೆ' ಎಂದು ಮಕ್ಕಳ ಸಂದರ್ಭದಲ್ಲಿದ್ದುದನ್ನು ಕಾಣುತ್ತೇವೆ. ಆದರೆ ವಾಸ್ತವದ ಹಿನ್ನೆಲೆಯ ಕತೆಯನ್ನು ಬರೆಯುತ್ತ ವಿಸ್ತಾರದ ಅರಿವಿಗೆ ನಮ್ಮ ಲೇಖಕರು ಹಲವರು ಇಳಿದಾಗ ಅವನ್ನು ಪ್ರಬುದ್ಧರ 'ಕಾದಂಬರಿ'ಗೆ ಸಂವಾದಿಯಾಗಿ ಬಳಸುವ ಅಗತ್ಯ ಕಂಡಿತು. ಹಾಗಿದ್ದಾಗಲೂ 'ಮಿನಿ ಕಾದಂಬರಿ' 'ನೀಳ್ಗತೆ' ಎನ್ನುವ ಪದಗಳೂ ಬಳಕೆಯಾದುದಿದೆ. ಆದರೆ ಹೀಗೆ ಬಂದ ಕತೆಗಳನ್ನಿಟ್ಟುಕೊಂಡೆ ಈ ಪದಗಳೂ ಬಳಕೆಯಾದುದು. ನಮ್ಮ ಮಕ್ಕಳಿಗೆ ಬಹಳ ದೀರ್ಘವಾದ ಕತೆ ಅವಶ್ಯವೆ? ಎನ್ನುವುದೊಂದು ಪ್ರಶ್ನೆ, ನಮ್ಮ ಅನೇಕ ಲೇಖಕರು ಎತ್ತಿಕೊಂಡಿರುವಂತಹ ಸಂದರ್ಭದಲ್ಲಿ 'ಹ್ಯಾರಿ ಪಾಟರ್' ಅಂತಹ ಏಳು ಪುಸ್ತಕಗಳ ದೀರ್ಘ ಸರಣಿಯನ್ನೇ ಮಕ್ಕಳು ಮುಗಿಬಿದ್ದು ಓದಲಿಲ್ಲವೆ? ಎನ್ನುವ ಸಮಾಧಾನವು ಇದೆ. ಆದರೆ ಕತೆಯು ರುಚಿಸುವಂತಾಗುವ ತನ್ನ ಸಾಧ್ಯಾಸಾಧ್ಯತೆಗಳು ಮಕ್ಕಳ ನಡುವೆ ಹೇಳುತ್ತದೆ. ಹಾಗಾಗಿ ಈಗ ಸರ್ವೆಸಾಮಾನ್ಯದ ತಿಳುವಳಿಕೆಯಂತೆಯೇ ಸಣ್ಣಕತೆ, ಕಾದಂಬರಿ, ನೀಳ್ಗತೆಗಳ ಮಕ್ಕಳ ಸಂದರ್ಭದಲ್ಲಿ ಬಳಸುವುದು ನಿವಾರ್ಯವಾಗಿದೆ. ವಾಸ್ತವ ಮಾದರಿಯ 'ಸಣ್ಣಕತೆ' ಎಂದೇ ಗುರುತಿಸುವ ಹಲವು ಕತೆಗಳು ಕನ್ನಡದ ಮಕ್ಕಳ ಸಂಧರ್ಭದಲ್ಲೂ ಬಂದಿವೆ. ಮಕ್ಕಳು ದೀರ್ಘವಾದ ಓದಿಗೆ ದಕ್ಕಲಾರರು, ಅವರಿಗಾಗಿ ಮೊಟುಕು ಮೊಟುಕಾದ ರಂಜನೀಯ ಕತೆಗಳನ್ನು ತರಬೇಕು ಎನ್ನುವ ಕಾಲದಲ್ಲಿಯೇ ಮಕ್ಕಳಿಗಾಗಿ ಕನ್ನಡದಲ್ಲಿ ಕಾದಂಬರಿ ಪ್ರಕಾರವನ್ನು ಪರಿಚಯಿಸಿದವರಲ್ಲಿ ಆದ್ಯರು ನಾ.ಡಿಸೋಜರು. ಕಾದಂಬರಿಗಳನ್ನು ಮಕ್ಕಳು ಗ್ರಹಿಸಲಾರರು ಎನ್ನುವವಗರಿಗೆ ಸಡ್ಡೆಹೊಡೆದು ಬರೆದವರು. ಇವರು ಮಕ್ಕಳನ್ನೆ ಕೇಂದ್ರವಾಗಿಸಿಕೊಂಡು ಅನೇಕ ಕಾದಂಬರಿಗಳನ್ನು ರಚಿಸಿರುವರು. ಆನೆ ಬಂತೊಂದಾನೆ, ಶಾಲೆಗೆಹೋಗದ ಹುಡುಗಿಯರು, ಬೆಟ್ಟದಪುರದ ದಿಟ್ಟಹುಡುಗರು, ನೇತ್ರಾಣಿಗುಡ್ಡಕ್ಕೆ ಯಾತ್ರೆ, ಕಾಡಾನೆಯ ಕೊಲೆ, ಮುಳುಗಡೆ ಊರಿಗೆ ಬಂದವರು, ಹಕ್ಕಿಗೊಂದು ಗೂಡುಕೊಡಿ, ಪಾರಿವಾಳಗಳ ದ್ವೀಪ, ಬೆಳಕಿನೊಡನೆ ಬಂತುನೆನಪು, ವಿನುಸುನ್ನಿಗೆಳೆಯರು, ಗೋಪಿಯ ಗೊಂಬೆ, ಆನೆ ಹುಡುಗ ಅಬ್ದುಲ್ಲಾ, ಕೋಳಿ ಅನಂತ, ಸಮಯದ

ಸದ್ಧಳಿಕೆ ಮುಂತಾದ ಮಕ್ಕಳ ಕಾದಂಬರಿಗಳು ಡಿಸೋಜರ ಸೃಜನಶೀಲತೆಯನ್ನು, ಪ್ರಯೋಗಗಳನ್ನು ಮಕ್ಕಳ ಲೋಕದ ಮುಂದಿರಿಸಿದವು. ಹಿರಿಯರ ಕಾದಂಬರಿಯಲ್ಲಿನ ತಂತ್ರಗಾರಿಕೆಗಳನ್ನು ಮಕ್ಕಳಿಗೆ ತಕ್ಕಂತೆ ಸರಳೀಕರಿಸಿ ಕೆಲವು ಲಕ್ಷಣಗಳನ್ನು ವಿಶಿಷ್ಟವಾಗಿ ತಂದು ಮಕ್ಕಳಿಗಾಗಿ ಪ್ರಯೋಗಿಸಿದರು. ಸಂಗತಿಗಳು, ವಸ್ತುವಿನ್ಯಾಸ, ವಸ್ತುವಿನ ಹರಿವು, ಮಕ್ಕಳದೇ ಪರಿಸರ, ಅವರ ಒಲವಿನ ಸಾಮಾಗ್ರಿಗಳನ್ನು ಬಳಸಿ ಯಶಸ್ವಿಯಾದ ಹೆಜ್ಜೆಗಳನ್ನಿರಿಸಿದರು.

ನಾ. ಡಿಸೋಜರವರು ಬರೆದಿರುವ ಮಕ್ಕಳ ಕಾದಂಬರಿಯಲ್ಲಿನ ವಸ್ತುವಿನ ಆಧಾರದ ಮೇಲೆ ವಿಂಗಡಿಸಿಕೊಂಡು ನೋಡಬಹುದಾದರೆ ಕೆಲವು ಲಕ್ಷಣಗಳು ಸಾಮಾನ್ಯವಾಗಿ ಕಾಣಸಿಗುತ್ತವೆ. ಅವು

೧ ಪ್ರಾಣಿ ಮತ್ತು ಪಕ್ಷಿಗಳ ಪ್ರೇಮ ಕಾದಂಬರಿಗಳು

೨ ಪರಿಸರ ವಾತ್ಸಲ್ಯ ಕಾದಂಬರಿಗಳು

೩ ಹೆಣ್ಣು ಮಕ್ಕಳ ಶಿಕ್ಷಣ ಕುರಿತ ಕಾದಂಬರಿಗಳು

೪ ಸಾಹಸದ ಕಾದಂಬರಿಗಳು

೫ ಇತರ ಕಾದಂಬರಿಗಳು

ಡಿಸೋಜರು ಮಕ್ಕಳ ಕಾದಂಬರಿಗಾಗಿ ಕಂಡುಕೊಂಡ ಲಕ್ಷಣಗಳನ್ನು ಅನುಸರಿಸಿ ಅವರ ನಂತರದ ತಲೆಮಾರಿನ ಲೇಖಕರು ವಿಭಿನ್ನವಾದ ವಸ್ತುವಿನ ಹರಿವಿನೊಂದಿಗೆ ಈ ಕ್ಷೇತ್ರವನ್ನು ವಿಸ್ತರಿಸಿ ಬರೆದರು. ಈ ಪ್ರಕಾರಗಳಲ್ಲಿ ತುಡಿದವರು ಕೆಲವೇ ಮಂದಿಯಾದರು ಪ್ರಯೋಗಗಳು ನಡೆದು ಮಹತ್ತರವಾದ ಕಾದಂಬರಿಗಳು ಮಕ್ಕಳಿಗೆ ಓದುವಂತೆ ಕಾಣಿಸಿಕೊಂಡವು. ಅಂತಹ ಪ್ರಮುಖ ಲೇಖಕರ ದೀರ್ಘಕತೆ, ಕಾದಂಬರಿ ಮತ್ತು ನೀಳ್ಗತೆಗಳಲ್ಲಿ ಕಾಣಿಸಿಕೊಂಡ ವಸ್ತುವಿನ ಬಗೆಗಳು, ಭಿನ್ನತೆಗಳು, ಲೇಖಕರ ಹಿನ್ನೆಲೆ, ಪರಿಸರದ ಪ್ರಭಾವವನ್ನು ಅಧ್ಯಯನ ಮಾಡುವ ಜೊತೆಗೆ ಉಂಟಾದ ಸಾಧ್ಯತೆಗಳನ್ನು, ಲೇಖಕರು ಅನುಭವಿಸಿದ ಸ್ವಾತಂತ್ರ್ಯವನ್ನು, ಮಕ್ಕಳು ಸ್ವೀಕರಿಸಿದ ರೀತಿಯೊಂದಿಗೆ ಕಾಲ ಕಾಲಕ್ಕೆ ಮಕ್ಕಳ ಕತೆಗಳ ನಡೆಯಲ್ಲಿ ಆದ ಪರಿಣಾಮಕಾರಿ ಬದಲಾವಣೆಗಳನ್ನು, ಲೇಖಕರ ಮಹತ್ತರದ ಕೃತಿಗಳನ್ನು ಪರಿಚಯಿಸುತ್ತಾ, ಕತೆಯೊಳಗಿನ ಆಶಯದ ಸ್ವಭಾವತೆಯನ್ನು ತಾತ್ವಿಕವಾಗಿ ನೋಡುವ ಅಗತ್ಯವನ್ನು ಇಲ್ಲಿ ಕಾಣಬಹುದಾಗಿದೆ.

## ೮.೨ ಕನ್ನಡದ ಪ್ರಯೋಗಗಳು

**ನಾ. ಡಿಸೋಜ**

ಡಿಸೋಜರ ಸಾಹಸಮಯ ಕಾದಂಬರಿಗಳಲ್ಲಿ 'ಬೆಟ್ಟದಪುರದ ದಿಟ್ಟ ಹುಡುಗರು' ಎಂಬುದು ಆ ಊರಿನ ಹುಡುಗರ ಸಾಹಸ, ಊರಿನ ಇತಿಹಾಸ, ಸ್ಥಳೀಯ ವಿಚಾರ ಮಹತ್ತ . ಸಾಂಸ್ಕೃತಿಕ ಆಚಾರಗಳು ಪರಿಸರದ ಉಳಿವಿಗೆ ಹೋರಾಟದ ಚಿತ್ರಣ ಅದಕ್ಕಾಗಿ ಊರಿನ ಹುಡುಗರ ಸಾಹಸ ಪ್ರವೃತ್ತಿಯ ಹೋರಾಟ ಭೂ

ಸಂಪತ್ತಿನ ಉಳಿವು ಮುಂತಾದ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತಾ ಮಕ್ಕಳನ್ನು ಸ್ಥಳೀಯ ಭೌಗೋಳಿಕ ಪರಿಸರ ಪ್ರೇಮಕ್ಕೆ ಒಗ್ಗಿಸುವ ಕಥಾ ಹಂದರವನ್ನು ಹೊಂದಿದೆ.

'ಪಾರಿವಾಳಗಳ ದ್ವೀಪ' ಕಾದಂಬರಿಯು ಮಕ್ಕಳ ಸಾಹಸದ ಕತೆಯುಳ್ಳ ಕಾದಂಬರಿಯಾಗಿದ್ದು ಭವಿಷ್ಯತ್ತಿನ ಪ್ರಜೆಗಳಾದ ಮಕ್ಕಳು ರಾಷ್ಟ್ರೀಯ ಸಂಪತ್ತಾದ ಭೂಮಿಯ ಪ್ರಕೃತಿ, ಪ್ರಾಣಿ, ಪಕ್ಷಿಗಳನ್ನು ಸಂರಕ್ಷಿಸಿಕೊಳ್ಳ ಬೇಕಾದ ಹೊಣೆಗಾರಿಕೆಯನ್ನು ಎಳಯರಿಗೆ ಮನದಟ್ಟಾಗುವಂತೆ ಚಿತ್ರಿಸಿದ್ದಾರೆ. ಮಲೆನಾಡಿನ ಪರಿಸರದಂತೆಯೇ ಕಡಲ ನಡುವಿನ ದ್ವೀಪದ ವರ್ಣನೆಯನ್ನು ಇಲ್ಲಿ ಕಾಣಬಹುದಾಗಿದೆ. 'ಬೆಳಕಿನೊಡನೆ ಬಂತು ನೆನಪು', ಜೋಗದಲ್ಲಿ ಮಹಾತ್ಮಗಾಂಧಿಯ ಹೆಸರಿನ ವಿದ್ಯುದಾಗರವನ್ನು ಕಟ್ಟುವಾಗ ಕಂಡ ಹುಡುಗನೊಬ್ಬನ ಅನುಭವ ಕಥನವಿದು. ಅನುಭವದ ಜೊತೆಗೆ ಕಲ್ಪನೆಯು ಹದವಾಗಿ ಬೆರೆತುಬಂದಿರುವ ಇದು ದಟ್ಟ ಅನುಭವಗಳ ನಡುವೆ ಹುಟ್ಟಿಕೊಳ್ಳುವ ನೀಳ್ಗತೆಯಾಗಿದೆ. ಬಾಲಕ ರಾಮುವು ಇಂಜಿನಿಯರ್ ವೃತ್ತಿಯ ತಂದೆಯೊಂದಿಗೆ ಜೋಗಕ್ಕೆ ಬಂದು ಅಲ್ಲಿನ ಕಾರ್ಯಗಳನ್ನು ನೋಡುವ, ತಮ್ಮ ಜೀಪಿಗೆ ಅಡ್ಡಲಾಗಿ ಬರುವ ಕಾಡುಕೋಣಗಳು, ಪ್ರತ್ಯಕ್ಷವಾಗುವ ಹುಲಿ, ನೇರಳೆಹಣ್ಣಿನ ಮರಗಳು ಎಲ್ಲವೂ ಇಲ್ಲಿ ಸಂಗತಿಗಳಾಗಿ ಬರುತ್ತವೆ. ರಾಮುವಿನ ತಾಯಿಯು ಸೌದೆ ಎಂದು ಭಾವಿಸಿ ಹೆಬ್ಬಾವನ್ನು ಬೆಂಕಿಯ ಒಲೆಗೆ ಹಾಕುವುದು. ಜಲಪಾತದಲ್ಲಿ ಬಂಡೆಗಳನ್ನು ಸಿಡಿಸಲು ಮದ್ದು ಬಳಸುವುದು, ಜಲ್ಲಿಯು ಸಿಮೆಂಟಿನೊಂದಿಗೆ ಬೆರೆತು ಟ್ರ್ಯಾಲಿಯಲಿ ಹರಿದುಬರುವುದು, ಮಕ್ಕಳು ಜಾರುಬಂಡಿಯನ್ನು ಆಡಿದಂತೆ ಕಾಣುವುದು. ಆಧುನೀಕತೆಯು ಕಾಲಿರಿಸಿದಾಗ ಹಳ್ಳಿಯಲ್ಲಿ ಜರುಗುವ ವಿದ್ಯಾಮಾನಗಳೊಂದಿಗಿನ ಬದಲಾವಣೆಗಳನ್ನು ಇಲ್ಲಿ ಮಕ್ಕಳಿಗೆ ಪರಿಚಯಿಸಿದ್ದಾರೆ. ಡಿಸೋಜರು ಹೇಳುವಂತೆ ಮಲೆನಾಡಿನ ಅವರ ಬಾಲ್ಯವನ್ನು ನೆನಸುವ ನೆನಹುಗಳಿವೆ. ರಾಮು ಮಾಮನ ನೆನಪು ಬಂದೊಡನೆ ಬೆಳಕು ದಿಗ್ ಎಂದು ಹತ್ತಿಕೊಳ್ಳುತ್ತದೆ. ಅದೊರೊಂದಿಗೆ ನೆನಪುಗಳ ಸರಣಿ ಎಳೆಎಳೆಯಾಗಿ ಬಿಚ್ಚಿಕೊಳ್ಳುತ್ತದೆ. ಇಲ್ಲಿನ ಬರೆವಣಿಗೆಯು ಮಕ್ಕಳ ಕತೆಯ ಎಲ್ಲಾ ತಂತ್ರಗಾರಿಕೆಯನ್ನು ರೂಢಿಸಿಕೊಂಡಿದ್ದು ಓದಿಸಿಕೊಳ್ಳುವ ಗುಣವನ್ನು ಹೊಂದಿದೆ. ಆಧುನಿಕ ಮಕ್ಕಳ ಸಾಹಿತ್ಯದ ತಾತ್ವಿಕತೆಯನ್ನು ಮುಂದಿರಿಸಿಕೊಂಡೇ ಬರೆದಂತಿದೆ. ಜೋಗದ ಸೀಮೆಯ ದಟ್ಟವಾದ ಕಾಡು, ಅದರ ನಡುವೆ ಕಾಣಿಸಿಕೊಳ್ಳುವ ಹಾವಿನ ನಡೆಯಂತಹ ಹಾದಿ, ದಿಗಿಲು ಹುಟ್ಟಿಸುವ ಸಂಗತಿಗಳು, ಸಂತೋಷದ ಘಟನೆಗಳು ಎಲ್ಲವೂ ಕೂಡಿದ್ದು ರಾಮುವಿನ ಸುತ್ತಲು ಘಟಿಸುವ ಅನುಭವಗಳೆಲ್ಲ ಎದುರಾಗುತ್ತವೆ. ವಿದ್ಯುತ್ ತಯಾರಿಕಾ ಘಟಕ ಜೋಗದಲ್ಲಿ ಆರಂಭವಾದ ದಿನಗಳಿನ ಸಂಗತಿಗಳು ಇಲ್ಲಿ ಕಾಣಿಸಿಕೊಂಡು, ಬೃಹತ್ ಮನೆಗಳು ನಿರ್ಮಾಣವಾದ ಹಿನ್ನೆಲೆಗಳು, ಕಟ್ಟಡ ಕಟ್ಟುವ ಕೆಲಸ, ಟ್ರ್ಯಾಲಿಗಳಲಿ ಬೀಳುವ ಸಿಮೆಂಟು ಮಿಶ್ರಣ ಇವೆಲ್ಲವುಗಳು ನಾಗರಿಕತೆಯು ಹಳ್ಳಿಯನ್ನು ತಟ್ಟಿದಾಗ ಉಂಟಾದ ಪರಿಣಾಮಗಳನ್ನು ವಿವರಿಸುತ್ತದೆ. ನಡುವೆ ಕಾಡಾನೆಯ ದಾಳಿಯು ರಾಮುವಿನ ತಂದೆಯ ಮೇಲೆ ಆಗುತ್ತದೆ. ಅದರಿಂದ ಪಾರುಮಾಡಿದ ಬಗೆಯು ಸಿಗುವಂತೆ, ಅಲ್ಲಿ ಕೆಲಸ ಮಾಡುವ ಕೆಲಸದ ಆಳು ಕಾಲುಜಾರಿ ನದಿಯಲ್ಲಿ ಬಿದ್ದು ಸಾವನ್ನು ಅಪ್ಪಿದ್ದರ ಪರಿಣಾಮಗಳು ಇವೆ. ರಾಮುವು ತನ್ನ ಗ್ರಹಿಕೆಯಲ್ಲಿ ಇವೆಲ್ಲವನ್ನು ಕಾಣುವುದು ಈ ಕತೆಯ ಉದ್ದೇಶವಾಗಿದೆ.

**ಕಾಡಾನೆಯ ಕೊಲೆ**: ಕಾಡು ಮತ್ತು ವನ್ಯಜೀವಿಗಳ ಬಗೆಗಿನ ಮಕ್ಕಳ ನಿಸ್ವಾರ್ಥವಾದ ಪ್ರೇಮವು ಇಲ್ಲಿ ತುಂಬಿದೆ. ಶಾಲೆಗೆ ನಿತ್ಯ ಕಾಡಿನ ಹಾದಿಯಲ್ಲಿ ನಡೆದುಕೊಂಡು ಹೋಗುವ ಮಕ್ಕಳು, ಹಾದಿಯ ಹಳ್ಳದಲ್ಲಿ ಹರಿಯುವ ನೀರು ಕುಡಿಯಲು ಬರುವ ಆನೆಯ ಹಿಂಡುಕಂಡಾಗ ಮೊದಮೊದಲು ಹೆದರುವ ಮಕ್ಕಳು. ಮುಂದೆ ಅಭ್ಯಾಸವಾಗಿ ಅವುಗಳ ಮೇಲೆ ಪ್ರೀತಿ ಬೆಳೆಸಿಕೊಳ್ಳುವ ರೀತಿಯು ವರ್ಣಿತವಾಗಿವೆ. ಆನೆಗಳನ್ನು ಮಕ್ಕಳು ಗುರ್ತಿಸಲು ಹೆಸರಿಟ್ಟುಕೊಳ್ಳುವುದು, ಗೇರುಸೊಪ್ಪೆಯ ಪರಿಸರದ ಪರಿಚಯವನ್ನು ಮಾಡಿಕೊಡುವುದು ಮುಂತಾದ ಸಂಗತಿಗಳವೆ. ತಮ್ಮ ನೆಚ್ಚಿನ ಆನೆಯಾದ ಸೋಮನನ್ನು ಯಾರೋ ಗುಂಡಿಕ್ಕಿ ಕೊಲ್ಲುವುದು, ಇದರಿಂದ ಮಕ್ಕಳಿಗಾಗುವ ಸಂಕಟಗಳವೆ. ಇದೊಂದು ರೋಮಾಂಚನಕಾರಿ ಸಾಹಸಮಯ ಪತ್ತೆದಾರಿ ಕಾದಂಬರಿಯಾಗಿದೆ. ನಮ್ಮ ಸುತ್ತಮುತ್ತಲಿನ ಮಲೆನಾಡ ಪ್ರಾಣಿಜಗತ್ತಿನ ಪರಿಚಯವಿದೆ. ಪರಿಸರದ ಮೇಲಿನ ಕಾಳಜಿಯಿದೆ. ದಂತಕ್ಕಾಗಿ ಕಾಡಾನೆಯನ್ನು ಕೊಲ್ಲುವ ಆನೆಗಳ್ಳರ ಪತ್ತೆ ಹಚ್ಚುವಂತೆ ಮಕ್ಕಳನ್ನು ಪ್ರೇರೇಪಿಸಿ, ಅರಣ್ಯ ಅಧಿಕಾರಿಗಳಿಂದ ಪ್ರಶಂಸೆಪಡುವಂತೆ ಮಾಡುವ ಕಥಾ ವಸ್ತುವುಳ್ಳ ಕಾದಂಬರಿ ಇದಾಗಿದೆ. ಇಲ್ಲಿ ಮಕ್ಕಳು ಸಹ ಅರಣ್ಯ ಇಲಾಖೆಯೊಂದಿಗೆ ಕೈಜೋಡಿಸಿ ಕಳ್ಳರನ್ನು ಹಿಡಿಯುವ ಪತ್ತೇದಾರಿಕೆಯನ್ನು ತಂದಿದ್ದಾರೆ. ಜೊತೆಗೆ ಎಳೆಯದರಲ್ಲಿಯೇ ಮಕ್ಕಳು ಪ್ರಾಣಿಗಳ ಮೇಲೆ ಪ್ರೀತಿತೋರಿಸಿ ತಮ್ಮ ಸುತ್ತಲಿನ ಪರಿಸರದ ಬಗೆಗೆ ಆಸಕ್ತಿತಳೆಯುವಂತೆ ಮಾಡುವ ಕಾರ್ಯವು ಇದೆ.

**ಆನೆ ಬಂತೊಂದಾನೆ**: ಮಕ್ಕಳ ಪ್ರಾಣಿ ಪ್ರೀತಿಯನ್ನು ಸಹಜವಾಗಿ ಹೇಳುವ ಕಿರುಕಾದಂಬರಿ ಇದು. ಕಾಡಿನ ಪ್ರಾಣಿಗಳು ಆಗಾಗ ಸಿಲುಕುವ ಅಪಾಯಗಳನ್ನು ಮಲೆನಾಡಿನ ಮಕ್ಕಳು ಕಂಡಿರುತ್ತಾರೆ. ನೀರು ಕುಡಿಯಲು ಹೋಗಿ ಪ್ರವಾಹದ ನದಿಗೆ ಕಾಲುಜಾರಿ ಬೀಳುವ ಪುಟಾಣಿ ಆನೆಮರಿಯು ಪ್ರವಾಹಕ್ಕೆ ಸಿಲುಕಿ ಕೊಚ್ಚಿಹೋಗುತ್ತದೆ. ನದಿಯನ್ನು ನೋಡಲು ಬಂದ ಬಾಲು ಎಂಬ ಹುಡುಗನಿಗೆ ಕಾಣಿಸುತ್ತದೆ. ಗೋಪಿ, ರಾಜು ಗೆಳೆಯರೆಲ್ಲಾ ಸೇರಿ ಅದನ್ನು ಪ್ರವಾಹದಿಂದ ಕಾಪಾಡಿ, ಅದನ್ನು ಅಜ್ಜನ ಕೊಟ್ಟಿಗೆಯಲ್ಲಿ ಯಾರಿಗೂ ಕಾಣಿಸದಂತೆ ಕಟ್ಟಿಹಾಕಿ ರಕ್ಷಿಸುವರು. ಆನೆಮರಿಯ ಸ್ನೇಹದೊಂದಿಗೆ ಮಕ್ಕಳು ಬೆಳೆಯುವ, ಅದನ್ನು ಲಾಲಿಸುವ, ಪೋಷಿಸುವ ಪರಿಯನ್ನು ಪ್ರಾಣಿ ಮತ್ತು ಮಕ್ಕಳ ನಡುವಿನ ಭಾವನಾತ್ಮಕ ಬೆಸುಗೆಯನ್ನು ಇಲ್ಲಿ ಕಾಣಬಹುದಾಗಿದೆ. ಪ್ರವಾಹದ ವಿರುದ್ಧ ಉಪಾಯವಾಗಿ ಸೆಣೆಸುವ ಮಕ್ಕಳ ಜಗತ್ತಿದೆ. ವಾಸ್ತವದ ಸಂಗತಿಗಳವೆ. ಮುಗ್ಧಮಕ್ಕಳ ನಡುವೆ ಹುಟ್ಟುವ ಪ್ರಾಣಿ ಪ್ರೀತಿಯು ಹೇರಳವಾಗಿ ಸಿಗುತ್ತದೆ.

**ಗೋಪಿಯ ಗೊಂಬೆ**: ಡಿಸೋಜರ ಮಹತ್ತ್ವವಾದ ಪ್ರಯೋಗವನ್ನು ನೋಡಬಹುದಾದ ಕಾದಂಬರಿಯು ಇದಾಗಿದೆ. ಗೊಂಬೆಯು ಮಕ್ಕಳ ಜಗತ್ತಿನಲ್ಲಿ ನಿರ್ಜೀವವಾದ ವಸ್ತುವಲ್ಲ. ಮಗು ಅದರೊಂದಿಗೆ ಮಾತನಾಡುತ್ತದೆ, ಆಡುತ್ತದೆ, ತನ್ನಂತೆಯೇ ಗೊಂಬೆಯು ಸಹ ಎಂದು ಮುಗ್ಧವಾಗಿ ತದಾತ್ಮಭಾವವನ್ನು ಹೊಂದಿರುತ್ತದೆ[೪೯]. ಈ ಅಂಶವನ್ನೇ ಮೂಲದ್ರವ್ಯವಾಗಿಸಿಕೊಂಡು ಕಾದಂಬರಿಯು ಸಾಗಿದೆ. ಅಂಗಡಿಯ ಶೋಕೇಸಿನಲ್ಲಿರುವ ಗೊಂಬೆಗೆ ಅದರದೇ ಆದ ಬೇಕುಬೇಡಗಳವೆ. ಯಾರು ಕೊಳ್ಳಲು ಬರುವರೋ ಅವರ

---

[೪೯] ಮಕ್ಕಳ ಸಾಹಿತ್ಯ ಶತಮಾನ, ೨೦೧೫, ಮಕ್ಕಳ ಸಾಹಿತ್ಯದಲ್ಲಿ ಹೊಸಗಾಲ, ಲೇ: ರಾಮೂರ್ತಿ ತೆಮೆಮನೆ, ಪುಟ ೯೬, ೨೦೧೫.

ಒಪ್ಪಿಗೆ, ತಿರಸ್ಕಾರಗಳನ್ನು ಅದು ಲೆಕ್ಕಹಾಕುವುದಿದೆ. ಸರೋಜಳು ಗೊಂಬೆಯನ್ನು ಖರೀದಿಸಿ ಹೋಯ್ದು ತನ್ನ ಶೋಕೇಸಿನಲ್ಲಿ ಮತ್ತೆ ಬಂಧಿಸಿಡುವಳು. ಇದು ಗೊಂಬೆಯ ಮನಸ್ಸಿಗೆ ನೋವುಂಟಾಗುತ್ತದೆ. ಅದರ ಬಯಕೆಗಳು ಮರಟುಹೋಗುತ್ತವೆ. ಸರೋಜಳ ಅಕ್ಕನ ಮಗ ಗೋಪಿಯು ಬಂದಾಗ ಅದನ್ನು ಬಂಧನಮುಕ್ತವಾಗಿಸಿ ಅದರೊಂದಿಗೆ ಆಡುವನು. ಆಗ ಅದು ಜೀವಂತಿಕೆಯನ್ನು ಪಡೆಯುವುದು. ಈ ರೀತಿಯಾಗಿ ಕಾದಂಬರಿಯು ಭಾವನೆಗಳ ಸಮ್ಮಿಳತವನ್ನು ಎಣೆದುಕೊಳ್ಳುತ್ತದೆ. ಮಕ್ಕಳ ಮನೋಲೋಕವನ್ನು ಕಾದಂಬರಿಯಲ್ಲಿ ಕಟ್ಟಿಕೊಟ್ಟು ಪ್ರಬುದ್ಧರಂತಹ ಸಂವೇದನೆಗಳನ್ನು ಎಳೆಯರೂ ಪ್ರಕಟಿಸಬಲ್ಲರು ಎಂಬುದನ್ನು ಈ ಕತೆಯಲ್ಲಿ ಡಿಸೋಜರು ಭಾವಿಸಿದರು.

**ನೇತ್ರಾಣಿ ಗುಡ್ಡಕ್ಕೆ ಯಾತ್ರೆ:** ಇದೊಂದು ರೋಚಕ ಪ್ರವಾಸ ಅನುಭವವನ್ನುಂಟು ಮಾಡುವುದಲ್ಲದೆ ಕತ್ತಲ ರಾತ್ರಿಯನ್ನು ದ್ವೀಪದಲ್ಲಿ ಕಳೆಯುವ ಪರಿ, ನೀರು ನಾಯಿಗಳ ಕತೆ, ಮುಂತಾದ ಅನೇಕ ಅಂಶಗಳು ಈ ಕತೆಯಲ್ಲಿ ವಿವರಿಸುವುದಿದೆ. ಗುಡ್ಡದ ಸುತ್ತಲಿನ ಪರಿಸರದ ಸಂಗತಿಗಳು ಮಕ್ಕಳ ನಡುವೆ ಘಟಿಸುವ ರೀತಿ, ಆಯಾಸದೊಳಗೂ ಆಶಯವನ್ನು ಬಿಡದ ಮನಸ್ಸು ಮುಂತಾದ ಅಂಶಗಳನ್ನು ಇಲ್ಲಿ ಕಾಣಬಹುದು.

**'ವಿನಿಸುನ್ನಿ ಗೆಳೆಯರು'**, ವಿದೇಶಿ ನೆಲದ ಮೋಹ, ಪರಸ್ಪರ ಸ್ನೇಹ, ಸಾಹಸ, ಮನೋಹರಿಕೆ, ಭಾವ ಬೆಸುಗೆ ಮುಂತಾದ ವೈವಿಧ್ಯ ಗುಣಗಳಿಗೆ ಈ ಕತೆಯು ಸಾಕ್ಷಿಯಾಗಿ ಚಿತ್ರಿತವಾಗಿದೆ. ಇದೊಂದು ಪ್ರವಾಸದ ಅನುಭವ ಕಥನದ ಶೈಲಿಯಿಂದ ವಿಶೇಷವಾಗಿದೆ.

**ಹಕ್ಕಿಗೊಂದು ಗೂಡುಕೊಡಿ:** ಪರಿಸರ ಪ್ರೇಮ, ಪರಿಸರ ಕಾಳಜಿಯನ್ನು ಹಕ್ಕಿಯೊಂದರ ಕೇಂದ್ರಿಕರಿಸಿ ಪಕ್ಷಿ ಲೋಕದ ವಿಸ್ಮಯ ಪ್ರಪಂಚವನ್ನು ತೆರೆದಿಡುವುದು, ಮನುಷ್ಯನ ಸ್ವಾರ್ಥ, ನಾಗರಿಕತೆ, ಆಧುನಿಕತೆಗಳ ವರ-ಶಾಪ ಮುಂತಾದ ಮನೋಜ್ಞ ವಿವರಣೆಗಳೊಂದಿಗೆ ಕಾದಂಬರಿ ವಿಭಿನ್ನತೆಯನ್ನು ಕಟ್ಟಿಕೊಡುತ್ತದೆ.

**ಮುಳುಗಡೆ ಊರಿಗೆ ಬಂದವರು:** ನಗರದ ಮಕ್ಕಳು ಜಲಾಶಯಕಂಡಾಗ ಅನುಭವಿಸುವ ಸಂತೋಷ, ಸಂಭ್ರಮಗಳ ವಿವರಗಳನ್ನೊಳಗೊಂಡಂತೆ ಚಿತ್ರಿತವಾಗಿದೆ.

**ಶಾಲೆಗೆ ಹೋಗದ ಹುಡುಗಿಯರು:** ಬಡತನ, ಮಕ್ಕಳ ಲಾಲನೆ ಪಾಲನೆ ಮುಂತಾದ ಯಾವುದೊ ಕಾರಣಗಳಿಂದ ಶಾಲೆಯಿಂದ ವಂಚಿತರಾಗುವ ಹುಡುಗಿಯರು, ಹುಡುಗರಷ್ಟೆ ಧೈರ್ಯಶಾಲಿಗಳು. ಅವರಿಗೆ ಶಿಕ್ಷಣದ ಅಗತ್ಯವಿದೆ ಎಂದು ನಿರೂಪಿಸುವ ಜೊತೆಗೆ ಕಳ್ಳರನ್ನು ಹಿಡಿಯುವಲ್ಲಿ ಹೆಣ್ಣು ಮಕ್ಕಳು ಮುಂದಿದ್ದಾರೆಂದು ಸಾಧಿಸಿ ತೋರುವ ಅಂಶಗಳಿವೆ. ಡಿಸೋಜರ ಕಾದಂಬರಿಗಳು ಭಿನ್ನಭಿನ್ನ ಕಥಾ ವಸ್ತುಗಳಿಂದ ರಚಿತವಾಗಿದ್ದರೂ ಕಥಾ ಪಾತ್ರಗಳಾದ ಮಕ್ಕಳೇ ನಾಯಕ ನಾಯಕಿಯರಾಗಿ ಅವರದೆ ಭಾವ ಪ್ರಪಂಚದ ಚಿತ್ರಣದಲ್ಲಿ, ಅವರದೇ ಬದುಕನ್ನು ಚಿತ್ರಿಸಿರುವ ಇವರು ಮಕ್ಕಳ ಹೊಸ ಬಗೆಯ ಕಾದಂಬರಿಯ ಹುಟ್ಟಿಗೆ ಕಾರಣ ಕರ್ತರಾಗುತ್ತಾರೆ.[೫೦] ಕನ್ನಡದಲ್ಲಿ ಪ್ರಯೋಗಶೀಲತೆಯಿಂದ ಮಕ್ಕಳಿಗಾಗಿ ಕತೆಗಳನ್ನು

---

೫೦ ಮಲೆನಾಡಿಗ: ಡಾ. ನಾ. ಡಿಸೋಜರ ಸಾಹಿತ್ಯ ಅಧ್ಯಯನ ೨೦೧೨. ಸಂ. ಡಾ.ಗುರುರಾವ್ ಬಾಪಟ್ ಪ್ರೊ. ಮಾರ್ಷಲ್ ಶರಾಂ ಪ್ರ: ಗೀತಾಂಜಲಿ ಪುಸ್ತಕ ಪ್ರಕಾಶನ ಶಿವಮೊಗ್ಗ.

ನೀಡುವ ಜೊತೆಗೆ ಹಿರಿಯರ ಸಾಹಿತ್ಯದ ಸ್ವರೂಪಗಳನ್ನು ಮಕ್ಕಳಿಗೂ ಪ್ರತ್ಯೇಕಿಸಿ ನೀಡುವ ಅಗತ್ಯವನ್ನು ಅವರು ಕಂಡುಕೊಳ್ಳುತ್ತಾರೆ.

ನಾ. ಡಿಸೋಜ ಅವರು ಕಾದಂಬರಿಗಳನ್ನು ಬರೆದ ನಂತರ ಅನೇಕ ಲೇಖಕರು ಈ ಪ್ರಕಾರವನ್ನು ಆಸ್ಥೆಯಿಂದ ಬೆಳೆಸಿದರು. ತಮ್ಮ ಸೃಜನಶೀಲತೆಯನ್ನು ಪ್ರಯೋಗಿಸಿ ನೋಡುವ ಜೊತೆಗೆ ಅನ್ಯಭಾಷೆಯ ಕಾದಂಬರಿಗಳನ್ನು ಕನ್ನಡದಲ್ಲಿ ತರುವ ಪ್ರಯತ್ನಗಳನ್ನು ಮಾಡಿದರು. ಅವುಗಳ ಪ್ರಭಾವವನ್ನು ಪಡೆದ ಲೇಖಕರು ಹೊಸತನದ ಪ್ರಯೋಗಗಳನ್ನು ಮಾಡಿದರು. ಈ ಎಲ್ಲಾ ಪ್ರಯತ್ನಗಳಿಂದಾಗಿ ಕನ್ನಡದಲ್ಲಿ ಮಕ್ಕಳ ಕಾದಂಬರಿಗಳು ವಿಭಿನ್ನವಾದ ವಸ್ತುಗಳೊಂದಿಗೆ ಕಾಣಿಸಿಕೊಂಡು ಸಮೃದ್ಧವಾಗಿ ಬೆಳಸು ಬಂದಿತು. ಪ್ರಧಾನವಾಗಿ ಈ ಕಾದಂಬರಿಗಳು ಮಕ್ಕಳ ಭಾವನೆಗಳು ಮತ್ತು ಮಕ್ಕಳ ಪರಿಸರವನ್ನು ವಸ್ತುವನ್ನಾಗಿಸಿಕೊಂಡು ಮೂಡಿಬಂದವು. ಮಕ್ಕಳ ಮನಸ್ಸು ಹರಿದಾಡಬಹುದಾದ ಎಲ್ಲೆಡೆಯು ಇವುಗಳ ವಸ್ತುವು ವ್ಯಾಪಿಸಿಕೊಂಡು ಬೆಳೆದವು. ವಿದೇಶಿ ಸಾಹಿತ್ಯದ ಪ್ರಭಾವವನ್ನು ಅರಗಿಸಿಕೊಂಡರೂ ಅದರಂತೆ ಸಂಪೂರ್ಣವಾಗಿ ವಸ್ತು ಸ್ವಾತಂತ್ರವನ್ನು ಅನುಭವಿಸದಿದ್ದರು ತಮ್ಮದೇ ಆದ ನೆಲದ ಪರಿಸರಕ್ಕೆ ಒಗ್ಗಿಸಿಕೊಂಡು ನಿಂತವು. ಕೆಲವು ವಸ್ತು ಮತ್ತು ಪುಟಗಳ ಸಂಕೀರ್ಣತೆಯನ್ನು ಹೆಚ್ಚಿಸಿಕೊಂಡು ದೀರ್ಘಕತೆಗಳ ಸ್ವರೂಪವನ್ನು ತಳೆದಿವೆ. ಮತ್ತೆಕೆಲವು ವಿಶಾಲವಾದ ವಸ್ತು ಹರಿವನ್ನು ಹೊಂದಿ ನೀಳ್ಗತೆಯಾದರೆ ಈ ಎಲ್ಲಾ ಲಕ್ಷಣಗಳನ್ನು ಮೀರಿ ಬೆಳೆದು, ಹಿರಿಯರ ಕಾದಂಬರಿಯ ಲಕ್ಷಣಗಳನ್ನು ಅನುಸರಿಸಿ ಪುಟದ ಓಟಕ್ಕೆ ಮಿತಿ ಹಾಕಿಕೊಂಡು ಬರೆದವುಗಳು ಮಕ್ಕಳ ಕಾದಂಬರಿಗಳೆನಿಸಿಕೊಂಡವು. ಇಲ್ಲಿ ಇವುಗಳನ್ನು ವಿಂಗಡಿಸಿ ನೋಡಲು ಸಾಧ್ಯವಾಗದಿದ್ದರೂ ಲೇಖಕರು ಕಂಡುಕೊಂಡ ಅಭಿಪ್ರಾಯಗಳ ಮೇಲೆ ಅವುಗಳನ್ನು ಪ್ರತ್ಯೇಕಿಸಿ ನೋಡಬಹುದಾಗಿದೆ. ಆದರು ಇವೆಲ್ಲವು ವಸ್ತುವಿನ ಆಧಾರದಲ್ಲಿ ನೋಡಿದಾಗ ದೀರ್ಘಕತೆಗಳನ್ನು ಹೋಲುತ್ತವೆ ಎನ್ನಬಹುದು. ಮತ್ತೆ ವಿರಳವಾಗಿ ಕಾದಂಬರಿಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿರುವುದು ಇರುವುದರಿಂದ ಹಾಗೂ ಲೇಖಕರು ತಮ್ಮ ಪುಸ್ತಕದ ಮುಖಪುಟದ ಮೇಲೆ ಬರೆದುಕೊಂಡಿರುವ ಆಧಾರದ ಮೇಲೆ ಅವುಗಳನ್ನು ಕಾದಂಬರಿ ಎಂದು ಹೆಸರಿಸಿ ನೋಡಲಾಗಿದೆ. ಕನ್ನಡದಲ್ಲಿ ಇಂತಹ ರಚನೆಗಳನ್ನು ಬಿಡಿಬಿಡಿಯಾಗಿ ಅಧ್ಯಯನಮಾಡಲು ಸಾಧ್ಯವಾಗದಿರುವುದರಿಂದ ಇಡಿಯಾಗಿ ನೋಡಬಹುದಾಗಿದೆ. ನಾ. ಡಿಸೋಜರ ಕಾದಂಬರಿಗಳ ಲಕ್ಷಣಗಳನ್ನು ಪೂರ್ಣವಾಗಿ ಬಿಡದೆ ಅವುಗಳನ್ನು ಒಳಗೊಂಡಂತೆ ವಸ್ತು ಭಿನ್ನತೆಯನ್ನು ಕಂಡುಕೊಂಡು ಕನ್ನಡದ ಲೇಖಕರು ಕೆಲವು ಮಹತ್ತರದ ಕತೆಗಳನ್ನು, ದೀರ್ಘಕತೆಗಳನ್ನು, ಕಾದಂಬರಿಗಳನ್ನು ಬರೆದಿರುವುದನ್ನು ಗಮನಿಸಬಹುದು. ಅವುಗಳಲ್ಲಿಯ ಲಕ್ಷಣಗಳನ್ನು ಸಾಮಾನ್ಯವಾಗಿ ಕೆಳಗೆ ವಿಂಗಡಿಸಿರುವಂತೆ ಅಧ್ಯಯನದ ಸಲುವಾಗಿ ನೋಡಬಹುದು.

೧ ಮಕ್ಕಳ ಮುಗ್ಧತೆ, ಇತರೆ ಭಾವನೆಗಳನ್ನು ಒಳಗೊಂಡ ಅವರದೇ ಸಂಗತಿಗಳಿಂದ ಕೂಡಿದ, ಅವರ ಪರಿಸರದ ಕಥಾ ವಸ್ತುವುಳ್ಳ ಕಾದಂಬರಿಗಳು.

೨ ಮಕ್ಕಳು ಮತ್ತು ದೊಡ್ಡವರ ನಡುವಿನ ಪರಿಸರದ ಸಂಗತಿಗಳಿಂದ ಕೂಡಿದ ಕಾದಂಬರಿಗಳು.

೩ ಶೈಕ್ಷಣಿಕ ಉದ್ದೇಶದ, ಪಠ್ಯದ ಆಶಯಗಳನ್ನು ಬಯಸುವ ಕಾದಂಬರಿಗಳು.

೪ ಪರಿಸರದ ಸಮಸ್ಯೆಗಳ ತಿಳಿಸುವ, ಪರಿಸರದ ಅಗತ್ಯವನ್ನು ಹೇಳುವ, ಉಳಿವಿಗಾಗಿ ಹಂಬಲಿಸುವ, ಪ್ರಾಣಿ ಮತ್ತು ಮಾನವನ ಸಂಘರ್ಷದ ಕಾದಂಬರಿಗಳು.

೫ ಸಾಮಾಜಿಕ ಸಮಸ್ಯೆಗಳು, ಪರಿಹಾರಗಳು, ಸ್ಪಂದನೆಗಳ ವಸ್ತುವಾಗಿ ಉಳ್ಳ ಕಾದಂಬರಿಗಳು.

೬ ಮಕ್ಕಳ ವಯಕ್ತಿಕ, ಕೌಟುಂಬಿಕ ಸಮಸ್ಯೆಗಳು, ಪರಿಹಾರಗಳು, ಸ್ಪಂದನೆಗಳ ವಸ್ತುಕೇಂದ್ರಿತ ಕಾದಂಬರಿಗಳು.

೭ ಹಿರಿಯರ ಚಟಗಳು, ಮಕ್ಕಳ ಮೇಲಿನ ಪರಿಣಾಮದ ಸಂಗತಿಗಳುಳ್ಳ ಕಾದಂಬರಿಗಳು.

೮ ಮಾನವನ ಬದುಕಿನ ಶೋಧನೆಗಳು, ಯಂತ್ರಗಳು, ತಾಂತ್ರಿಕತೆ ಕುರಿತ ವೈಜ್ಞಾನಿಕ ಕಾದಂಬರಿಗಳು.

೯ ಮಾನವೀಯ ಸಂಬಂಧಗಳು, ಆಸ್ತಿ, ಅಂತಸ್ತು ವಸ್ತುವುಳ್ಳ ಕಾದಂಬರಿಗಳು.

೧೦ ಅನ್ಯಗ್ರಹ ಯಾನ, ಅವಾಸ್ತವ ಕಲ್ಪನೆಗಳ, ಫ್ಯಾಂಟಸಿ ಕಾದಂಬರಿಗಳು.

೧೧ ಪ್ರಾಣಿಗಳು ಮಾನವನ ವಾಸ್ತವ ಬದುಕನ್ನು ಜೀವಿಸುವ ಕಾದಂಬರಿಗಳು.

೧೨ ಸಾಹಸದ, ವಿಜಯದ ಹಾದಿಯಲ್ಲಿ ನಡೆಯುವ, ದುಷ್ಟರ ಸಂಹರಿಸುವ ರೋಚಕ ಕಾದಂಬರಿಗಳು.

೧೩ ನಗರ ಮತ್ತು ಗ್ರಾಮೀಣ ಬದುಕಿನ ಹೋಲಿಕೆಗಳಿರುವ ಸಾಮಾಜಿಕ ಕಾದಂಬರಿಗಳು.

೧೪ ಕ್ರೀಡೆ, ಮನರಂಜನೆ, ಮಾಧ್ಯಮಗಳ ಕುರಿತಾದ ಕಾದಂಬರಿಗಳು.

೧೫ ಇತರ ಕಾದಂಬರಿಗಳು.

ಈ ಎಲ್ಲಾ ಆಶಯಗಳನ್ನು ಒಳಗೊಂಡಂತೆ ಕನ್ನಡದಲ್ಲಿ ನಡೆದ ಕೆಲವು ಮಹತ್ತರದ ಪ್ರಯೋಗಗಳನ್ನು, ಲೇಖಕರನ್ನು, ದೀರ್ಘಕತೆ, ಕಾದಂಬರಿಯನ್ನು ಅವುಗಳ ತಾತ್ವಿಕತೆಯನ್ನು ತಿಳಿಯುವುದು ಇಲ್ಲಿ ಮುಖ್ಯವೆನಿಸುತ್ತದೆ.

## ೮.೩ ಕನ್ನಡದ ಕೆಲವು ಲೇಖಕರ ವಿಶಿಷ್ಠ ಸಾಧನೆಗಳು

**ಎಚ್. ಎಸ್. ವೆಂಕಟೇಶ ಮೂರ್ತಿ**

ಕನ್ನಡ ಮಕ್ಕಳ ಸಾಹಿತ್ಯದ ದಿಗ್ಗಜರಲ್ಲಿ ಇವರು ಪ್ರಮುಖರು. ಇವರು ಮಕ್ಕಳಿಗಾಗಿ ಅನೇಕ ಕತೆ, ಕಾದಂಬರಿಗಳನ್ನು ಬರೆದಿದ್ದಾರೆ. ಸಾಮಾಜಿಕ ಸಮಸ್ಯೆಗಳನ್ನು ಮುಂದಿರಿಸಿಕೊಂಡು ಹೊಸ ಹೊಳವುಗಳೊಂದಿಗೆ ನೋಡಿದ ಸೃಜನಶೀಲ ಲೇಖಕರಿವರು. ಮಕ್ಕಳಿಗಾಗಿ ಬರೆಯುವುದು ಎಂದರೆ ಮೂಗು ಮುರಿಯುತ್ತಿದ್ದವರಿಗೆ ತಮ್ಮ ಕತೆಗಳ ಮೂಲಕ ಉತ್ತರ ನೀಡಿದ ಪ್ರಮುಖರು. ನವೋದಯ, ನವ್ಯ, ನವ್ಯೋತ್ತರ ಕಾಲದಲ್ಲಿಯು ತಮ್ಮ ಛಾಪನ್ನು ಉಳಿಸಿಕೊಂಡವರು. 'ಚಿನ್ನಾರಿ ಮುತ್ತಾ' ಇವರ ಕತೆಯೊಂದು ಸಾಮಾಜಿಕ ಬದುಕಿನ ಎಳೆಗಳ ಸುತ್ತಾ ಬೆಳಕು ಚೆಲ್ಲುವುದರೊಂದಿಗೆ ವಾಸ್ತವತೆಯನ್ನು ಕಟ್ಟಿಕೊಟ್ಟಿತು. ಇವರು ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ. ಅವು ಮಕ್ಕಳನ್ನು ಪಾತ್ರಗಳನ್ನಾಗಿ

ನೋಡಿರುವಂತವುಗಳಾದರೂ ಪ್ರೌಢಿಮೆಯಲ್ಲಿ ಹಿರಿಯದಾಗಿವೆ. ಆದುದರಿಂದ ಮಕ್ಕಳ ಕಾದಂಬರಿ ಎನ್ನುವ ಲಕ್ಷಣಗಳನ್ನು ಕಾಣಲಾಗುವುದಿಲ್ಲ. ಆದರೂ ಹೆಸರಿಸುವಂತಹವು ಅಮಾನುಷರು, ಕದರಿನ ಕೋಟೆ, ಅಗ್ನಿಮುಖಿ ಪ್ರಮುಖವಾದವುಗಳಾಗಿವೆ.

**ಆರ್.ವಿ. ಭಂಡಾರಿ**

ಬಂಡಾಯ ಸಾಹಿತಿಯಾದ ಆರ್. ವಿ. ಭಂಡಾರಿಯವರು ಮಕ್ಕಳ ಸಾಹಿತ್ಯದಲ್ಲಿ ಅನೇಕ ಬಗೆಯ ವೈಚಾರಿಕ ನಿಲುವನ್ನು ಬಿಟ್ಟುಕೊಡದೆ ಇರುವುದನ್ನು ಇವರ ಕೃತಿಗಳು ಹೇಳುತ್ತವೆ. ವೃತ್ತಿಯಲ್ಲಿ ಶಿಕ್ಷಕರಾದ ಭಂಡಾರಿಯವರು ಸದಾ ಲವಲವಿಕೆಯಿಂದಲೂ, ಮಕ್ಕಳ ಮೇಲಿನ ಕಾಳಜಿಯಿಂದಲೂ ಎಚ್ಚರವಹಿಸಿ ಸಹಜ ರೀತಿಯಿಂದಲೇ ತಮ್ಮ ಮನೋಧರ್ಮವನ್ನು ಪ್ರಕಟಿಸುತ್ತಾರೆ. ಅವರ 'ಬಿರುಗಾಳಿ' ಕಾದಂಬರಿಯಲ್ಲಿ ಒಬ್ಬ ಬಾಲಕನ ಅರಿವನ್ನು ಕಟ್ಟಿಕೊಡುತ್ತಾರೆ. ಈ ಕಾದಂಬರಿಯಲ್ಲಿ ಬಾಲಕನ ಬಾಲ್ಯ ಮೀರಿದ ವರ್ತನೆಗಳನ್ನು ಚಿತ್ರಿಸಿ ಪ್ರಜ್ಞಾಪೂರ್ವಕವಾಗಿಯೇ ಕೆಲವು ಕಡೆ ಗಮ್ಯತೆ ಮೀರಿ ಮಕ್ಕಳ ವ್ಯಾಪ್ತಿಗಿಂತ ವಿಸ್ತರಿಸಿ ಮುನ್ನುಗ್ಗುತ್ತಾರೆ. ಇಲ್ಲಿ ಮಕ್ಕಳ ಜಗತ್ತಿದ್ದರೂ ಮಕ್ಕಳಿಗೆ ದಕ್ಕದಾದ ಓದು ಕಾಣಿಸಿಕೊಂಡು ಪ್ರಬುದ್ಧರ ಸಾಹಿತ್ಯದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಆದರೂ ಮಕ್ಕಳಿಗಾಗಿ ನಡೆದ ರಚನೆ ಇದಾಗಿದ್ದು ಪ್ರಯೋಗದ ದೃಷ್ಟಿಯಿಂದ ಗಮನಿಸುವಂತಹುದಾಗಿದೆ.

**'ಯಶವಂತನ ಯಶೋಗೀತ'**

ಈ ಕಾದಂಬರಿಯು ಒಬ್ಬ ಹುಡುಗನ ಆಗು ಹೋಗುಗಳ ಸುತ್ತ ಹಬ್ಬಿಕೊಳ್ಳುತ್ತ ಸಾಗುತ್ತದೆ. ಇದು ವಾಸ್ತವ ಪ್ರಕಾರದ ಲಕ್ಷಣಗಳನ್ನು ತಂದಿಡುವ ಕಾದಂಬರಿಯಾಗಿದೆ. ಯಶವಂತನ ತಂದೆ ತಾಯಿ ಕೂಲಿಕಾರರಾಗಿದ್ದು, ಶೋಷಣೆಯ ನೆಲದಿಂದ ಆರಂಭವಾಗುವ ಕತೆಯು ಯಶವಂತನ ಬದುಕು ಕಟ್ಟಿಕೊಳ್ಳುವತ್ತಾ ಸಾಗುತ್ತದೆ. ಜಮೀನ್ದಾರನ ಹಿತ್ತಲಿನ ಬಿಡಾರದ ವಾಸಿಯದ ಯಶವಂತ, ಅವನ ಅಕ್ಕ ಒಡಹುಟ್ಟಿದ ಸೋದರ ಎಲ್ಲರೂ ಕೂಲಿ ಮಾಡುವ ಅನಿವಾರ್ಯತೆಯೊಳಗೂ ತನ್ನ ತಾಯಿ ಹಟಮಾಡಿ ಶಾಲೆಗೆ ಸೇರಿಸುತ್ತಾಳೆ. ಜಾಣ ಹುಡುಗನಾದ ಯಶವಂತ ಎಷ್ಟುಬೇಗ ಕಲಿಯುವನೋ ಅಷ್ಟೆ ಬೇಗ ಕಳ್ಳತನದ ಆರೋಪಕ್ಕೆ ತುತ್ತಾಗಿ ಪೆಟ್ಟುತಿಂದು, ದೇಹ ಮನಸ್ಸುಗಳ ನೋವನ್ನುಂಡು ಊರು ಬಿಡುವನು. ಮಾವನ ಮನೆಗೆ ಬಂದು ಗಟ್ಟಿ ಮನಸ್ಸಿನಿಂದ ಮಾವನ ಕಸುಬುಗಳಾದ ದನಸಾಕುವುದು, ಗಾಡಿ ಹೊಡೆಯುವುದು ಕಲಿತು, ಸೊಗಸಾದ ಗಾಡಿಕಾರನಾದರೂ ಅತ್ತೆಯ ಮತ್ಸರ್ಯಕ್ಕೆ ತುತ್ತಾಗುವನು. ಗಾಡಿಯನ್ನು ಅವನು ತಿರುಗಿಸುವಾಗ ಅದು ಉರುಳಿಬಿದ್ದು ಮಾವನಿಂದ ಚೆನ್ನಾಗಿ ಥಳಿಸಿಕೊಳ್ಳುವನು. ಮತ್ತೆ ಮನಸ್ಸಿನ ಮೇಲೆ ಗಾಯವಾಗಿ ನೊಂದುಕೊಂಡು ತನ್ನ ಬದುಕಿನ ಬೇರೊಂದು ಹಾದಿಯನ್ನು ಹುಡುಕುವನು. ಯಕ್ಷಗಾನದ ತಂಡದಲ್ಲಿ ಸೇರಿಕೊಂಡು ಅಲ್ಲಿಂದ ಬಯಲಾಟದ ತಂಡಕ್ಕೆ ಸೇರಿ ತನ್ನ ಹೆಸರನ್ನು ಬದಲಾಯಿಸಿ ಕೊಳ್ಳುವನು. ಜೋನಿ ಎನ್ನುವ ಕ್ರಿಶ್ಚಿಯನ್ಸ್ ಹುಡುಗನಾಗಿ ಹೋಗುವನು. ಇಲ್ಲಿಯೂ ತನಗಾಗದವರ ಮೇಲೆ ಅಭಿನಯದ ನೆಪದಲ್ಲಿ ಸೇಡು ತೀರಿಸಿಕೊಳ್ಳಲು ಹೋಗಿ ಮಾಲೀಕನ

ಕೋಪಕ್ಕೆ ತುತ್ತಾಗಿ ಹೊರಹಾಕಲ್ಪಡುವನು. ನಂತರ ಸನ್ಯಾಸಿಯೊಬ್ಬನ ಬಳಬಂದು ಸಿದ್ಧಪ್ಪನೆಂಬ ಹೆಸರಿನ ಹುಡುಗನಾಗುವನು. ಅಲ್ಲಿ ಸುಖವಾಗಿದ್ದವನಿಗೆ ಆ ವಾತಾವರಣವು ಅನಾಚಾರದಿಂದ ಕೂಡಿದೆ ಎನಿಸಿ ಹೊರಬರುವನು. ಹೋಟೆಲ್ ಕೆಲಸವನ್ನು ಆರಿಸಿಕೊಂಡು ಮಾಡುವಾಗ ಮತ್ತೆ ಸೇಡು, ದ್ವೇಷ, ಮುಂತಾದ ರೀತಿಯಲ್ಲಿ ಮನಸಿಕ್ಕಿ ನಲುಗುವನು. ಅಲ್ಲಿನಬಾಲ ಕಾರ್ಮಿಕರ ಹೋರಾಟದಲ್ಲಿ ಭಾಗವಹಿಸುವನು. ಅನೇಕ ದಾರಿಗಳಲ್ಲಿ ನಡೆದ ಯಶವಂತನ ಏಳು ಬೀಳುಗಳು ತನ್ನ ಸ್ವಾಭಿಮಾನದ ವಿಷಯದಲ್ಲಿ ಬಗ್ಗದ ಮನಸ್ಥಿತಿ, ಸಾಮಾಜಿಕ ನೋವಿಗೆ ಸ್ಪಂದನೆ ಇವೆಲ್ಲವೂ ಇಲ್ಲಿ ಕಾಣಿಸಿಕೊಳ್ಳುತ್ತವೆ. ನಮ್ಮ ಸುತ್ತಲಿನ ವಾಸ್ತವಗಳೊಂದಿಗೆ ಸ್ಪಂದಿಸುವ ಬರವಣಿಗೆ ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಇಲ್ಲವೆನ್ನುವಷ್ಟು ವಿರಳವಾದ ಓದಿನ ಅಭ್ಯಾಸವನ್ನು ರೂಢಿಸಿಕೊಂಡು ಸಾಹಿತ್ಯ ಆಸಕ್ತಿಯನ್ನು ವಿಸ್ತರಿಸಿ ಕೊಳ್ಳುತ್ತಿರುವ, ಬೆಳೆಯುತ್ತಿರುವ ಮಕ್ಕಳಗಾಗಿರುವ ರಚನೆಗಳೇ ನಮ್ಮಲ್ಲಿ ವಿಫುಲವಾಗಿ ಬಂದಿಲ್ಲ. ಪುಟ್ಟ ಮಕ್ಕಳಿಗೆ, ಪಕ್ಷಿ ಪ್ರಾಣಿಗಳಿಗೆ, ಮರಗಿಡ ಹೂ ಹಣ್ಣು ಪರಿಸರ, ಇಷ್ಟಕ್ಕೆ ಸೀಮಿತವಾಗಿದ್ದ ಮಕ್ಕಳ ಕಥಾ ಸಾಹಿತ್ಯವನ್ನು ನಮ್ಮ ಸುತ್ತಲಿನ ಕಟುವಾದ ವಾಸ್ತವಗಳನ್ನು ಅನುಭವಿಸುತ್ತಲೇ ಇರುವ ಮಕ್ಕಳಿಗೆ ತಕ್ಕದಾಗಿ ಉಣ ಬಡಿಸಿದವರು ಆರ್. ವಿ ಭಂಡಾರಿ ಯವರು. ಕೆಳವರ್ಗದ ಶೋಷಣೆಗೊಳಗಾಗುತ್ತಿರುವ ಮಕ್ಕಳ ಸುತ್ತಲಿನ ಅನುಭವಗಳಿಗೆ ಇಲ್ಲಿನ ಕಥಾವಸ್ತು ಸ್ಪಂದನೆಗೊಂಡಿರುವುದು ಮಕ್ಕಳ ಕಥಾ ಸಾಹಿತ್ಯದ ಭಿನ್ನತೆಯ ತುಡಿತಕ್ಕೆ ನಿದರ್ಶನವಾಗಿದೆ.

ಭಂಡಾರಿಯವರು ಯಶೋವಂತನ ಸ್ವಾಭಿಮಾನದ ಮೂಲಕ ಮಕ್ಕಳಲ್ಲಿರುವ ವ್ಯಕ್ತಿತ್ವವನ್ನು ಜಾಗೃತ ಗೊಳಿಸುತ್ತಾರೆ ನೋವಾದಾಗಲೆಲ್ಲಾ ಸುಮ್ಮನಿರದೆ ಹೊಸ ಹೊಸ ರೀತಿಯಲ್ಲಿ ಹೊಂದುಕೊಳ್ಳುವ ಮನೋ ಪ್ರವೃತ್ತಿಯನ್ನು ಚಿತ್ರಿಸಿದ್ದಾರೆ. ವಿಭಿನ್ನ ಬದುಕಿನ ಅನುಭವಗಳನ್ನು ಮಕ್ಕಳ ಸ್ಪಂದನೆಯನ್ನು ಅವರಲ್ಲಿನ ಸಹಜ ವರ್ತನೆಗಳ ಪ್ರಕಟಣೆಯನ್ನು ಕಥಾ ವಸ್ತುವಾಗಿಸಿ, ಮಕ್ಕಳ ಕಥಾ ಸಾಹಿತ್ಯದ ವಸ್ತುವಿನ ಹರಿವು ವಿಸ್ತಾರಗೊಳ್ಳುವಂತೆ ಮಾಡಿದ್ದಾರೆ.

'ಚಿನ್ನದ ಹುಡುಗಿ ಚಿನ್ನಮ್ಮ' ಆರ್.ವಿ. ಭಂಡಾರಿ ಯವರು ರಚಿಸಿರುವ ನೀಳ್ಗತೆಯಾಗಿದೆ[೫೧]. ಗ್ರಾಮೀಣ ಪ್ರದೇಶದಲ್ಲೇ ಬೆಳೆದಿರುವ ಚಿನ್ನಮ್ಮ ಎಂದೂ ಪೇಟೆಯನ್ನು ಕಂಡವಳಲ್ಲ. ಅವ್ವನ ಜೊತೆ ಹಟವಿಡಿದು ಹೊನ್ನಾವರ ಪೇಟೆಯ ತೇರಿಗೆ ಹೋಗುತ್ತಾಳೆ. ಮೊದಲ ಬಾರಿಗೆ ಅವಳಿಗೆ ಉಂಟಾದ ಸಂತೋಷ ಅಷ್ಟಿಷ್ಟಲ್ಲ. ಬಣ್ಣದ ಹೂಗಳಿರುವ ಹೊಸ ಲಂಗದ ಆಕರ್ಷಣೆಯಾಗುತ್ತದೆ. ಇವೆಲ್ಲಾ ಮಕ್ಕಳ ಸಹಜದ ಬಯಕೆಗಳು. ಅವಳು ತಂದೆಯಿಲ್ಲದ ಬಡತನದ ಕುಟುಂಬದ ಹುಡುಗಿ. ಬಡ, ನಿರ್ಗತಿಕ ಮಕ್ಕಳ ಓದಿನ ಸವಾಲುಗಳು ಇಲ್ಲಿವೆ. ನಗರ ಜೀವನದ ಮನೆಗಳನ್ನು ಕಾಣುವಲ್ಲಿ ಕೀಳರಿಮೆಯನ್ನು ಪ್ರಕಟಿಸಿಕೊಳ್ಳುವ. ಶೋಷಿಸುವ ಸಮಾಜದ ಹಿನ್ನೆಲೆಗಳಿವೆ. ಸಂಕಷ್ಟದ ನಡುವೆಯು ಓದಿ ಸಾಧಿಸುವ ಯಶಸ್ಸುಗಳಿವೆ. ಮದುವೆ ಸಂದರ್ಭಗಳ ಸಂಭ್ರಮಗಳು ಬಂದಂತೆ ಅದರ ಹಿಂದಿನ ನೋವುಗಳು ಕಾಣಿಸಿಕೊಳ್ಳುತ್ತವೆ. ಅಲ್ಲಲ್ಲಿ ಸಂಗತಿಗಳ ನಡುವೆ ಸಂಭಾಷಣೆಯನ್ನು ತಂದಿರುವುದು ಕತೆಯ ಸೊಗಸನ್ನು ಹೆಚ್ಚಿಸುತ್ತದೆ. ಓದುಗನಿಗೆ ಇಷ್ಟವಾಗುವ ಪ್ರೇರಕವಾದ ಭಾಷೆಯು. ಹುಬ್ಬಳ್ಳಿ. ಕಾರವಾರದ ಪ್ರಕೃತಿಯ

---

[೫೧] ಅಲರು : ಮಕ್ಕಳ ಸಾಹಿತ್ಯ ಕುರಿತು. ಲೇ: ಆನಂದ ಪಾಟೀಲ ೨೦೧೦. ಪ್ರ: ಅಭಿನವ ಬೆಂಗಳೂರು. ಪುಟ ೪೪.

ಒಡನಾಟವೂ ಇದೆ. ಹಕ್ಕಿ ಪಕ್ಷಿಗಳು, ಮರ ಮುಂತಾದ ಪರಿಸರದ ಸಂಗತಿಗಳು ಸಹಜವಾಗಿ ಸಿಗುತ್ತವೆ. ದಾರುಣ ಬದುಕಿನ ಅನಪೇಕ್ಷಿತ ಘಳಿಗೆಗಳು, ಭಯಾನಕ ನಡವಳಿಕೆಗಳು ಮಕ್ಕಳ ಮನಸ್ಸಿನ ಮೇಲಾಗುವ ಪರಿಣಾಮಗಳ ತೀವ್ರತೆಯನ್ನು ಕಟ್ಟಿಕೊಟ್ಟಿರುವುದನ್ನು ನೋಡುತ್ತೇವೆ. ಮಕ್ಕಳಿಗೆ ಇಷ್ಟವಾಗುವ ಸರಳವಾದ ಸಂಭಾಷಣೆಗಳನ್ನು ಭಂಡಾರಿಯವರು ತಂದಿರುವುದರಿಂದ ಓದಲು ಸುಲಭವೆನಿಸುತ್ತದೆ. ಮಕ್ಕಳಿಗೆ ಮನಮುಟ್ಟುವ ಸನ್ನಿವೇಶಗಳನ್ನು ಇಲ್ಲಿ ನವಿರಾಗಿ ಮೂಡಿಸಿದ್ದಾರೆ.

**ಎಸ್. ವಿ. ಶ್ರೀನಿವಾಸ್ ರಾವ್**

ಇವರ ಪ್ರಮುಖ ಕಾದಂಬರಿ 'ಹಾರೋ ಹನುಮ' ವಿಶೇಷವಾಗಿ ಗಮನ ಸೆಳೆಯುವಂತಹ ಕೃತಿಯಾಗಿದೆ. ಕತೆಯು ಫ್ಯಾಂಟಸಿಯನ್ನು ಹೊಂದಿದೆ.[೫೨] ಒಂದು ಬೆಲೂನಿನ ಸುತ್ತ ಎಣೆದು ಕೊಂಡಿರುವ ಕತೆಯಿದು. ಬೊಂಬೆ ಮಾರುವ ಬಡ ಹುಡುಗನೊಬ್ಬನ ಜೊತೆಗಾತಿಯಾದ ಬೆಲೂನು ಮಾಡುವ ಸಾಹಸ, ಚಾಕಚಕ್ಯತೆಗಳು ಕಂಡುಬರುವ ಚಿತ್ರಣಗಳಿವೆ. ಅದು ಹಿರಿಯರು ತೋರುವ ವರ್ತನೆ, ದುರಾಸೆಯ ಪರಿಣಾಮಗಳು, ಆಸೆ, ಲಾಭಕೋರತನ ಮುಂತಾದ ಸಂಗತಿಗಳಿವೆ. ಆ ಬೆಲೂನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಿ ರಾಮಾಯಣದ ಹನುಮನಂತೆ ವರ್ತಿಸುವುದರಿಂದ ಅದು ಹಾರೋ ಹನುಮನಾಗುತ್ತದೆ. ದುಷ್ಟರನ್ನು ಹೆದುರಿಸುವ ಪ್ರಸಂಗಗಳದ್ದು ಜನರನ್ನು ತಿದ್ದುವ ಕಾರ್ಯವನ್ನು ಮಾಡುತ್ತದೆ. ಹೀಗೆ ಬೆಲೂನು ಪಡೆದುಕೊಳ್ಳುವ ಶಕ್ತಿಯು ಫ್ಯಾಂಟಸಿಯನ್ನು ಹರಡಿಕೊಳ್ಳುತ್ತದೆ.

**ಗೀತಾ ಕುಲಕರ್ಣಿ**

ಮಕ್ಕಳ ಕಿರು ಕಾದಂಬರಿ ಕ್ಷೇತ್ರವನ್ನು ವಿಸ್ತರಿಸಲು ಸಹಕಾರಿಯದವರು ಗೀತಾ ಕುಲಕರ್ಣಿಯವರು. ಹೊಸತನಗಳ ಹಂಬಲದೊಂದಿಗೆ ಬರೆದವರು. ಇವರ ಪ್ರಮುಖವಾದ ಕಾದಂಬರಿಯೆಂದರೆ 'ನೇಚಿ ಗುಬ್ಬಚ್ಚಿ' ಯಾಗಿದೆ. ದಕ್ಷಿಣ ಕನ್ನಡದ ಮಲೆನಾಡಿನ ಪರಿಸರವನ್ನು ಮುಂದಿರಿಸಿಕೊಂಡು ಮಕ್ಕಳ ಬಾಲ್ಯದ ಜಗತ್ತನ್ನು ತೆರೆಸಿ ನೋಡುವ ಪ್ರಯತ್ನಗಳನ್ನು ಮಾಡಿರುವ ಇವರು ನಿಸರ್ಗದ ಮಡಿಲನ್ನು ಅದರ ಆಸ್ವಾದನೆಯನ್ನು ಮೇಳೈಸಿ ಬರೆದಿದ್ದಾರೆ. ರಾಜು ಎನ್ನುವ ಹುಡುಗನು ಗುಬ್ಬಚ್ಚಿಯು ಮಾಡುವ ಚಿಲಿಪಿಲಿ ಸದ್ದಿಗೆ ಮಾರುಹೋಗಿ ಅದರ ಸಂಗವನ್ನು ಬಯಸುತ್ತಾನೆ. ಹಕ್ಕಿಯ ಪುಟ್ಟದಾದ ಬಾಲದ ಬಡಿತ, ಅದು ಕಾಳನ್ನು ಕುಕ್ಕಿ ತಿನ್ನುವ ಚಪಲಕೆ ಎಲ್ಲವನ್ನು ಕುತೂಹಲದ ಕಣ್ಣಿಂದ ಕಾಣುವ ಹಂಬಲವಿದೆ. ಮಕ್ಕಳ ಸಂವೇದನಾಶೀಲ ಮನಸ್ಸು, ಗ್ರಹಿಕೆ, ವಾಸ್ತವವು ತಂದೊಡ್ಡುವ ಸವಾಲುಗಳು, ಮುಗ್ಧತೆಯಿಂದ ಪರಿಹರಿಸಿಕೊಳ್ಳುವ ವಿಧಾನಗಳು ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತವೆ. ಕೋಳಿ ಕಾಳಗದಲ್ಲಿ ಅವನ ಪ್ರೀತಿಯ ಕೋಳಿಯನ್ನು ಅವನಿಗೆ ತಿಳಿಯದಂತೆ ಬಳಸಿಕೊಂಡಿದ್ದು, ಅದು ಅನುಭವಿಸಿದ ನೋವನ್ನು ತಿಳಿದು ಸಂಕಟ ಪಡುತ್ತಾನೆ. ಆದರೆ ಅದು ಕಾಳಗವನ್ನು ಗೆದ್ದಿದೆ ಎಂದಾಗ ಆನಂದವನ್ನು ಅನುಭವಿಸಿ ಆ ಹುಂಜವನ್ನು ಮುದ್ದಾಡುತ್ತಾನೆ. ಮುಂದೆ ಆ ಹುಂಜವನ್ನು ಕಾಳಗಕ್ಕೆ ಕೊಡದಿರಲು ನಿರ್ಧರಿಸುತ್ತಾನೆ.

---

[೫೨] ಅದೇ, ಪುಟ ೪೭.

ಅದನ್ನು ಸ್ವತಂತ್ರವಾಗಿ ಆಡಲು ಬಿಟ್ಟು ಮೋಜು ನೋಡುತ್ತಾನೆ. ರಾಜು ಚುರುಕಾದ ಹುಡುಗನಾದರು, ಸಿಡುಕನಾದ ತಂದೆ, ಯಾವಾಗಲೂ ಬೈಗುಳದ ಮಳೆಸುರಿಯುವ ತಾಯಿ, ಶಾಲೆಯಲ್ಲಿ ಬೆತ್ತವನ್ನು ಹಿಡಿದು ನಿಲ್ಲು ಶಿಕ್ಷಕ. ಇವೆಲ್ಲವುಗಳ ಬೇಸರದ ನಡುವೆ ಪ್ರೀತಿಯನ್ನು ಬಯಸುವುದು ಮಾತ್ರ ಅಜ್ಜಿಯಿಂದ. ಸಲುಗೆಯ ಮಾತುಗಳು ಗೆಳೆಯರ ಜೊತೆ ಸಲೀಸಾಗಿ ಬರುತ್ತವೆ. ಪ್ರಕೃತಿಯ ಸಹಜವಾದ ಸೌಂದರ್ಯದ ನಡುವೆ ಹಿರಿಯರ ಬಿಗಿಯಾದ ಬಂಧನದ ವಾತಾವರಣದಲ್ಲಿ ಮಕ್ಕಳ ಬೆಳವಣಿಗೆಯಾಗುವುದನ್ನು ಗೀತಾ ಕುಲಕರ್ಣಿಯವರು ವಾಸ್ತವದ ಸಂಗತಿಗಳೊಂದಿಗೆ ನೀಡಿದ್ದಾರೆ.

**ಈಶ್ವರ ಕಮ್ಮಾರ**

ಮಕ್ಕಳ ಸಾಹಿತ್ಯದ ಬೆಳವಣಿಗೆಯಲಿ ಈಶ್ವರ ಕಮ್ಮಾರರ ಪಾತ್ರ ಗಮನ ಸೆಲೆಯುವಂತಹುದು. ವಿವಿಧ ಪ್ರಕಾರಗಳಲ್ಲಿ ಕಾಣಿಸಿಕೊಂಡಿರುವ ಇವರು ಮಕ್ಕಳಗಾಗಿ ಕಾದಂಬರಿಯನ್ನು ಸಹ ಬರೆದಿದ್ದಾರೆ.

'ತಿಪ್ಪ ಮಾಡಿದ ತಪಸ್ಸು' ಇವರ ಪ್ರಮುಖ ಕಾದಂಬರಿಯಾಗಿದೆ. ಮಕ್ಕಳೇ ತಮ್ಮ ಇಚ್ಛೆಯಿಂದ ನೆಡು ತೋಪನ್ನು ಬೆಳೆಸುವ ಅನುಭವಗಳವೆ. ತೋಪು ಬೆಳೆಸುವಾಗ ಮಕ್ಕಳ ನಡುವೆ ನಡೆಯುವ ಮಾತುಕತೆಗಳು, ತೀರ್ಮಾನಗಳು, ಅದರ ಹಿಂದಿನ ಶ್ರಮದ ಸಂಗತಿಗಳವೆ. ಬೆಳದು ನಿಂತ ತೋಪಿನೊಳಗೆ ಮಕ್ಕಳು ಸುತ್ತಾಟ ನಡೆಸುತ್ತಾ ತಮ್ಮ ಭಾವನೆಗಳನ್ನು ಪರಸ್ಪರ ಹಂಚಿಕೊಳ್ಳುವ ಸಂಗತಿಗಳವೆ. ಅಲ್ಲಿ ಅವರು ಮುದಗೊಳ್ಳುವಿಕೆ, ಆಯಾಸ, ಹಕ್ಕಿ ಪಕ್ಷಿಗಳು ಬಂದು ಹೋಗುವ ಸಂತಸ, ಕೀಟಗಳ ವೈವಿಧ್ಯತೆಯು ಕಥಾ ವಸ್ತುವಾಗಿ ಕಾಣಿಸಿಕೊಳ್ಳುತ್ತವೆ. ಜೊತೆಗೆ ಮತ್ತೊಂದು ಜಗತ್ತಾದ ಗ್ರಾಮೀಣ ಜನರ ಜೀವನ, ಬದುಕಿನ ನಂಬಿಕೆಗಳು ತೆರೆದುಕೊಳ್ಳುತ್ತವೆ. ಜನರ ಆಚಾರ, ವಿಚಾರ, ಅನಕ್ಷರತೆ, ಅಮಾಯಕ ಯುವಕರ ಆದರ್ಶಪ್ರಾಯತೆಗಳು ಮಕ್ಕಳ ಮುಂದೆ ಅನುಕರಣೀಯವಾಗಿ ಮೂಡುತ್ತವೆ. ಕತ್ತಲ ಕೋಣೆಯೊಳಗಿಂದ ಬೆಳಕು ಕಾಣುವ ಹಂಬಲಗಳವೆ.

**ಶಶಿಧರ ವಿಶ್ವಾಮಿತ್ರ**

ಇವರು ಪ್ರಮುಖ ಮಕ್ಕಳ ಕಾದಂಬರಿಕಾರರಲ್ಲಿ ಒಬ್ಬರು. ಇವರ ಕೃತಿಗಳನ್ನು ನೋಡಿದಾಗ ಮೊದಲು ಕಂಡು ಬರುವ ಅಂಶವೆಂದರೆ ಪರಿಸರದ ಸಂಗತಿಗಳು, ಉಸಿರಾಡಿ ಅನುಭವಿಸಿದ ಭಾಷೆ, ಭಾಷೆಯನ್ನು ಪ್ರಸ್ತುತ ಪಡಿಸಿದ ಬಗೆ. ಮಕ್ಕಳ ಕಥಾ ಪ್ರಪಂಚದಲ್ಲಿ ವಾಸ್ತವ ರಚನೆಗಳು ಕಂಡು ಬರುವುದೇ ವಿರಳ ಎನ್ನುವ ಕಾಲದಲ್ಲಿ ಅಪರೂಪವೆನಿಸುವ ಹೆಸರು ಶಶಿಧರ ವಿಶ್ವಾಮಿತ್ರರದು. ನಿಶ್ಚಿತವಾಗಿ ಬರೆಯುವ ಅಚ್ಚರಿ ಹಾಗೂ ಹೊಸ ಅನುಭವಗಳನ್ನು ಕಟ್ಟುವ ಮೋಡಿಗಾರಿಕೆ ಅವರದು.

'ಕತೆಯಾದ ಹುಲಿ' ಇವರ ದೀರ್ಘವಾದ ನೀಳ್ಗತೆಯಾಗಿದೆ. ಸುಮಾರು ಹದಿನೆಂಟು ಅಧ್ಯಾಯಗಳಲ್ಲಿ ವಿಂಗಡಿಸಿ ಬರೆದಿದ್ದಾರೆ. ಕಾಡು ಪ್ರಾಣಿಯ ಬದುಕಿಗೂ ಮನುಷ್ಯನ ಬದುಕಿಗೂ ಇರುವ ಅಂತರಗಳನ್ನು ಕೆದಕುತ್ತಾ ಹೋಗುವ ಕಥಾ ಹಂದರವಿದು. ಜೊತೆಗೆ ಮನುಷ್ಯ ಮತ್ತು ಪ್ರಾಣಿಗಳ ನಡುವಿನ ಜೀವನ ಸಂಘರ್ಷ ತೆರೆದುಕೊಳ್ಳುವ ಪರಿಯಿದೆ. ಶ್ಯಾಮಣ್ಣನವರ ಮನೆಯಲ್ಲಿ ತಿಥಿಕಾರ್ಯವನ್ನು

ಮುಗಿಸಿಕೊಂಡು ದಾರಿಯಲ್ಲಿ ಹೋಗುತ್ತಿದ್ದ ಭೋಜಣ್ಣನು ತಲೆಯ ಮೇಲೆ ಕುಕ್ಕೆ, ಬಗಲಲ್ಲಿ ಒಂದು ಚೀಲ ನೇತುಹಾಕಿಕೊಂಡು ಹೋಗುವಾಗ ಮಧ್ಯಾಹ್ನ ಮುಗಿದಿತ್ತು. ಹುಲಿಯು ಬಂದರೆ ಹೆದರುವುದಿಲ್ಲ ಅದನ್ನು ಧೈರ್ಯವಾಗಿ ಹೆದುರಿಸುತ್ತೇನೆ ಎಂದು ಬರುವ ಭೋಜಣ್ಣನಿಗೆ ದಾರಿಯಲ್ಲಿ ಸಿಗುವ ಕೊಳದ ನೀರಿನಲ್ಲಿ ಹುಲಿಯುಕಾಣಿಸುತ್ತದೆ. ಅದು ಅವನ ಮೇಲೆ ಎಗರಲಿಲ್ಲ ಬದಲಾಗಿ ಅದು ಪುಕ್ಕಲು ಹುಲಿಯು ಆಗಿರಲಿಲ್ಲ. ಇಲ್ಲಿ ಮನುಷ್ಯ ಮತ್ತು ಪ್ರಾಣಿಗಳ ನಡುವೆ ಸಂಭಾಷಣೆ ಮತ್ತು ಸಂಬಂಧಗಳು ತೆರೆದುಕೊಳ್ಳುತ್ತವೆ. ಇಬ್ಬರಲ್ಲು ಯೋಚನೆಗಳು ಉಂಟಾಗಿ ಹುಲಿಯು ತನ್ನ ಸ್ವಭಾವವನ್ನು ಹೇಳಿಕೊಂಡು ದಾರಿ ಉದ್ದಕ್ಕೂ ಅವನೊಂದಿಗೆ ಬರುತ್ತದೆ. ಮನುಷ್ಯನನ್ನು ತನ್ನಲ್ಲೆ ಹತ್ತಾರು ಪ್ರಶ್ನೆಗಳು ಏಳುವಂತೆ ಮಾಡಿ, ಗೊಂದಲಗಳಿಗೆ ಸಿಲುಕಿಸಿ ನೋಡುವ ಪ್ರಸಂಗವಿದೆ. 'ರುಡ್ಯಾಡ್ ಕಿಪ್ಲಿಂಗ್'ನ 'ಜಂಗಲ್‌ಬುಕ್' ಕಾಲ್ಪನಿಕತೆಯನ್ನು ವಾಸ್ತವಿಕತೆಗೆ ತಂದು ಸಮೀಕರಿಸಿದಂತೆ ಈ ಕತೆಯು ಕಾಣುತ್ತದೆ. ಈ ಕತೆಯಲ್ಲಿ ಮಕ್ಕಳ ಕಲ್ಪನಾ ಪ್ರಪಂಚ ತೆರೆದುಕೊಂಡು ಕನಸುಗಾರಿಕೆಯನ್ನು, ತಂತ್ರಗಾರಿಕೆಯನ್ನಾಗಿಸಿ ಈ ಕತೆಯಲ್ಲಿನ ಸಾರವನ್ನು ಹೆಚ್ಚಿಸಲಾಗಿದೆ. ಸರಳರೀತಿಯ ಸಂಭಾಷಣೆಗಳಿಂದ ಕೂಡಿದ್ದು ಮಗುವಿನ ಭಾಷಾ ಪರಿಸರದಲ್ಲಿ ಗರಿಗೆದರಿದೆ. ಪ್ರಾಣಿಭಯ, ಆತಂಕ, ದೈವಿಕತೆ, ಮೂಢನಂಬಿಕೆಯಂತಹವುಗಳ ನಡುವೆ ಉಂಟಾಗುವ ತಾತ್ವಿಕ ಅಂಶಗಳು ಸಹಜವಾಗಿ ಮೂಡಿ ಬಂದು ಕೃತಿಯ ಆಶಯವನ್ನು ಸಾಕಾರಗೊಳಿಸಿವೆ.

'ಬನದ ಹಕ್ಕಿಗಳು' ಇದೊಂದು ಕಾಡಿನ ಕತೆಯಾಗಿದೆ. ಮಣ್ಣು ಹುಳುವಿನ ಪುಟ್ಟ ಕತೆಯನ್ನು ಇಲ್ಲಿ ಹೇಳುತ್ತದೆ. ಇಂತಹ ಸೂಕ್ಷ್ಮವಾದ ಜೀವಿಯ ಭಾವನೆಗಳನ್ನು ಮಕ್ಕಳಿಗೆ ತಿಳಿಸುವುದು ತೀರವಿರಳ ಪ್ರಯತ್ನವಾಗಿದೆ. ಯಾವಾಗಲು ಮಣ್ಣಿನಲ್ಲಿರುತ್ತಿದ್ದ ಹುಳುವು ಮರವನ್ನು ಏರುವುದು ಆಶ್ಚರ್ಯವಾಗಿ ಕಾಣಿಸಿಕೊಳ್ಳುತ್ತದೆ. ಅದನ್ನು ಗಮನಿಸಿದ ಮರವು ಹುಳಕ್ಕೆ 'ಮರ ಹತ್ತ ಬೇಡ ಹಕ್ಕಿಗಳು ಎಚ್ಚರವಾಗಿವೆ ನಿನ್ನನ್ನು ಅವು ತಿನ್ನುತ್ತವೆ' ಎಂದು ಬುದ್ಧಿವಾದ ಹೇಳಬೇಕೆನಿಸಿದರು ಅದರ ಬಿಡುವಿಲ್ಲದ ಕಾರ್ಯದಿಂದ ಹೇಳದೇ ಹೋಗುತ್ತದೆ. ಮರದ ಎಲೆಯನ್ನು ತಿಂದು ನಲಿದ ಹುಳುಗೆ ಇರುವೆ ಸಾಲು ಮುತ್ತಿಕೊಂಡು ಅಲ್ಲಿಂದ ತಪ್ಪಿಸಿಕೊಳ್ಳಲಾದೆ ಇರುವಾಗ ಗೂಬೆಯ ಕಣ್ಣಿಗೆ ಬಿದ್ದು ಆಹಾರವಾಗುತ್ತದೆ. ಕಾಡ ಮರೆಯೊಳಗೆ ನಡೆಯುವ ಇಂತಹ ಅದೃಶ್ಯ ಘಟನೆಗಳು ಇಲ್ಲಿ ಸಿಗುತ್ತವೆ. ಹಾರಿ ಬರುವ ಕಾಗೆಗಳಿಗೆ ಮನುಷ್ಯರ ಊರು ಕಂಡೊಡನೆಯೆ ಪರಿಸರ ಕೆಟ್ಟುಹೋಗಿದೆ ಎಂದು ಅನಿಸುತ್ತದೆ. ಅಲ್ಲಿ ನಿರ್ಮಲವಾದ ಗಾಳಿಯ ಸುಳಿವಿರುವುದಿಲ್ಲ ಎಂದು ಪಕ್ಷಿಗಳು ಮಾತನಾಡಿಕೊಳ್ಳುವುದಿದೆ. ಪಕ್ಷಿಗಳಿಗೆ ಕೂರಲು ಮರಗಳು ಸಿಗದೆ ಬೋಳಾಗಿರುವುದನ್ನು ಕಾಣುತ್ತವೆ. ಇವೆಲ್ಲಾ ಸಂಗತಿಗಳು ಹಾಳಾಗುತ್ತಿರುವ ಪರಿಸರವನ್ನು, ಅದು ಮಾನವನ ಆಧುನಿಕತೆಯ ಪರಿಣಾಮವನ್ನು ವ್ಯಂಗ್ಯವಾಡಿದಂತೆ ಕಾಣಿಸುತ್ತದೆ. ಕೋಗಿಲೆಗಳ ನಡುವೆ ಉಂಟಾಗುವ ಹೆಣ್ಣು ಗಂಡಿನ ಬೇಧಭಾವವು ಸಮಾಜದಲ್ಲಿಯು ಇರುವ ಪುರುಷ ಪ್ರಧಾನ ವ್ಯವಸ್ಥೆಯನ್ನು ಅಣಕಿಸುವಂತೆ ಕಾಣಿಸಿಕೊಳ್ಳುತ್ತದೆ. ಇವರ ಕತೆಯ ತುಂಬ ಹರಡಿರುವುದು ಪ್ರಾದೇಶಿಕತೆಯ ಸೊಗಡು, ದೇಸಿಯ ಸೊಪ್ಪಿನ ಹೆಸರುಗಳು, ಮಲೆನಾಡಿನ ಭಾಷೆ, ಪ್ರಾಣಿ ಪಕ್ಷಿಗಳನ್ನು ಕತೆಯ ಮೂಲಕ ಪರಿಚಯಿಸುವ ತಂತ್ರಗಾರಿಕೆಯು ಎಲ್ಲೆಡೆ ಪಸರಿಸಿದೆ. ನಿರೂಪಣೆಯು ಇವರ ಕಲೆಗಾರಿಕೆಯ ಹೆಗ್ಗಳಿಕೆಯಾಗಿದೆ.

ಶಶಿಧರ ವಿಶ್ವಾಮಿತ್ರರ ಮತ್ತೊಂದು ದೀರ್ಘಕತೆ 'ಮರಿಯಾನೆ' ಎಂಬುದಾಗಿದೆ. ಇದು ಸಹ ಪ್ರಕೃತಿ ಪಾಠದ ಮೂಲ ಕಥಾವಸ್ತುವುಳ್ಳದಾಗಿದೆ. ಮರಿಯಾನೆಯು ಸಹಜ ತುಂಟಾಟದಲ್ಲಿ ದುರಂತಗೊಂಡು ಭವಿಷ್ಯ ಬರಿದಾಗಿಸಿಕೊಂಡ ಪುಟ್ಟ ಆನೆಯೊಂದರ ಕತೆಯಿದು. ತಾಯಿಯ ಮಮತೆ ಆರೈಕೆ, ಕಲಿಕೆ. ಎಲ್ಲಾ ಮೀಳೈಸಿಕೊಂಡು ಹೋಗುವ, ಪ್ರಕೃತಿ ಸಹಜ ಪ್ರಸಂಗಗಳು ಪುಟ್ಟ ಜೀವದ ಸುತ್ತ ಅರಳಿಕೊಂಡು ಹೃದಯಕ್ಕೆ ಹತ್ತಿರವಾಗಿ ನಿಲ್ಲುತ್ತದೆ. ಆನೆಯ ಬಂಧು-ಬಳಗ, ಶ್ರಮ, ಸೋಮಾರಿತನ ಎಲ್ಲವೂ ಸಮ್ಮಿಳಿತಗೊಂಡು ಗಿಳಿ, ಕೋಗಿಲೆ, ಗೌಜಗ ಪಕ್ಷಿಗಳ ಹಾಡು ನೋವು ನಲಿವು ತೆರೆದುಕೊಳ್ಳುವ ಸನ್ನಿವೇಶಗಳಿಂದ ಕೂಡಿದೆ ಕಾಡೇ ಇಲ್ಲಿ ಮಾತನಾಡಿದಂತಿದೆ. ಇಲ್ಲಿ ಮಕ್ಕಳಿಗೆ ಕತೆಯ ಕುತೂಹಲವಿದೆ. ಆಲಿಸುವ ಕೌತುಕವಿದೆ, ಜೀವಜಾಲದ ಅನುಭವದ ಸ್ಪಂದನವಿದೆ ಒಂದಷ್ಟು ಓದುವ ಅಭ್ಯಾಸ ರೂಢಿಸಿಕೊಂಡ ಮಕ್ಕಳಿಗೆ ರುಚಿಸದೆಯಿರದು. ಕನ್ನಡದ ಮಕ್ಕಳ ಕಥಾ ಸಾಹಿತ್ಯದಲ್ಲಿ ಹಸಿರು ಕಾಡು ಸಂಗತಿಯ ಅರಿಯುವ ಉದ್ದೇಶವಿಲ್ಲಿ ಕಂಡು ಬರುತ್ತದೆ. ಹೃದಯಕ್ಕೆ ಹತ್ತಿರವಾಗುವಂತೆ ಭಾಷೆಯನ್ನು ಲಾಲಿತ್ಯಮಯವಾಗಿ ಬಳಸಿದ್ದಾರೆ. ಶಶಿಧರ ವಿಶ್ವಾಮಿತ್ರರು ಈ ಕತೆ ಹೇಳುವಿಕೆಯ ನಡುವೆ ಹಾಡುಗಳನ್ನು ಬೆಸೆದು ಹೇಳುತ್ತಾರೆ ಕೆಲವು ಕಡೆ ಇವು ಅನಗತ್ಯ ಅನ್ನಿಸುವುದೂ ಭಾರವಾದ ಸಂಗತಿಗಳನ್ನು ಹೊತ್ತಂತೆಯೂ ಅನ್ನಿಸದೆ ಇರಲಾರದು.[೫೩] ನೀತಿಯನ್ನು ನೇರವಾಗಿ ತುರುಕುವ ಬಲವಂತಿಕೆಯ ಪ್ರಯತ್ನಗಳು ಗೋಚರಿಸುತ್ತವೆ. ಅಲ್ಲಲ್ಲಿ ಕೆಲವು ಸಲ ವ್ಯಂಗ್ಯವನ್ನು ಮೂದಲಿಸುವ ರೀತಿಯಲ್ಲಿ ತಂದಿರುವುದಿದೆ.

'ಐರಾವತ' ಶಶಿಧರ ವಿಶ್ವಾಮಿತ್ರರ ಪ್ರಮುಖ ಮಕ್ಕಳ ಕಾದಂಬರಿಯಾಗಿದೆ. ಪ್ರಾಣಿ ಜಗತ್ತನ್ನು, ಅವುಗಳ ತಲ್ಲಣವನ್ನು, ಮನುಷ್ಯನ ಸಂಘರ್ಷ, ಪ್ರಾಣಿ ಪ್ರೀತಿಯನ್ನು ಮಕ್ಕಳಿಗೆ ಹದವಾಗಿ ತೆರೆದಿಡುವವರು ಇವರು. ಐರಾವತವು ಸಹ ಇಂತಹ ಕತೆಯೇ ಆಗಿದೆ. ಸುಮಾರು ಇಪ್ಪತ್ತೈದು ಚಿಕ್ಕಚಿಕ್ಕ ಅಧ್ಯಾಯಗಳುಳ್ಳ ಕಾದಂಬರಿಯು ಇದಾಗಿದೆ. ಕಾಡಿನ ಹಳ್ಳದಿನ್ನೆಗಳಲ್ಲಿ ಮಾವುತನು ನಡೆಸಿಕೊಳ್ಳುವ ಆನೆಯ ನಡಿಗೆಯ ಸಂಕಟಗಳು, ಅದು ಸಿಕ್ಕಸಿಕ್ಕ ಸೊಪ್ಪನ್ನು ಜಗಿದು ನಡೆಯುವ ಗಾಂಭೀರ್ಯದೊಂದಿಗೆ ಆರಂಭವಾಗುವ ಕತೆಯಿದು. ಕಾಡಿನಲ್ಲಿ ಹುಟ್ಟಿ, ಬೆಳೆದು, ಸುದೀರ್ಘವಾದ ಬಾಳು ನಡೆಸುವ ಆನೆಗಳ ವಿವರವನ್ನು, ಸಾಯುವ ಮುದಿ ಆನೆಗಳು ಹೊಳೆಯ ದಂಡೆಯಲ್ಲಿ ಘೀಳಿಡುವ ಬಗೆ, ಪ್ರಾಣಿಕುಲದ ಅನನ್ಯತೆ, ಕಾಡಿಗೆ ಪ್ರಾಣಿಗಳ ಅವಶ್ಯಕತೆ ಇರುವಂತೆ ಪ್ರಾಣಿಗಳಿಗೂ ಕಾಡಿನ ಅಗತ್ಯವಿರುವುದು ಎಲ್ಲವೂ ಇಲ್ಲಿ ಕತೆಯ ವಸ್ತುರೂಪದಲ್ಲಿ ಕಾಣಿಸಿಕೊಂಡಿವೆ. ನಿಸರ್ಗದ ಮಡಿಲಿನಲ್ಲಿ ಅತೀ ಆಯುಷ್ಯವುಳ್ಳ ಆನೆಯು ಕಾಡಿನ ಒಡನಾಟವನ್ನು ಹೇಳುವುದಿದೆ. ಪ್ರಾಣಿಗಳ ನಡುವೆ ಮನುಷ್ಯನ ಪ್ರವೇಶದಿಂದ ಉಂಟಾಗುವ ಪರಿಣಾಮದಿಂದ ಆನೆಯ ಸಂತತಿ ಅಳಿಯುವ ಹತಾಶೆಗಳಿವೆ. ಕೊನೆಗೆ ಮನುಷ್ಯ ಕುಲಕ್ಕೆ ಆನೆಗಳ ಉಳಿವಿನ ಮಹತ್ತ್ವವನ್ನು ತಿಳಿಸುವ ಸಂದೇಶವನ್ನು ಇಲ್ಲಿ ಕಾಣಬಹುದು.

---

[೫೩] ಮಕ್ಕಳ ಸಾಹಿತ್ಯ, ಮಕ್ಕಳೊಡನೆ ಪ್ರಕೃತಿಯ ಮಾತುಕತೆ: ೧೩, ಲೇಖಕರು : ಆನಂದ ಪಾಟೀಲ, ಅಂತರ್ಜಾಲ ಪತ್ರಿಕೆ.

**ನೀಲಾಂಬರಿ**

ಮಕ್ಕಳ ದೀರ್ಘಕತೆಗಳನ್ನು ಬರೆದವರಲ್ಲಿ ನೀಲಾಂಬರಿಯವರು ಕೂಡ ಪ್ರಮುಖರು. ಸದಾ ನಾವೀನ್ಯತೆಯನ್ನು ಹುಡುಕಿ ಮಕ್ಕಳ ಮುಂದಿರಿಸಿದವರು ಇವರು. ವೈಜ್ಞಾನಿಕ, ಹಾಸ್ಯ, ಫ್ಯಾಂಟಸಿ, ವಾಸ್ತವ, ನೀಳ್ಗತೆ ಎಲ್ಲಾ ಪ್ರಕಾರಗಳಲ್ಲೂ ಕೃಷಿ ಮಾಡಿದ್ದಾರೆ. ಇವರ ಪ್ರಮುಖವಾದ ದೀರ್ಘಕತೆಗಳೆಂದರೆ ಬಿದಿರು ಹೊಳೆಗೆ ಬೆಂಕಿ ಮತ್ತು ಸಿಂಗರಾಯನ ಗವಿ. ಲೇಖಕರೇ ಇವುಗಳನ್ನು ನೀಳ್ಗತೆ ಎಂದು ಹೇಳಿಕೊಂಡಿದ್ದಾರೆ. ಇವು ಕತೆಗಳಿಗಿಂತ ದೀರ್ಘವಾಗಿದ್ದು, ಕಾದಂಬರಿಗಿಂತ ಚಿಕ್ಕದಾಗಿವೆ. ಮೌಲ್ಯದ ದೃಷ್ಟಿಯಿಂದ ಪ್ರಮುಖವಾದವುಗಳಾಗಿವೆ. ಪ್ರಯೋಗದ ಸಲುವಾಗಿಯೂ ಮಹತ್ತ್ವವೆನಿಸುತ್ತವೆ.

'ಬಿದಿರು ಹೊಳೆಗೆ ಬೆಂಕಿ' ಇಲ್ಲಿ ಕಾಡು ಪ್ರಾಣಿಗಳ ಬಳಗವು ಕಾಣಿಸಿಕೊಂಡು ಮಾನವರಂತೆ ನಡೆದುಕೊಳ್ಳುವುದಿದೆ. ಸಂಜಯನ ಮೂಲಕ ಕತೆಯು ನಡೆಯುತ್ತದೆ. ಇವನು ಕಾಡಿನಿಂದ ಬೆಂಗಳೂರಿಗೆ ಬಂದ ಜಾಂಬಿ ಕರಡಿಯನ್ನು ದೀಪಾವಳಿಯಂದು ಸ್ವಾಗತಿಸುತ್ತಾನೆ. ಅವನಿಗೆ ಶಾಲೆ, ಆಟದ ಮೈದಾನ, ಕೆರೆ ಎಲ್ಲವನ್ನು ತೋರಿಸುತ್ತಾನೆ. ಹಬ್ಬಕ್ಕೆ ಹೊಸಬಟ್ಟೆ ಕೊಡಿಸಿ, ಬಗೆಬಗೆಯ ತಿನಿಸುಗಳನಿತ್ತು ತಾಯಿಯಂತೆ ಪ್ರೀತಿಯನ್ನು ತೋರಿಸುತ್ತಾನೆ. ಟಿವಿಯಲ್ಲಿ ಬರುವ ಭರತನಾಂಟ್ಯವನ್ನು ಜಾಂಬಿಯು ನೋಡಿ ಸಂತೋಷಪಟ್ಟಿತು. ಹೊರಗಿನ ಜಗತ್ತನ್ನು ನೋಡಿದ ಅದು ಭವ್ಯಬಂಗಲೆ, ವಾಹನ ದಟ್ಟಣೆ, ಸಡಗರದ ಜನರು, ಗಡಿಬಿಡಿ ಕಂಡು ಗಾಬರಿಗೊಂಡಿತು. ಬಾಲಭವನದ ವೇಷಭೂಷಣ ಸ್ಪರ್ಧೆಯನ್ನು ನೋಡಿ ಬರುವಾಗ ಅಲ್ಲಿನ ಛಾಯಾಗ್ರಹಕರು ಚಿತ್ರಿಕರಿಸಲು ಜಾಂಬಿಯನ್ನು ಕರೆದಾಗ ಎಲ್ಲರೂ ಅದರೊಂದಿಗೆ ಫೋಟೋ ತೆಗೆಸಿಕೊಂಡರು. ಪುಸ್ತಕಗಳನ್ನು ಉಡುಗೊರೆಯಾಗಿ ನೀಡಿದರು. ಸಂಜೆಯಾಗುತ್ತಿದ್ದಂತೆ ಎಲ್ಲೆಡೆ ಪಟಾಕಿಗಳ ಅಬ್ಬರವು ಶುರುವಾಗಿ ಜಾಂಬು ಗಡಗಡ ನಡುಗಲಾರಂಭಿಸಿತು. ಹೆದರಿ ಎಲ್ಲೋ ಅವಿತಿದ್ದ ಇದನ್ನು ಸಂಜಯನು ಹುಡುಕಿದನು. ಅದು ಜ್ವರದಿಂದ ಬಳಲುತಿತ್ತು. ವೈದ್ಯರ ಬಳಿ ಕರೆದುಕೊಂಡು ಹೋಗಿ ಚಿಕಿತ್ಸೆ ಕೊಡಿಸಿ ಹಾಸಿಗೆಯ ಮೇಲೆ ಮಲಗಿಸಿದನು. ನಂತರ ಕಾಡಿಗೆ ಅದನ್ನು ಕಳುಹಿಸಿದನು. ಪಟಾಕಿಯ ಅವಾಂತರಗಳು ಪತ್ರಿಕೆಯಲ್ಲಿ ವರದಿಯಾಗಿ ಪಟಾಕಿಯನ್ನು ಸಿಡಿಸುವುದನ್ನು ಎಲ್ಲರೂ ತ್ಯಜಿಸಿದರು. ಜಾಂಬುವು ಸಂಜಯನಿಗೆ ಪತ್ರ ಬರೆದು ಅರಣ್ಯದರ್ಶನ ಕಾರ್ಯಕ್ರಮಕ್ಕೆ ಆಹ್ವಾನಿಸಿತು. ಅದೊಂದು ಅಭೂತಪೂರ್ವವಾದ ನೆನಪಾಗುವಂತೆ ಆಯೋಜಿಸಿತು. ನಗರದ ಮಕ್ಕಳೆಲ್ಲಾ ಅಲ್ಲಿಗೆ ಹೋಗಿ ಸಂತೋಷವನ್ನು ಅನುಭವಿಸಿದವು. ಹುಲಿಗೆವ್ವ ನಗರದ ಮಕ್ಕಳನ್ನು ಆದರದಿಂದ ಮಡಿಲಲ್ಲಿ ಕೂರಿಸಿಕೊಂಡು ತನ್ನ ಪ್ರೀತಿಯನ್ನು ತೋರಿಸಿತು. ಮಕ್ಕಳು ಸಂತೋಷದಿಂದ ನಗರಕ್ಕೆ ಹಿಂದಿರುಗುವ ಕತೆ ಇದಾಗಿದ್ದು ಕಾಡಿನ ಸಂಸ್ಕೃತಿಯನ್ನು ನಗರದೊಂದಿಗೆ ತುಲನೆ ಮಾಡಿ ನೋಡುವುದು ಇಲ್ಲಿ ಕಾಣಿಸಿಕೊಳ್ಳುತ್ತದೆ.

'ಸಿಂಗರಾಯನ ಗವಿ' ನೀಲಾಂಬರಿಯವರ ಮತ್ತೊಂದು ದೀರ್ಘಕತೆಯಾಗಿದೆ. ಇದು ಪ್ರಾಣಿಗಳ ಪರಿಸರವನ್ನೇ ಒಳಗೊಂಡಿದ್ದು ಬಿದಿರು ಹೊಳೆಗೆ ಬೆಂಕಿ ಕತೆಯ ಮುಂದುವರೆದ ಭಾಗದಂತಿದೆ. ಆದರೆ ಪ್ರತ್ಯೇಕವಾಗಿಯೂ ಓದಿಕೊಳ್ಳಬಹುದಾಗಿದೆ. ಇಲ್ಲಿಯೂ ಸಂಜಯನು ಕತೆಯನ್ನು ಹೇಳುತ್ತಾನೆ.

ಸಿಂಗರಾಯನ ಗವಿಯು ಕಾಡಿನ ಒಳಗೆ ದಟ್ಟವಾದ ಮರಗಳ ನಡುವೆ ಇರುವ ದೂರದ ಜಾಗ. ಹಿಂದೊಮ್ಮೆ ಕಾಡಿನಲ್ಲಿ ಬಿದ್ದ ಭಾರಿ ಮಳೆಗೆ ತತ್ತರಿಸಿದ ಪ್ರಾಣಿಗಳನ್ನು ಸಿಂಹರಾಜನು ಆ ಗುಹೆಯಲ್ಲಿ ಆಶ್ರಯ ನೀಡಿ ಕಾಪಾಡಿದನಂತೆ ಅದಕ್ಕಾಗಿ ಅವುಗಳಿಗೆ ಅದೊಂದು ಪವಿತ್ರವಾದ ಸ್ಥಳವಾಗಿದೆ. ಸಂಜಯನು ಗೊಂಡಾರಣ್ಯ ಯಾತ್ರೆ ಮಾಡಿ ಬಂದಿದ್ದುದನ್ನು ಅಲ್ಲೊಂದು ಡೈರಿಯಲ್ಲಿ ಬರೆದಿಡುತ್ತಾನೆ. ಇದು ಹೇಗೋ ಅವನ ಮಾವನಿಗೆ ತಲುಪಿ, ಪತ್ರಿಕೆಯ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನವನ್ನು ಪಡೆಯುತ್ತದೆ. ಸಂಜಯನು ಗೆಳೆಯರಿಗೆಲ್ಲಾ ಪ್ರಿಯನಾಗುತ್ತಾನೆ. ಬಹುಮಾನವಾಗಿ ಬಂದ ಕ್ಯಾಮೆರದಲ್ಲಿ ಫೋಟೋ ತೆಗೆಯುವ ಹವ್ಯಾಸವು ಅವನಿಗಾಗುತ್ತದೆ. ಡ್ಯಾನ್ಸ್ ಶಾಲೆಯಲ್ಲಿ ಅವನ ಗೆಳತಿ ತಪ್ಪಿಸಿಕೊಳ್ಳುತ್ತಾಳೆ. ಎಲ್ಲರೂ ಜುರಾಸಿಕ್ ಸೂಪರ್ ಫಾಸ್ಟ್ ಟ್ರೈನಿನಲ್ಲಿ ಬೆಟ್ಟಗಳ ನಡುವೆ ಪ್ರಯಾಣಿಸುವ ಅನುಭವಗಳಿವೆ. ಪ್ರಯಾಣದ ನಡುವೆ ನಿದ್ರಿಸುವ, ಹರಟುಸುವ, ಕುರುಕು ತಿಂಡಿಗಳನ್ನು ತಿನ್ನುವ ಸಂಗತಿಗಳಿವೆ. ಪರ್ವತ, ಬೆಟ್ಟಗುಡ್ಡಗಳ ರಮ್ಯವಾದ ಹಾದಿಯಲ್ಲಿ ರೈಲು ಸಾಗುತ್ತದೆ. ಕಣಿವೆ ವಾರ್ತೆ ಪತ್ರಿಕೆಯ ವರದಿಗಾರನು ಬರೆದ ವಾಸ್ತವ ಸಮಸ್ಯೆಗಳುಳ್ಳ ವರದಿಯ ವಿವರಗಳಿವೆ. ಸಿಂಗರಾಯನ ಗವಿಯ ಪ್ರಯಾಣದ ವೇಳೆಯಲ್ಲಿ ದಾರಿ ಉದ್ದಕ್ಕೂ ತೆರೆದುಕೊಳ್ಳುವ ಅನೇಕ ಸಂಗತಿಗಳು ಜರಗುತ್ತವೆ. ಪ್ರತಿಯೊಂದು ಘಟನೆಗಳು ವಿವರವಾಗಿ, ವಿಶ್ಲೇಷಣೆಯಿಂದ ಕೂಡಿ ಕಾದಂಬರಿಯ ಲಕ್ಷಣಗಳನ್ನು ತೋರಿಸಿಕೊಳ್ಳುವುದರಿಂದ ಇದು ಮಕ್ಕಳ ಕಾದಂಬರಿ ಎಂದು ಕರೆಯಬಹುದಾಗಿದೆ. ಅರಣ್ಯದ ನಾಡಿನಲ್ಲೂ ಪತ್ರಿಕೆಗಳು, ಮಾಧ್ಯಮಗಳು ಚಟುವಟಿಕೆಯಿಂದ ಕಾಣಿಸಿಕೊಳ್ಳುತ್ತವೆ. ಪಟಾಕಿಯ ಅವಾಂತರಗಳು ಸೃಷ್ಟಿಸುವ ಅರಣ್ಯದಲ್ಲಿನ ಮಾಲಿನ್ಯ, ಸಸ್ಯ ಸಂಪತ್ತಿನ ನಾಶ, ಸಾವು ನೋವು ಮುಂತಾದವುಗಳು ಮಾನವ ಸಮಾಜದಂತೆ ಕಾಡಿನಲ್ಲಿಯೂ ಜರುಗುವುದು ಮಕ್ಕಳಿಗೆ ಹಿಡಿಸುತ್ತದೆ. ಮಕ್ಕಳ ಆಟ, ಸ್ನೇಹ ಸಂಬಂಧ, ಪರಸ್ಪರ ಬಾಂಧವ್ಯ, ಬೆರೆತು ಬಾಳುವಿಕೆಯ ಮಹತ್ತರಗಳು ಈ ಕತೆಯ ಹಿನ್ನೆಲೆಯಾಗಿ ನಿಲ್ಲುತ್ತವೆ. ನೀಲಾಂಬರಿಯವರ ಕತೆಗಳಲ್ಲಿ ಮಾನವನ ಸಹಜವಾದ ಬದುಕನ್ನು ಪ್ರಾಣಿಗಳೂ ಅನುಭವಿಸುವಂತಿದ್ದರೂ ಅವೆಲ್ಲಾ ಮಕ್ಕಳ ಲೋಕದ ಪರಿಚಿತ ಸಾಮಾಗ್ರಿಯಾಗಿ ಕಾಣಿಸಿಕೊಳ್ಳುತ್ತವೆ. ಮಾನವನ ಭೌತಿಕ ಸವಲತ್ತುಗಳನ್ನು ಇಲ್ಲಿ ಪ್ರಾಣಿಗಳು ಅನುಭವಿಸಿದಂತೆ ಅವನ ಭಾವನಾತ್ಮಕ ಜಗತ್ತನ್ನು ಸಹ ಪ್ರಾಣಿಗಳು ಬಾಳುವುದನ್ನು ನೀಲಾಂಬರಿಯವರು ಸೊಗಸಾಗಿ ಕಟ್ಟಿವುದರಿಂದ ಮಕ್ಕಳಿಗೆ ಇವರ ಕತೆಗಳು ಹಿಡಿಸುತ್ತವೆ. ಕಥಾವಸ್ತುವು ಅವಾಸ್ತವ ಸಂಗತಿಗಳಿಂದ ಕೂಡಿದ್ದರೂ ವಾಸ್ತವದ ನೆಲೆಯಲ್ಲಿಯೆ ಮಕ್ಕಳಿಗೆ ನೀಲಾಂಬರಿಯವರು ಮುಟ್ಟಿಸಬಲ್ಲರು.

**ಬಸು ಬೇವಿನಗಿಡದ**

ಮಕ್ಕಳ ಕಾದಂಬರಿಗಳ ಹೊಸತನದ ಹಂಬಲಿಕೆಯಿಂದ ಬರೆದವರು ಬಸು ಬೇವಿನಗಿಡದ ಅವರು. ಇವರ ಮಹತ್ತರವಾದ ಕಾದಂಬರಿ 'ನಾಳೆಯ ಸೂರ್ಯ' ಗಮನಿಸುವಂತಹುದು. ತಮ್ಮ ಬಾಲ್ಯದ ಅನುಭವಗಳ ಮೆಲುಕುತ್ತಾ, ಸರಳವೂ ಸುರುಳಿಯೂ ಆಗಿ ಮೂಡಿಬರುವ ಸಂಗತಿಗಳಿವೆ. ದಿನನಿತ್ಯ ಮಕ್ಕಳ ಮುಂದೆ ಘಟಿಸುವ ಸನ್ನಿವೇಶಗಳನ್ನು ಸಹಜವಾಗಿಯೇ ತಂದಿಡುವ ಲೇಖಕರು ಬಾಲ್ಯದ ವಿನೋದಗಳನ್ನು ಮರೆಯದೆ ತಂದಿದ್ದಾರೆ. ರವಿ, ಸದಾಶಿವ, ಸುರೇಶ, ವನಿತಾ ಗೆಳೆಯರು. ಭೀಮಣ್ಣ, ಹೆಬಸೂರ ಮಾಸ್ತರರ

ಪ್ರಭಾವಕ್ಕೆ ಒಳಗಾಗಿ ಅವರ ವ್ಯಕ್ತಿತ್ವವನ್ನು ಅನುಸರಿಸುತ್ತಾರೆ. ಬದುಕಿನ ದುರಂತಗಳನ್ನು ಎದುರಾಗಿಸಿಕೊಳ್ಳುವ ಮಕ್ಕಳು ತಮ್ಮ ಗುರುಗಳ ಮಾತಿನಂತೆ ಪರಿಹಾರವನ್ನು ತಾವೇ ಕಂಡುಕೊಳ್ಳಲು ಯತ್ನಿಸುವ ಪ್ರಯತ್ನಗಳಿವೆ. ಮಕ್ಕಳ ಭಾವ ಸಾಂಧ್ರತೆಯನ್ನು ಘನೀಕರಿಸಿಕೊಡುವ ಬರೆಹವಿದೆ. ಓದುಗನನ್ನು ಸೆಳೆಯುವ ಸೆಳತದಿಂದ ಕೃತಿ ಪ್ರಮುಖವೆನಿಸುತ್ತದೆ. ಭಾಷೆಯ ಬಳಕೆ ಮತ್ತು ಪ್ರಯೋಗಗಳ ದೃಷ್ಟಿಯಿಂದ ನಾಳೆಯ ಸೂರ್ಯ ಒಂದು ಸೊಗಸಾದ ಕಾದಂಬರಿ ಎನ್ನಬಹುದು.

**ತಮ್ಮಣ್ಣ ಬೀಗಾರ**

ಶಿಕ್ಷಕವೃತ್ತಿಯಲ್ಲಿರುವ, ಯಾವುದೇ ಪೂರ್ವ ಓದಿನ ಪ್ರಭಾವವಿಲ್ಲದೆ ಸೃಜನಶೀಲತೆಯಿಂದ ಬರೆಯುತ್ತಿರುವ, ಮಲೆನಾಡಿನ ಹಸಿರಿನ ಮಧ್ಯದಲ್ಲಿ ಮಕ್ಕಳ ಒಡನಾಟದಲ್ಲಿರುವವರು ತಮ್ಮಣ್ಣ ಬೀಗಾರರು. ಬರವಣಿಗೆಯನ್ನು ಆಸಕ್ತಿಯಾಗಿಸಿಕೊಂಡು ಬಂದವರು, ಉತ್ತರಕನ್ನಡದಲ್ಲಿ ದಿನಕರ ದೇಸಾಯಿ, ಆರ್.ವಿ.ಭಂಡಾರಿ, ಭಾಗಿರಥಿಹೆಗಡೆ ಅಂತಹವರನ್ನು ಬಿಟ್ಟರೆ ಮಕ್ಕಳ ಸಾಹಿತ್ಯದಲ್ಲಿ ಗಂಭೀರವಾಗಿ ತೊಡಗಿಸಿಕೊಂಡವರಲ್ಲಿ ಪ್ರಮುಖರು ತಮ್ಮಣ್ಣ ಬೀಗಾರರು. ಸ್ವಂತ ಹಂಬಲದಿಂದ ಮಕ್ಕಳ ಒಡನಾಟದಿಂದ ಯಾವುದೇ ಪೂರ್ವ ಸಾಹಿತ್ಯದ ಪ್ರಭಾವವಿಲ್ಲದೆ ವಿಶೇಷವಾಗಿ ಮಕ್ಕಳಿಗಾಗಿಯೇ ತೊಡಗಿಸಿಕೊಂಡಿದ್ದಾರೆ. ಸಂಪ್ರದಾಯ ವಿಧಾನಕ್ಕೆ ವಿದಾಯ ಹೇಳ ವಾಸ್ತವ ಮಾದರಿಯ ಕತೆಗಳಿಗೆ ಆರಂಭ ಒದಗಿಸಿದವರಲ್ಲಿ ತಮ್ಮಣ್ಣನವರು ಒಬ್ಬರು.

'ಹಸಿರೂರಿನ ಹುಡುಗ' ಕಾದಂಬರಿಯು ಇವರ ಹೊಸತನಕ್ಕೆ ತುಡಿದ ಪ್ರಯತ್ನವನ್ನರಗಿಸಿಕೊಂಡಿದೆ. ಇಲ್ಲಿಯು ಬಾಲ್ಯದ ಅನೇಕ ತರದ ಪ್ರಸಂಗಗಳು ಕತೆಯ ಸನ್ನಿವೇಶಗಳಾಗಿವೆ. ಅವನ್ನೆಲ್ಲಾ ಮಕ್ಕಳ ಮುಂದೆ ಕತೆ ಮಾಡಿಹೇಳರುವುದು ಆತ್ಮ ಚರಿತ್ರೆ ಮಾದರಿಯಲ್ಲಿ ಕೆಲವು ಹೊಸ ತಿರುವುಗಳನ್ನುಂಟು ಮಾಡುವ ಪ್ರಯತ್ನಗಳನ್ನು ಮಾಡಿರುವುದು ಕಂಡುಬರುತ್ತದೆ. ಕಾಡು ಜೀರುಂಡೆಯ ಧ್ವನಿ, ನದಿ ಹರಿಯುವ ರೀತಿಯಿಂದ ಕತೆ ಆರಂಭವಾಗುವುದು ಬಾಲ್ಯದ ನೆನೆಪದರ, ವಾಸ್ತವದಲ್ಲಿ ಬಿಚ್ಚಿಕೊಳ್ಳುವುದು ಹದವಾಗಿ ಬೆರೆಸಿ ಕತೆ ನಿರೂಪಿಸಿರುವುದನ್ನು ಇಲ್ಲಿ ಕಾಣಬಹುದು[೫೪]. ಮಲೆನಾಡಿನ ದಟ್ಟವಾದ ಕಾಡುಗಳ ನಡುವೆ ಮುಂಜಾನೆ ಕೆಂಪು ಸೂರ್ಯನಾಗಲಿ, ಸಂಜೆಯ ಬಂಗಾರದ ಬಣ್ಣದ ಸೂರ್ಯನಾಗಲಿ ನಾವು ನೋಡೆ ಇಲ್ಲ ಎನ್ನುವ ಅವರ ಬರೆವಣಿಗೆಯು ಮಲೆನಾಡಿನ ಮಕ್ಕಳಾಗಿ ಅವರು ಅನುಭವಿಸಿದ ಬಾಲ್ಯದ ಬಯಕೆಗಳ ಭಗ್ನತೆಯನ್ನು ಹೇಳುತ್ತದೆ. ಮಲೆನಾಡಿನ ಪರಿಚಯವಿಲ್ಲದವರಿಗೂ ಅವರ ಬರೆವಣಿಗೆಯು ಪರಿಚಯಿಸಿಬಿಡುತ್ತದೆ. ಕಾಡಿನ ನಡುವೆ ಕಳೆದ ದಿನಗಳಲ್ಲಿ ಪ್ರಾಣಿ ಪಕ್ಷಿಗಳ ಒಡನಾಟ ತಾನಾಗಿಯೆ ಇರುತ್ತದೆ ಎಂಬುದು ಇಲ್ಲಿಯೂ ಕಾಣಿಸಿಕೊಳ್ಳುತ್ತದೆ. ಬಾಲ ವಯಸ್ಸಿನ ಕುತೂಹಲ, ಬೆರಗು, ಭಯ, ಅನುಕಂಪ, ಪರಿಸರ ಪ್ರೇಮವು ವಸ್ತುಗಳಾಗಿ ನಿಲ್ಲುತ್ತವೆ. ತಮ್ಮನೊಡನೆ, ಗೆಳೆಯ ತಿಮ್ಮನೊಡನೆ ಶಾಲೆಯ ಹಾದಿಯಲ್ಲಿ ಸಿಗುವ ಕಾಡಿನ ಹಾದಿಯನ್ನು ಸವೆಸುತ್ತಾ

[೫೪] 'ಮುಗುಳು' ಮಕ್ಕಳ ಸಾಹಿತ್ಯ ಕುರಿತು, ಲೇಖಕರು : ಆನಂದ ಪಾಟೀಲ . ಪುಟ ೧೭೬ : ೨೦೧೨, ಪ್ರಕಾಶನ: ಅಭಿನವ, ಬೆಂಗಳೂರು.

ಬೆಟ್ಟದ ದಾರಿ ಹಿಡಿದು ನಡೆದು, ಜೇಡರ ಬಲೆಯನ್ನು ನೋಡಿ ಅಚ್ಚರಿಗೊಂಡಾಗ, ಕಾಡುಗುಬ್ಬಿಯ ಮರಿಯೊಂದು ಬಂದು ಅದರಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಪುಟ್ಟ ತಮ್ಮನು ಅದರ ಸ್ಥಿತಿಯನ್ನು ಕಂಡು ಅಳುವಾಗ ತಿಮ್ಮನು ಕೋಲು ತಂದು ಬಲೆಯನ್ನು ಹರಿದು, ಹಕ್ಕಿಯನ್ನು ಬಿಡಿಸಿ, ಅದರ ರೆಕ್ಕೆಗಳಿಗೆ ಅಂಟಿದ್ದ ಬಲೆಯ ಚೂರುಗಳನ್ನು ಬಿಡಿಸಿ ಹಾರಿಸುವರು. ಅದು ಹಾರಿದ ಮೇಲೆ ಅನುಭವಿಸಿದ ಸಂತೋಷವನ್ನು ಅವರು ಹೇಳುತ್ತಾರೆ. ಬನದ ಊಟದ ದಿನ ಬೆಳ್ಳಕ್ಕಿಗಳು ರಾತ್ರಿಯ ಹೊತ್ತಿನಲ್ಲಿ ಬಾಳೆತೋಟದ ಎಲೆಯ ಮೇಲೆ ಕುಳಿತು ಹಾಕಿದ ಪಿಕ್ಕೆ ಕೂಡ ಬೆಳ್ಳಕ್ಕಿಯ ಬಣ್ಣವೇ ಇರುತ್ತದೆ. ಇದ ನೋಡುವುದೇ ಸಂಭ್ರಮ. ಆದರೆ ಎಲೆಗಳು ಹೊಲಸಾಗುವುದು ಎಂದು ಬೇಸರಿಸುವ ಅಪ್ಪ. ಅವುಗಳ ಉದ್ದುದ್ದ ಗೋಣು, ಉದ್ದುದ್ದ ಕೊಕ್ಕು ನೋಡುವುದೇ ಸೊಬಗು ಎಂದು ತೀರ ವಾಸ್ತವವಾದ ಸಂಗತಿಗಳನ್ನು ಮುಂದಿಡುತ್ತಾರೆ ತಮ್ಮಣ್ಣ. ಇಲ್ಲಿಯು ಹಕ್ಕಿಗಳಿಗಾಗಿ ಬರುವ ಆತಂಕಗಳನ್ನು ಅವರು ನಿವಾರಿಸಿ ಖುಷಿಪಡುವ ಕ್ಷಣಗಳಿವೆ. ರಾತ್ರಿ ಗದ್ದೆಗಳಲ್ಲಿ ಮಲಗುವ ಸಲುವಾಗಿ ದಾರಿಯಲ್ಲಿ ಬೆಳಕಿನ ಸೂಡಿಗಳನ್ನು ಹಿಡಿದು ಸಾಗುವುದು, ರಾತ್ರಿ ಆಕಾಶದ ನಕ್ಷತ್ರಗಳನ್ನು ನೋಡುತ್ತಾ ಮಲಗುವಾಗ ಬೀಳುವ ಉಲ್ಕೆ ಪಿಂಡಗಳನ್ನು ಕಂಡು ನಕ್ಷತ್ರಗಳೇ ಬಿದ್ದವು ಎಂದು ಭಾವಿಸಿಕೊಳ್ಳುವುದು, ಅವುಗಳನ್ನು ನೋಡಲು ರಾತ್ರಿ ಪೂರ್ತಿ ನಿದ್ದೆಗೆಟ್ಟು ಕಾಯುವುದು ಎಲ್ಲವೂ ಇಲ್ಲಿ ಸಾಧ್ಯವಾಗಿವೆ. ಕಪ್ಪೆಯ ಕೂಗು, ಅದನ್ನು ಹಿಡಿದುಕೊಳ್ಳಲು ತವಕಿಸುವ ಹಾವು, ಹೆದರಿ ಅಣ್ಣನನ್ನು ಕೂಗುವ ಪುಟ್ಟನ ಭಯ. ಹಾವುಗಳ ಬಗೆಗಿನ ತಿಳುವಳಿಕೆ ಮಲೆನಾಡಿನ ಮಕ್ಕಳಿಗೆ ಸಾಮಾನ್ಯವಾಗಿ ಇರುವುದು ಎಲ್ಲವನ್ನು ಇವರು ಈ ಕಾದಂಬರಿಯಲ್ಲಿ ವಸ್ತುವಾಗಿ ಕಂಡಿದ್ದಾರೆ. ಕಾಡಿನ ನಡುವೆ ಕಳೆಯುವ ರಜೆದಿನಗಳ ಅನುಭವಗಳಿವೆ. ಜಂತುಹುಳುಗಳ ಪರಿಚಯವಿದೆ. ಚೌತಿಯ ಗಣೇಶನ ಸಂಗತಿಗಳೊಂದಿಗೆ ಕತೆಯು ಮುಗಿಯುತ್ತದೆ. ಇಲ್ಲಿನ ಪರಿಸರ, ಭಾಷೆ, ವಸ್ತುಗಳಲ್ಲಿ ನಾವೀನ್ಯಯತೆಯನ್ನು ತಂದಿರುವ ತಮ್ಮಣ್ಣ ನವರು ವಾಸ್ತವದ ಹಂದರವನ್ನು ಕತೆಯ ಎಲ್ಲಾಕಡೆ ಪಸರಿಸಿದ್ದಾರೆ. ಆದುದರಿಂದ ಇದೊಂದು ಪ್ರಮುಖ ಕೃತಿಯಾಗಿ ಕಾಣಿಸಿಕೊಳ್ಳುತ್ತದೆ.

**ಆನಂದ ಪಾಟೀಲ**

ಹೊಸ ತಲೆಮಾರಿನ ಮಕ್ಕಳ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಕೈಯ್ಯಾಡಿಸಿ ಸೈ ಎನಿಸಿಕೊಂಡವರು ಆನಂದ ಪಾಟೀಲರು. ಮಕ್ಕಳ ಸಾಹಿತ್ಯದ ವಿಮರ್ಶಾ ಕ್ಷೇತ್ರದಲ್ಲಿಯೂ ಗಟ್ಟಿಯಾದ ನೋಟ ಪಾಟೀಲರದು. ಮಕ್ಕಳ ಮುಗ್ಧತೆಯನ್ನು ತಮ್ಮ ಬಂಡವಾಳವನ್ನಾಗಿಸಿಕೊಂಡು, ವಾಸ್ತವದ ಹಂದರಗಳನ್ನು ಎಣೆಯುವ ಕಲೆಗಾರಿಕೆಯು ಅವರ ಕಾದಂಬರಿಗಳಲ್ಲಿ ಮೈದಳೆಯುತ್ತದೆ.

ಡಂಡಂ ಊರಿಗೆ ಡಿಂ ಡಿಂ ಗಾಡಿ'

ಧಾರವಾಡದ ಪ್ರಾದೇಶಿಕ ಭಾಷೆಯ ಸೊಗಡಿನೊಂದಿಗೆ ಮಕ್ಕಳನ್ನು ಮುದಗೊಳಿಸಿರುವ. ಬಲು ಜನಪ್ರಿಯವಾದ ಕಾದಂಬರಿ ಇದು. ಬಾಲ್ಯದಲ್ಲಿ ಮಕ್ಕಳು ತಮ್ಮ ಸಹಪಾಠಿಗಳೊಂದಿಗೆ ಆಡುವ ಆಟಗಳ ಭಾವ ವಿಹಂಗಮತೆಯನ್ನು ಅನಾವರಣಗೊಳಿಸಿರುವ ಪಾಟೀಲರು ನಿರೂಪಣೆಯಲ್ಲು ಹೊಸ

ತಂತ್ರಗಾರಿಕೆಯನ್ನು ತಂದಿದ್ದಾರೆ. ತುಸು ದೊಡ್ಡವಳಾಗಿ ಬೆಳೆದ ಹುಡುಗಿಯು ತಮ್ಮ ಆಟದ ರಸವತ್ತಾದ ಬಣ್ಣನೆಯನ್ನು ಮಾಡುತ್ತಾಳೆ. ಇದೊಂದು ನವಕಲಾಗಾರಿಕೆ ಎನ್ನಬಹುದು. ಬಾಲ್ಯದಲ್ಲಿ ಮಕ್ಕಳು ಆಡುವ ಗಾಡಿ ಆಟವು ಈ ಕಾದಂಬರಿಯ ವಸ್ತು. ಒಬ್ಬರ ಅಂಗಿ ಒಬ್ಬರು ಹಿಡಿದುಕೊಂಡು ಸರಪಳಿಯಂತೆ ಸಾಲು ಗಟ್ಟಿಕೊಂಡು ಊರಿಂದೂರಿಗೆ ಪ್ರಯಾಣಿಸುವಂತೆ ಆಡುವ ವೈವಿಧ್ಯವಯವಾದ ಸಂಗತಿಗಳನ್ನು ಸೃಜನಶೀಲತೆಯಿಂದ ತಾವೇ ಸೃಜಿಸಿಕೊಂಡು ಮಾತನಾಡುವ ಸಂಭಾಷಣೆಗಳು ಇಲ್ಲಿವೆ. ಇಲ್ಲಿನ ಓದು ತುಸು ಬೆಳೆದ ಮಕ್ಕಳಿಗೆ, ಓದು ಬರೆಹ ಬಲ್ಲವರಿಗಾಗಿ ಬರೆದಿರುವಂತಹುದು. ಧಾರವಾಡದ ಭಾಷೆಯನ್ನು ಬಲ್ಲವರಿಗೆ ಸುಲಲಿತವಾದುದು. ಅನುಭವಗಳು ಸಹ ಅಲ್ಲಿನ ಸಂಗತಿಗಳಿಗೆ ಜೀವತುಂಬುವಂತಿವೆ. ರಜಿ, ಟುಮ್ಯಾರ ನಡುವೆ ನಡೆಯುವ ಗಾಡಿ ಆಟವು ಮನೆಯ ಕಂಬಗಳ ಸುತ್ತ ಸುತ್ತುತ್ತಾ ಅಂಗಳಕ್ಕೆ ಬಂದು ಮರವನ್ನು ಸುತ್ತಿ ಸಿದ್ದಜ್ಜಿಯ ಕತೆಯಲ್ಲಿ ವಿಹರಿಸಿ, ಸಿದ್ಯಾನ ಸೇರ್ಪಡೆಯೊಂದಿಗೆ ಬಯಲಿಗೆ ಸಾಗುತ್ತದೆ. ಮಕ್ಕಳ ಆಟದ ಜೊತೆಗೆ ಅನೇಕ ಸಂಗತಿಗಳು ಬಿಚ್ಚಿಕೊಳ್ಳುತ್ತವೆ. ಅಲ್ಲಿಯೇ ತಂದ ತಿಂಡಿತಿನಿಸುಗಳು ಸಾಗುತ್ತವೆ. ಗಾಡಿ ಓಡುವುದು, ನೆಗೆಯುವುದು, ಕುಣಿಯುವುದು, ಹೆಜ್ಜೆ ಮೇಲೆ ಹೆಜ್ಜೆ ಹಿಡುವುದು ಎಲ್ಲವೂ ಸಾಧ್ಯವಾಗುತ್ತದೆ. ಮಕ್ಕಳು ಮಕ್ಕಳಾಗಿಯೇ ಉಳಿದುಕೊಳ್ಳುವ ಬಯಕೆಗಳನ್ನು ಡಂ ಡಂ ಊರಿನಲ್ಲಿ ಕಾಣಬಹುದು ಅಲ್ಲಿ ಯಾರು ದೊಡ್ಡವರಾಗುವುದಿಲ್ಲ ಎನ್ನುವ ಆಶಯಗಳು ಮೂಡುತ್ತವೆ. ಆ ಊರಿನ ಬಗ್ಗೆ ಮಾತನಾಡಿಕೊಳ್ಳುವುದೆ ಒಂದು ಸ್ವಾರಸ್ಯವಾದುದು ನೈಜವಾದುದು ಎನಿಸುತ್ತದೆ. ಆ ಊರಲ್ಲಿ ಮುದುಕರಾಗುವುದಿಲ್ಲ, ತಿಂದರೆ ತಿನ್ನಬಹುದು, ಇಲ್ಲವೇ ಸುಮ್ಮನಿರಬಹುದು. ಹಸಿವು ಹತ್ತೋದಿಲ್ಲ ಅಂದ್ರೆ ಉದ್ದಿನವಡೆ ತಿನ್ನೋದೆಂಗೆ ? ಎಂಬ ಬಯಕೆಗಳು ಮಕ್ಕಳಲ್ಲಿ ಚಿಂತನೆಗಚ್ಚಿಕೊಳ್ಳುವ, ಆಲೋಚನೆಗಳು ಹುಟ್ಟುವ ಸಂಗತಿಗಳಿವೆ. ಕೊನೆಗೆ ಸಂಜೆಯಾಗುವ ಸುಳಿವರಿತು ಗಾಡಿಯು ಊರಿಗೆ ಹಿಂದಿರುಗಲು ತವಕಿಸುವ ಆತಂಕಗಳಿವೆ. ಕತ್ತಲ ಕೋಣೆಯಲ್ಲಿ ಇರುವ ಆಯಾಳು ಡಂಡಂ ಊರಿಗೆ ಬಂದ್ರೆ ಮುಂದೆನೂ ಹೀಗೆಯೇ ಇರ್ತಾಳ? ಎನ್ನುವ ಪ್ರಶ್ನೆಗಳು ಹುಟ್ಟಿ ಉತ್ತರವಿಲ್ಲದೆ, ಮತ್ತೆ ಈಗ ಅವಳು ಯಾಕೇ ನೆನಪಾದ್ಲು? ಇದ್ದಕ್ಕಿಂದ್ದಂಗೆ ನೆನಪಾದ್ಲು ಅನ್ನುವ ಸಮಾಧಾನದೊಂದಿಗೆ ಅಂತ್ಯವಾಗುತ್ತದೆ. ಇದೊಂದು ವಾಸ್ತವ ನೆಲೆಯಲ್ಲಿ ಮಕ್ಕಳನ್ನು ಅವರ ಮುಗ್ಧತೆಯನ್ನು ಸೂರೆಮಾಡಿ ಎಲ್ಲರ ಬಾಲ್ಯವನ್ನು ಕಟ್ಟಿಕೊಡುವ ಕೆಲಸ ಮಾಡುತ್ತದೆ. ಅಧ್ಯಯನದ ಸಲುವಾಗಿಯು ಹೊಸ ಹೊಳವುಗಳಿಗೆ ದಾರಿಯಾಗುವ ಲಕ್ಷಣಗಳನ್ನು ಇದು ತಳೆದುಬಂದಿದೆ. ಆಧುನಿಕ ಮಕ್ಕಳ ಕಾದಂಬರಿಯನ್ನು ಹೊಸದಾದ ನೋಟದೊಂದಿಗೆ ನೋಡಿದ ಪ್ರಯೋಗಶೀಲ ಕಾದಂಬರಿ ಇದಾಗಿದೆ.

**ಬೆಳದಿಂಗಳು**

'ಬೆಳದಿಂಗಳು' ಆನಂದ ಪಾಟೀಲರ ಈ ಕಾದಂಬರಿ ಒಬ್ಬ ಗ್ರಾಮೀಣ ಹುಡುಗ, ಅವನ ಗೆಳೆಯನ ಸುತ್ತ ಹರಡಿಕೊಳ್ಳುತ್ತಾ ಹೋಗಿದೆ. ಮಕ್ಕಳಲ್ಲಿನ ಕುತೂಹಲ, ಹುಡುಕಬೇಕೆನ್ನುವ ತವಕ, ಹೊಸದೇನನ್ನೋ ಕಂಡುಹಿಡಿಯಬೇಕೆನ್ನುವ ತುಡಿತ, ಜೊತೆಗೆ ಇದಕ್ಕೆ ಬೇಕಾಗುವ ಸಾಹಸ, ಹುಮ್ಮಸ್ಸು ಇಲ್ಲಿ

ಕಾಣಿಸಿಕೊಂಡಿವೆ. ಜೊತೆಗೆ ಮಾನವೀಯ ಸಂಬಂಧಗಳು, ನೋವು, ಕಳೆದುಕೊಳ್ಳುವುದು ಇವೂ ಕೂಡ ಇಲ್ಲಿ ಜೊತೆಯಾಗುತ್ತವೆ. ಬಡವನಾದ ಅಪ್ಪು ಎನ್ನುವ ಹುಡುಗ ಗ್ರಾಮೀಣ ಭಾಗದ ಸಂತೆಗೆಂದು ಹೋದವನು, ಅಲ್ಲಿಂದ ತಮ್ಮ ಊರಿಗೆ ಬರುವ ಬಸ್ಸಿಗೆ ಕಾಯಲು ಕುಳಿತಾಗ ತಾನು ಕುಳಿತ ಜಾಗದಲ್ಲಿ ಭೂಮಿಯಿಂದ ಎದ್ದು ಮೇಲೆ ಬಂದಿದ್ದ ಒಂದು ಕಲ್ಲಿನ ಕುತೂಹಲಕ್ಕೊಳಗಾಗುತ್ತಾನೆ. ಅದನ್ನು ತುಸು ಮಣ್ಣಿಂದ ಕೆದರಿದಾಗ ಕಾಣುವ ಚಂದ್ರನ ಚಿತ್ರಗಳು ಕುತೂಹಲ ಮೂಡಿಸುತ್ತವೆ. ಅವನು ಅದರಲ್ಲೇ ಮುಳುಗಿ ಹೋಗುತ್ತಾನೆ. ಬಸ್ಸು ತಪ್ಪಿಸಿಕೊಳ್ಳುತ್ತಾನೆ. ಆ ಕಲ್ಲು ವಾಲಿಕೊಂಡ ದಿಕ್ಕಿನೆಡೆಗೆ ಕುತೂಹಲದ ಊಹೆಯೊಂದಿಗೆ ಸಾಗುತ್ತ ಒಂದಿಷ್ಟು ದೂರದಲ್ಲಿ ಇನ್ನೊಂದು ಅಂತಹದೆ ವಾಲಿಕೊಂಡ ಕಲ್ಲನ್ನು ಕಾಣುತ್ತಾನೆ. ಅದರಲ್ಲೂ ಚಂದ್ರನ ಚಿತ್ರಗಳು ಕಾಣಿಸುತ್ತದೆ. ಅವು ಸಂಖ್ಯೆಲ್ಲಿ ಹೆಚ್ಚಾಗುತ್ತ ಹೋಗಿದ್ದು, ಇನ್ನೊಂದಿಷ್ಟು ಕುತೂಹಲದ ಸೂಚನೆಗಳನ್ನು ನೀಡುತ್ತವೆ. ಸರಿಸಂಜೆಯಾಗುತ್ತ ದೀಪಗಳು ಹಚ್ಚುತ್ತ ಅವನು ತನ್ನಗೆಳೆಯ ಚಂದ್ರುವಿನ ಊರಿಗೆ ಬಂದು ಮುಟ್ಟಿರುತ್ತಾನೆ ಚಂದ್ರುವಿನ ಮನೆಯಲ್ಲಿಯೇ ತಂಗುತ್ತಾನೆ. ಆದರೆ ಮುಂದಿನ ವಾರವೆ ತನ್ನ ಗೆಳೆಯನೊಂದಿಗೆ ಮತ್ತೆ ಆ ದಾರಿಯಲ್ಲಿ ಹುಡುಕಾಟ ನಡೆಸುವ ಯೋಜನೆ ಹಾಕಿಕೊಳ್ಳುತ್ತಾನೆ. ಅದರಂತೆ ಈ ಸಲ ಮನೆಯಲ್ಲಿ ಎಲ್ಲಾ ಹೇಳಿಯೆ ಹೊರಡುತ್ತಾರೆ. ಹಾಗೆ ಹುಡುಕುತ್ತ ಹುಡುಕುತ್ತ ಹೋಗಿ ದೊಡ್ಡ ಕಣಿವೆ ಸೇರಿ, ರಾತ್ರಿ ಅಪ್ಪಾರಾವ್ ಎನ್ನುವ ಮಹರಾಷ್ಟ್ರದ ಕಡೆಯವರು ತಮ್ಮ ಇನ್ನೊಬ್ಬ ಸಹಚರರೊಂದಿಗೆ ಹೀಗೆಯೇ ಸಂಶೋಧನೆಗೆಂದು ಬಂದವರು ಈ ಹುಡಕುಗರನ್ನು ಕಂಡು ಅಚ್ಚರಿಗೊಳ್ಳುತ್ತಾರೆ. ಇವರ ಸುಳಿಹುಗಳನ್ನು ಕಂಡು ಕುತೂಹಲಿತರಾಗಿ ತಾವೂ ಜೊತೆಯಾಗುತ್ತಾರೆ. ಅಲ್ಲಿಂದ ಈ ಹುಡುಕಾಟದ ಪಯಣ ನಿರ್ದಿಷ್ಟವಾದ ವ್ಯವಸ್ಥಿತ ದಾರಿ ತುಳಿಯುತ್ತದೆ. ಕಣಿವೆಯ ಮಾರ್ಗದಲ್ಲಿ ಬಹುದೂರ ಅವರ ಪಯಣ ಸಾಗುತ್ತದೆ. ಚಂದ್ರನ ಚಿತ್ರಗಳಿರುವ ಕಲ್ಲುಗಳು ಸಿಗುತ್ತಾ, ಅವು ದಾರಿಯನ್ನೂ ಸೂಚಿಸತೊಡಗುತ್ತವೆ. ಹೀಗೆ ಸಾಗಿ ಸಾಗಿ ಅವರು ಒಂದು ಹಂತಕ್ಕೆ ಬಂದು ತಲುಪುತ್ತಾರೆ. ಅಲ್ಲಿ ದೊಡ್ಡ ಬಹುದೊಡ್ಡ ಕಲ್ಲುಗಳನ್ನು ಇರಿಸುತ್ತ ನಿರ್ಮಿಸಲಾದ ಗೋಡೆಯವರೆಗೆ ಬಂದು ತಲುಪುತ್ತಾರೆ. ಚಂದ್ರನ ಚಿತ್ರದ ಸೂಚನೆಗಳು ಹುಣ್ಣಿವೆಯನ್ನು ಸೂಚಿಸುವಲ್ಲಿಗೆ ಅವರಿಗೆ ಹೊಳೆಯುತ್ತದೆ. ಆ ರಾತ್ರಿ ತಮ್ಮ ಸಂಶೋಧನೆಯನ್ನು ಅನುಭವಿಯಾದ ಅಪ್ಪಾರಾವ್ ಅವರ ಸಲಹೆಯಂತೆ ಮೊಟಕುಗೊಳಿಸಿ, ಹುಡುಕುತ್ತ ಹತ್ತಿರದ ದಾರಿ ಕಂಡುಕೊಳ್ಳುತ್ತಾರೆ. ಹಾಗೆ ಹುಡುಕುತ್ತ ಒಂದು ಹಳ್ಳಿಗೆ ಬರುತ್ತಾರೆ. ಕತ್ತಲಾದುದರಿಂದ ಒಂದು ದೇವಾಲಯದಲ್ಲಿ ತಂಗುತ್ತಾರೆ. ಬೆಳಗ್ಗೆ ಎದ್ದಾಗ ಮಂದಿರದ ಗೋಡೆಯ ಮೇಲೆ ಚಿತ್ರವೊಂದನ್ನು ಕಾಣುತ್ತಾರೆ. ಅದು ಅವರ ಕುತೂಹಲಕ್ಕೆ ಕಾರಣವಾಗುತ್ತದೆ. ಹಾಗೆಯೇ ಊರಿನಲ್ಲಿ ಅಡ್ಡಾಡಿಕೊಂಡು ಬರುತ್ತಾರೆ. ಅಲ್ಲಿಯೂ ಮನೆಗಳ ಗೋಡೆಯ ಮೇಲೆ ಚಿತ್ರಗಳನ್ನು ನೋಡುತ್ತಾರೆ. ಆ ಕುರಿತು ಕೇಳಿದಾಗ ಹಳ್ಳಿಯ ಮುದುಕಿಯೊಬ್ಬಳು ಕತೆಯೊಂದನ್ನು ಹೇಳಿದಳು. ಹಿಂದೆ ಒಬ್ಬ ರಾಕ್ಷಸ ಇದ್ದ, ಅವನು ಹಳ್ಳಿಗರಿಗೆ ಉಪಟಳ ಕೊಡುತ್ತಿದ್ದ. ಜನ ಹೆದರಿಕೊಂಡು ಚೆಂದಪ್ಪನ ಬಳಿಹೇಳಿಕೊಂಡರು.

ಹಾಗೆಯೇ ಹುಣ್ಣಿಮೆಯ ಸಮಯದಲ್ಲಿ ಚೆಂದಪ್ಪನನ್ನು ಬೇಡಿಕೊಳ್ಳುವ ಆಚರಣೆ ಇದು. ಈ ಆಚರಣೆಗೂ , ಕತೆಗೂ ತಾವು ರಾತ್ರಿ ಕಂಡ ಕಲ್ಲಿನ ಗೋಡೆಗೂ ಏನಾದರೂ ಸಂಬಂಧ ಇರಬಹುದೇ

ಎನ್ನುವ ಕುತೂಹಲದ ವಿಚಾರವೂ ಹೊಳೆದು ಹೋಗುತ್ತದೆ. ಅಲ್ಲಿಂದ ಅವರೆಲ್ಲ ಬಸ್ಸು ಹಿಡಿದು ಮಹಾರಾಷ್ಟ್ರದ ಅಪ್ಪಾರಾವ್ ಅವರ ಮನೆಗೆ ಹೋಗಿ ತಂಗುತ್ತಾರೆ.

ಚಂದ್ರನ ಚಿತ್ರಗಳೆ ಅಲ್ಲೆಲ್ಲ ಇದ್ದುದರಿಂದ ಹುಣ್ಣಿಮೆ ಅಲ್ಲಿನ ಗುಟ್ಟುಗಳನ್ನು ಬಿಟ್ಟುಕೊಡಬಹುದು ಎಂದುಕೊಂಡು ಅವರು ಮುಂದಿನ ಹುಣ್ಣಿಮೆಗೆ ಮತ್ತೆ ಅಲ್ಲಿಗೆ ಪಯಣ ಬೆಳೆಸುತ್ತಾರೆ. ಈ ಸಲ ಹುಣ್ಣಿಮೆಯ ಬೆಳಕು ಚೆನ್ನಾಗಿ ಹರಡಿಕೊಳ್ಳುವುದನ್ನೆ ಟೆಂಟು ಹಾಕಿಕೊಂಡು ಕಾಯುತ್ತಾರೆ. ಅಲ್ಲಿ ಏನೂ ಬದಲಾವಣೆ ಕಾಣದಿದ್ದುದು ಅವರಿಗೆ ನಿರಾಸೆಯನ್ನು ಉಂಟುಮಾಡುತ್ತದೆ. ಆದರೂ ಆ ಗೋಡೆಯ ಗುಂಟ ಸಂಶಯದಿಂದ ಹುಡುಕುತ್ತ ಹೋಗುತ್ತಾರೆ. ಅಪ್ಪಾರಾವ್ ಜೊತೆಗಾರ ಫಡಕೆ ಇದ್ದಕಿದ್ದ ಹಾಗೆ ಕೂಗಿದುದು ಅವರಿಗೆ ಅಚ್ಚರಿಯಾಗುತ್ತದೆ. ಫಡಕೆ ತಾನು ಆತು ನಿಂತ ದೈತ್ಯ ಕಲ್ಲು ಅಲುಗಿದುದನ್ನು ಹೇಳುತ್ತಾನೆ. ಹೌದು ಅದನ್ನು ಮುಟ್ಟಿದೊಡನೆ ಬಲು ಹಗುರವಾಗಿ ಅದು ಅಲುಗುತ್ತದೆ. ಉಳಿದ ಕಲ್ಲುಗಳು ಮಾತ್ರ ಹಾಗೇ ಗಟ್ಟಿಯಾಗಿಯೆ ಇರುತ್ತವೆ. ಅಂತು ಅವರಿಗೆ ಒಂದು ಸುಳುಹು ಸಿಕ್ಕ ಅನುಭವವಾಯಿತು. ನಿಧಾನವಾಗಿ ಆ ಹುಗುರವಾದ ಕಲ್ಲನ್ನು ಸರಿಸುತ್ತ ಒಳಗೆ ಬರುತ್ತಾರೆ. ಅಲ್ಲಿ ಬೆಳದಿಂಗಳನಲ್ಲಿ ಹೊಳೆಯುವ ಮೆಟ್ಟಲಿನ ಚೌಕಾಕಾರದ ಕಟ್ಟೆಗಳು ಏರುತ್ತ ಹೋಗಿರುವ ಕಟ್ಟಡವೊಂದು ಅವರಿಗೆ ಕಾಣಿಸುತ್ತದೆ. ಮಕ್ಕಳ ಕುತೂಹಲವನ್ನು ತಡೆಹಿಡಿಯುತ್ತ ಅಪ್ಪಾರಾವ್ ಅವನ್ನ ಹತ್ತುವುದು ಬೇಡ ಎಂದು ಎಚ್ಚರಿಕೆ ಕೊಡುತ್ತಾರೆ. ಆ ರಾತ್ರಿ ಅವರು ಹತ್ತಿರದಲ್ಲಿಯೆ ತಂಗುತ್ತಾರೆ. ಕತ್ತಲು ಕಳೆದು ಬೆಳಗಾಗುತ್ತಿದ್ದಂತೆ ಅಪ್ಪಾರಾವ್ ಎದ್ದು ನೋಡುತ್ತಾರೆ, ಅಪ್ಪು ಆ ಕಲ್ಲಿನ ಗೋಪುರಾಕೃತಿಯ ಕಟ್ಟಡದ ಮೇಲೆ ಹೋಗಿ ಕುಳಿತು ಬಿಟ್ಟಿದ್ದಾನೆ. ಚಂದ್ರು ಅವನನ್ನು ನೋಡಿ ತಾನೂ ಏರಲು ಓಡುತ್ತಾನೆ. ಫಡಕೆ ಆತಂಕ ವ್ಯಕ್ತ ಪಡಿಸುತ್ತಾರೆ. ಆದರೆ ಅಪ್ಪಾರಾವ್ ಏನೂ ಆಗದು ಎನ್ನುವ ಸಮಾಧಾನ ತಳೆಯುತ್ತಾರೆ. ಬೆಳದಿಂಗಳು ಕಳೆದುದರಿಂದ ಆ ಕಲ್ಲಿನ ಯಾವ ಪರಿಣಾಮ ಈಗಾಗದು ಎಂದು ಅವರಿಗೆ ತಿಳಿಯುತ್ತದೆ. ನಂತರ ಅಡ್ಡಾಡುತ್ತ ಅವರು ಅಲ್ಲಿ ಒಳಗೆ ನಗತೊಡಗುತ್ತಾರೆ. ಅದೆ ಸಮಯದಲ್ಲಿ ಅಪ್ಪು ಅಲ್ಲಿನ ಗೋಡೆಯಾಗಿರುವ ಕಲ್ಲೊಂದರಲ್ಲಿ ಅಕ್ಷರಗಳನ್ನು ಕಂಡು ಹಿಡಿಯುತ್ತಾನೆ. ಅಪ್ಪಾರಾವ್ ಅವನ್ನು ನಕಲು ಮಾಡಿಕೊಳ್ಳುತ್ತಾರೆ. ನಂತರ ವಿಶ್ವಾವಿದ್ಯಾಲಯದ ಶಾಸನ ವಿಭಾಗದ ಕೆಲವರನ್ನು ಅಪ್ಪರಾವ್ ಭೇಟಿಯಾಗುತ್ತಾರೆ. ತಮ್ಮ ಬರಹವನ್ನು ಪರೀಕ್ಷಿಸುತ್ತಾರೆ. ಅದರಿಂದ ಅಚ್ಚೆಯ ವಿಷಯ ಬೆಳಕಿಗೆ ಬರುತ್ತದೆ. ಹಿಂದೊಮ್ಮೆ ಹೀಗೆಯೆ ಕುತೂಹಲದಿಂದ ಒಬ್ಬ ಹುಡುಗ ಅಲ್ಲಿ ಪ್ರವೇಶಿಸಿ ಆ ಗೋಪುರಾಕೃತಿಯ ಕಟ್ಟಡ ಏರಿರುತ್ತಾನೆ. ಆಗ ಬೆಳದಿಂಗಳು, ಅದರ ಪರಿಣಾಮವಾಗಿ ಅವನು ಬೆಳಯತೊಡಗುತ್ತ ಅವನ ಆಕೃತಿ ದೊಡ್ಡದಾಗುತ್ತ ಹೋಗುತ್ತದೆ. ಮೇಲಿನ ಬಟ್ಟೆಗಳೆಲ್ಲ ಸಾಲದೆ ಹರಿದು ಹೋಗುತ್ತವೆ. ಅವನು ಬೆಳೆದು ಬೆಳೆದು ಬಲು ದೊಡ್ಡ ಆಕೃತಿ ತಳೆಯುತ್ತಾನೆ. ಹಾಗೆ ಉಳಿದ ಅವನ ಆಕೃತಿಯಿಂದ ಪಡಬಾರದ ಕಷ್ಟ ಪಡುತ್ತಾನೆ. ತಿನ್ನುವುದಕ್ಕೆ ಏನೇನೂ ಸಾಲದೆ, ಜನರಿಗೆ ಮುಖ ತೋರಿಸದೆ ಕದ್ದು ಕದ್ದು ಹಳ್ಳಗಳಗೆ ನುಗ್ಗಿ ಸಿಕ್ಕುದನ್ನು ತೆಗೆದುಕೊಳ್ಳುತ್ತ ಕಾಲ ದೂಡುತ್ತಾನೆ. ಜನ ಭಯದಿಂದ ಕಂಗಾಲಾಗಿ ಬಿಡುತ್ತಾರೆ. ಹೀಗೆಯೇ ಒಂದು ದಿನ ಅವನು ಕೊರಗಿ ಕೊರಗಿ ಉಣಿಸಿಲ್ಲದೆ ಅಲ್ಲಿಯೇ ಸಾಯುತ್ತಾನೆ. ಅವನು ಬರೆದಿಟ್ಟ ಅವನಕತೆಯೆ ಕಲ್ಲಿನ ಮೇಲೆ ಬರೆದ ಬರಹವಾಗಿರುತ್ತದೆ. ಇದರಿಂದ ಅಪರೂಪದ ಇತಿಹಾಸದ ಸಂಗತಿಯೊಂದು ಬೆಳಕಿಗೆ ಬಂದು, ಇನ್ನೂ ವಿಶೇಷವಾದ ಸಂಶೋಧನೆಗೆ ದಾರಿ

ಮಾಡಿಕೊಡುತ್ತದೆ. ಪತ್ರಿಕೆಗಳಲ್ಲಿ ಹುಡುಗರ ಚಿತ್ರಗಳು ಸುದ್ದಿ ಕಾಣಿಸಿ ಹೊಗಳಿಕೆಯೊಂದಿಗೆ ಹುಡುಗರು ಹಳ್ಳಿಗೆ ಮರಳುತ್ತಾರೆ.

**ರಾಜಶೇಖರ ಭೂಸನೂರಮಠ**

ವಿಜ್ಞಾನದ ಆವಿಷ್ಕಾರಗಳನ್ನು ವಿಜ್ಞಾನದ ಹೊಸ ಹೊಸ ತಂತ್ರಜ್ಞಾನವನ್ನು ವೈಜ್ಞಾನಿಕ ಮನೋಭಾವನೆಗಳ ವಿವರಣೆಗಳನ್ನೇ ಕಥಾ ಹಂದರವನ್ನಾಗಿಸಿಕೊಂಡು ಮಕ್ಕಳ ಕಥಾ ಸಾಹಿತ್ಯದಲ್ಲಿ ನೀಳ್ಗತೆಗಳನ್ನು ರಚಿಸುವ ಮೂಲಕ ಮಕ್ಕಳ ಕಥಾ ಸಾಹಿತ್ಯವನ್ನು ಸಮೃದ್ಧತೆಯೆಡಗೆ ಕೊಂಡೊಯ್ದವರು ರಾಜಶೇಖರ ಭೂಸನೂರಮಠರವರು. ವಿಜ್ಞಾನ ರಹಸ್ಯಗಳು ಕೌತುಕತೆಗಳು, ಅಣುಬಂಧ, ರಚನೆ ಮುಂತಾದ ವಿಷಯಾಂಶಗಳೇ ಕಥಾ ವಸ್ತುವಾಗಿ ಬಂದ ನೀಳ್ಗತೆಯೇ 'ಪರಮಾಣು ಲೋಕದಲ್ಲಿ' ಎಂಬುವುದಾಗಿದೆ. ವಿಜ್ಞಾನಿಯು ಶೋಧನೆಯ ಫಲಿತ ಮತ್ತು ಪರಿಣಾಮ ಕುರಿತು ವಿವರಿಸುವ ಕಾದಂಬರಿಯೇ 'ನಿಯಮಗಳ ನಾಡಿನಲ್ಲಿ' ಆಗಿದೆ. ಅವಳಿ ಮಕ್ಕಳ ಪ್ರೀತಿ, ತುಂಟಾಟ ಪುಟಾಣಿಗಳ ಸಾಹಸ ಟಾಂಗಾದಲ್ಲಿ ಕುಳಿತು ಶಕ್ತಿ ನಗರಕ್ಕೆ ಬರುವುದು ಆರ್ಕಿಮಿಡಿಸ್, ಹೋಮಿ ಜಾಹಂಗೀರ್ ಬಾಬಾರನ್ನು ಭೇಟಿಯಾಗುವುದು, ವಿದ್ಯುತ್ ಮೋಜಿನ ಆಟ ಮುಂತಾದ ವೈಜ್ಞಾನಿಕ ಸನ್ನಿವೇಶಗಳ, ಕೌತುಕತೆಯ ನಿರೂಪಣೆಯುಳ್ಳ ಕಾದಂಬರಿಯೇ 'ಶಕ್ತಿನಗರದಲ್ಲಿ' ಎಂಬುದಾಗಿದೆ. ಸದಾ ಏನಾದರೂ ದಾಂದಲೆ ಮಾಡುತ್ತಾ ತಂದೆಗೆ ಪೇಚಾಟ ತರುವ ಪಿಂಕಿಯ ಸಾಹಸ ಯಾತ್ರೆಗಳನ್ನು, ಧೈರ್ಯಕ್ಕೆ ವೆಂಕಿಯ ಸಹಾಯಹಸ್ತ, ಪತ್ತೆದಾರಿಕಾರ್ಯ ಮುಂತಾದ ಅಂಶಗಳನ್ನೊಳಗೊಂಡ ಕಥಾವಸ್ತುವುಳ್ಳ ಕಾದಂಬರಿ 'ಭಲೇ ಪಿಂಕಿ' ಯನ್ನು ಭೂಸನೂರಮಠರು ರಚಿಸಿದ್ದಾರೆ. ಅನೇಕ ಸನ್ನಿವೇಶಗಳ ಮೇಲೆ ವೈಜ್ಞಾನಿಕ ನಿರೂಪಣೆಯೊಂದಿಗೆ ವಿವರಣೆ ನೀಡುವ ಭೂತ, ಭವಿಷ್ಯ, ವರ್ತಮಾನಗಳ ಕಲ್ಪನೆಯಾಧಾರಿತ ಕಥಾ ವಸ್ತುವಿನ ಮೇಲೆ ಭೂಸನೂರುಮಠರವರು 'ಕಾಲನೌಕೆ' ಎಂಬ ಕಾದಂಬರಿಯನ್ನು ಮಕ್ಕಳಿಗಾಗಿ ರಚಿಸಿದ್ದಾರೆ, ಭೂಸನೂರುಮಠರ ಕಾದಂಬರಿಗಳು ಮಕ್ಕಳ ನೀಳ್ಗತೆಗಳು ವಿಸ್ತರಿಸಿಕೊಂಡ ಕಥಾ ವಸ್ತುವಿಗೆ ವೈವಿಧ್ಯತೆ ಒದಗಿಸಿವೆ.

**ಮತ್ತೂರು ಸುಬಣ್ಣ**

ವೈಜ್ಞಾನಿಕ ಯುಗಕ್ಕೆ ಮಕ್ಕಳನ್ನು ಅಣಿಗೊಳಿಸುವ, ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವ ಜೊತೆಗೆ ಮಕ್ಕಳಲ್ಲಿ ಕುತೂಹಲ ಅಚ್ಚರಿ, ಸಾಹಸಮನೋಭಾವ, ಧೈರ್ಯತುಂಬುವ ಸಲುವಾಗಿ ಕತೆ ಗಳನ್ನು ಬರೆಯುತ್ತಿರುವ ಪ್ರಮುಖರಲ್ಲಿ ಮತ್ತೂರು ಸುಬ್ಬಣ್ಣ ರವರು ಒಬ್ಬರಾಗಿದ್ದಾರೆ. 'ಅಂಶು ಮತ್ತು ರಾಬೋಟ್' ಎಂಬ ಕಥಾ ಸಂಕಲನವನ್ನು ರಚಿಸುವ ಮೂಲಕ ಮಕ್ಕಳಲ್ಲಿನ ಕುತೂಹಲಕಾರಿ ಅಂಶಗಳನ್ನು ಪ್ರೇರೆಪಿಸುತ್ತಾ ಬಂದವರು. ಅಂಶು ಮತ್ತು ರಾಬೋಟ್ ಎಂಬ ಕಾಲ್ಪನಿಕ ಪಾತ್ರಗಳು ನಡೆಸುವ ಕುತೂಹಲಕಾರಿ ಶೋಧಗಳನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ವಿವರಿಸುತ್ತಾ ಯಂತ್ರ ಮತ್ತು ಮಾನವನ ಬದುಕಿನ ಸಂಬಂಧಗಳನ್ನು ಎಳೆ ಎಳೆಯಾಗಿ ಚಿತ್ರಿಸಿರುವ ಕಥಾ ಸಂಕಲನವನ್ನು ಮಕ್ಕಳಿಗಾಗಿ ನೀಡಿದ್ದಾರೆ.

ಕೆಲವು ಕಾಲ ದೀರ್ಘವಾದ ಧಾರವಾಹಿಯ ರೂಪದಲ್ಲಿಯೂ ಕಾಣಿಸಿಕೊಂಡ ಈ ದೀರ್ಘಕತೆಯು ಅಂತರಿಕ್ಷದಲ್ಲಿ, ಪಾತಾಳದಲ್ಲಿ ರೋಬೋ ಮತ್ತು ಅಂಶು ಅನುಭವಿಸುವ ಕಾಲ್ಪನಿಕ ಅನುಭವಗಳನ್ನು, ಕೆಲವು ಸಲ ಕನಸುಗಾರಿಕೆಯ ಸಂಗತಿಗಳನ್ನು ಇಲ್ಲಿ ತಂದಿರುವುದನ್ನು ನೋಡಬಹುದು. ಇದು ಮಕ್ಕಳಿಗೆ ಅಗತ್ಯದ ಫ್ಯಾಂಟಸಿಯನ್ನು ನೀಡುವ ಮೂಲಕ ಬೇರೊಂದು ಜಗತ್ತಿನ ಸಂಗತಿಗಳನ್ನು ಪರಿಚಯಿಸುತ್ತದೆ.

**ವರದಾ ಶ್ರೀನಿವಾಸ್**

ತಮ್ಮ ವೈಚಾರಿಕ ವಿಮರ್ಶೆ, ಸಂಶೋಧನೆಗಳಿಂದ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ಮಾಡಿರುವ ಪ್ರಮುಖ ಕಾದಂಬರಿಗಾರ್ತಿ ವರದಾ ಶ್ರೀನಿವಾಸ್ ರವರು. ಪಂಜೆ ಮಂಗೇಶರಾಯರ ಕೃತಿಗಳ ಬಗ್ಗೆ ಸಂಶೋಧನ ಪ್ರಬಂಧ ಮಂಡಿಸಿ ಪಿ.ಎಚ್.ಡಿ ಪದವಿಗಳಿಸಿರುವ ಇವರು ಮಕ್ಕಳಿಗಾಗಿ 'ಶೋಧ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ ಮಕ್ಕಳ ಕಥಾ ದಾಹಕ್ಕೆ ತಕ್ಕಂತೆ ಕುತೂಹಲ, ವಿಸ್ಮಯ, ರೋಮಾಂಚನ, ಗೂಢರಹಸ್ಯ ಅಂಶಗಳನ್ನು ಪ್ರಮುಖವಾಗಿಸಿಕೊಂಡು ರಚಿತವಾಗಿರುವ ಪತ್ತೆಧಾರಿ ಕಾದಂಬರಿಯೇ 'ಶೋಧ'ವಾಗಿದೆ. ಮಕ್ಕಳಲ್ಲಿನ ಸಾಹಸಮಯವಾದ ಮನಸ್ಥಿತಿಗಳಿಗೆ ಪೂರಕವಾದ ಸಂಗತಿಗಳನ್ನು ಒದಗಿಸುತ್ತಾ, ಅವರು ವಿವಿಧ ತೆರನಾದ ಸಾಹಸ ಪ್ರವೃತ್ತಿಯನ್ನು ಪ್ರದರ್ಶಿಸಲು ನೆರವಾಗುವ ವಸ್ತುವುಳ್ಳದ್ದಾಗಿದೆ.

**ಬ. ಪು. ಜ**

'ಮಳೆಕಾಡ ಕೂಡಿದ ಕಂದಗಳು' ಎಂಬುದು ಬಸವನಗೌಡ ಪುಟ್ಟಮಲ್ಲಯ್ಯ ಜಯದೇವಯ್ಯ (ಬ.ಪು.ಜ) ಅವರ ಪತ್ತೇದಾರಿ ಕಾದಂಬರಿಯಾಗಿದೆ. ಚಿಕ್ಕಮಗಳೂರು ಜಿಲ್ಲೆಯ ದಟ್ಟ ಕಾನನಗಳ ನಡುವೆ ಮಕ್ಕಳು ಪಾತಕಿಗಳಿಗೆ ಸೆರೆಯಾಗಿ, ವಾಹನಗಳೊಂದಿಗೆ ಬಂಧಿಸಿದ ಹಗ್ಗಗಳಿಂದ ಬಿಡಿಸಿಕೊಂಡು, ಕಂಡರಿಯದ ಕಾಡಿನಲ್ಲಿ ತಪ್ಪಿಸಿಕೊಳ್ಳುವರು. ಅವರು ದಾರಿಗಾಗಿ ಅಲೆದಾಟ ನಡೆಸುವಾಗ ಸಂಭವಿಸುವ ಅನುಭವಗಳನ್ನು ಎಳೆ ಎಳೆಯಾಗಿ ಬಿಚ್ಚಿಡುವ ಕಾದಂಬರಿಯು ಇದಾಗಿದೆ. ಮಕ್ಕಳ ಬದುಕಿನಲ್ಲಿ ಸಂಭವಿಸಬಹುದಾದ ಅವಘಡಗಳಿಂದ ಪಾರಾಗುವ ರೋಚಕತೆಯನ್ನು ಒಳಗೊಂಡಿದೆ.

**ಆರ್. ಪಿ. ಹೆಗಡೆ**

ಯಶವಂತನ ಯಶೋಗೀತೆಯನ್ನು ಓದಿ ಪ್ರಚೋದನೆಯನ್ನು ಪಡೆದುಕೊಂಡ ಆರ್.ಪಿ. ಹೆಗಡೆಯವರು ಭಂಡಾರಿಯವರಂತೆಯೇ ಸಾಮಾಜಿಕ ಸಮಸ್ಯೆಗಳನ್ನು ಮುಂದಿರಿಸಿಕೊಂಡು ಮಕ್ಕಳಿಗಾಗಿ ರಚಿಸಿದ ಕಾದಂಬರಿಯು 'ವಿಜಯದ ಹಾದಿಯಲ್ಲಿ' ಎಂಬುದಾಗಿದೆ. ಅವರೇ ಹೇಳುವಂತೆ ಇದು ಕಿರುಕಾದಂಬರಿಯಾಗಿದೆ. ವಿಜಯ ಎಂಬ ಹುಡುಗನನ್ನು ನಾಯಕನಾಗಿಸಿ ಬರೆದದು. ಮಲೆನಾಡಿನ ಪರಿಸರದ ಬಡತನದ ಕುಟುಂಬದಲ್ಲಿ ಜನಿಸಿ, ಅವನು ಶಿಕ್ಷಣಕ್ಕಾಗಿ ಹಂಬಲಿಸಿ ಪಡುವ ಕಷ್ಟಗಳನ್ನು ವಾಸ್ತವದ ನೆಲೆಯಲ್ಲಿ ಲೇಖಕರು ಕಟ್ಟಿಕೊಟ್ಟಿರುವುದನ್ನು ಕಾಣುತ್ತೇವೆ. ಇದು ಮಕ್ಕಳಿಗೆ ಬೋಧನೆಯನ್ನು

ಮಾಡದೆ ಬದುಕಿಗೆ ಪ್ರೇರಣೆಯನ್ನು ಒದಗಿಸುವ ಸಂಗತಿಗಳಿಂದ ಕೂಡಿದೆ. ಶಿಕ್ಷಣದ ಜೊತೆಜೊತೆಯಲ್ಲಿ ವಿದ್ಯಾರ್ಥಿಗಳು ಸಾಮಾಜಿಕ ಹೊಣೆಗಾರಿಕೆ, ನಾಯಕತ್ವದ ತರಬೇತಿ, ವ್ಯಕ್ತಿತ್ವ ವಿಕಸನ ಚಟುವಟಿಕೆಗಳನ್ನು ಹೊಂದಬೇಕೆಂಬುವ ಹಂಬಲಗಳಿವೆ. ನಾಯಕನು ತನ್ನ ಕೇರಿಯ ಸೀಮಿತವಾದ ವಲಯದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಲು ಪ್ರಯತ್ನಿಸುತ್ತಾನೆ. ಸಮಾಜದ ವಿರೋಧಗಳನ್ನು ಎದುರಿಸಿ ವಿಜಯಿಯಾಗುತ್ತಾನೆ. ಮಕ್ಕಳ ಬದುಕಿನಲ್ಲಿ ಬಂದೊದಗಬಹುದಾದ ಕ್ರೂರ ಸಂಗತಿಗಳನ್ನು ಪ್ರಯೋಗಾತ್ಮಕವಾಗಿ ಕಟ್ಟಿಕೊಟ್ಟು ಅವುಗಳಿಂದ ಬಿಡಿಸಿಕೊಳ್ಳುವ ಪರಿಹಾರಗಳಿರುವುದರಿಂದ ಇದು ಸಹ ಶಿಕ್ಷಣದ ಕಾರ್ಯಗಳನ್ನು ಸೂಚ್ಯವಾಗಿ ಹೇಳುತ್ತದೆ. ಆಲದಮರದ ಕೆಳಗೆ ನೆಟ್ಟ ಕಲ್ಲುಗಳು, ಅರಶಿನ ಕುಂಕುಮ ಬಳಿದಿರುವ ಕಬ್ಬಿಣದ ಸಲಾಕೆಯನ್ನು ಅವನು ನೋಡಿ, ಅದೊಂದು ಭೂತದ ತಾಣವೆಂದು ನಂಬಿದ್ದವರು ನೀಡುವ ಕುರಿ ಕೋಳಿಗಳ ಬಲಿ ನಡೆಯುವುದು. ಅಲ್ಲಿಯೆ ರಾತ್ರಿ ನಡೆದು ಆ ದಾರಿಯಲ್ಲಿ ಸಾಗಿದರೆ ಭಯವಾಗುತ್ತದೆ ಎನ್ನುವ ನಾಯಕನು ಮೂಢನಂಬಿಕೆಗಳನ್ನು ಬೆರಗುಗಣ್ಣಿಂದ ಕಂಡು ಅವುಗಳನ್ನು ಎದುರಿಸುವ ಪ್ರಸಂಗಗಳಿಂದ ಕೂಡಿದೆ. ಮೊದಮೊದಲು ಎಲ್ಲರಿಗೂ ನಿಷ್ಠುರನಾಗಿ ಕಾಣಿಸಿಕೊಂಡು ನಂತರ ಪ್ರಶಂಸೆಗೆ ಒಳಗಾಗುತ್ತಾನೆ. ವಾಸ್ತವದ ವರ್ತಮಾನಗಳೊಡನೆ ಸುತ್ತಾಡುವ ಕತೆಯಿಂದ ಮಕ್ಕಳಿಗೆ ಇಷ್ಟವಾಗುತ್ತದೆ.

**ಕಂನಾಡಿಗಾ ನಾರಾಯಣ**

ಮಕ್ಕಳಿಗಾಗಿ ನೀಳ್ಗತೆ, ಕಾದಂಬರಿಗಳನ್ನು ಬರೆದವರಲ್ಲಿ ಕಂನಾಡಿಗಾ ನಾರಾಯಣರು ಪ್ರಮುಖರು. ಗಂಭೀರತೆಯ ಸಾಹಿತ್ಯವು ಮಕ್ಕಳಿಗೆ ಅಗತ್ಯಕ್ಕಿಂತ ಹೆದರಿಕೆ, ಆತಂಕಗಳ ನಿವಾರಣೆಯ ಸಾಹಿತ್ಯವನ್ನು ಕಂಡುಕೊಂಡವರು. ತಮ್ಮ ಬರೆವಣಿಗೆಯ ಮೂಲಕ ಹಾಸ್ಯ, ವಿನೋದ, ವಿಡಂಬನೆಗಳನ್ನು ಮಾಧ್ಯಮವನ್ನಾಗಿಸಿಕೊಂಡು ಪ್ರಯೋಗಿಸಿದರು. ಇವರ ಕತೆಗಳು ಹೃದ್ಯವೂ, ವಾಸ್ತವವೂ ಆದವಾಗಿವೆ.

'ಹುಲಿಯ ಹೆಜ್ಜೆ' ಇವರ ಪ್ರಮುಖ ಕಾದಂಬರಿಯಾಗಿದೆ. ಸೋಮು ಮತ್ತು ರಾಮು ಎಂಬ ಹುಡುಗರ ಸಾಹಸವನ್ನು ನಿರೂಪಿಸುವ ವಸ್ತುವುಳ್ಳದಾಗಿದೆ. ಕಾಡಿನಲ್ಲಿ ಮೂಡುವ ಹುಲಿಯ ಹೆಜ್ಜೆಗಳನ್ನು ಬೆನ್ನಟ್ಟಿ ಹೋಗುವ ಹುಡುಗರ ಪತ್ತೇದಾರಿ ಕಾರ್ಯವು ಸೊಗಸಾಗಿ ಚಿತ್ರತವಾಗಿದೆ. ಹುಲಿಯ ಹೆಜ್ಜೆ ಮತ್ತು ಘರ್ಜನೆಯು ಊರಿನ ಗೌಡನ ಸಂಚು ಮತ್ತು ತಂತ್ರಗಾರಿಕೆಯಿಂದ ನಡೆಯುವ ಕೆಲಸವಾಗಿದೆ ಎಂದು ಕಂಡುಹಿಡಿಯುವ ಸಾಹಸದ ಸಂಗತಿಗಳಿವೆ. ಸೋಮುವಿನ ಮುಗ್ಧತೆಯ ಲೋಕ, ಗೌಡನ ಕಪಟಲೋಕಗಳು ನವಿರಾಗಿ ಕಾಣಿಸಿಕೊಂಡು, ಶಿವಮೊಗ್ಗ ಭಾಗದ ಗಾಡಿಕೊಪ್ಪ ಪ್ರದೇಶದ ಮಲೆನಾಡಿನ ಪ್ರಕೃತಿಯ ಚೆಲುವಿನ ಬಣ್ಣನೆಯಿದೆ. ಸಾಹಸ ಪ್ರಧಾನವಾದ ರಮ್ಯಕತೆ ಎನಿಸಿದರು, ಹಾಸ್ಯದ ಮೂಲಕ ಸಾಗುತ್ತಾ ರಂಜನೆಯನ್ನು ನೀಡುವ ದಳಗಳಿವೆ. ಕಾದಂಬರಿಯಲ್ಲಿ ವಾಸ್ತವದ ವಿಡಂಬನೆಯು ದಟ್ಟವಾಗಿ ಕಾಣಿಸಿಕೊಂಡು ಸಮಾಜದ ನಾನಾ ತರದ ಮುಖಗಳನ್ನು ಪರಿಚಯಿಸುತ್ತದೆ. ಬಡತನದ ಹುಡುಗನ ಶಿಕ್ಷಣದ ಹಾದಿಯಲ್ಲಿ ಉಂಟಾಗುವ ತೊಡಕುಗಳನ್ನು ವಿವರವಾಗಿ ಕಟ್ಟಿಕೊಡುವ ವಾಸ್ತವಾಂಶಗಳಿವೆ. ಶಾಲೆಯನ್ನು ಅರ್ಧಕ್ಕೆ ಬಿಟ್ಟು ಆಕಳುಗಳನ್ನು ಮೇಯಿಸುವ ಮೂಲಕ ಬದುಕು ಕಟ್ಟಿಕೊಳ್ಳುವ ಸಂಗತಿಗಳಿವೆ.

ಕೊನೆಗೆ ಮಕ್ಕಳ ತಂತ್ರಗಾರಿಕೆಯಿಂದ ಗೌಡನನ್ನು ಪೇಚಿಗೆ ಸಿಲುಕಿಸಿ ವ್ಯಂಗ್ಯವಾಡುವ ಪ್ರಸಂಗಗಳನ್ನು ನಾರಾಯಣರು ಪ್ರಧಾನವಾಗಿ ತರುತ್ತಾರೆ. ಹುಲಿಯೇ ಇಲ್ಲದೇ ಹುಲಿಯ ಹೆಜ್ಜೆಗಳೆಂದು ಗೌಡನು ನಂಬಿಸುವ ಕಪಟತನವನ್ನು ಮಕ್ಕಳು ಬಯಲಿಗೆಳೆಯುವ ತಂತ್ರಗಾರಿಕಯು ಸೊಗಸಾಗಿದೆ.

'ಆನೆ ಬಂತೊಂದಾನೆ' ಕಂನಾಡಿಗಾ ನಾರಾಯಣರ ಪ್ರಮುಖ ನೀಳ್ಗತೆಯಾಗಿದೆ. ಕುತೂಹಲದ ಎಳೆಗಳನ್ನು ಹದವಾಗಿ ರೂಪಿಸಿಕೊಂಡು ಭಿನ್ನತೆ, ವಿಶಿಷ್ಠತೆ, ರಂಜನೀಯತೆಯನ್ನು ಪ್ರಮುಖ ತಾತ್ವಿಕ ತಿರುಳಗಳನ್ನಾಗಿಸಿಕೊಂಡು ಕತೆಯನ್ನು ಲಂಫಿಸಿ ಬರೆದಿರುವುದನ್ನು ಕಾಣಬಹುದು. ಆನೆಕೆರೆಗೆ ನೀರು ಕುಡಿಯಲು ಬರುವ ಆನೆಯ ಹಿಂಡಿಗೆ ಆನೆಪ್ಪ ಎಂಬ ಹೆಸರಿನ ವ್ಯಕ್ತಿಯೆಂದರೆ ಅಚ್ಚುಮೆಚ್ಚು. ಅವುಗಳು ಬಂದಾಗ ಅವನು ಹೆದರಿಸದೆ, ಬೆದರಿಸದೆ ಅವುಗಳಿಗೆ ಬಾಳೆಗೊನೆ, ಕಬ್ಬಿನ ಹೊರೆಗಳನ್ನು ತಿನ್ನಲು ನೀಡುವನು. ಗರ್ಭಿಣಿ ಆನೆಗಳಿಗೆ ವಿಶೇಷವಾಗಿ ಆರೈಕೆ ಮಾಡುವನು.ಆ ಸಂದರ್ಭದಲ್ಲಿ ಕಾಟಕೊಡುವ ನಾಯಿನರಿಗಳಿಂದ ರಕ್ಷಣೆಯನ್ನು ಒದಗಿಸುವನು. ಇದರಿಂದಾಗಿ ಜನರು ಅವನ ಹೆಸರು ಮರೆತು ಹೋಗಿ ಆನೆಪ್ಪ ಎಂದೇ ಕರೆವರು.[೫೫] ಹೆಣ್ಣಾನೆಯ ಪ್ರಸವವನ್ನು ಅವನೇ ಒಮ್ಮೆ ಮಾಡಿಸುವನು. ಅಲ್ಲೆಲ್ಲಾ ಗಜಪ್ರಸವದ ವರ್ಣನೆಗಳಿವೆ. ಬೆನ್ನತ್ತಿದ ಪ್ರಾಣಿಯಿಂದ ತಪ್ಪಿಸಿಕೊಂಡು ಬರುವ ಜಿಂಕೆಯೊಂದು ಆನೆ ಹಿಂಡಿನೊಳಗೆ ನುಗ್ಗಿ ಡಿಕ್ಕಿ ಹೊಡೆದುಕೊಳ್ಳುತ್ತದೆ. ಅಟ್ಟಿಸಿಕೊಂಡು ಬಂದ ಹುಲಿಯು ಸಹ ಗಕ್ಕನೆ ಅಲ್ಲಿಯೇ ನಿಲ್ಲುತ್ತದೆ. ಆನೆಗಳಿಗೂ ಭಯವಾಗಿ ದಿಕ್ಕೆಟ್ಟು ಓಡುತ್ತವೆ, ಹುಲಿಗೂ ಭಯ, ಅಲ್ಲಿಯೇ ಇದ್ದ ಆನೆಪ್ಪನಿಗೂ ಭಯವಾಗಿ ಎಲ್ಲವು ದಿಕ್ಕೆಟ್ಟಿ ಓಡಿದಾಗ ಆಗತಾನೆ ಹುಟ್ಟಿದ ಆನೆಮರಿಯೊಂದು ದಿಗಿಲುಗೊಳ್ಳದೆ ಅನಾಥವಾಗಿ ಬೀಳುತ್ತದೆ. ನಂತರ ಆನೆಪ್ಪ ಅದನ್ನು ಜೋಪಾನ ಮಾಡುತ್ತಾನೆ. ಅದನ್ನು ಮನೆಗೆ ಕರೆದುಕೊಂಡು ಹೋಗಿ ಸಾಕುತ್ತಾನೆ. ಅಲ್ಲಿ ತೆರೆದುಕೊಳ್ಳುವ ಪ್ರಾಣಿಪ್ರೀತಿ, ವಾತ್ಸಲ್ಯ, ಸಹಬಾಳ್ವೆಯಂತಹ ಅಂಶಗಳು ಇಲ್ಲಿ ಹದವಾಗಿ ಬೆರೆತ ಸಂಗತಿಗಳಿವೆ. ನಾರಾಯಣರು ಹೀಗೆ ತಮ್ಮ ನೀಳ್ಗತೆಗಳಲ್ಲಿ ಮಾನವ ಮತ್ತು ಪ್ರಾಣಿಗಳ ನಡುವೆ ಬೆಸೆದುಕೊಳ್ಳುವ ಬಾಂಧವ್ಯವನ್ನು ತಮ್ಮ ತಾತ್ವಿಕತೆಯ ತಿರುಳಾಗಿಸಿ ಹೇಳಿದ್ದಾರೆ. ರೈತನ ಮನಸ್ಸಿನಲ್ಲಿರುವ ಪ್ರಾಣಿದಯೆಯನ್ನು ತೆರೆದಿಡುತ್ತಾರೆ.

**ಗಣೇಶ ಪಿ ನಾಡೋರ**

ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಬಹಳಷ್ಟು ಪ್ರಮುಖವಾದ ಹೆಸರು ಗಣೇಶ ನಾಡೋರ ಅವರದು. ನಿಸರ್ಗ ಹಾಗೂ ಪ್ರಾಣಿಲೋಕವನ್ನು ತೀರ ಸಮೀಪದಿಂದ ಅವರು ನೋಡಿದ್ದಾರೆ. ಅವರ ಪ್ರಾಣಿಕತೆಗಳು ಪೊಳ್ಳಾಗಿರದೆ ನೈಜತೆಯಿಂದ ಕೂಡಿರುತ್ತವೆ. ಅವಾಸ್ತವವಾದ ಸಂಗತಿಗಳನ್ನು ಅವರು ಪ್ರಯೋಗಿಸುವುದಿಲ್ಲ. ಈ ದೃಷ್ಟಿಯಿಂದ ಅವರ ಕತೆಗಳಲ್ಲಿ ಕಾಣಸಿಗುವ ಮಾನವೀಯತೆಯ ಚಿತ್ರಣ ಬಹುಮುಖ್ಯವಾಗುತ್ತದೆ. ಅಲ್ಲಿ ಪ್ರಾಣಿ, ಕೀಟ, ಕ್ರಿಮಿಗಳ ಚಿತ್ರಣದಲ್ಲಿಯೂ ಸೂಕ್ಷ್ಮವಾದ ನೋಟಗಳನ್ನು ಗುರುತಿಸಬಹುದು. ಅವುಗಳಿಗೆ ಮನುಷ್ಯತ್ವಾರೋಪಣ (Personification) ಮಾಡಿ ಮನುಷ್ಯನ ಗುಣಾವಗುಣಗಳನ್ನು ಬಿಂಬಿಸಲು

---

[೫೫] ಹೊಸತು ತಂದ ಹತ್ತು ಹಲವರು, ಡಾ. ಬಸು ಬೇವಿನಗಿಡದ, ಮಕ್ಕಳ ಸಾಹಿತ್ಯ, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ ೩೨೧, ೨೦೧೫.

ಯತ್ನಿಸುತ್ತಾರೆ.[೫೬] ಹಿಂದಿನ ಪ್ರಾಣಿ-ಪಕ್ಷಿ ಕತೆಗಳಗಿಂತ ಭಿನ್ನವಾಗಿ ಬರೆಯಲು ಯತ್ನಿಸಿರುವುದು ಹಾಗೂ ಅದರಲ್ಲಿ ಗಮನಾರ್ಹ ಯಶಸ್ಸು ಸಾಧಿಸಿರುವುದು ನಾಡೋರರ ಇತ್ತೀಚಿನ ಪುಸ್ತಕ 'ನೆಗೆತ'ದಿಂದ ಸ್ಪಷ್ಟವಾಗುತ್ತದೆ. 'ನೆಗೆತ' ಅವರು ಮಕ್ಕಳಗಾಗಿ ಬರೆದಿರುವ ಮಹತ್ತರವಾದ ಕಾದಂಬರಿ. ಹದಿಹರೆಯದ ಹುಡುಗನೊಬ್ಬನ ತಲ್ಲಣಗಳು ಬಹಳಷ್ಟು ಆಪ್ತವಾಗಿ ನಿರೂಪಿತವಾಗಿವೆ. ನಿರೂಪಣೆಯಲ್ಲಿ ತನ್ನದೇ ಕತೆ ಹೇಳುತ್ತ ಹೋಗಿರುವ 'ಪುಟ್ಟ' ಎನ್ನುವ ಬಾಲಕನ ಸಾಹಸಗಳು ಸ್ವಾರಸ್ಯಕರವಾಗಿ ಹೇಳಲ್ಪಟ್ಟಿವೆ. ಗಣೇಶ ನಾಡೋರರ ಒಂದು ಹೆಚ್ಚುಗಾರಿಕೆಯೆಂದರೆ, ಅವರ ಕತೆ ಹೇಳುವ ಶೈಲಿ ನಿರಾಯಾಸದಿಂದ ಕೂಡಿರುವುದು. ಬಡ ಹುಡುಗನೊಬ್ಬನ ಹೈಸ್ಕೂಲು ದಿನಗಳು ಎಷ್ಟೊಂದು ಕಠಿಣವೂ, ಸವಾಲು ಒಡ್ಡುವಂತವೂ, ಪ್ರೀತಿಪ್ರೇಮದ ಹುಸಿ ಸೆಳಕುಗಳಂದ ಪುಳಕಿತ ಆಗಿರುವಂತವೂ, ದಯೆ, ಅನುಕಂಪ, ಸಹಾಯಗಳಂದ ಸಂವೇದನಾತ್ಮಕವೂ ಆಗಿರುತ್ತವೆಂಬುದಕ್ಕೆ ನಾಡೋರರ ನೆಗೆತ ಒಂದು ಉದಾಹರಣೆಯಾಗಿದೆ. ಉತ್ತರ ಕನ್ನಡ ಜಿಲ್ಲೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಕಾರವಾರ, ಯಲ್ಲಾಪುರದಂತಹ ಊರುಗಳು, ಲಾರಿ ಡ್ರೈವರ್‌ನ ಮಗನಾಗಿರುವ ಕಷ್ಟಗಳು, ಅಪ್ಪ ಅಮ್ಮನ ಜಗಳ, ಮಾವನ ಸಹಾಯ, ಸ್ನೇಹಿತರ ಕೀಟಲೆ, ಮಾಸ್ತರರ ಹೊಡೆತ ಬಡಿತ, ಹುಡುಗನ ಕನಸು ಇವೇ ಮುಂತಾದ ಸಂಗತಿಗಳು ರೋಚಕವಾಗಿ ಬಣ್ಣಿಸಲ್ಪಟ್ಟಿವೆ. ಪುಟ್ಟನು ವಿಮಾನ, ಹೆಲಿಕಾಪ್ಟರನ್ನು ಕಂಡು ತಾನೂ ಮುಗಿಲಿನಲ್ಲಿ ಹಾರಾಡಬೇಕೆನ್ನುವುದು, ಪೈಲಟ್ ಆಗಬೇಕೆನ್ನುವ ಕನಸು ಕಾಣುವುದು, ಹಾರುವ ಓತಿ ಸ್ಫೂರ್ತಿಯಾಗಿ ಪರಿಣಮಿಸುವುದು ಇಲ್ಲಿ ಮಹತ್ತರದ್ದಾಗಿದೆ. ಮಕ್ಕಳ ಹಾರುವ ಬಯಕೆಯನ್ನು, ಸುತ್ತಾಡುವ ಮನಸ್ಥಿತಿಯನ್ನು, ಹೊರಗಿನ ಪ್ರಪಂಚ ತಿಳಿಯುವ ಕುತೂಹಲವನ್ನು ಹಾಗೂ ಬದುಕಿನ ಉನ್ನತ ಸ್ತರವನ್ನು ತಲುಪಬೇಕೆನ್ನುವ ಅಧಮ್ಯವಾದ ಒತ್ತಡವನ್ನು 'ಪುಟ್ಟ' ಈ ಕಾದಂಬರಿಯಲ್ಲಿ ಹೊರಹಾಕುತ್ತಾನೆ. "ಶನಿವಾರ ಬಂತೆಂದರೆ ನನಗೆ ಹಕ್ಕಿಯಂತೆ ಹಾರುವ ಬಯಕೆ ಗರಿಗೆದರುತ್ತಿತ್ತು. ಹಾಗಂತ ನನಗೆ ಪಾಠದಲ್ಲಿ ಆಸಕ್ತಿ ಇರಲಿಲ್ಲ ಅಂತೇನೂ ಅಲ್ಲ. ಪಾಟಣಕರ್ ಸರ್ ಚೆನ್ನಾಗಿ ಆಸಕ್ತಿಯುತವಾಗಿ ಪಾಠ ಕಲಿಸುತ್ತಿದ್ದರು. ಆದರೆ ಪಾಠ ಮುಗಿದ ಮೇಲೆ ಪ್ರಶ್ನೆ ಕೇಳುತ್ತಿದ್ದರು. ಆಗ ಮಾತ್ರ ನಂಗೆ ತುಂಬಾ ಭಯವಾಗುತ್ತಿತ್ತು." ಎನ್ನುವ ಮೂಲಕ ಮಕ್ಕಳ ಭಯ, ಆತಂಕ, ತಲ್ಲಣ, ವಿಸ್ಮಯದ ಭಾವಗಳು ಈ ಪುಟ್ಟ ಕೃತಿಯಲ್ಲಿ ತುಂಬಾ ಪರಿಣಾಮಕಾರಿಯಾಗಿ ಮೂಡಿವೆ. "ಸರ್‌ಗೆ ಏನೆನ್ನಿಸಿತೋ, ಸ್ತಬ್ಧವಾಗಿ ನಿಂತುಬಿಟ್ಟರು. ನಂತರ ಸಾವರಿಸಿಕೊಂಡು, 'ನೀನು ನೋಡಿಲ್ಲ? ಹಾಗಾದರೆ ಕುಳತುಕೊ' ಎಂದು ಮುಂದೆ ಸಾಗಿದರು. ಅಂದು ನನಗೆ ಸತ್ಯದ ಶಕ್ತಿಯ ಅರಿವು ಉಂಟಾಯಿತು". ಎನ್ನುವ ಮುಗ್ಧವಾದ ನೇರಮಾತುಗಳವೆ. ಹಾರುವ ಓತಿಯ ಪ್ರಸಂಗಗಳು ಕಾದಂಬರಿಯಲ್ಲಿ ಸ್ವಾರಸ್ಯಕರವಾಗಿ ಮೂಡಿಬಂದಿದ್ದು ಕತೆಯ ಓಟಕ್ಕೆ ಇಂಬು ನೀಡುತ್ತವೆ. ಹಾರುವ ಓತಿ ಒಂದು ರೀತಿಯಲ್ಲಿ ಪುಟ್ಟನಿಗೆ ರೂಪಕವಾಗಿ ಬಂದಿದೆ. ಅವನ ಸ್ವಾತಂತ್ರ್ಯ ಹಾಗೂ ಸ್ವಾಭಿಮಾನದ ಹಂಬಲವಾಗಿ ಅದು ಕಾಣಿಸಿಕೊಳ್ಳುತ್ತದೆ. ಅನೇಕ ಹಾಸ್ಯದ ಹಾಗೂ ಮೋಜಿನ ಪ್ರಸಂಗಗಳಗೆ ಅದು ಕಾರಣವಾದಂತೆ ಹಾರುವ ಓತಿಯನ್ನು ಪಾಟಿಚೀಲದಲ್ಲಿ ತಂದಿಟ್ಟುಕೊಂಡಿದ್ದಕ್ಕಾಗಿ ಮಾಸ್ತರರಿಂದ ಹೊಡೆತಗಳನ್ನು ಕೂಡ ಹುಡುಗ ಅನುಭವಿಸಬೇಕಾಗುತ್ತದೆ. 'ಇನ್ನೇನು ನಾನು ಓತಿಯನ್ನು

---

೫೬ 'ಮಕ್ಕಳ ಸಾಹಿತ್ಯದ ಒಲವು: ಓದು' ಚಾತುರ್ಮಾಸಿಕ-೨೦೧೬. ಲೇ: ಡಾ. ಆನಂದ ವ ಪಾಟೀಲ.

ಹಿಡಿದುಕೊಳ್ಳಲು ಬಗ್ಗುವಷ್ಟರಲ್ಲಿ ಮತ್ತೊಂದು ಅನಾಹುತ ನಡೆದುಹೋಯಿತು. ನನ್ನ ಕೈ ಮುಂದೆ ಬರುತ್ತಲೇ ಹೆದರಿದ ಓತಿ ಮರ ಹತ್ತಿದಂತೆ ಸರಸರನೆ ನನ್ನ ಕಾಲನ್ನೇರಿ ಚೆಡ್ಡಿಯೊಳಗೆ ತೂರಿಕೊಂಡಿತು.....' ಎನ್ನುವ ಮುಜುಗರವಿಲ್ಲದ ಸಂಗತಿಗಳೂ ಇವೆ. ಗೆಳೆಯ ಗೆಳತಿಯರ ನವಿರು ಪ್ರೇಮದ ಸೆಳಕುಗಳು, ಮನೆಯ ಕಡುಬಡತನದ ದಾರುಣ ಪರಿಸ್ಥಿತಿಗಳು, ವಾಯುಸೇನೆ ಸೇರಲು ಸಹಾಯ ಮಾಡುವ ಸೋದರ ಮಾವನ ನೆರವಿನ ಘಳಿಗೆಗಳು ಈ ಕಾದಂಬರಿಯನ್ನು ಅರ್ಥಪೂರ್ಣವಾಗಿಸುತ್ತವೆ. '

ಕರಿಮುಖ' ಗಣೇಶ ಪಿ.ನಾಡೋರ ಅವರ ಮಕ್ಕಳ ಕಾದಂಬರಿಯಾಗಿದೆ. 'ಕರಿಮುಖ'ವು ಕನ್ನಡ ಮಕ್ಕಳ ಸಾಹಿತ್ಯದಲ್ಲಿ ವಿಶಿಷ್ಟ, ಪ್ರಭಾವಶಾಲಿ ಹಾಗೂ ದಟ್ಟವಾಸ್ತವ ಬರವಣಿಗೆಗೆ ಒಂದು ಉತ್ತಮ ಉದಾಹರಣೆಯಾಗಿದೆ. ಮಕ್ಕಳ ಸಾಹಿತ್ಯದ ಸಾಂಪ್ರದಾಯಿಕ ಬರವಣಿಗೆಗೆ ವಿದಾಯ ಹೇಳಿ ಒಂದು ಸ್ಪಷ್ಟವಾದ ಹೊಸಹೆಜ್ಜೆ ಹಾಕುವ ಮತ್ತು ಅನುಭವದ ನಿರೂಪಣೆಯಲ್ಲಿ ಹೆಚ್ಚಿನ ಸ್ವಾತಂತ್ರ್ಯ ತೆಗೆದುಕೊಳ್ಳುವ ಧೈರ್ಯವನ್ನು ಗಣೇಶ ನಾಡೋರ ಅವರು ತೆಗೆದುಕೊಂಡಿದ್ದಾರೆ. ವಾಸ್ತವದಲ್ಲಿ ಗಣಪತಿಗೆ ಕರಿಮುಖ ಎಂಬ ಹೆಸರಿದೆ ಎನ್ನುವುದು ಸಾಮಾನ್ಯ. ಆದರೆ ಇಲ್ಲಿ 'ಕರಿಮುಖ' ಎನ್ನುವುದು ಕಪ್ಪಗಿರುವ ಒಬ್ಬ ವ್ಯಕ್ತಿಯನ್ನು ಆಡಿಕೊಳ್ಳಲು, ಅವನನ್ನು ಅಪಮಾನಗೊಳಿಸಲು, ಅವನ ಉತ್ಸಾಹವನ್ನು ಕುಗ್ಗಿಸಲು, ಮನುಷ್ಯ- ಮನುಷ್ಯರ ನಡುವೆ ಅಂತರ, ಅಂತಸ್ತುಗಳನ್ನು ನಿರ್ಮಿಸಲು ಸಂಕುಚಿತ ಮನೋಧರ್ಮದ ಜನ ಬಳಸಿದ ಪದ ಎಂದು ತಿಳಿದಾಗ ಮಾತ್ರ ಓದುಗರ ಹೃದಯ ಭಾರವಾವಾಗುತ್ತದೆ. ಹಿಂದುಳಿದ ಜಾತಿಯವನೆಂದು ಅವನನ್ನು ತಿರಸ್ಕಾರದಿಂದ ಕಾಣುವುದಲ್ಲದೆ, ಅವನ ನಿಜವಾದ ಹೆಸರನ್ನು ಮರೆಮಾಚಿ, ನೋಡಲು ಕಪ್ರಗಿರುವ ಅವನನ್ನು ಕರಿಮುಖ, ಕರಿಬಸ್ಯಾ, ಮಸಿಕೆಂಡ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಅವನ ಜೊತೆಗಿನ ತಾತ್ಸಾರ, ಜಿಗುಪ್ಸೆಗಳು ಎದ್ದು ಕಾಣುತ್ತವೆ. ಆ ಬಾಲಕನ ಎದೆಗೆ ಜಾತಿಯ ಮುಳ್ಳು ಚುಚ್ಚಲಾಗುತ್ತದೆ. ಇಂತಹ ಅಮಾನವೀಯ ಘಟನೆಗಳ ಸುತ್ತ 'ಕರಿಮುಖ' ಕಾದಂಬರಿ ಬೆಳೆಯುತ್ತದೆ. ಕೆಳಜಾತಿಯ ಜನರು ಮೇಲ್ಜಾತಿಯ ಜನರ ಕೈಯ್ಯಲ್ಲಿ ಅನುಭವಿಸುವ ನೋವು ಇಲ್ಲಿ ಆರ್ದ್ರವಾಗಿ ದಾಖಲಾಗಿದೆ. ಅದು ಮಕ್ಕಳ ಮನಸ್ಸಿಗೆ ಎಷ್ಟೊಂದು ಘೋರವಾಗಿರುತ್ತದೆ ಎಂಬುದು ಇಲ್ಲಿನ 'ದೊಡ್ಡಪ್ಪ'ನಂತಹ ಕಾದಂಬರಿಯ ಪಾತ್ರದಿಂದ ತಿಳಿಯುತ್ತದೆ. 'ಕರಿಮುಖ'ದಲ್ಲಿ ಕತೆಯನ್ನು ರಶ್ಮಿ ಎಂಬ ಬಾಲಕಿಯ ದೃಷ್ಟಿಕೋನದಿಂದ ಹೇಳಲ್ಪಟ್ಟಿದೆ. ದೊಡ್ಡಪ್ಪನನ್ನು ಅವಳು ಬಹಳ ಹಚ್ಚಿಕೊಂಡಿರುತ್ತಾಳೆ. ಇಲ್ಲಿ ಮಕ್ಕಳ ಮನಸ್ಸು ಜಾತಿ ಮತ್ತು ವರ್ಗ ಸಂಘರ್ಷದ ಘಟನೆಗಳಿಂದ ಎಷ್ಟೊಂದು ಘಾಸಿಗೊಳ್ಳುತ್ತದೆಂಬುದು ದಾಖಲಾಗಿದೆ. ದೊಡ್ಡಪ್ಪ ಚಿಕ್ಕ ಹುಡುಗನಾಗಿದ್ದಾಗಿಂದ ದೊಡ್ಡವನಾಗುವವರೆಗಿನ ಕತೆ ರಶ್ಮಿಯ ಚಿಂತನೆಗಳಲ್ಲಿ ಬೆಳೆದುಕೊಳ್ಳುತ್ತ ಹೋಗುತ್ತದೆ. ದೊಡ್ಡವನಾದ ಮೇಲೂ ಅವನ ಬಾಳಿನಲ್ಲಿ ಸುಖ, ನೆಮ್ಮದಿಯೆಂಬುದು ಮರೀಚಿಕೆಯಾಗಿರುವುದನ್ನು ರಶ್ಮಿ ತೆರೆದಿಡುತ್ತಾಳೆ. ಅವನನ್ನು ಮನೆಯವರು ಹಾಗೂ ಹೊರಗಿನವರು ಹೇಗೆ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ ಎಂಬುದು ಮಗುವಿಗೆ ಗೊತ್ತಾಗುತ್ತದೆಯೇ ಹೊರತು ದೊಡ್ಡವರಿಗೆ ತಿಳಿಯುವುದಿಲ್ಲ. ಮಕ್ಕಳನ್ನು ಇನ್ನಿಲ್ಲದಂತೆ ಪ್ರೀತಿಸುವ ದೊಡ್ಡಪ್ಪ ಕಳ್ಳನಾಗಿರಲು ಸಾಧ್ಯವಿಲ್ಲ ಎಂಬುದು ರಶ್ಮಿಗೆ ತಿಳಿದಿದೆ. ಅದಕ್ಕಾಗಿಯೇ ಆ ಬಾಲಕಿ ದೊಡ್ಡಪ್ಪನ ಮೇಲೆ ಓನರ್ ಆಂಟಿ ಮಾಡುವ ಕಳ್ಳತನದ ಆಪಾದನೆಯನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾಳೆ. ತನ್ನ ಗೆಳತಿಯರು ಕೂಡ ಯಾವುದನ್ನೂ

ಕೂಲಂಕಷವಾಗಿ ವಿಚಾರಿಸದೆ ದೊಡ್ಡವರು, ಅಪ್ಪ-ಅಮ್ಮಂದಿರು ಹೇಳುವ ಸುಳ್ಳುಗಳನ್ನು ಸತ್ಯವೆಂದು ನಂಬುವ ರೀತಿ ಕಂಡು ಕಂಗಾಲಾಗುತ್ತಾಳೆ. ಮಾಲು ಕದ್ದವಳು ಶಾಂತಿ ಆಂಟಿಯ ಅಮ್ಮನೆಂದು ಗೂಢಚಾರಳಂತೆ ಪತ್ತೆ ಹಚ್ಚುತ್ತಾಳೆ. 'ದೊಡ್ಡಪ್ಪ ನೀನು ಕಳ್ಳನಲ್ಲ, ತಿರುಗಿ ಮನೆಗೆ ಬಾ' ಎಂದು ದೊಡ್ಡಪ್ಪನಿಗೆ ಫೋನ್ ಹಚ್ಚಿದಾಗ, ದೊಡ್ಡಪ್ಪ ಒಂದು ಅನಾಥಾಶ್ರಮದಲ್ಲಿ ವ್ಯವಸ್ಥಾಪಕನೆಂದು ದುಡಿಯಲು ಮನಸ್ಸು ಮಾಡಿದ್ದಾನೆ. ತಂದೆ-ತಾಯಿಗಳಿರುವ ಮಕ್ಕಳಿಗಿಂತ ಅನಾಥವಾಗಿರುವ ಮಕ್ಕಳ ಪೋಷಣೆ ಮುಖ್ಯ ಅಲ್ವಾ ಎಂದು ತನ್ನ ಪ್ರೀತಿಪಾತ್ರ ರಶ್ಮಿಯನ್ನು ಅವನು ಕೇಳುವುದರೊಂದಿಗೆ ಹಾಗೂ ಇನ್ನು ತನ್ನ ದೊಡ್ಡಪ್ಪ ಮನೆಗೆ ತಿರುಗಿ ಬರುವುದಿಲ್ಲ ಎಂಬ ವಾಸ್ತವ ತಿಳಿದು ರಶ್ಮಿಯ ಕೈಯಲ್ಲಿರುವ ಮೊಬೈಲ್ ಫೋನ್ ಬಿದ್ದು ಒಡೆಯುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ. ಮೊಬೈಲ್ ಫೋನ್ ಒಡೆಯುವುದು ಒಂದು ರೀತಿಯಲ್ಲಿ ಮಗುವಿನ ಮನಸ್ಸು ಒಡೆಯುವ ರೂಪಕವಾಗಿ ಬಳಕೆಯಾಗಿದೆ. ಅದೂ ಅಲ್ಲದೆ ಕಪ್ಪು ಬಾವಲಿ ಮತ್ತೆಂದೂ ಅವಳ ಮನೆಗೆ ಕೀಟ ಹಿಡಿಯಲು ಬರಲಿಲ್ಲ ಎನ್ನುವಲ್ಲಿಯೂ ಕತೆಯ ವಾಸ್ತವ ಮತ್ತೊಂದು ಮಜಲನ್ನು ಮುಟ್ಟುತ್ತದೆ. ಅಷ್ಟಾಗಿಯೂ ಯಾವ ಕಹಿಯೂ ದೊಡ್ಡಪ್ಪ ಮತ್ತು ರಶ್ಮಿಯ ವ್ಯಕ್ತಿತ್ವದಲ್ಲಿ ಕಾಣಿಸಿಕೊಳ್ಳದಿರುವುದು ಈ ಕಾದಂಬರಿಯ ಮತ್ತೊಂದು ಗುಣಾತ್ಮಕ ಅಂಶವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಪರಿಸರ, ಅದರಲ್ಲೂ ಯಲ್ಲಾಪುರ, ಶಿರಸಿ, ಸಿದ್ದಾಪುರದಂತಹ ಮಲೆನಾಡು ಊರಿನ ಹಿನ್ನೆಲೆ, ದುಡಿಮೆಯ ಕಷ್ಟ, ಇನ್ನೂ ಕಾಣೆಯಾಗದಿರುವ ಶ್ರೇಷ್ಠ ಜಾತಿಯೆಂಬ ಹುಸಿ ಅಹಂಕಾರ, ಅಲ್ಲಲ್ಲಿ ಇಣುಕುವ ವಿನೋದ ಪ್ರಜ್ಞೆ ಮುಂತಾದವುಗಳು ಗಣೇಶ ನಾಡೋರ ಅವರ ಬರವಣಿಗೆಯಲ್ಲಿ ಅಪ್ಯಾಯಮಾನವಾಗಿವೆ. 'ಆಟ' ಕಾದಂಬರಿಯು ಓದಿನ ಮಿತಿಯನ್ನು ಮುರಿದು, ಪ್ರಾಣಿಗಳ ಲೋಕದಿಂದ ಮಕ್ಕಳನ್ನು ಹೊರಸೆಳೆದು ನಿಲ್ಲಿಸಬಹುದಾದ ಕೃತಿ. 'ಆಟ'. ನಿತ್ಯವೂ ಹೊಸತನವನ್ನು ಮಕ್ಕಳ ಸಾಹಿತ್ಯದಲ್ಲಿ ಪ್ರಯೋಗಶೀಲತೆಯಿಂದ ಕಾಣುತ್ತಿರುವ ಗಣೇಶ ನಾಡೋರರು ಮಕ್ಕಳಿಗಾಗಿ ಬರೆದ ಕಾದಂಬರಿ. ಇದೊಂದು ಆತ್ಮಕತೆಯಂತೆ ಆರಂಭಗೊಳ್ಳುತ್ತದೆ. ಹೈದ್ರಾಬಾದಿನ 'ಮದ್ರಾಸ್ ಸ್ಕೂಲ್'ನ ವಾತಾವರಣದಲ್ಲಿ ತನ್ಮಯಿ ಎಂಬ ಪುಟ್ಟಮಗು ಎಲ್.ಕೆ.ಜಿ ಓದುವಾಗಿನ ತನ್ನ ಅನುಭವಗಳನ್ನು ಹೇಳಿಕೊಳ್ಳುವುದು ಈ ಕತೆಯ ವಸ್ತುವಾಗಿದೆ. ಈ ಮಗು ತಾನು ಅಮವಾಸ್ಯೆಯ ದಿನ ಭೂಮಿಗೆ ಬಂದುದು, ತಾನು ಕುಮುಟಾದ ಆಸ್ಪತ್ರೆಯಲ್ಲಿ ಪಂಡಿತರಿಂದ ಸಾಬೂನಿನ ಸ್ನಾನವನ್ನು ಮಾಡಿಸಿಕೊಂಡಿದ್ದು ಎಲ್ಲವೂ ಅವಳಿಗೆ ನೆನಪಾಗುವುದಿದೆ. ತನ್ನನ್ನು ಆರೈಕೆ ಮಾಡಿದ ನರ್ಸ್‌ಳನ್ನು ನೆನಪಿಸಿಕೊಂಡಂತೆ ಎದೆಹಾಲುಣಿಸಿದ ತಾಯಿಯನ್ನು ನೆನಸಿಕೊಳ್ಳುವುದಿಲ್ಲ. ಮುದ್ದು ಮಾಡಲು ಕೈಗೆತ್ತಿಕೊಂಡ ಜಟ್ಟಜ್ಜನ ಬಾಯಿಂದ ಬರುವ ಸಾರಾಯಿಯ ಗಮಲು ನೆನಪಾಗುತ್ತದೆ. ಅಷ್ಟೆಯಲ್ಲದೆ ತನ್ನ ತಾಯಿಯ ಸೀಮಂತವನ್ನು ಗರ್ಭದಲ್ಲಿರುವಾಗಲೇ ಕಂಡಿರುವ ಸಂಗತಿಗಳನ್ನು ಮಗುವು ಇಲ್ಲಿ ಸ್ಮರಿಸಿಕೊಳ್ಳುವುದಿದೆ. ತಾಯಿಯು ಅಪ್ಪನ ಮನೆಯಿಂದ ಹೆರಿಗೆಗಾಗಿ ಸ್ಥಳಾಂತರಗೊಂಡಿರುವ ವಿವರಣೆಗಳನ್ನು ದಾಖಲಿಸಿರುವುದನ್ನು ಕಾಣುತ್ತೇವೆ. ಇದು ಹಿರಿಯರ ಕಾದಂಬರಿಗಳಿಗೆ ಹೋಲಿಸಿ ನೋಡಿದಾಗ ಇಂತಹ ಘಟನೆಗಳು ಅಲ್ಲಿ ಅವಾಸ್ತವ ಎನಿಸುತ್ತವೆ. ಆದರೆ ನಾಡೋರರ ಕತೆಯು ತೀರ ವಾಸ್ತವದ ಸಂಗತಿಗಳಿಂದ ಕೂಡಿದ್ದು ಎಲ್ಲವನ್ನೂ ತೆರೆದಿಡಬಲ್ಲದಾದರಿಂದ ಮುಗ್ಧತೆಯನ್ನು ಮಗುವಿನ

ಸಂಗತಿಗಳಲ್ಲೂ, ನಾಡೋರರ ಬರವಣಿಗೆಯಲ್ಲೂ ಇಡೀ ಕಾದಂಬರಿಯ ಉದ್ದಕ್ಕೂ ಕಾಣಬಹುದು. ಇಂತಹ ಪ್ರಯೋಗವು ಕನ್ನಡದ ಮಕ್ಕಳ ಸಾಹಿತ್ಯದಲ್ಲಿ ತೀರ ಅಪರೂಪವೆನಿಸುತ್ತದೆ.

**ಸುನಂದಾ ಕಡಮೆ**

ಸುನಂದಾ ಪ್ರಕಾಶ ಕಡಮೆ ಅವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಬರೆವಣಿಗೆಯನ್ನು ಕಂಡುಕೊಂಡವರು. ಮಕ್ಕಳಿಗಾಗಿ ಮೊದಲ ಬಾರಿಗೆ 'ಎಳನೀರು' ಕಾದಂಬರಿಯೊಂದನ್ನು ಬರೆಯುವ ಮೂಲಕ ಮಹತ್ತರದ ಕನವರಿಕೆಯನ್ನು ಇರಿಸಿಕೊಂಡು ಮಕ್ಕಳ ಸಾಹಿತ್ಯವನ್ನು ಪ್ರವೇಶಿಸಿರುವುದನ್ನು ಈ ಕಾದಂಬರಿಯೇ ಹೇಳುವಂತಿದೆ. ವಸ್ತು ವಿಷಯದಲ್ಲಿ ಏಕತಾನತೆಯನ್ನು ಅನುಭವಿಸದಂತೆ ಎಚ್ಚರವಹಿಸಿ ಭಿನ್ನವಾದ ವಸ್ತುವೊಂದನ್ನು ಮಕ್ಕಳ ಮುಂದಿರಿಸಿದ್ದಾರೆ. ಕತೆಗಳನ್ನು ಹೇಳುವ ಮೂಲಕವೇ ಮಕ್ಕಳನ್ನು ಸೆಳೆಯುವ ತಂತ್ರಗಾರಿಕೆಯುಳ್ಳ ಶಿಕ್ಷಕಿಯೊಬ್ಬಳ ಅನುಭವದ ಜಗತ್ತು ತೆರೆದುಕೊಳ್ಳುವುದು ಈ ಕಾದಂಬರಿಯ ವಸ್ತುವಾಗಿದೆ. ಶಿಕ್ಷಕಿಯು ಬಡತನದ ಅನುಭವದ ಮಿತಿಗಳನ್ನು ದಾಟಿ ತನ್ನ ವೃತ್ತಿಯಲ್ಲಿನ ಆತಂಕಗಳನ್ನು ನಿವಾರಿಸಿಕೊಳ್ಳುವ ಮಜಲುಗಳು ಇಲ್ಲಿ ಮಕ್ಕಳಿಗೆ ನಿಲುಕುವಂತಿವೆ. ಮಕ್ಕಳನ್ನು ಕತೆಗಳ ಮೂಲಕ ಹಿಡಿದಿಡುವುದು, ಕತೆಗಳನ್ನು ಅವರೂ ಹೇಳುವಂತೆ ಪ್ರೇರೇಪಿಸುವುದು, ಅವರನ್ನು ಕತೆಯೊಳಗಿನ ಪಾತ್ರಗಳಾಗಿಸುವುದು ಎಲ್ಲವೂ ಇಲ್ಲಿಯ ತಂತ್ರಗಾರಿಕೆಯನ್ನು ಕಟ್ಟಿಕೊಡುತ್ತವೆ. ಕೃತಿಯ ಆರಂಭವು ಶಿಕ್ಷಕಿಯನ್ನು ಕೇಂದ್ರಿಕರಿಸಿದಂತೆ ಮುಂದಿನ ಅರ್ಧಭಾಗವೂ ಮಕ್ಕಳೇ ಹೇಳಿದ ಕತೆಗಳಿಂದ ರೋಚಕತೆಯನ್ನು ಕಾಣುತ್ತದೆ. ಇದು ಮಕ್ಕಳಿಗೆ ಇಷ್ಟವಾಗುವ ಉದ್ದೇಶವನ್ನು ಲೇಖಕರು ಮುಂದಿರಿಸಿಕೊಂಡು ಬರೆದಂತಿದೆ. ಮನೆಯಿಂದ ಹೊರ ಬಂದಾಗ ಎಲ್ಲೆಲ್ಲೂ ಕಾಣಿಸಿಕೊಳ್ಳುವ ತೆಂಗಿನ ಮರದ ಹಿಂಗಾರದ ಪರಿಮಳವನ್ನು ವರ್ಣಿಸಿ ಹೇಳುವ ಅವರ ಕಲೆಗಾರಿಕೆಯು, ನಿರೂಪಣೆ ಶೈಲಿಯು ಮಕ್ಕಳನ್ನು ಕೃತಿಯ ಒಳಗೂ ಹೊರಗೂ ಸೆಳೆದಿಡುತ್ತದೆ. ಉತ್ತರ ಕನ್ನಡದ ಭಾಷೆ, ಪರಿಸರದ ಸಂಗತಿಗಳು ಕಾಣಿಸಿಕೊಳ್ಳುತ್ತವೆ. ಕಾದಂಬರಿಯು ತೆಂಗಿನ ಮರ ಹತ್ತುವವರ ನೋವು, ಸಂಕಷ್ಟಗಳನ್ನು ಕಟ್ಟಿಕೊಡುವ ಜೊತೆಗೆ, ಮಕ್ಕಳ ನಡುವಿನ ಪ್ರತಿಭೆ, ಸ್ಪರ್ಧಾಮನೋಭಾವ, ಸಿದ್ಧತೆ ಮುಂತಾದ ಸಂಗತಿಗಳಿಂದ ಕತೆಯು ಸಾಗುವುದನ್ನು ಕಾಣುತ್ತೇವೆ. ಮಕ್ಕಳ ಜಗತ್ತಿನಿಂದ ಕೆಲವು ಕಾಲ ಕತೆಯು ಸಾಮಾಜಿಕ ಸಮಸ್ಯೆಗಳ ಕಡೆಗೂ ಹರಿದು, ಮೂಢನಂಬಿಕೆ, ವ್ಯಾಪಾರ, ದೆವ್ವದ ಭಯ ಮುಂತಾದ ಸಂಗತಿಗಳನ್ನು ಮೂಡಿಸುವ ಮೂಲಕ ಮಕ್ಕಳ ಲೋಕಕ್ಕೆ ಬಂದೊದಗುವ ಸವಾಲುಗಳಿಗೆ ಉತ್ತರವನ್ನು ಕತೆಯು ನೀಡುತ್ತಾ ಸಾಗುವುದಿದೆ. ಮಕ್ಕಳಿಗೆ ಮಲೆನಾಡಿನ ಬಾಲ್ಯದ ಸಂಗತಿಗಳನ್ನು, ಅಜ್ಜಿಯಂದಿರ ವಾತ್ಸಲ್ಯವನ್ನು, ಆರೈಕೆಯ ಸಂಗತಿಗಳನ್ನು ಮುಂದಿರಿಸಿ ಈ ಕಾದಂಬರಿಯು ನೋಡುವುದಿದೆ.ಎಲ್ಲಾ ಮಜಲುಗಳಲ್ಲಿಯು ವಸ್ತುವಿನಲ್ಲಿ ವೈವಿಧ್ಯತೆಯನ್ನು ಲೇಖಕಿಯು ಮುಂದಿರಿಸಿಕೊಂಡು ಮಕ್ಕಳಿಗೆ ರಸವತ್ತಾಗುವ ರೀತಿಯಲ್ಲಿ ಈ ಕತೆಯನ್ನು ಬರೆದಿರುವುದನ್ನು ಕಾಣುತ್ತೇವೆ.

**ವಿಜಯಶ್ರೀ ಹಾಲಾಡಿ**

ಮಕ್ಕಳಿಗಾಗಿ ನಾವೀನ್ಯತೆಯಿಂದ ಬರೆಯುತ್ತಿರುವ ಮಹಿಳೆಯರಲ್ಲಿ ಹೊಸತನದ ಹಂಬಲವನ್ನು ಮೈಗೂಡಿಸಿಕೊಂಡು ಸದಾ ಮಕ್ಕಳಿಗಾಗಿ ತುಡಿಯುತ್ತಿರುವ ವಿಜಯಶ್ರೀ ಹಾಲಾಡಿಯವರು ವೃತ್ತಿಯಲ್ಲಿ ಶಿಕ್ಷಕಿಯಾಗಿದ್ದುಕೊಂಡು ಮಕ್ಕಳ ಅನುಭವದ ಒಡನಾಟದಿಂದ ಹೊಸತನವನ್ನು ಪ್ರಯೋಗಿಕವಾಗಿ ಕಾಣುತ್ತಿರುವ ಪ್ರಮುಖರು. ಇವರ 'ಸೂರಕ್ಕಿ ಗೇಟ್' ಕಾದಂಬರಿಯು ಮಕ್ಕಳ ಪರಿಸರದ ಸಂಗತಿಗಳೊಡನೆ ಅರಳುವ ಕತೆಯುಳ್ಳದ್ದು. ಮುಗ್ಧತೆ, ಸಾಕು ಪ್ರಾಣಿಗಳ ಜಗತ್ತು, ಜೀವನವು ಜೀವಿಗಳೊಂದಿಗೆ ತೆರೆದುಕೊಳ್ಳುವ ಅನೇಕ ಬಗೆಯ ವಾತ್ಸಲ್ಯತೆಯನ್ನು ವಸ್ತುವಾಗಿಸಿಕೊಂಡು ಬರೆದಿರುವ ಮಹತ್ತರವಾದ ಕಾದಂಬರಿಯು ಇದಾಗಿದೆ. ಪುಟ್ಟುವಿನ ಅಮ್ಮನು ಶಿಕ್ಷಕಿಯಾಗಿಯೂ, ಲೇಖಕಿಯಾಗಿಯೂ ಕಾಣಿಸಿಕೊಳ್ಳುತ್ತಾಳೆ. ಬಿಡುವಿಲ್ಲದ ಕೆಲಸದೊಳಗೂ ಮಗನನ್ನು ಪ್ರೀತಿ, ವಾತ್ಸಲ್ಯಗಳೊಂದಿಗೆ ಬಂಧಿಸಿಡುವವಳು. ಅಮ್ಮನ ಮಮತೆಗೆ ಸೋಲುವ ಪುಟ್ಟನು ಯಾವಾಗಲೂ ಅವಳನ್ನು ಹಂಬಲಿಸುವವನು. ಆದರೆ ಅವಳು ಒಮ್ಮೊಮ್ಮೆ ಸಿಡುಕಳಾಗಿಯೂ ಕಾಣಿಸಿಕೊಂಡು ಪುಟ್ಟನಿಗೆ ಅಚ್ಚರಿ ಮೂಡಿಸುವಳು. ನಾಯಿ, ಬೆಕ್ಕುಗಳ ಜೊತೆ ಅವನು ಆಡುವಾಗ ಇವಳ ಸಿಡುಕು ಕಾಣಿಸಿಕೊಂಡು ಪುಟ್ಟನು ತಬ್ಬಿಬ್ಬಾಗುವ ಪೇಚಾಟಗಳನ್ನು ವಸ್ತುವಾಗಿಸಿಕೊಂಡು ಕತೆಯನ್ನು ಮುಂದಿರಿಸಿದ್ದಾರೆ. ಇಲ್ಲಿ ಬಾಲ್ಯದ ಸಹಜವಾದ ಸಂಗತಿಗಳನ್ನು ತಂದಿರುವುದನ್ನು ಕಾಣಬಹುದು. 'ಸೂರಕ್ಕಿ ಮನೆ' ಎಂಬದು ಅವರ ಜಮೀನಿನಲ್ಲಿ ಸಾಧಾರಣವಾಗಿ ಕಟ್ಟಿಕೊಂಡಿರುವ ಮನೆ. ಅಲ್ಲಿ ಸೂರ್ಯನ ಹಕ್ಕಿ; ಸನ್‌ಬರ್ಡ್ ಕೂರುವುದರಿಂದ ಅದಕ್ಕೆ ಇವರೇ ಆ ಹೆಸರನ್ನು ಇಟ್ಟಿರುವುದು. ಆ ಹಕ್ಕಿಯ ಆಟಗಳನ್ನು ಪುಟ್ಟನು ಕಾಣುವ ಬಣ್ಣನೆಗಳಿವೆ. ಧಾವಂತದ ಬದುಕಿನಲ್ಲಿ ಸಿಲುಕಿ ಜೀವನವಿಡೀ ದುಡುಮೆಯನ್ನೇ ಜೀವಿಸುವ ಆಧುನಿಕ ಕಾಲದ ಉದ್ಯೋಗಿಯಾಗಿ ಕಾಣಿಸಿಕೊಳ್ಳುವ ಅಪ್ಪನು ಪುಟ್ಟನಿಗೆ ಸಿಗದವನಾಗಿ, ಯಾವಾಗಲೂ ಯಂತ್ರಗಳೊಂದಿಗೆ ದುಡಿಯುವವನಾಗಿದ್ದಾನೆ. ಇಂತಹ ಒತ್ತಡದ ಅಪ್ಪನು ಬಿಡುವು ಮಾಡಿಕೊಂಡು ಸೂರಕ್ಕಿಯ ಮನೆಗೆ ಪುಟ್ಟನೊಂದಿಗೆ ಹೋದಾಗ ಆಗುವ ಆನಂದದ ವರ್ಣನೆಯು ಈ ಕತೆಯಲ್ಲಿ ಮಕ್ಕಳ ಕನವರಿಕೆಗಳನ್ನು ಕಟ್ಟಿಕೊಡುತ್ತದೆ. ಸೂರಕ್ಕಿ ಮನೆಯ ಸುತ್ತಲಿನ ಬೇಲಿಯಲ್ಲಿ ಅರಳಿದ ಹೂಗಳು, ಬೆಕ್ಕಿನ ಮರಿಗಳೊಂದಿಗೆ ಅಲ್ಲಿಗೆ ಸಾಗುವ ಅವನ ಪ್ರಯಾಣದ ಅನುಭವ, ಕಾರಿನಲ್ಲಿ ನಡೆಯುವ ಸಂಗತಿಗಳು ಎಲ್ಲವೂ ನೈಜವಾಗಿ ತೆರೆದುಕೊಳ್ಳುವ ಸಂಗತಿಗಳಿವೆ. ಸೂರಕ್ಕಿ ಮನೆಯಲ್ಲಿ ಆ ರಾತ್ರಿ ತಂಗುವ ಅನುಭವಗಳಿವೆ. ಬೆಳದಿಂಗಳ ರಾತ್ರಿಯಲ್ಲಿ ಚಂದ್ರನ ನೋಡುತ್ತಾ ಊಟಮಾಡುವ ಮಕ್ಕಳ ಹಿತದಾಯಕವಾದ ಸಂಗತಿಗಳಿಂದ ಕೂಡಿದೆ. ಹಳ್ಳಿ ಮನೆಯಲ್ಲಿ ರಾತ್ರಿ ಕಳೆಯುವ, ಬೆರ್ಚಪ್ಪನನ್ನು ಹಳೆಯ ಬಟ್ಟೆಯಿಂದ ಸಿದ್ಧಗೊಳಿಸುವ, ಮಕ್ಕಳ ಲಾಲಿತ್ಯಗಳಿವೆ. ವಿವಿಧ ಸನ್ನಿವೇಶಗಳಲ್ಲಿ ಮಕ್ಕಳು ಆನಂದವನ್ನು ಅನುಭವಿಸುವುದನ್ನು ಈ ಕಾದಂಬರಿಯಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ. ಹಾಲಾಡಿಯವರು ಮಲೆನಾಡಿನ ಪ್ರದೇಶದವರಾದರಿಂದ ಕತೆಯು ಅಲ್ಲಿನ ಪರಿಸರದ ವೈವಿಧ್ಯತೆಗಳನ್ನು ಮೈಗೂಡಿಸಿಕೊಳ್ಳುವುದರ ಜೊತೆಗೆ ವಿವಿಧ ಜನರ ಬದುಕಿನ ಶೈಲಿಗಳನ್ನು ಪರಿಚಯಿಸುತ್ತದೆ. ಮಕ್ಕಳಿಗೆ ಪ್ರಿಯವಾಗುವ ಸಾಕು ಪ್ರಾಣಿಗಳನ್ನು ಹೊಸದಾದ ರೀತಿಯಿಂದ ನೋಡುವ ಹಂಬಲಿಕೆಗಳನ್ನು ಹಾಲಡಿಯವರ ಕೃತಿಯಲ್ಲಿ ಕಾಣಬಹುದು.

**ನಿರ್ಮಲಾ ಸುರತ್ಕಲ್**

ಮಕ್ಕಳ ಸೂಕ್ಷ್ಮಸಂವೇದನೆಗಳನ್ನು ಅಭಿವ್ಯಕ್ತಿಸುವಲ್ಲಿ ಯಶಸ್ವಿಯಾಗಿರುವ ಪ್ರಮುಖ ಲೇಖಕಿ ನಿರ್ಮಲಾ ಸುರತ್ಕಲ್‌ರವರು. ಇವರು ಮಕ್ಕಳ ಮುಗ್ಧತೆಯನ್ನು ತಮ್ಮ ಕೃತಿಗಳಲ್ಲಿ ಲೀಲಾಜಾಲವಾಗಿ ಬರೆಯಬಲ್ಲವರು. ಪುತ್ತೂರು ಪರಿಸರದಲ್ಲಿ ಬೆಳೆದ ಇವರು ಅಲ್ಲಿಯ ಸುತ್ತಮುತ್ತಲ ಪರಿಸರದ ಭಾಷೆಯನ್ನು, ಸಂಗತಿಗಳನ್ನು ಬಳಸಿಕೊಂಡು ಬರೆಯುತ್ತಿದ್ದಾರೆ. ಇವರು ಮೊದಲ ಬಾರಿಗೆ ಮಕ್ಕಳಿಗಾಗಿ ಕಾದಂಬರಿ ಪ್ರಕಾರವನ್ನು ಪ್ರಯೋಗಿಸಿ ನೋಡಿದ್ದಾರೆ. 'ಶ್ರಮಯೇವ ಜಯತೆ' ಇವರ ಮಹತ್ತರವಾದ ಪ್ರಯೋಗವಿರುವ ಕಾದಂಬರಿಯಾಗಿದೆ. ಮಕ್ಕಳಿಗಾಗಿ ಬರೆದ ಸಂಗತಿಗಳಿಂದ ಕೂಡಿದೆ. ಆಧುನಿಕ ಜೀವನದಲ್ಲಿ ನಡೆಯುತ್ತಿರುವ ಆವಿಷ್ಕಾರಗಳಿಗೆ ಮಕ್ಕಳ ಕಲ್ಪನೆಗಳನ್ನು, ಚಿಂತನಾಶೀಲತೆಯನ್ನು ಹೆಚ್ಚಿಸಿಕೊಳ್ಳಲು ಪೂರಕವಾದ ಅಂಶಗಳನ್ನು ಒಳಗೊಂಡು ರಚನೆಯಾದುದಾಗಿದೆ. ಮಕ್ಕಳಿಗೆ ಅಪ್ಪನಿಗಿಂತ ಅವ್ವನೇ ಪ್ರಿಯವಾಗುವಳೆಂಬ ಮನೋಭಾವವನ್ನು ತಳೆದು ನಿರ್ಮಲಾ ರವರು ತಾಯಿಯ ನೆಲೆಯಲ್ಲಿ ನಡೆಸಿಕೊಂಡಿರುವ ಘಟನೆಗಳನ್ನು ನೋಡಬಹುದು. ಪರಿಸರದ ನಾಶವವನ್ನು ಮುಂದಿರಿಸಿಕೊಂಡು ಮಕ್ಕಳು ಅದಕ್ಕೆ ಕಂಡುಕೊಳ್ಳುವ ಪರಿಹಾರಗಳನ್ನು ಮನದಟ್ಟಾಗುವಂತೆ ಈ ಕತೆಯಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. ಶಾಲೆಯ ವನದಲ್ಲಿ ಅಧ್ಯಾಪಕರೊಂದಿಗೆ ಸೇರಿಕೊಂಡು ಮಕ್ಕಳು ತಮ್ಮ ಶ್ರಮದಾನದ ಮೂಲಕ ತಮಗೆ ಅಗತ್ಯವಾದ ತರಕಾರಿಗಳನ್ನು ಬೆಳೆದುಕೊಳ್ಳುವುದು, ಅವುಗಳನ್ನು ಪರಿಚಯಿಸುವುದು, ಈ ಮೂಲಕ ಪರಿಸರವನ್ನು ಮುಂದಿನ ಪೀಳಿಗೆಗೆ ಸ್ವಚ್ಛವಾಗಿ ಕೊಂಡೊಯ್ಯುವುದು ಎಲ್ಲವೂ ಇಲ್ಲಿ ಅಗತ್ಯವಾಗಿ ಕಾಣಿಸಿಕೊಂಡಿವೆ. ಪೇಟೆಯ ಮಕ್ಕಳು ಸಹಾ ಕಾಂಕ್ರಿಟ್ ಲೋಕದಿಂದ ಹಳ್ಳಿಗಳೆಡೆಗೆ ಧಾವಿಸಿ ಬಂದು ಮೈಕೈಯನ್ನು ಮಣ್ಣುಮಾಡಿಕೊಂಡು ಪರಿಸರದ ಶುಚಿತ್ವಕ್ಕಾಗಿ ಶ್ರಮವಹಿಸಬೇಕೆಂಬ ಆಶಯಗಳಿವೆ. ನಗರದ ಮಕ್ಕಳು ತಾವಾಗಿಯೇ ಗಿಡಮರಗಳ ಬಗೆಗೆ ಒಲವು ಬೆಳೆಸಿಕೊಂಡು ಪರಿಸರದ ಮೇಲೆ ಪ್ರೀತಿ, ಕಾಳಜಿಯನ್ನು ತಳೆದು, ತ್ಯಾಜಗಳನ್ನು ವಿಲೇವಾರಿ ಮಾಡಿ ನಿಸರ್ಗವನ್ನು ಹಸನಾಗಿಸಲು ಶ್ರಮದ ಪ್ರಾಮುಖ್ಯತೆಯಿದೆ. ಅದನ್ನು ಬೇಧವಿಲ್ಲದೆ ಮಕ್ಕಳು ಅರಿಯಬೇಕಿದೆ ಎಂಬ ತಾತ್ವಿಕತೆಯ ಹಿನ್ನೆಲೆಯಿಂದ ಈ ಕಾದಂಬರಿಯನ್ನು ಅವರು ಪ್ರಯೋಗಿಸಿದ್ದಾರೆ. ಮಲೆನಾಡಿನ ಪ್ರಕೃತಿಯ ಸೊಬಗು ಎಲ್ಲೆಡೆ ಹರಡಿರುವುದನ್ನು ಮತ್ತು ಪುತ್ತೂರು ಸೀಮೆಯ ಸಂಗತಿಗಳು ಹರಡಿಕೊಂಡಿವೆ. ಮಕ್ಕಳಿಗಾಗಿ ಇದು ಸೊಗಸಾಗಿ ಮೂಡಿಬಂದಿರುವುದನ್ನು ಕಾಣಬಹುದು.

**ಐನಳ್ಳಿ ನವೀನ್**

ಆಧುನಿಕ ಮಕ್ಕಳ ಸಾಹಿತ್ಯವನ್ನು ನೂತನ ಪ್ರಯೋಗಗಳೊಂದಿಗೆ ಪ್ರವೇಶಿಸುತ್ತಿರುವ ಲೇಖಕ ಐನಳ್ಳಿ ನವೀನ್ ರವರು. ಇವರು ವಾಸ್ತವ ಬದುಕಿನ ಚಿತ್ರಣಗಳನ್ನು ಮಕ್ಕಳ ಸಾಹಿತ್ಯವು ಅನುಭವಿಸುತ್ತಿರುವ ಕಾಲದಲ್ಲಿ ಅವಾಸ್ತವದ ಕಾದಂಬರಿಯನ್ನು ಮಕ್ಕಳಿಗಾಗಿ ನೀಡಿದವರು.

'ಗೇಗ್ರಾನ್' ಅನ್ಯಗ್ರಹದ ಜೀವಿಯ. ಪರಿಸರದ ಸುತ್ತಾ ನಡೆಯುವ ವಿದ್ಯಾಮಾನಗಳನ್ನು ಒಳಗೊಂಡಿರುವ ಕಾದಂಬರಿ ಇದಾಗಿದೆ. ಸೋಜಿಗ, ಸೆಳೆತ, ವಿಸ್ಮಯಗಳನ್ನು ಕುತೂಹಲಕಾರಿಯಾಗಿ ತಂದು ಮಕ್ಕಳಿಗೆ ಬೇರೊಂದು ಕಾಲ್ಪನಿಕ ಲೋಕದ ಅನುಭವವನ್ನು ಕಟ್ಟಿಕೊಡುವುದಿದೆ. ಪರ ಊರಿಗೆ

ಪ್ರಯಾಣ ಮಾಡುವಂತೆ ಮಕ್ಕಳು ಅನ್ಯಲೋಕಕ್ಕೆ ಹೋಗುವ ಸಂಗತಿಗಳವೆ. ಮಕ್ಕಳ ಪ್ರಯಾಣದ ಅವಧಿಯಲ್ಲಿ ಹರಟುವ ಪ್ರಸಂಗಗಳವೆ. ಶಾಲೆಯ ಜಂಜಾಟದಿಂದ ಮುಕ್ತವಾದಾಗ ಸಿಗುವ ಆಹ್ಲಾದತೆಯನ್ನು ಅವರು ಅನುಭವಿಸುವುದಿದೆ. ತುಂಟತನ, ಚೇಷ್ಟೆಗಳು ಮಕ್ಕಳ ಸಹಜ ಸಂಗತಿಗಳಾಗಿ ಮೂಡಿಬಂದು ಅವರನ್ನು ರಂಜಿಸುವುದಿದೆ. ವಿಚಿತ್ರ ಸ್ವಭಾವದಲ್ಲಿ ಮನುಷ್ಯರನ್ನು ಕಾಣುವ ಕನಸುಗಳವೆ. ಮೊದಲಾರ್ಧ ಕಾದಂಬರಿಯು ಮಕ್ಕಳ ಸಹಜ ಬಾಲ್ಯದ ಬಯಕೆಗಳನ್ನು ಹೇಳಿದರೆ ಮುಂದಿನಾರ್ಧ ಬಸ್ಸಿನಲ್ಲಿ ಪ್ರಯಾಣಿಸುವ ಮಕ್ಕಳು ಫ್ಯಾಂಟಸಿ ಲೋಕವನ್ನು ಸೇರಿ, ಅನ್ಯಗ್ರಹದ ಜೀವಿಗಳೊಂದಿಗೆ ವಿಹರಿಸುವ ಘಟನೆಗಳು ಎದುರಾಗುವುದಿದೆ. ಅಲ್ಲಿನ ಪರಿಸರದ ಕಾಡು, ಶುಚಿಯ ಬಗೆಗೆ ಮಕ್ಕಳು ಚಿಂತಿಸುವ ಸಂಗತಿಗಳಿಂದ ಗೇಗ್ರಾನ್ ಎಂಬ ಜೀವಿಯೊಡನೆ ಮಾತುಕತೆಗಳು ಸಂಭವಿಸುತ್ತದೆ. ರೋಚಕತೆ ಮತ್ತು ರಂಜನೀಯತೆಯನ್ನು ಸರಕಾಗಿಸಿಕೊಂಡು ಕಾದಂಬರಿ ಮಕ್ಕಳಿಗೆ ತಲುಪುವ ಪ್ರಯತ್ನಗಳನ್ನು ನವೀನ್ ರವರು ಚಿತ್ರಿಸಿದ್ದಾರೆ.

**ಹುಣಸೂರು ಮಾದುಪ್ರಸಾದ್**

ಮೈಸೂರು ಭಾಗದ ಹೊಸತಲೆಮಾರಿನ ಲೇಖಕರಲ್ಲಿ ಮಕ್ಕಳ ಸಾಹಿತ್ಯದ ವಿವಿಧ ಬಗೆಗಳಲ್ಲಿ ಬರೆಯುತ್ತಿರುವ ಪ್ರಮುಖರು. ಆಧುನಿಕ ಓದಿನೊಂದಿಗೆ ಹೊಸ ಪ್ರಯೋಗಗಳಿಗೆ ತಮ್ಮನ್ನು ಒಡ್ಡಿಕೊಳ್ಳುತ್ತಿರುವವರು.

'ಗೋಲಿ ಗೆಜ್ಜುಗದ ಹುಡುಗ' ಇವರ ಪ್ರಮುಖವಾದ ಮಕ್ಕಳ ಕಾದಂಬರಿಯಾಗಿದೆ. ಹಳ್ಳಿಯ ವಾತಾವರಣದಲ್ಲಿ ಬೆಳೆದ ಮಾದನು ತನ್ನ ಬಾಲ್ಯದ ದಿನಗಳಲ್ಲಿ ತನಗೆ ಎದುರಾಗುವ ಗೊಂದಲಗಳನ್ನು, ಸಾಮಾಜಿಕವಾಗಿ ದೊರಕುವ ಸ್ಪಂದನೆಯನ್ನು ಮುಖಾಮುಖಿ ಮಾಡಿ ನೋಡುವ ತಂತ್ರಗಾರಿಕೆಯನ್ನು ಇಲ್ಲಿ ಕಾಣಬಹುದು. ಗ್ರಾಮೀಣ ಭಾಷೆಯ ಸೊಗಡಿನೊಂದಿಗೆ ಗ್ರಾಮೀಣರ ಬದುಕನ್ನು ವಸ್ತುವಾಗಿಸಿಕೊಂಡು ನೋಡಲಾಗಿದೆ. ಆರಂಭದಲ್ಲಿ ಶಾಲೆಯ ಒಡನಾಟದೊಂದಿಗೆ ತೆರೆದುಕೊಳ್ಳುವ ಕಾದಂಬರಿಯು ಗೋಲಿ ಗೆಜ್ಜುಗದ ಆಟಕ್ಕಾಗಿ ಆಟಿಕೆಯನ್ನು ಹುಡುಕಿಕೊಂಡು ಬಂದ ಹುಡುಗನು ಅರಬ್ಬಿತಿಟ್ಟು ಕಾಡಿನಲ್ಲಿ ರಾತ್ರಿ ಕಳೆಯುವನು. ಅಲ್ಲಿ ತೊಂದರೆಗೆ ಸಿಲುಕುವ ಪ್ರಾಣಿಗಳಿಗೆ ನೆರವಾಗಿ ಅವುಗಳ ಸಹಕಾರವನ್ನು, ಪ್ರೀತಿಯನ್ನು ಗಳಿಸುವನು. ರಾತ್ರಿಯಲ್ಲಿ ಬರುವ ಶ್ರೀಗಂಧದ ಕಳ್ಳರನ್ನು ಗುರ್ತಿಸಿ, ಪೋಲೀಸ್ ಅಧಿಕಾರಿಗಳಿಗೆ ಶಿಕ್ಷಕರೊಡನೆ ಹೋಗಿ ವಿಷಯ ತಿಳಿಸಿ, ಕಳ್ಳರನ್ನು ಹಿಡಿಯಲು ನೆರವಾಗಿ, ಅವರಿಂದ ಪ್ರಶಂಸೆಗೊಳಗಾಗುವನು. ಇಲ್ಲಿ ಬರುವ ಕರಗಜ್ಜಿಯ ಪಾತ್ರವು ಮಕ್ಕಳ ಮೇಲಿನ ಕಾಳಜಿಯನ್ನು ತೋರುವ ಅಜ್ಜಿಯಂದಿರನ್ನು ಪ್ರತಿನಿಧಿಸುತ್ತದೆ. ವಾಸ್ತವ ಮತ್ತು ಪ್ರಾಣಿಜಗತ್ತಿನ ತಲ್ಲಣಗಳನ್ನು ಇಲ್ಲಿ ಮುಖಾಮುಖಿಯಾಗಿಸುವ ಸಂಗತಿಗಳವೆ.

'ತೊಟ್ಟಿಲ ಗೊಂಬೆ' ಮಾದುಪ್ರಸಾದರ ಪ್ರಮುಖವಾಗಿ ಫ್ಯಾಂಟಸಿಯುಳ್ಳ ಕಾದಂಬರಿಯಾಗಿದೆ. ಕೇತು ಎಂಬ ಬಾಲಕನು ಸಾಮಾಜಿಕವಾಗಿ ಒಳಗಾಗುವ ನಿಂದನೆ ಮತ್ತು ದೂಷಣೆಗಳಿಂದ ದೂರಾಗಲು ಬಯಸಿ ಅನುಭವಿಸುವ ಒಂಟಿತನವನ್ನು ಇಲ್ಲಿ ಮನೋಜ್ಞವಾಗಿ ಚಿತ್ರಸಲಾಗಿದೆ. ಮೊದಲು ಶಾಲೆಯ

ಸಂಗತಿಗಳಂದ. ಅಜ್ಜಿಯ ಒಡನಾಟದ ವಾಸ್ತವ ಘಟನೆಗಳಂದ ಕೂಡಿದ ಕಾದಂಬರಿಯು ಕೇತುವಿನ ಮಾನವೀಯ ಮೌಲ್ಯಗಳ ವರ್ಧನೆಯನ್ನು ಹೇಳುತ್ತದೆ. ನಂತರ ಕಾಡುವ ಒಂಟಿತನವು, ಸತ್ತ ಅಜ್ಜನು ದೆವ್ವದ ರೂಪದಲ್ಲಿ ಕಾಣಿಸಿಕೊಳ್ಳುವುದು, ತೊಟ್ಟಿಲಗೊಂಬೆಯಲ್ಲಿ ಅದು ಸೇರಿಕೊಂಡು ಪವಾಡಗಳನ್ನು ಮಾಡುವುದು ಎಲ್ಲಾ ಸಂಗತಿಗಳವೆ. ಕೊನೆಗೆ ಕೊಳವೆ ಬಾವಿಗೆ ಬಿದ್ದ ಮಗುವನ್ನು ಕಾಪಾಡಿ ಜಿಲ್ಲಾಧಿಕಾರಿಗಳಂದ ಪ್ರಶಂಸೆಗೆ ಕೇತುವು ಒಳಗಾಗಿ ಅಲ್ಲಿ ಆನಂದವನ್ನು ತಡೆಯಲಾಗದೆ ತಾತನ ಹೆಸರನ್ನು ಹೇಳುವನು. ಇದರಿಂದ ತಾತನು ಮತ್ತೆ ಬಾರದೆ ಕೇತುವು ದುಃಖಪಡುವನು. ಹೀಗೆ ವಾಸ್ತವ ಮತ್ತು ಫ್ಯಾಂಟಸಿಗಳೊಂದಿ ಸಮ್ಮಿಳತಗೊಂಡು ಕಾದಂಬರಿಯು ರೋಚಕವಾಗುವುದನ್ನು ಕಾಣುತ್ತೇವೆ.

# ಅಧ್ಯಾಯ: ೯

## ಸಮರೋಪ

೯.೧ ಅಧ್ಯಯನದ ಮುಖ್ಯ ಫಲಿತಗಳು

೯.೨ ಅಧ್ಯಯನದ ಸಂದರ್ಭದಲ್ಲಿ ಎದುರಾದ ತೊಡಕುಗಳು, ಬಿಡಿಸಿಕೊಂಡ ಬಗೆ

೯.೩ ಉಳಿದಿರುವ ಅಧ್ಯಯನ ಸಾಧ್ಯತೆಗಳು

# ಅಧ್ಯಾಯ : ೯

# ಸಮಾರೋಪ

ಮಕ್ಕಳ ಕತೆಗಳನ್ನು ಅಧ್ಯಯನ ಮಾಡುವಾಗ ಇಲ್ಲಿ ನೋಡಲಾಗಿರುವುದು ಅವುಗಳ ಮಹತ್ತ್ವದ ಸ್ವರೂಪಗಳಾದ ಲಿಖಿತ, ಮೌಖಿಕವಾದ ಬಗೆಗಳನ್ನು, ಅವುಗಳ ಪ್ರಭಾವ, ಪ್ರೇರಣೆಯನ್ನು ಅವುಗಳ ಸಮಗ್ರ ಚಿತ್ರಣವನ್ನು ನೋಡಲಾಗಿಲ್ಲ. ಕಾರಣವೇನೆಂದರೆ ಅದು ಇಲ್ಲಿ ಅಪ್ರಸ್ತುತ ಎಂಬುದಾಗಿದೆ. ಜನಪದದಲ್ಲಿ ಹುದುಗಿರುವ ಮಕ್ಕಳ ಸಾಹಿತ್ಯವನ್ನು ಇಲ್ಲಿ ಕೇವಲ ಅದನ್ನು ಹಿನ್ನೆಲೆಯಾಗಿ ನೋಡಲಾಗಿದೆ. ಜನಪದದಲ್ಲಿನ ಮಕ್ಕಳ ಸಾಹಿತ್ಯದ ಕತೆಗಳನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ ಸಾಮಾಗ್ರಿಯಾಗಿಸಿಕೊಂಡು ನೋಡುವಷ್ಟು ಅದು ವಿಶಾಲವಾಗಿದೆ. ಮಕ್ಕಳ ಕತೆಗಳ ಸ್ವರೂಪಗಳಾದ ಕತೆ, ಸಣ್ಣಕತೆ, ನೀಳ್ಗತೆ, ಮಿನಿಕಾದಂಬರಿಗಳನ್ನು ಇಲ್ಲಿ ಅಗತ್ಯವಾದಷ್ಟು ಮಾತ್ರ ಅನುಲಕ್ಷಿಸಿ ನೋಡಲಾಗಿದೆ. ಅವುಗಳ ಪ್ರಯೋಗವನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನಕ್ಕೆ ತೆಗೆದುಕೊಂಡಿದೆ. ಮಕ್ಕಳ ಕತೆಗಳ ಅಭಿರುಚಿಗಳಲ್ಲಿ ಬಹುಪಾಲು ಫ್ಯಾಂಟಸಿಯ ಸ್ವರೂಪದ್ದು ಎಂಬುವ ಅಂಶವನ್ನು ಆಧರಿಸಿ ನೋಡಿದೆ. ಇತ್ತೀಚೆಗೆ ಮಕ್ಕಳ ಸಾಹಿತ್ಯದ ಒಲವು ವಾಸ್ತವದ ಕತೆಗಳ ಕಡೆಗೆ ಹರಿಯುತ್ತಿರುವುದರಿಂದ ವಾಸ್ತವದ ಬದುಕನ್ನು ಆಧರಿಸಿದ ಕತೆಯ ಸಾಧ್ಯತೆಗಳನ್ನು ಕನ್ನಡದ ವಾತಾವರಣದಲ್ಲಿ ಅಲ್ಲಗಳೆಯಲಾಗದು. ಆದುದರಿಂದ ಮಕ್ಕಳ ಕತೆಗಳಲ್ಲಿ ವಾಸ್ತವ ಎನ್ನುವುದನ್ನು ಇಲ್ಲಿ ಒಂದು ಅಧ್ಯಾಯದಷ್ಟು ಮಾತ್ರ ನೋಡಬಹುದಾಗಿದೆ. ಪ್ರಮುಖವಾಗಿ ಹಿರಿಯರ ಕತೆಗಳನ್ನು ಮಕ್ಕಳ ಕತೆಗಳಾಗಿ ಆರಿಸಿರುವ ಸಾಧ್ಯತೆಗಳು ನಮ್ಮಲ್ಲಿ ಪರಂಪರೆಯಿಂದ ಇಂದಿಗೂ ಕಾಣಿಸಿಕೊಂಡಿದೆ. ಅಂತಹ ವಸ್ತು ನಮ್ಮಲ್ಲಿ ಹೇರಳವಾಗಿಯೂ ಕಾಣಿಸಿಕೊಂಡಿರುವುದರಿಂದ ಅವುಗಳನ್ನು ಇಲ್ಲಿ ಬೆರಗುಗಣ್ಣಿಂದ ಕಂಡಿದೆ. ಮಕ್ಕಳ ವಯೋಮಾನವು ಇಲ್ಲಿ ಪ್ರಧಾನವಾಗಿರುವುದರಿಂದ ಶಿಶು, ಬಾಲ, ಕಿಶೋರ ಎಂಬ ಸಾಹಿತ್ಯದ ಸ್ವರೂಪಗಳನ್ನು ವಿಂಗಡಿಸಿಕೊಂಡು ಪ್ರತ್ಯೇಕವಾಗಿ ಅಧ್ಯಯನದ ದೃಷ್ಟಿಯಿಂದ ನೋಡಲಾಗಿದೆ. ಮಕ್ಕಳ ಕತೆಗಳೆಂದರೆ ಪ್ರಾಣಿ, ಪಕ್ಷಿ, ಪರಿಸರ ಎಂದು ಭಾವಿಸಿ ನಮ್ಮ ಮಕ್ಕಳ ಕಥಾ ಲೋಕವು ಕಾಣಿಸಿಕೊಂಡಿರುವುದರಿಂದ ಇಂತಹ ಸರಕು ನಮ್ಮಲ್ಲಿ ವಿಪುಲವಾಗಿ ವ್ಯಾಪಿಸಿರುವುದರಿಂದ ಇದನ್ನು ಅಧ್ಯಯನದ ಭಾಗವಾಗಿ ಭಾವಿಸಿದೆ. ಮಕ್ಕಳ ಕತೆಗಳು ಹಿರಿಯರ ಕತೆಗಳ ಅನುಸರಿಸಿ ತಮ್ಮ ಗತಿಯನ್ನು ಬದಲಾಯಿಸಿಕೊಂಡು ಬಂದಿರುವುದರಿಂದ ಅವುಗಳನ್ನು ತೌಲನಿಕವಾಗಿ ಕಂಡಿದೆ. ಮಕ್ಕಳ ಸಾಹಿತ್ಯದ ಮೇಲೆ ಪ್ರಭಾವ, ಪ್ರೇರಣೆಗಳು ಹೊರಗಿನಿಂದ, ಭಾರತದ ಒಳಗಿನಿಂದ, ಕನ್ನಡದ ಜನಪದದಿಂದ ಉಂಟಾಗಿರುವುದರಿಂದ ಇಂತಹದೇ ವಿಂಗಡಣೆ, ಪ್ರತ್ಯೇಕತೆಯನ್ನು ಆಧರಿಸಿ ಅಧ್ಯಯನವನ್ನು ಮಾಡಿರುವುದಿದೆ. ಇವುಗಳ ಜೊತೆಗೆ ಪ್ರಮುಖ ಪ್ರಯೋಗಗಳನ್ನು ಆರಿಸಿ ನೋಡಲಾಗಿದೆ. ಇದೊಂದು ಸಮಗ್ರವಾದ ಅಧ್ಯಯನವಲ್ಲ ಬದಲಾಗಿ ತಾತ್ವಿಕತೆಯ ನೋಟವಾಗಿ ಕಾಣಿಸಿಕೊಂಡಿದೆ. ಮಕ್ಕಳ ಕತೆಗಳಗಾಗಿ ತೊಡಗಿಸಿಕೊಂಡ ಹೊಸತನದ ಆಶಯಗಳೊಂದಿಗೆ ಈ ಅಧ್ಯಯನವನ್ನು ಮಾಡಲಾಗಿದ್ದು, ಮಕ್ಕಳ ಕತೆಗಳ ಒಳ ಹೊರಗನ್ನು, ಸಾಧ್ಯತೆ, ಸವಾಲುಗಳನ್ನು ಕೆದಕಿ ನೋಡುವ ಫಲವಾಗಿ ಕಾಣಿಸಿಕೊಂಡ ಅಧ್ಯಯನ ಇದಾಗಿದೆ. ಇಲ್ಲಿ ದೇಶ ವಿದೇಶಗಳ ಸಾಧ್ಯತೆಗಳನ್ನು ಕನ್ನಡದ ಕತೆಗಳನ್ನು ಕೇಂದ್ರವಾಗಿರಿಸಿಕೊಂಡು ಅವೆಲ್ಲವುಗಳು ಪರಿಧಿಯಲ್ಲಿ ಕಾಣಿಸಿಕೊಂಡಿವೆ. ಭಾರತದ ಬಹುಭಾಷೆಯಿಂದ

ಬಹು ಸಂಸ್ಕೃತಿಯಿಂದ ಪ್ರಚೋದನೆಗೊಂಡ ಕತೆಗಳನ್ನು, ವಾಸ್ತವದಲ್ಲಿ ಅವು ಕಾಣಿಸಿಕೊಳ್ಳ ಬೇಕಾದ ಅನಿವಾರ್ಯತೆಗಳನ್ನು ಒಂದುಕಡೆ ತುರ್ತಾಗಿ ಭಾವಿಸಿಕೊಂಡು ನೋಡುವ ಪ್ರಯತ್ನಗಳು ಇಲ್ಲಿ ಸಾಧ್ಯವಾಗಿವೆ.

## ೯.೧ ಅಧ್ಯಯನದ ಮುಖ್ಯ ಫಲಿತಗಳು

- ಭಾರತೀಯರು ಮಕ್ಕಳ ಸಾಹಿತ್ಯವನ್ನು ಪ್ರತ್ಯೇಕಿಸಿ ನೋಡುವ ಪರಿಕಲ್ಪನೆಯು ಪಾಶ್ಚಾತ್ಯರ ಸಾಹಿತ್ಯದ ಪ್ರಭಾವದಿಂದ ಬಂದುದಾಗಿದೆ.
- ಭಾರತದಲ್ಲಿ ಮಕ್ಕಳಗಾಗಿಯೇ ಪ್ರತ್ಯೇಕವಾಗಿ ಕತೆಗಳರದೆ ಹಿರಿಯರ ಕತೆಗಳನ್ನು ಮಕ್ಕಳಗೆ ಪರಿಷ್ಕರಿಸಿ ಹೇಳಲಾಗುತ್ತಿತ್ತು.
- ಮಕ್ಕಳ ಕತೆಗಳು ಹಿರಿಯರ ಜನಪದ ಪರಂಪರೆಯಿಂದ ತಲೆಮಾರುಗಳ ಮೂಲಕ ಮೌಖಿಕವಾಗಿ ಹರಿದು ಬಂದ ಸ್ವರೂಪವುಳ್ಳವು.
- ಶಿಕ್ಷಣ ವ್ಯವಸ್ಥೆಯಿಲ್ಲದ ಕಾಲದಲ್ಲಿ ಮಕ್ಕಳಗಾಗಿ ಕತೆಗಳು ಅನೌಪಚಾರಿಕ ನೆಲೆಯ ಶಿಕ್ಷಣ ನೀಡುವ ಕಾರ್ಯವನ್ನು ಮಾಡಿವೆ.
- ಅಜ್ಜಿಕತೆಗಳು ಮಕ್ಕಳಕತೆಗಳ ಮೂಲ ಸ್ವರೂಪವಾಗಿವೆ.
- ಪ್ರಬುದ್ಧರ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳರುವಂತೆ ಮಕ್ಕಳ ಸಾಹಿತ್ಯದಲ್ಲೂ ಅನೇಕ ಪ್ರಕಾರಗಳವೆ.
- ಮಕ್ಕಳ ಕತೆಗಳೆಂದರೆ ಹಿರಿಯರು ಮಕ್ಕಳಗಾಗಿ ಬರೆದಿರುವ, ಮಕ್ಕಳಗಾಗಿ ಆರಿಸಿರುವ, ಮಕ್ಕಳು ಮಕ್ಕಳಗಾಗಿಯೇ ಬರೆದಿರುವ, ಮಕ್ಕಳ ಪರಿಸರವನ್ನು ಒಳಗೊಂಡ ವಸ್ತು ವಿಷಗಳನ್ನು ಕುರಿತದ್ದಾಗಿವೆ. ಮಕ್ಕಳ ಕತೆಗಳಗೆ ಮುಗ್ಧತೆಯೇ ಮೂಲದ್ರವ್ಯ. ಮಕ್ಕಳ ನಡಿಗೆ, ಲಯಬದ್ಧವಾದ ಕುಣಿತ, ರೋಚಕತೆ, ಪ್ರೇರಣೆಗಳು ಇದರ ಪ್ರಧಾನ ಲಕ್ಷಣಗಳಾಗಿವೆ.
- ಮಕ್ಕಳಕತೆಗಳು ಮೊದಲಗೆ ನೀತಿ ಪ್ರಧಾನವಾಗಿದ್ದು ನಂತರ ನೀತಿ ಚೌಕಟ್ಟಿನಾಚೆಗಿನ ವ್ಯಾಪ್ತಿ, ಸ್ವರೂಪವನ್ನು ಹೊಂದಿವೆ.
- ಮಕ್ಕಳ ಕತೆಗಳನ್ನು ಮಕ್ಕಳ ವಯೋಮಾನಕ್ಕನುಗುಣವಾಗಿ ಶಿಶು ಕತೆಗಳು, ಬಾಲ ಕತೆಗಳು, ಕಿಶೋರ ಕತೆಗಳು ಎಂದು ವಿಂಗಡಿಸಿಕೊಳ್ಳುವ ಅಗತ್ಯವಿದೆ.
- ಸಾಹಿತ್ಯದ ಅಭಿರುಚಿ ಹಾಗೂ ಪ್ರವೇಶವನ್ನು ಪ್ರತಿಯೊಬ್ಬರೂ ರೂಢಿಸಿಕೊಳ್ಳುವುದು, ಮಕ್ಕಳಕತೆಗಳನ್ನು ಕೇಳುವ, ಓದುವ ಮೂಲಕವಾಗಿ ಮತ್ತು ಭಾಷೆಯ ಕಲಿಕೆಯು ಸಹ ಕಥಾರೂಪದ ಬಾಲಸ್ತರದ ಭಾಷೆಯನ್ನು ಆಶ್ರಯಿಸಿರುತ್ತದೆ.
- ಮಕ್ಕಳ ಕತೆಗಳನ್ನು ಪ್ರಬುದ್ಧರ ಕತೆಗಳ ಪ್ರೌಢಿಮೆ, ಭಾಷೆ, ವಸ್ತು ಹಾಗೂ ಪುಸ್ತಕದ ಗುಣಗಳೊಂದಿಗೆ ಹೋಲಿಸಿ ನೋಡದೆ, ಮಕ್ಕಳದೇ ಬೇರೆಯದಾದ ಸಾಹಿತ್ಯ ಪರಿಸರವೆಂದು ಭಾವಿಸುವುದು.

- ಮಕ್ಕಳ ಕಥಾಸಾಹಿತ್ಯದ ಹೊಸತುಡಿತಗಳ ಪರಿಗಣನೆ, ಸಾಹಿತ್ಯ ಸಂಸ್ಕಾರದ ಪೋಷಣೆ, ಮನ್ನಣೆ, ಪುರಸ್ಕಾರಗಳ ವಿಷಯದಲ್ಲಿ ಪ್ರಬುದ್ಧರ ಸಾಹಿತ್ಯದಂತೆಯೇ ಕಾಣಬೇಕೆಂಬ ಆಶಯವಿದೆ.
- ಮಕ್ಕಳು ತಮಗೆ ಬೇಕಾದ ಕತೆಗಳನ್ನು ತಾವೇ ಬರೆದು ಕೊಳ್ಳಲಾರರಾದುದರಿಂದ ಹಿರಿಯರು, ಪ್ರಖ್ಯಾತ ಲೇಖಕರು ಈ ನಿಟ್ಟಿನಲ್ಲಿ ಇದರ ಕೊರತೆಯನ್ನು ನೀಗಿಸುವ ಅಗತ್ಯವಿದೆ.
- ನವೋದಯದ ಕಾಲದಲ್ಲಿ ಪಂಜೆ ಮಂಗೇಶರಾಯರು, ಎಂ.ಎಸ್. ಪುಟ್ಟಣ್ಣ, ಕುವೆಂಪು, ಶಿವರಾಮ ಕಾರಂತ, ಜಿ.ಪಿ. ರಾಜರತ್ನಂ, ದಿನಕರ ದೇಸಾಯಿರಂತಹ ಪ್ರಖ್ಯಾತ ನಾಮರು ಮಕ್ಕಳ ಸಾಹಿತ್ಯ ರಚನೆ ಹಾಗೂ ಪ್ರಸರಣಕ್ಕಾಗಿ ಶ್ರಮಿಸಿದ್ದಾರೆ.
- ಮಕ್ಕಳ ಕತೆಗಳನ್ನು ಶಿಕ್ಷಣದ ಭಾಗವಾಗಿಸಿಕೊಂಡು ಆರಂಭದಲ್ಲಿ ಶಿಕ್ಷಕ ಸಾಹಿತಿಗಳು ತಮ್ಮ ಪ್ರವೃತ್ತಿಯಾಗಿಸಿಕೊಂಡು ಬರೆದು ಬೆಳೆಸಿದರು.
- ಮುದ್ರಣ ವ್ಯವಸ್ಥೆ ಭಾರತಕ್ಕೆ, ವಿಶೇಷವಾಗಿ ಕರ್ನಾಟಕಕ್ಕೆ ಬಂದ ಮೇಲೆ ಪುಸ್ತಕ ಪ್ರಕಟಣೆ ಹೆಚ್ಚಾದಂತೆ ಮಕ್ಕಳ ಕತೆಗಳ ಪ್ರಕಟಣೆಯು ಆರಂಭವಾಯಿತು.
- ಈಸೋಪನ ನೀತಿ ಕತೆಗಳು, ಪಂಚತಂತ್ರ ಕತೆಗಳು, ಜನಪದಕತೆಗಳು, ರಾಮಾಯಣ, ಮಹಾಭಾರತ ಆಧಾರಿತ ಕತೆಗಳು, ಪಾತ್ರಗಳು ಮಕ್ಕಳ ಕತೆಗಳ ಕೊರತೆಯನ್ನು ನೀಗಿಸಿದವು.
- ಮಂಗಳೂರು ಭಾಗದಲ್ಲಿನ ತುಳು, ಕೊಂಕಣಿ ವಿವಿಧ ಮಾತೃಭಾಷೆಯುಳ್ಳ ಕನ್ನಡ ಶಿಕ್ಷಕರು ಇಂಗ್ಲಿಷ್ ಸಾಹಿತ್ಯದ ಪ್ರಭಾವದ ನಡುವೆಯೂ ಕನ್ನಡ ಮಕ್ಕಳ ಸಾಹಿತ್ಯವನ್ನು ಬೆಳೆಸಿದರು.
- ಭಾರತೀಯ ಕತೆಗಳಿಗೆ ಜನಪದವೇ ಫ್ಯಾಂಟಸಿಯ ಮೂಲವಾಗಿದೆ.
- ವಿದೇಶದ ಕತೆಗಳ ಪ್ರಭಾವ, ಪ್ರೇರಣೆಯಿಂದ ಕನ್ನಡದ ಮಕ್ಕಳ ಕತೆಗಳ ವಾತಾವರಣ ಬದಲಾವಣೆಯನ್ನು ಕಂಡಿದೆ.
- ವಿದೇಶದಿಂದ ಕನ್ನಡಕ್ಕೆ ಬಂದ ಕೆಲವು ಮಹತ್ತರದ ಕತೆಗಳು ತಮ್ಮ ಅಸ್ಮಿತೆಯನ್ನು ಕನ್ನಡದಲ್ಲಿಯು ಉಳಿಸಿಕೊಂಡಿವೆ.
- ಭಾರತದ ಇತರ ಭಾಷೆಗಳ ಪ್ರಭಾವ, ಪ್ರೇರಣೆಯು ಕನ್ನಡದ ಕತೆಗಳ ಮೇಲೆ ಉಂಟಾಗಿದೆ.
- ಭಾರತೀಯ ಇತರ ಭಾಷೆಗಳಿಂದ ಕನ್ನಡಕ್ಕೆ ಬಂದ ಕೆಲವು ಮಹತ್ತ್ವದ ಕತೆಗಳು ತಮ್ಮ ಅಸ್ಮಿತೆಯನ್ನು ಕನ್ನಡದಲ್ಲಿಯು ಉಳಿಸಿಕೊಂಡಿವೆ.
- ಫ್ಯಾಂಟಸಿಯು ಅವಾಸ್ತವದ ಕಲ್ಪನೆಗಳಿಂದ ಮಕ್ಕಳ ಕತೆಗಳಲ್ಲಿ ರೋಚಕತೆಯನ್ನು ಸೃಷ್ಟಿಸುತ್ತದೆ.
- ಫ್ಯಾಂಟಸಿಯು ಸ್ಥಾಪಿತವಾದ ನಂಬಿಕೆಗಳ ವಿರುದ್ಧದ ಸೃಷ್ಟಿಯಾಗಿದೆ.
- ಪಾಶ್ಚ್ಯಾತ್ಯರಂತೆ ಫ್ಯಾಂಟಸಿಯನ್ನು ವರ್ಗೀಕರಿಸಿ ನೋಡುವ ಕ್ರಮ ಭಾರತೀಯರಲ್ಲಿಲ್ಲ. ಇದರ ಅಗತ್ಯವು ಇಂದು ಇದೆ.

- ಫ್ಯಾಂಟಸಿಯ ಕಲ್ಪನೆಗಳಿಂದ ವಿಜ್ಞಾನದ ಶೋಧಗಳು ಉಂಟಾಗಲು ಸಾಧ್ಯವಾಗಿದೆ.
- ವಾಸ್ತವ ಕತೆಗಳು ಮಾನವನ ಬದುಕಿನ ಜೀವಂತ ಸ್ಪಂದನೆಗಳಾಗಿವೆ.
- ಮಕ್ಕಳ ವರ್ತಮಾನದ ಬದುಕಿಗೂ ವಾಸ್ತವದ ಕತೆಗಳಿಗೂ ಕಾಲದ ಅಂತರವಿಲ್ಲದೆ ಓದಿಸಿಕೊಳ್ಳುತ್ತವೆ.
- ವಾಸ್ತವ ಕತೆಗಳು ಮಕ್ಕಳು ಬೌದ್ಧಿಕ ಪರಿಸರದ ಮತ್ತು ಸಾಮಾಜಿಕ ಪರಿಸರದ ಸಂಗತಿಗಳಿಗೆ ಹೊಂದಿಕೊಳ್ಳಲು ನೆರವಾಗುತ್ತವೆ.
- ವಾಸ್ತವ ಕತೆಗಳು ಮಕ್ಕಳ ಪರಿಸರದ ಸಂಗತಿಗಳನ್ನು ಮತ್ತು ಹಿರಿಯರ ಪರಿಸರದ ಸಂಗತಿಗಳನ್ನು ಮಕ್ಕಳಿಗೆ ಅನುಭವದ ರೂಪದಲ್ಲಿ ಒದಗಿಸುತ್ತವೆ. ಕೆಲವು ಸಲ ಮುಖಾಮುಖಿಯಾಗಿಸಿಯೂ ನೋಡುತ್ತವೆ.
- ವಾಸ್ತವ ಕತೆಗಳ ಕಲ್ಪನೆಯು ಮಕ್ಕಳ ಸಾಹಿತ್ಯಕ್ಕೆ ಬಂದುದು ಭಾರತದ ಹೊರಗಿನ ಮಕ್ಕಳ ಸಾಹಿತ್ಯದ ಗ್ರಹಿಕೆಯಿಂದಾಗಿದೆ.
- ಕಾಮಿಕ್ಸ್ ಚಿತ್ರಕಥೆಗಳ ಮೂಲಕ ಭಾವನೆಗಳನ್ನು, ಸನ್ನಿವೇಶಗಳ ವಿವರಣೆಯನ್ನು ಅಭಿವ್ಯಕ್ತಪಡಿಸುವ ವಿಧಾನವಾಗಿದೆ.
- ಕಾಮಿಕ್ಸ್ ದೃಶ್ಯ ಮತ್ತು ಸಂಭಾಷಣೆ ಎರಡನ್ನೂ ಸಾದರಪಡಿಸುತ್ತದೆ.
- ಭಾರತದಲ್ಲಿ ಸ್ವಾತಂತ್ರ್ಯದ ನಂತರ ಕಾಮಿಕ್ಸ್‌ನ ಆಧುನಿಕ ಯುಗಾರಂಭವಾಗುತ್ತದೆ ಮತ್ತು ಮಾರುಕಟ್ಟೆಯ ವಿಸ್ತಾರ ಹೆಚ್ಚಾಗುತ್ತದೆ.
- ಭಾರತದ ಪರಂಪರೆಯ ಕಾಮಿಕ್ಸ್ ಸರಣಿಗಳು ಜಾಗತಿಕ ಮಾರುಕಟ್ಟೆಯಲ್ಲಿ ಹೆಚ್ಚು ಬೇಡಿಕೆಯನ್ನು ಸೃಷ್ಟಿಸಿಕೊಳ್ಳುತ್ತವೆ.
- ಭಾರತೀಯರಲ್ಲಿ ಕಾಮಿಕ್ಸ್ ವಿವಿಧ ಧರ್ಮದವರನ್ನು ತಲುಪುವ ಸಲುವಾಗಿ ಅನೇಕ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ.
- ಪುರಾಣದ ಸರಕಿನಿಂದ ಹೊರ ಬಂದು ಆಯಾಯ ಕಾಲಘಟ್ಟದ ವಸ್ತುಗಳೊಂದಿಗೆ ಕಾಮಿಕ್ಸ್ ಹೊಂದಿಕೊಂಡಿದೆ.
- ವಿದೇಶಿಯ ಕಾಮಿಕ್ಸ್ ಕೂಡ ಭಾರತದ ಮಕ್ಕಳನ್ನು ಆಕರ್ಷಿಸಿದೆ ಮತ್ತು ಪ್ರಭಾವವನ್ನು ಬೀರಿದೆ.
- ಕಾಮಿಕ್ಸ್ ವಿವಿಧ ಹಂತಗಳಲ್ಲಿ ಕಾಣಿಸಿಕೊಂಡಿದೆ ಮತ್ತು ಪ್ರಕಾಶಕರನ್ನು ಆಸಕ್ತಿಯಿಂದ ತೊಡಗಿಸಿಕೊಳ್ಳಲು ಆರ್ಥಿಕವಾಗಿ ಲಾಭವನ್ನು ತಂದುಕೊಟ್ಟಿದೆ.
- ಮಕ್ಕಳ ಕತೆಗೆ ಸೀಮಿತವಾಗಿದ್ದ ಲೇಖಕರು ನೀಳ್ಗತೆ, ಕಿರು ಕಾದಂಬರಿ, ಕಾದಂಬರಿಗಾಗಿ ಹಂಬಲಿಸುವ ಮಕ್ಕಳ ಅಭಿರುಚಿಯನ್ನು ಅರಿತು ಹುಟ್ಟುಹಾಕಿದರು.

- ಮಕ್ಕಳ ಕಾದಂಬರಿಗೆ ಪ್ರಬುದ್ಧರ ಕಾದಂಬರಿಯ ಪ್ರಕಾರವು ಪ್ರೇರಣೆಯನ್ನು ನೀಡಿದೆ ಮತ್ತು ಹೊಸತನಗಳನ್ನು ವಿದೇಶಿ ಸರಕಿನ ಪ್ರಭಾವದಿಂದ ಕಂಡುಕೊಂಡಿದ್ದಾರೆ.
- ನಾ. ಡಿಸೋಜರು ಮಕ್ಕಳ ಕಾದಂಬರಿಗಳಗಾಗಿ ಹಂಬಲಿಸಿದ ಆದ್ಯರು ಮತ್ತು ತಮ್ಮ ಕೃತಿಗಳ ಮೂಲಕ ಅವುಗಳ ಸ್ವರೂಪವನ್ನು ಕಟ್ಟಿಕೊಟ್ಟಿದ್ದಾರೆ.
- ಮಕ್ಕಳ ಕಾದಂಬರಿಯ ವಸ್ತು ಆರಂಭದಲ್ಲಿ ಪ್ರಕೃತಿ ಪ್ರೇಮ, ಪ್ರಾಣಿದಯೆ, ಶಿಕ್ಷಣಕ್ಕೆ ಸೀಮಿತವಾಗಿದ್ದು, ನಂತರ ಬದುಕಿನ ವಿವಿಧ ಸಂಗತಿಗಳಗೆ ತೆರೆದುಕೊಂಡಿದೆ.
- ಮಕ್ಕಳ ಕಾದಂಬರಿಗಳಲ್ಲಿ ಮಕ್ಕಳದೇ ಪರಿಸರದ ಸಂಗತಿಗಳು, ಮಕ್ಕಳದೇ ಪಾತ್ರಗಳು, ಮಕ್ಕಳ ಭಾವನೆಗಳ ಅಭಿವ್ಯಕ್ತಿಗಳು ವಸ್ತುವಾಗಿ ಹೊಸಮಾರ್ಗವನ್ನು ಲೇಖಕರು ಕಂಡುಕೊಂಡರು.
- ಮಕ್ಕಳ ಕತೆ , ನೀಳ್ಗತೆ, ಕಿರುಕಾದಂಬರಿ, ಕಾದಂಬರಿಗಳು ಭಾರತದ ಇತರ ಭಾಷೆಗಳ ಪ್ರಭಾವ, ಪ್ರೇರಣೆಯನ್ನು ಹೊಂದಿವೆ.
- ಮಕ್ಕಳ ಭಾವನಾತ್ಮಕ ಪರಿಸರವು ವಸ್ತುವಾದಂತೆಯೇ ಮಕ್ಕಳ ಸಾಮಾಜಿಕ ಸಮಸ್ಯೆಗಳು, ಅವಕಾಶಗಳು ವಸ್ತುವಾಗಿ ಕಾಣಿಸಿಕೊಂಡವು.
- ಹೊಸ ತಲೆಮಾರಿನ ಲೇಖಕರು ವಾಸ್ತವಕ್ಕೆ ಒತ್ತುಕೊಟ್ಟಂತೆಯೇ ಫ್ಯಾಂಟಸಿಯನ್ನು ಸೃಷ್ಟಿಸಿ ದೇಸಿಯತೆಯೊಂದಿಗೆ ಪ್ರಯೋಗಿಸಿ ನೋಡುತ್ತಿದ್ದಾರೆ.
- ವಾಸ್ತವದ ವಸ್ತುವುಳ್ಳ ಕಾದಂಬರಿಗಳು ತನ್ನ ಹರವನ್ನು ಮಕ್ಕಳ ಅನುಭವಗಳನ್ನು ದಾಖಲಿಸುವ ಕಡೆಗೆ ತುಡಿಯುತ್ತಿರುವುದು, ಲೇಖಕರ ಬಾಲ್ಯದ ಸಂಗತಿಗಳನ್ನು ಹೇಳುವ ಹೊಸದಾದ ಮಾರ್ಗಗಳನ್ನು ಹುಟ್ಟುಹಾಕುತ್ತಿರುವುದು ಕಾಣಿಸಿಕೊಳ್ಳುತ್ತದೆ.
- ಮಕ್ಕಳ ಸಾಹಿತ್ಯದ ಅಧ್ಯಯನ ಮತ್ತು ವಿಮರ್ಶೆ ಕಾರ್ಯಗಳು ಕನ್ನಡದಲ್ಲಿ ಸಾಕಷ್ಟು ಆಗಿರುವುದಿಲ್ಲ.
- ಪ್ರಬುದ್ಧರ ಸಾಹಿತ್ಯದ ಸೃಜನಶೀಲ ವಿಮರ್ಶಕರು ಮಕ್ಕಳ ಸಾಹಿತ್ಯದ ವಿಮರ್ಶೆಯನ್ನು ಗಂಭೀರವಾಗಿ ಪರಿಗಣಿಸಿಲ್ಲ.
- ಮಕ್ಕಳ ಸಾಹಿತ್ಯದ ನಡೆಯನ್ನು, ವಸ್ತುವನ್ನು ಪ್ರಬುದ್ಧರ ಸಾಹಿತ್ಯದೊಂದಿಗೆ ಹೋಲಿಕೆ ಮಾಡಿನೋಡುವುದು ಸರಿಯಾದ ಕ್ರಮವಲ್ಲ.
- ಪ್ರತಿಭಾವಂತ ಹಿರಿಯ ಲೇಖಕರು ಮಕ್ಕಳ ಸಾಹಿತ್ಯದ ತಮ್ಮ ವಿಮರ್ಶಾ ಕಾಳಜಿಯನ್ನು ಮುನ್ನುಡಿ, ಬೆನ್ನುಡಿ, ಸಮ್ಮೇಳನದ ಭಾಷಣಗಳಲ್ಲಿ ಪ್ರಕಟಿಸಿದ್ದಾರೆ.
- ಭಾರತದ ವಿವಿಧ ಭಾಷೆಗಳಲ್ಲಿ, ವಿದೇಶದ ಮಕ್ಕಳ ಸಾಹಿತ್ಯದಲ್ಲಿ ಮಕ್ಕಳ ಸಾಹಿತ್ಯದ ವಿಮರ್ಶಾ ಕಾರ್ಯಗಳನ್ನು ಹೇರಳವಾಗಿ ನೋಡಬಹುದು.
- ಸಾಹಿತ್ಯ ಗೋಷ್ಠಿಗಳು, ವಿಚಾರ ಸಂಕಿರಣಗಳು, ಸಂವಾದಗಳು ಮಕ್ಕಳ ಸಾಹಿತ್ಯಕುರಿತು ನಡೆಯದಿರುವುದು ಈ ಕ್ಷೇತ್ರದ ಅವಗಣನೆಗೆ ಕಾರಣವಾಗಿವೆ.

## ೧೦.೨ ಅಧ್ಯಯನದ ಸಂದರ್ಭದಲ್ಲಿ ಎದುರಾದ ತೊಡಕುಗಳು, ಬಿಡಿಸಿಕೊಂಡ ಬಗೆ

ಮಕ್ಕಳ ಸಾಹಿತ್ಯದ ಸಂದರ್ಭವನ್ನು ಅಧ್ಯಯನ ಮಾಡಲು ಸಿದ್ಧಗೊಂಡಾಗ ನನಗೆ ಮೊದಲಿಗೆ ಕಾಣಿಸಿಕೊಂಡಿದ್ದು ವಿಶಾಲವಾಗಿ ಬೆಳೆದಿರುವ ಪದ್ಯದ ಕ್ಷೇತ್ರ.ಆದರೆ ಪದ್ಯವನ್ನು ಕುರಿತು ಈಗಾಗಲೆ ಅನೇಕ ಹಿರಿಯ ಮಿತ್ರರು ಸಂಶೋಧನೆಯಲ್ಲಿ ಪ್ರಮುಖ ಲೇಖಕರು ಬರೆದಿರುವ ಮಕ್ಕಳ ಪದ್ಯಗಳನ್ನು ಕುರಿತು ತೊಡಗಿಸಿಕೊಂಡಿರುವುದು ಅವರ ಸಂಶೋಧನ ಗ್ರಂಥಗಳಿಂದ ತಿಳಿದು ಬಂದಿರುತ್ತದೆ. ಸಿಸು ಸಂಗಮೇಶ, ರಾಜರತ್ನಂ, ದಿನಕರ ದೇಸಾಯಿ, ಎಂ.ಎಸ್. ಪುಟ್ಟಣ್ಣ ನವರ ವೈಯಕ್ತಿಕ ವಿವರಗಳೊಂದಿಗೆ ಅವರ ಸಾಹಿತ್ಯದ ಪರಿಚಯವನ್ನು ಮಾಡಿರುವುದರಿಂದ ಅದರ ಅಗತ್ಯಗಳು ಬೀಳಲಿಲ್ಲ ಎಂಬುದು ನನ್ನ ಭಾವನೆ. ಮಕ್ಕಳ ಸಾಹಿತ್ಯದಲ್ಲಿ ಗದ್ಯವನ್ನು ಸಮಗ್ರವಾಗಿ ನೋಡುವುದು ನನ್ನ ಅಭಿಪ್ರಾಯವಾಗಿ ಕಾನಿಸಿಕೊಂಡಿತ್ತು. ಆದರೆ ಗದ್ಯವು ವಿಶಾಲವಾದ ವ್ಯಾಪ್ತಿಯನ್ನು, ಹುಡುಕಾಟದ ಕ್ಷೇತ್ರವನ್ನು ಹೊಂದಿರುವುದರಿಂದ ಅದನ್ನು ವಿಭಜಿಸಿ ಅದರ ಭಾಗವೇ ಆದ ಮಕ್ಕಳ ಕತೆಗಳನ್ನು ಮಾತ್ರ ನೋಡಲು ತೀರ್ಮಾನಿಸಲಾಯಿತು. ಮಕ್ಕಳ ಕತೆಗಳು ಎಂದಾಗ ನಾನು ಭಾವಿಸಿದಂತೆ ಕನ್ನಡದ ಮಕ್ಕಳ ಸಾಹಿತ್ಯದಲ್ಲಿ ಕತೆಗಳನ್ನು ಕುರಿತು ಸಮಗ್ರವಾಗಿ ನೋಡಲು ಬಯಸಿದೆ. ಆದರೆ ಆಗಲೇ ನನಗೆ ತೊಡಕು ಕಾಣಿಸಿಕೊಂಡಿತ್ತು. ಕನ್ನಡದ ಮಕ್ಕಳ ಸಾಹಿತ್ಯವು ಜನಪದದ ಗರ್ಭದಲ್ಲಿ ಹುದುಗಿದ್ದು, ಜನ್ಮ ತಳೆದದ್ದು ಮಾತ್ರ ನವೋದಯದ ಆಂಗ್ಲರ ಸಾಹಿತ್ಯದ ಪ್ರೇರಣೆಯಿಂದ ಎಂದು ತಿಳಿದಾಗ, ಅದು ಏನೆಲ್ಲಾ ಪ್ರಭಾವಗಳನ್ನು ಅರಗಿಸಿಕೊಂಡಿತು ಎಂದು ನೋಡುವ ಅನಿವಾರ್ಯವು ಉಂಟಾಗಿ ಅದನ್ನು ಒಂದು ಅಧ್ಯಯನದಲ್ಲಿ ನೋಡುವಂತಾಯಿತು. ಹೀಗೆ ಹುಟ್ಟಿದ ಮಕ್ಕಳ ಕತೆಗಳು ಪ್ರಭಾವ, ಪ್ರೇರಣೆಯನ್ನು ಅನುಭವಿಸಿದಂತೆ ಹೊರಗಿನ ಕತೆಗಳನ್ನು ಅನುವಾದದ ಮೂಲಕ ಕನ್ನಡಕ್ಕೆ ತರುವ ಪ್ರಯತ್ನಗಳು ಕಾಣಿಸಿಕೊಂಡು ಅದು ಹೇಗೆಲ್ಲಾ ಸಾಧ್ಯವಾಯಿತು ಎಂದು ನೋಡುವುದು ಅನಿವಾರ್ಯವೂ ಆಯಿತು. ಅದನ್ನು ಹಂತ ಹಂತವಾಗಿ ಅಧ್ಯಯನಕ್ಕೆ ಒಳಪಡಿಸಿ ಕೆಲವು ವಕ್ತೃಗಳಾದ ಆನಂದ ಪಾಟೀಲ, ಎನ್‌ಬಿಟಿಯ ಮನೋಹರ್ ಅವರೊಂದಿಗೆ ಚರ್ಚಿಸಿದಾಗ ಅವರ ಪ್ರಕಟಣೆಯಿಂದ ಆದ ಪುಸ್ತಕಗಳನ್ನು ಕೊಡುವುದರ ಜೊತೆಗೆ ನೆರವುನೀಡಿ ಉಪಕರಿಸಿದರು. ಅವುಗಳ ಆಧಾರದ ಮೇಲೆ ಈ ತೊಡಕುಗಳನ್ನು ಬಿಡಿಸಿಕೊಳ್ಳಲಾಯಿತು. ಇನ್ನು ಮುಂದೆ ಎದುರಾದ ಸಮಸ್ಯೆ ಎಂದರೆ ಕನ್ನಡ, ಅದರ ಆಸುಪಾಸಿನ ಪರಿಸರದ ಭಾಷೆಯ ಕತೆಗಳು, ಭಾರತದ ಹೊರಗಿನ ಕತೆಗಳು ಇವೆಲ್ಲವು ತೆರೆದುಕೊಂಡು ಕ್ಷೇತ್ರವು ಬಹಳ ವಿಸ್ತಾರವಾಗಿ ಕಾಣಿಸಿಕೊಂಡಿತು. ಇದನ್ನು ಮನಗೊಂಡು ಕೆಲವು ಮಿತಿಗಳಿಗೆ ಒಳಪಡಿಸಿಕೊಂಡು ಮಹತ್ತ್ವವೆನಿಸಿದ, ಅಗತ್ಯವೆನಿಸಿದ ಕೃತಿಗಳನ್ನು ಮೂರು ವಿಧದಲ್ಲೂ ತೌಲನಿಕವಾಗಿ ನೋಡಲಾಯಿತು. ಮಕ್ಕಳ ಕತೆಗಳು ಜನಪದದ ಆಶ್ರಯದಲ್ಲಿ ಬೆಳೆದುದರಿಂದ ಅವುಗಳಿಗೆ ನೀರೆರೆದ ವಸ್ತುಗಳನ್ನು, ಹಿನ್ನೆಲೆಯಾಗಿ ಕಾಣಿಸಿಕೊಂಡ ಅಜ್ಜಿಕತೆ, ಅಡಗೂಲಜ್ಜಿಯ ಕತೆ, ಗೀತ ಕಥನಗಳನ್ನು ಮೌಖಿಕವಾಗಿ ಅವುಗಳ ಮಹತ್ತ್ವವನ್ನು ಕಟ್ಟಿಕೊಂಡು ಲಿಖಿತವಾಗಿ ಕಾಣಿಸಿಕೊಂಡಾಗ ಅವು ಬದಲಾಗಿ ಕಥನ ಕಾವ್ಯದಲ್ಲೂ, ರಾಮಾಯಣದ, ಪುರಾಣದ ಸರಕಿನಲ್ಲೂ ಪ್ರೇರಣೆಯನ್ನು ಅನುಭವಿಸಿರುವುದನ್ನು ಬಿಡಿಸಿಕೊಂಡು ನೋಡಲು ಸಹಾಯವಾಯಿತು. ಹೊಗಿನ ಕತೆಗಳು ನಮ್ಮಲ್ಲಿ

ಕಾಣಿಸಿಕೊಂಡು ಅವುಗಳ ಪ್ರಭಾವವನ್ನು ಅರಗಿಸಿಕೊಂಡಾಗಲು ನಮ್ಮ ಕತೆಗಳು ದೇಸಿಯತೆಯ ತುಡಿತವನ್ನು ಬಿಡದೆ ಉಳಸಿಕೊಂಡಿರುವುದನ್ನು ಮನಗಾಣಲಾಯಿತು.

**ಕೆಲವು ಸಮಸ್ಯೆಗಳು ಎದುರಾದ ಬಗೆ, ಬಿಡಿಸಿಕೊಂಡ ರೀತಿ.**

೧ ಮಕ್ಕಳ ಕತೆಯ ಸ್ವರೂಪದ ಜೊತೆಯಲ್ಲಿ ತಾತ್ವಿಕತೆಯನ್ನು ಕಂಡುಕೊಳ್ಳುವಾಗ ಅದಕ್ಕೆ ಕಾರಣವಾಗುವ ಅಂಶಗಳು ಎದುರಾಗಿ ಬಂದಾಗ ಅವುಗಳನ್ನು ತಳ್ಳಿಹಾಕಲಾಗದೆ ಅಗತ್ಯವಾದ ಕಡೆಯೆಲ್ಲಾ ಹೇಳುವ ಪ್ರಯತ್ನವನ್ನು ಕಂಡುಕೊಳ್ಳಲಾಯಿತು.

೨ ಮಕ್ಕಳ ಸಾಹಿತ್ಯದ ಸಂಪನ್ಮೂಲಗಳನ್ನು ಸಂಗ್ರಹಿಸುವಾಗ ಎದುರಾದ ಸಮಸ್ಯೆ ಎಂದರೆ ಯಾವುದೇ ಆಕರದಲ್ಲಿಯೂ ಒಂದೇ ತೆರನಾದ ನೋಟವುಳ್ಳ ವಿಷಯ ವಿವರಣೆಯಾಗಿದ್ದು ಅದನ್ನು ತಾತ್ವಿಕತೆಯ ಕಣ್ಣಿನಿಂದ ಕಟ್ಟುವ ಪ್ರಯತ್ನಗಳನ್ನು ಇಲ್ಲ ಅನುಸರಿಸಲಾಯಿತು.

೩ ಮಕ್ಕಳ ಕತೆಗಳ ಹಿನ್ನೆಲೆಯನ್ನು ಹುಡುಕಾಡಿದಾಗ ಅವುಗಳು ಕಾಣಿಸಿಕೊಂಡಿರುವುದೆಲ್ಲಾ ಮಕ್ಕಳ ಸಾಹಿತ್ಯದ ಒಟ್ಟಾದ ನೋಟದಲ್ಲಿ. ಇಲ್ಲಿ ಕತೆಗಳಿಗೆ ಅಗತ್ಯವಾದ ಅಂಶಗಳನ್ನು ಬೇರ್ಪಡಿಸಿರುವುದು ಕಾಣಿಸಲಿಲ್ಲ. ಆದುದರಿಂದ ಅದನ್ನು ಬೇರ್ಪಡಿಕೊಂಡು, ಕತೆಗಳಗೆ ಸಮೀಕರಿಸಿ ನೋಡಲಾಗಿದೆ.

೪ ಆಕರಗಳು ಮಕ್ಕಳ ಸಾಹಿತ್ಯಕ್ಕೆ ಪ್ರತ್ಯೇಕವಾದ ಸಾಮಾಗ್ರಿಯನ್ನು ಒದಗಿಸುವಷ್ಟು ಕನ್ನಡದ ವಾತಾವರಣದಲ್ಲ ಸಿಗುವುದಿಲ್ಲ. ಆದುದರಿಂದ ಹಿರಿಯರ ಸಾಹಿತ್ಯದ ಆಕರಗಳನ್ನು ಇವುಗಳಗೆ ಪೂರಕವಾಗಿ ಅವಲೋಕಿಸಿ ಕೆಲವು ಮಹತ್ತ್ವದ ಅಂಶಗಳ ಹಿನ್ನೆಯಿಂದ ಮಕ್ಕಳ ಕತೆಗಳನ್ನು ನೋಡಿ ಅಧ್ಯಯನ ಮಾಡಲಾಯಿತು.

೫ ಮಕ್ಕಳ ಸಾಹಿತ್ಯದ ವಿವಿಧ ದೇಶದ ವಾತಾವರಣವನ್ನು ನೋಡುವಾಗ ಕನ್ನಡದಲ್ಲ ಅದಕ್ಕೆ ಪೂರಕವಾದ ಸಾಮಾಗ್ರಿಯು ವಿರಳವಾಗಿರುವುದರಿಂದ ಅಂತರ್ಜಾಲದ ನೆರವನ್ನು ಅಗತ್ಯವಾಗಿ ಬಳಸಿಕೊಂಡು ಈ ಕೊರತೆಯನ್ನು ನೀಗಿಸಿಕೊಳ್ಳಲಾಯಿತು.

೬ ತಾತ್ವಿಕತೆಯನ್ನು ನೋಡುವಾಗ, ಪ್ರತಿಯೊಂದು ಸ್ವರೂಪದ ಕತೆಗಳಲ್ಲಿಯು ಗೊಂದಲಗಳು ನಿರ್ಮಾಣಗೊಂಡು, ಕೆಲವು ಭಾರಿ ವ್ಯಾಖ್ಯಾನಗಳ ಸಹಾಯದಿಂದ ಅವುಗಳ ತಾತ್ವಿಕತೆಯ ನೆಲೆಗಳನ್ನು ಕಟ್ಟಿಕೊಳ್ಳಲಾಯಿತು.

೭ ಮಕ್ಕಳ ಸಾಹಿತ್ಯದ ಬಗೆಗಿನ ಬೌದ್ಧಿಕ ಚಿಂತನೆಗಳನ್ನು ಅಳವಡಿಸಿಕೊಂಡ ಸೃಜನಶೀಲ ಲೇಖಕರ ಬಗ್ಗೆ ಹೇಳುವಾಗ ಅವರ ಮಾಹಿತಿ ನೀಡುವ ಕೆಲಸವನ್ನು ಹಿಂದಿನ ಅಧ್ಯಯನಗಳು ಮಾಡಿರುವುದರಿಂದ ಅದನ್ನು ಅನಗತ್ಯವೆಂದು ಇಲ್ಲ ಭಾವಿಸಿ, ಅವರ ಅಂತಹ ಚಿಂತನೆಗಳಗೆ ತಾತ್ವಿಕವಾದ ಕಾರಣಗಳನ್ನು ಮಾತ್ರ ಅಗತ್ಯವೆಂದು ಕಾಣಲಾಯಿತು.

೮ ಪುಸ್ತಕ ಪ್ರಕಾಶಕರ ಆಲೋಚನೆಗಳಂತೆಯೂ ಕೆಲವು ಸಂದರ್ಭಗಳಲ್ಲಿ ಮಕ್ಕಳ ಕತೆಗಳ ವಸ್ತು ವಿನ್ಯಾಸ, ಮಾರುಕಟ್ಟೆಯ ಬೇಡಿಕೆಗಳು ಬದಲಾವಣೆಗಳು ಕಂಡುಬಂದಿವೆ. ಇದು ವ್ಯಾಪಾರಿಕರಣದ ಕುರುಹು

ಆಗಿ ಕಾಣಿಸಿಕೊಂಡರು ತಾತ್ವಿಕವಾಗಿ ಪರಿಣಮಿಸಿದ ತುರ್ತುವನ್ನು ನೋಡುವಸಲುವಾಗಿ ಇಂತಹ ಸಮಸ್ಯೆಗಳು ಎದುರಾದಾಗ ಪರಿಹಾರಾತ್ಮಕವಾಗಿ ನೋಡಲಾಗಿದೆ.

೯ ಪತ್ರಿಕೆಗಳ ಮಹತ್ತ್ವವು ನಮ್ಮ ಮುಂದೆ ಪ್ರಮುಖವಾದುದು, ಅದು ಮಕ್ಕಳ ಕತೆಗಳ ಸಂದರ್ಭದಲ್ಲಿ ತೋರಿಸಿರುವ ಆಸ್ಥೆಯು ಮಹತ್ತ್ವವಾದುದು. ಇಂತಹ ಪತ್ರಿಕೆಗಳ ಮಹತ್ತರದ ಕಾರ್ಯ, ಪರಿಚಯ, ಅವುಗಳ ಲಭ್ಯತೆಯ ವಿವರವನ್ನು ವಿಂಗಡಿಸಿಕೊಂಡು ದೇಸಿ, ವಿದೇಶಿ ಮೂಲದವುಗಳ ಪರಿಯಾತ್ಮಕವಾಗಿ ಅಷ್ಟೆ ನೋಡಿದೆ.

೧೦ ಮಕ್ಕಳ ಸಾಹಿತ್ಯ ಚರಿತ್ರೆಯು ತೀರವಿರಳವಾಗಿ ಪ್ರಕಟವಾಗಿದ್ದು, ಅವುಗಳಂತಹ ಕಾರ್ಯವು ಅನಿವಾರ್ಯವಾಗಿರುವುದರಿಂದ ಬಿಡಿಬಿಡಿ ಲೇಖನಗಳ ಹಿನ್ನೆಯನ್ನು ಕಂಡುಕೊಂಡು ಅವುಗಳು ಹೇಳಲಾರದ ವಿಷಯಾಂಶಗಳನ್ನು ಅವುಗಳ ಸಹಾಯದಿಂದ ಹೇಳುವ ಪ್ರಯತ್ನವನ್ನು ಮಾಡಿದೆ.

೧೧ ಕತೆ ಮತ್ತು ಕಥೆ ಎಂಬ ಎರಡು ಶಬ್ದಗಳ ಬಳಕೆಯಲ್ಲಿ ಉಂಟಾದ ಗೊಂದಲವನ್ನು ಸ್ವತಃ ಈ ಅಧ್ಯಯನದಲ್ಲಿ ಪರಿಹರಿಸುವ ಸಲುವಾಗಿ ಎರಡನ್ನೂ ಒಂದೇ ಅರ್ಥದಲ್ಲಿ ಪ್ರಯೋಗಿಸಿದೆ. ಅಗತ್ಯವಾದ ಕಡೆ ಸಂಸ್ಕೃತದ ಪದವು ಕನ್ನಡದೊಂದಿಗೆ ಸೇರುವಾಗ ಉಂಟಾಗುವ ತೊಡಕು ನಿವಾರಿಸಿಕೊಳ್ಳುವಲ್ಲಿ 'ಕಥಾ'ಶಬ್ದವನ್ನೇ ಬಳಸಿ ಪರಿಹಾರ ಕಂಡುಕೊಳ್ಳಲಾಗಿದೆ.

೧೨ ಪರಿಕಲ್ಪನೆಗಳಾದ ಸ್ವರೂಪತೆಯನ್ನು ಹೇಳುವಾಗ ಉಂಟಾದ ಪರಿಕಲಪನಾತ್ಮಕ ಸಮಸ್ಯೆಗಳಿಗೆ ಪರಿಹಾರವಾಗಿ, ಯಾವುವು, ವಿಧ, ವಿಧಾನ, ಪ್ರಕಾರಗಳನ್ನು, ಬಗೆಗಳನ್ನು ಹಿನ್ನೆಲೆಯಾಗಿಸಿಕೊಂಡು ಬಿಡಿಸಿಕೊಳ್ಳಲಾಗಿದೆ.

೧೩ ತಾತ್ವಿಕತೆಯ ಪರಿಕಲ್ಪನೆಯನ್ನು ಹೇಳುವಾಗ ಕಾರಣ, ಹೇಗೆಲ್ಲಾ, ಸಾಧ್ಯತೆಗಳು, ಭಿನ್ನತೆಗಳು, ಹಿನ್ನೆಲೆ, ಅವಶ್ಯಕತೆಗಳು, ತುಡಿತಗಳನ್ನು, ತೌಲನಿಕ ಚರ್ಚೆಯನ್ನು, ಪರಿಹಾರಾತ್ಮಕ ಸಲಹೆಗಳನ್ನು ಮುಂದಿರಿಸಿಕೊಂಡು ನೋಡಿ ಬಿಡಿಸಿಕೊಳ್ಳಲಾಗಿದೆ.

## ೧೦.೩ ಉಳಿದಿರುವ ಅಧ್ಯಯನ ಸಾಧ್ಯತೆಗಳು

ಮಕ್ಕಳ ಕತೆಗಳನ್ನು ಅಧ್ಯಯನ ಮಾಡುವಾಗ ಇಲ್ಲಿ ನೋಡಲಾಗಿರುವುದು ಅವುಗಳ ಮಹತ್ತರದ ಸ್ವರೂಪಗಳಾದ ಲಿಖಿತ, ಮೌಖಿಕವಾದ ಬಗೆಗಳನ್ನು ಅವುಗಳ ಪ್ರಭಾವ, ಪ್ರೇರಣೆಯನ್ನು ಎಂದುಕೊಂಡು ಮುಂದೆ ನೋಡುವುದಾದರೆ ಅವುಗಳ ಸಮಗ್ರ ಚಿತ್ರಣವನ್ನು ಮುಂದಿನ ಅಧ್ಯಯನಕ್ಕೆ ಅಗತ್ಯವೆಂದು ಭಾವಿಸಬಹುದಾಗಿದೆ. ಜನಪದದಲ್ಲಿ ಹುದುಗಿರುವ ಮಕ್ಕಳ ಸಾಹಿತ್ಯವನ್ನು ಇಲ್ಲಿ ಕೇವಲ ಅದನ್ನು ಹಿನ್ನೆಲೆಯಾಗಿ ನೋಡಲಾಗಿದೆ. ಆದರೆ ಈ ಅಧ್ಯಯನದ ನಂತರ ಅನಿಸಿದಂತೆ ಜನಪದದಲ್ಲಿನ ಮಕ್ಕಳ ಸಾಹಿತ್ಯದ ಕತೆಗಳನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ ಸಾಮಾಗ್ರಿಯಾಗಿಸಿಕೊಂಡು ನೋಡುವಷ್ಟು ಅದು ವಿಶಾಲವಾಗಿದೆ. ಮಕ್ಕಳ ಕತೆಗಳ ಸ್ವರೂಪಗಳಾದ ಕತೆ, ಸಣ್ಣಕತೆ, ನೀಳ್ಗತೆ, ಮಿನಿಕಾದಂಬರಿಗಳನ್ನು ಇಲ್ಲಿ ಅಗತ್ಯವಾದಷ್ಟು ಮಾತ್ರ ಅನುಲಕ್ಷಿಸಿ ನೋಡಲಾಗಿದೆ. ಮುಂದೆ ಇದೇ ಸ್ವರೂಪಗಳನ್ನು, ಅವುಗಳ ಪ್ರಯೋಗವನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಮಕ್ಕಳ ಕತೆಗಳ

ಅಭಿರುಚಿಗಳಲ್ಲಿ ಬಹುಪಾಲು ಫ್ಯಾಂಟಸಿಯ ಸ್ವರೂಪದ್ದು ಎಂಬುವ ಅಂಶವನ್ನು ಆಧರಿಸಿ ಹೋದರೆ ಫ್ಯಾಂಟಸಿಯ ಸಾಧ್ಯತೆಗಳನ್ನು ಕುರಿತಾಗಿ ಸಮಗ್ರವಾದ ಅಧ್ಯಯವನ್ನು ಕಾಣಲು ಸಾಧ್ಯವಾಗುತ್ತದೆ. ಇತ್ತೀಚೆಗೆ ಮಕ್ಕಳ ಸಾಹಿತ್ಯದ ಒಲವು ವಾಸ್ತವದ ಕತೆಗಳ ಕಡೆಗೆ ಹರಿಯುತ್ತಿರುವುದರಿಂದ ವಾಸ್ತವದ ಬದುಕನ್ನು ಆಧರಿಸಿದ ಕತೆಯ ಸಾಧ್ಯತೆಗಳನ್ನು ಕನ್ನಡದ ವಾತಾವರಣದಲ್ಲಿ ಅಲ್ಲಗಳೆಯಲಾಗದು. ಆದುದರಿಂದ ಮಕ್ಕಳ ಕತೆಗಳಲ್ಲಿ ವಾಸ್ತವ ಎನ್ನುವುದನ್ನು ಅಧ್ಯಯನದ ಶಾಖೆಯಾಗಿಸಿಕೊಂಡು ನೋಡಬಹುದಾಗಿದೆ. ಮಕ್ಕಳ ಕತೆಗಳಲ್ಲಿ ನಾಟಕ ಸ್ವರೂಪ, ಅನುವಾದ ಸ್ವರೂಪ, ಆತ್ಮಚರಿತ್ರೆ, ಜೀವನ ಚರಿತ್ರೆಗಳನ್ನು ಅಗತ್ಯವಸ್ತುವಾಗಿರಿಸಿಕೊಂಡು ಅಧ್ಯಯನದ ಸಾಧ್ಯತೆಗಳನ್ನು ಕಂಡುಕೊಳ್ಳಬಹುದಾಗಿದೆ. ಪ್ರಮುಖವಾಗಿ ಹಿರಿಯರ ಕತೆಗಳನ್ನು ಮಕ್ಕಳ ಕತೆಗಳಾಗಿ ಆರಿಸಿರುವ ಸಾಧ್ಯತೆಗಳು ನಮ್ಮಲ್ಲಿ ಪರಂಪರೆಯಿಂದ ಇಂದಿಗೂ ಕಾಣಿಸಿಕೊಂಡಿದೆ. ಅಂತಹ ವಸ್ತು ನಮ್ಮಲ್ಲಿ ಹೇರಳವಾಗಿಯೂ ಕಾಣಿಸಿಕೊಂಡಿರುವುದರಿಂದ ಇಂತಹದೇ ಆಯ್ಕೆಯನ್ನು ಅನುಸರಿಸಿ ಮಕ್ಕಳಿಗಾಗಿ ಆರಿಸಿದ ಕತೆಗಳು ಎಂದು ವರ್ಗೀಕರಿಸಿ ಅಧ್ಯಯನ ಮಾಡಬಹುದಾಗಿದೆ. ಮಕ್ಕಳ ವಯೋಮಾನವು ಇಲ್ಲಿ ಪ್ರಧಾನವಾಗಿರುವುದರಿಂದ ಶಿಶು, ಬಾಲ, ಕಿಶೋರ ಎಂಬ ಸಾಹಿತ್ಯದ ಸ್ವರೂಪಗಳನ್ನು ವಿಂಗಡಿಸಿಕೊಂಡು ಪ್ರತ್ಯೇಕವಾಗಿ ಅಧ್ಯಯನದ ದೃಷ್ಟಿಯಿಂದ ನೋಡಬಹುದಾಗಿದೆ. ಮಕ್ಕಳ ಕತೆಗಳೆಂದರೆ ಪ್ರಾಣಿ, ಪಕ್ಷಿ, ಪರಿಸರ ಎಂದು ಭಾವಿಸಿ ನಮ್ಮ ಮಕ್ಕಳ ಕಥಾ ಲೋಕವು ಕಾಣಿಸಿಕೊಂಡಿರುವುದರಿಂದ ಇಂತಹ ಸರಕು ನಮ್ಮಲ್ಲಿ ವಿಪುಲವಾಗಿ ವ್ಯಾಪಿಸಿರುವುದರಿಂದ ಇದನ್ನು ಅಧ್ಯಯನದ ಭಾಗವಾಗಿ ನೋಡಬಹುದಾಗಿದೆ. ಮಕ್ಕಳ ಕತೆಗಳು ಹಿರಿಯರ ಕತೆಗಳ ಅನುಸರಿಸಿ ತಮ್ಮ ಗತಿಯನ್ನು ಬದಲಾಯಿಸಿಕೊಂಡು ಬಂದಿರುವುದರಿಂದ ಅವುಗಳನ್ನು ತೌಲನಿಕವಾಗಿ ಕಾಣಬಹುದಾಗಿದೆ. ಹಿರಿಯರ ಸಾಹಿತ್ಯ ಚರಿತ್ರೆಯನ್ನು ನೋಡಿದಾಗ ಸೃಜನಶೀಲ ಲೇಖಕರ ಕಾಲವನ್ನು ಆಧರಿಸಿ ವಿಂಗಡಿಸಿ ನೋಡಿದಂತೆ ಪಂಜೆಯವರ ಕಾಲ, ನಾ. ಡಿಸೋಜರ ಕಾಲ, ಆಧುನಿಕ ಕಾಲ ಎಂದು ಪ್ರತ್ಯೇಕಿಸಿ ಅಧ್ಯಯನಗಳನ್ನು ನಡೆಸುವ ಸಾಧ್ಯತೆಗಳು ಕಾಣಿಸಿಕೊಳ್ಳುತ್ತವೆ. ಮಕ್ಕಳ ಸಾಹಿತ್ಯದ ಮೇಲೆ ಪ್ರಭಾವ, ಪ್ರೇರಣೆಗಳು ಹೊರಗಿನಿಂದ, ಭಾರತದ ಒಳಗಿನಿಂದ, ಕನ್ನಡದ ಜನಪದದಿಂದ ಉಂಟಾಗಿರುವುದರಿಂದ ಇಂತಹದೇ ವಿಂಗಡಣೆ, ಪ್ರತ್ಯೇಕತೆಯನ್ನು ಆಧರಿಸಿ ಅಧ್ಯಯನವನ್ನು ಮುಂದಿನ ಹಾದಿಯಲ್ಲಿ ಕಾಣಬಹುದಾಗಿದೆ. ಇಷ್ಟೆಲ್ಲಾ ಸಾಧ್ಯತೆಗಳನ್ನು ಒಟ್ಟಾಗಿಯೂ ಕಾಣುವ ಸಾಧ್ಯತೆಯು ನಮ್ಮ ಮುಂದೆ ಕಾಣಿಸಿಕೊಳ್ಳುತ್ತದೆ.

ಅನುಬಂಧ:

ಭಾಗ – ೧

## ಮೂಲ ಆಕರಗಳು


| | | |
|---|---|---|
| ೧ | ಆನಂದ ಪಾಟೀಲ, ನ.ರವಿಕುಮಾರ್ (ಸಂ) | ಮಕ್ಕಳ ಸಾಹಿತ್ಯ ಶತಮಾನ, ಧಾರಿಣಿ ಗ್ರಾಫಿಕ್ಸ್, ಬೆಂಗಳೂರು, ೨೦೦೧ |
| ೨ | ಆನಂದ ಪಾಟೀಲ ಪಾಟೀಲ | ಅಲರು, ಮಕ್ಕಳಸಾಹಿತ್ಯ ಕುರಿತು ಲೇಖನ ಸಂಗ್ರಹ, ಅಭಿನವ ಬೆಂಗಳೂರು, ೨೦೧೦ |
| ೩ | ಆನಂದ ಪಾಟೀಲ | ಮುಗುಳು, ಮಕ್ಕಳ ಸಾಹಿತ್ಯ ಕುರಿತು, ಲೇಖನಗಳ ಸಂಗ್ರಹ, ಅಭಿನವ ಬೆಂಗಳೂರು, ೨೦೧೨ |
| ೪ | ಆನಂದ ಪಾಟೀಲ | ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಇತ್ತೀಚಿನ ಒಲವುಗಳು, ಕನ್ನಡ ವಿ.ವಿ. ಹಂಪಿ ಮಂಟಪ ಮಾಲೆ ೨೩೦, ೨೦೧೦ |
| ೫ | ಆನಂದ ಪಾಟೀಲ | ಎದ್ದು ನಿಂತ ಬಾಲ, ಅಭಿನವ ಬೆಂಗಳೂರು, ೨೦೧೪ |
| ೬ | ಆನಂದ ಪಾಟೀಲ | ಹೀಗೆ.. ಖುಷಿ ಕೊಟ್ಟವು, ಅಭಿನವ ಬೆಂಗಳೂರು, ೨೦೦೩ |
| ೭ | ಆನಂದ ಪಾಟೀಲ | ಡಂಡಂ ಊರಿಗೆ ಡಿಂ ಡಿಂ ಗಾಡಿ (ಮಕ್ಕಳ ಕಾದಂಬರಿ), ಪ್ರ : ಅಭಿನವ ಬೆಂಗಳೂರು |
| ೮ | ಆನಂದ ಪಾಟೀಲ | ಕೀರ್ತಿನಾಥ ಕುರ್ತಕೋಟಿ ಲೇಖನ ಸಮ್ಮುಖ, ಪ್ರಜಾವಾಣಿ ನ.೧೪. ೨೦೦೭ |
| ೯ | ಗಜೇಂದ್ರಗಡ ಶ್ಯಾಮರಾಯ | ಕಥನ ಕಲೆ,(೧೯೬೬) ಸಂಧ್ಯಾ ಸಾಹಿತ್ಯ ವೇದಿಕೆ ಕಲ್ಬುರ್ಗಿ,೧೯೯೬ |
| ೧೦ | ಗಟ್ಟಿ ಕೆ.ಟಿ. | ಮಕ್ಕಳ ಸಾಹಿತ್ಯ ಮತ್ತು ಮಗುವಿನ ಮನಸ್ಸು : ಮಯೂರ ಫೆಬ್ರವರಿ, ೨೦೧೧ |
| ೧೧ | ತಿರುಮಲ್ಲೇಶ್.ಕೆ.ವಿ. | ಕತೆ ಕಾಡಿಗೆ ನಾವು ಊರಿಗೆ, ಪ್ರಜಾವಾಣಿ ಸಾಪ್ತಾಹಿಕ ಮರವಣಿ, ೧೧.೧೧.೨೦೧೨ |
| ೧೨ | ನಾಗೇಶ ಪಾಂಡೆ | ಬಾಲಸಾಹಿತ್ಯ ಕೆ ಪ್ರತಿಮಾನ್, (ಹಿಂದಿ ಭಾಷೆ) ಮಕ್ಕಳ ಸಾಹಿತ್ಯ ಕುರಿತು, ಬುನಿಯಾದಿ ಸಾಹಿತ್ಯ ಪ್ರಕಾಶನ್ ಲಕ್ನೊ , ೨೦೦೯ |
| ೧೩ | ನಾ ಡಿಸೋಜಾ | ಹಾರುವ ಹಕ್ಕಿಗೆ ಹಸಿರೆಲೆ ತೋರಣ, ಸಮಗ್ರ ಮಕ್ಕಳ ಮಿನಿ ಕಾದಂಬರಿ, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ೨೦೧೨ |
| ೧೪ | ನಿರುಪಮಾ | ನಿಮ್ಮ ಮಕ್ಕಳಿಗೆಂತಹ ಸಾಹಿತ್ಯ ಬೇಕು? ಆರತಿ ಪಬ್ಲಿಕೇಷನ್, ಬೆಂಗಳೂರು ೧೯೮೮ |
| ೧೫ | ಪ್ರಭು ಎಂ.ಎಸ್.ಕೆ | ಸಾಹಿತ್ಯದಲ್ಲಿ ಫ್ಯಾಂಟಸಿ, ಸಾಹಿತ್ಯ ವಾಹಿನಿ೧, ಪ್ರ: ಪ್ರತಿಭಾ ಯುವವೇದಿಕೆ ಬೆಂಗಳೂರು, ೧೯೯೨ |
| ೧೬ | ಬರಗೂರು ರಾಮಚಂದ್ರಪ್ಪ (ಸಂ) | ಮಕ್ಕಳ ಸಾಹಿತ್ಯ ಸ್ವರೂಪ, ಕರ್ನಾಟಕ ಸಾಹಿತ್ಯ ಬೆಂಗಳೂರು, ೧೯೯೨ |
| ೧೭ | ಬಸುಬೇವಿನಗಿಡದ (ಸಂ) | ಮಕ್ಕಳ ಸಾಹಿತ್ಯ ಚರಿತ್ರೆ ಸಂಪುಟ-೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೫ |
| ೧೮ | ಬೆಳವಾಡಿ ಮಂಜುನಾಥ | ಕನ್ನಡದಲ್ಲಿ ಮಕ್ಕಳ ಸಾಹಿತ್ಯ, ಕನ್ನಡ ವಿ ವಿ ಹಂಪಿ ಮಂಟಪ ಮಾಲೆ ೨೦೧೦ |
| ೧೯ | ಭಂಡಾರಿ ಆರ್. ವಿ. | ಚಿನ್ನದ ಹುಡುಗಿ ಚಿನ್ನಮ್ಮ(೨೦೦೭), ಬಂಡಾಯ ಸಾಹಿತ್ಯ |

ಪ್ರಕಾಶನ ಹೊನ್ನಾವರ, ಉತ್ತರಕನ್ನಡ ಜಿಲ್ಲೆ, ೨೦೧೧
೨೦ ರಮಾದೇವಮ್ಮ ಎಸ್. ಕೆ. ಅನು: ಏಷ್ಯಾದ ಆಯ್ದಕತೆಗಳು, ನ್ಯಾಷನಲ್ ಬುಕ್‌ಟ್ರಸ್ಟ್ ಇಂಡಿಯಾ, ೧೯೭೯
೨೧ ವೆಂಕಟೇಶಮೂರ್ತಿ ಎಚ್.ಎಸ್ ಪಕ್ವತೆಯ ಹೆಗಲಮೇಲೆ ಮುಗ್ಧತೆಯ ಮೆರವಣಿಗೆ, ಸಾಪ್ತಾಹಿಕ ವಿಜಯ. ವಿಜಯವಾಣಿ ೧೧ ನವೆಂಬರ್ ೨೦೦೭
೨೨ ಶೇಷಗಿರಿರಾವ್ ಎಲ್.ಎಸ್. ಅನುವಾದ : ಹದಿಮೂರು ಶ್ರೇಷ್ಠ ಕತೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ೨೦೧೫.
೨೩ ಶ್ರೀಕಂಠಯ್ಯ ತೀ.ನಂ ಮಕ್ಕಳಿಗೆ ಹೇಳುವ ಕತೆಗಳು, ಸುವರ್ಣ ಜಾನಪದ ಸಂಪುಟ೧, ವಿದ್ಯಾದಾಯಿನಿ ಮೈಸೂರು, ೧೯೩೧
೨೪ ಶ್ರೀನಿವಾಸ್ ಸೇತುರಾಮ್ (ರೂಪಾಂತರ) ಮಕ್ಕಳಿಗಾಗಿ ಸಣ್ಣಕತೆಗಳು, ಸಿಬಿಟಿ ಪ್ರಕಾಶನ, ದೆಹಲಿ, ೧೯೯೩

## ಭಾಗ –೨
## ಪೂರಕ ಆಕರಗಳು (ಅ)

೧ ಅನಂತನಾರಾಯಣ ಎಸ್ ಹೊಸಗನ್ನಡದ ಸಾಹಿತ್ಯದ ಮೇಲೆ ಇಂಗ್ಲಿಷ್ ಪ್ರಭಾವ, ೧೯೬೨
೨ ಅನಂತಮೂರ್ತಿ ಯು.ಆರ್ ಪೂರ್ವಪರ(೧೯೯೦) ವಸಂತ ಪ್ರಕಾಶನ, ಬೆಂಗಳೂರು,೨೦೧೧
೩ ಆನಂದ ಪಾಟೀಲ ಸಂಧ್ಯಾ: ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ ೪, ೧೯೯೫, ಸಂಧ್ಯಾ ಬಳಗ ಕಲ್ಬುರ್ಗಿ, ೨೦೧೨
೪ ಆನಂದ ಪಾಟೀಲ (ಸಂ) ಹ್ಯಾರಿ, ನಮ್ಮ ಪೈಕಿನೇ ರೀ? ವಾಗೀಶ್ವರಿ ಎಸ್.ಪಿ. ಅಭಿನವ ಬೆಂಗಳೂರು, ೨೦೧೦
೫ ಆರಾಧ್ಯ, ಎನ್.ಆರ್ ಮಕ್ಕಳಿಗೊಂದು ವಿಜ್ಞಾನ, ವಾಚಸ್ಪತಿ, ಮೈಸೂರು, ೨೦೧೩
೬ ಉಮೇಶ ಎಚ್.ಎಸ್ ಶೈಕ್ಷಣಿಕ ಮನೋವಿಜ್ಞಾನ, ಶಾರದ ವಿಲಾಸ ಶಿಕ್ಷಣ ಮಹಾ ವಿದ್ಯಾಲಯ, ಮೈಸೂರು ೨೦೦೦
೭ ಕೀರ್ತಿನಾಥ ಕುರ್ತಕೋಟಿ ಉರಿಯ ನಾಲಗೆ, ಪ್ರಕಟಣೆ, ಕ.ಸಾ.ಪ ಬೆಂಗಳೂರು, ೨೦೧೪
೮ ಗಣೇಶ ಪಿ ನಾಡೋರ ಪ್ರಾಣಿಗಳ್ಯರು ಮತ್ತು ಮಯೂರ(೧೯೯೯), ನವ ಕರ್ನಾಟಕ ಬೆಂಗಳೂರು, ೨೦೧೨
೯ ಗಣೇಶ ಪಿ ನಾಡೋರ ನೆಗೆತ, ಶ್ರೀಮತಿ ಮಲ್ಲಮ್ಮ ನಾರಸಿಗೌಡ ಸಾಂಸ್ಕೃತಿಕ ಟ್ರಸ್ಟ್, ಬೆಂಗಳೂರು ೨೦೧೫
೧೦ ಗುರುರಾಜ ಬೆಣಗಲ್ (ಸಂ) ಮಕ್ಕಳ ಸಾಹಿತ್ಯ (೧೯೯೨), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೧೧ ಗುರುಲಿಂಗ ಕಾಪಸೆ (ಸಂ) ಮಕ್ಕಳ ಸಾಹಿತ್ಯ ಚಿಂತನೆ ಮತ್ತು ಸಿಸು ಸಂಗಮೇಶ ಸ್ಮರಣೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨

೧೨ ತಿಪ್ಪೇರುದ್ರಸ್ವಾಮಿ ಎಚ್ — ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, (೧೯೬೮) ಡಿ ವಿ ಕೆ ಮೂರ್ತಿ, ಮೈಸೂರು, ೨೦೦೭

೧೩ ನಟರಾಜ್ ಪಿ — ಮಕ್ಕಳ ಸಂವೇಗಗಳು ಮತ್ತು ಸಂವೇಗನಾತ್ಮಕ ಸಮಸ್ಯೆಗಳು, ೨೦೦೨

೧೪ ನಾಗರಾಜಶೆಟ್ಟಿ ಟಿ.ಎಸ್ — ಮಕ್ಕಳ ಸಾಹಿತ್ಯ ಏಕೆ ಬೇಕು?. ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೫

೧೫ ನಾರಾಯಣ ಕಿಕ್ಕೇರಿ — ಮಕ್ಕಳಲ್ಲಿ ಸೃಜನಶೀಲತೆ ವೃದ್ಧಿಸುವುದು ಹೇಗೆ?, ನವಕರ್ನಾಟಕ ಪ್ರಕಾಶನ ೨೦೦೪

೧೬ ನಿಂಗು ಸೊಲಗಿ. — ಮಕ್ಕಳ ರಂಗಭೂಮಿ : ಪ್ರದರ್ಶನ–ಪ್ರತಿಕ್ರಿಯೆ, ಸಂಶೋಧನಾ ಗ್ರಂಥ ಚಿಲಿಪಿಲಿ ಪ್ರಕಾಶನ ಧಾರವಾಡ, ೨೦೧೩

೧೭ ಪಳಕಳ ಸೀತಾರಾಮಭಟ್ಟ — ನೆಂಪು ನರಸಿಂಹ ಭಟ್ಟ, ಭಾರತೀಯ ಸಾಹಿತ್ಯ ಭಂಡಾರ, ಬಿಜಾಪುರ, ೨೦೦೮

೧೮ ಬಿರಾದರ ಶಂ.ಗು.(ಸಂ) — ಮಕ್ಕಳ ಸಾಹಿತ್ಯ ಹಚ್ಚೇವು ಕನ್ನಡದ ದೀಪ ೫೯ನೇ ಕನ್ನಡ ಸಾಹಿತ್ಯ ಸಮ್ಮೇಳನ ಹುಬ್ಬಳ್ಳಿ, ೧೯೯೦

೧೯ ಮಹಾಬಲೇಶ್ವರ ರಾವ್ — ಸೃಜನಶೀಲತೆ, ನವಕರ್ನಾಟಕ ಪ್ರಕಾಶನ ಬೆಂಗಳೂರು, ೧೯೯೭

೨೦ ಮುಕ್ತ ಸಿ.ನ್. (ಸಂ) — ಲೇಖಕಿಯರ ಕಥಾ ಸಂಚಯ ಭಾಗ–೨ ಗೀತಾಂಜಲಿ ಪಬ್ಲಿಕೇಷನ್ ಮೈಸೂರು, ೨೦೧೩

೨೧ ಮೈಲಳ್ಳಿ ರೇವಣ್ಣ — ಜನಪದ ಗಾದೆ ಮತ್ತು ಒಗಟುಗಳು, ಪ್ರೇಮ ಪ್ರಕಾಶನ ಜೀನಹಳ್ಳಿ ದಾವಣಗೆರೆವ, ೨೦೧೨

೨೨ ರಮೇಶ ಉಪಾಧ್ಯಾಯ — ಮಕ್ಕಳ ಮಾನಸಿಕ ಬೆಳವಣಿಗೆ, ನವಕರ್ನಾಟಕ ಪ್ರಕಾಶನ ಬೆಂಗಳೂರು, ೧೯೯೭

೨೩ ರಸಿಕ ಪುತ್ತಿಗೆ — ಇಲಿಗೆ ಅಂಜಿದ ಹುಲಿ, ಭಾರತೀಯ ಸಾಹಿತ್ಯ ಭಂಡಾರ ಬೀಜಾಪುರ, ೧೯೯೧

೨೪ ರಾಜಪ್ಪ ದಳವಾಯಿ(ಸಂ) — ಕನ್ನಡ ಸಾಹಿತ್ಯ ಕೋಶ, ದಳವಾಯಿ ಪ್ರಕಾಶನ ಬೆಂಗಳೂರು, ೨೦೧೦

೨೫ ರಾಜೇಂದ್ರ ಎಸ್. ಗಡಾದ — ಮಕ್ಕಳ ಸಾಹಿತ್ಯ ಹಾಗೂ ಸಿಸು ಸಂಗಮೇಶ, (ಪಿಎಚ್‌ಡಿ ಪ್ರಬಂಧ) ಸಂಗಮ ಪ್ರಕಾಶನ ಗದಗ, ೨೦೦೯

೨೬ ಲಕ್ಕಪ್ಪಗೌಡ ಎಚ್.ಜೆ.(ಸಂ) — ಸುವರ್ಣ ಜಾನಪದ, ಸಂಪುಟ ೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮

೨೭ ಲಕ್ಕಪ್ಪಗೌಡ ಎಚ್.ಜೆ. (ಸಂ) — ಸುವರ್ಣ ಜಾನಪದ, ಸಂಪುಟ ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮

೨೮ ವೃಷಭೇಂದ್ರ ಸ್ವಾಮಿ ಎಸ್.ಎಮ್(ಸಂ) — ಮಿಡಿಮಾವು:ಮಕ್ಕಳ ಸಾಹಿತ್ಯ ಸಮ್ಮೇಳನ, ಧಾರವಾಡ ಸ್ಮರಣಾ ಸಂಚಿಕೆ, ೧೯೮೫

೨೯ ಶಿವಕೊಟ್ಯಾಚಾರ್ಯ — ವಡ್ಡರಾಧನೆ, ಅನುವಾದ: ಟಿ.ಕೇಶವಭಟ್ಟ, ಕನ್ನಡ

ಸಾಹಿತ್ಯ ಪರಿಷತ್ತು ಬೆಂಗಳೂರು ೨೦೧೫

೩೦ ಶಿವರಾಮ ಕಾಡನಕುಪ್ಪೆ — ಮಕ್ಕಳ ಸಾಹಿತ್ಯ ಸೃಷ್ಟಿ: ಪ್ರೇರಣೆ ಮತ್ತು ಪ್ರಯೋಗ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೨

೩೧ ಶಿವಲಿಂಗಪ್ಪ ಹಂದಿಹಾಳು (ಸಂ) — ಮಕ್ಕಳ ಸಾಹಿತ್ಯ,೨೦೧೨-೨೦೧೩ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೬

೩೨ ಶಿವಶಂಕರ ಹಿರೇಮಠ (ಸಂ) — ಮಕ್ಕಳ ಸಾಹಿತ್ಯ ಚಿಂತನ, ಈಶ್ವರ ಕಮ್ಮಾರ ಮಕ್ಕಳ ಮನೆ, ಧಾರವಾಡ, ೧೯೮೪

೩೩ ಶ್ರೀನಿವಾಸರಾವ್ ಎಸ್.ವಿ. — ಮಕ್ಕಳು ಇವರ್‍ಯಾರು ನೀವು ಬಲ್ಲಿರಾ?,ಸೌರಭ ಪ್ರಕಾಶನ ಬೆಂಗಳೂರು ೧೯೮೭

೩೪ ಶ್ರೀನಿವಾಸರಾವ್ ಎಸ್.ವಿ. — ಮಕ್ಕಳ ಸಾಹಿತ್ಯದ ನೆಲೆ ಬೆಲೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೩೫ ಸವಿತಾ ಪ್ರಭಾಕರ್(ಸಂ) — ಮಕ್ಕಳ ಕಥಾ ಪ್ರಪಂಚ, ಗೀತಾಂಜಲಿ ಪಬ್ಲಿಕೇಷನ್ ಮೈಸೂರು, ೨೦೧೨

೩೬ ಸಿಸು ಸಂಗಮೇಶ — ಕೀರ್ತಿತಂದ ಮಕ್ಕಳು, ಭಾರತೀಯ ಸಾಹಿತ್ಯ ಭಂಡಾರ ಬೀಜಾಪುರ, ೨೦೦೨

**ಪೂರಕ ಆಕರಗಳು (ಆ)**

೧ ಕನ್ನಡ ಸಾಹಿತ್ಯ ಚರಿತ್ರೆ, ಪಠ್ಯ ಪ್ರಥಮ ಬಿ.ಎ. — ಕ.ರಾ.ಮು.ವಿ.ವಿ. ಮೈಸೂರು, ೨೦೧೨

೨ ಚಿಣ್ಣರ ಉತ್ಸವ — ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

೩ ಮಕ್ಕಳ ಸಾಹಿತ್ಯ ಕತೆಗಳು — ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

೪ ರಾಜರತ್ನಂ ಜಿ.ಪಿ. — ಸಮಗ್ರ ಮಕ್ಕಳ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೯

೫ ರಾಜರತ್ನಂ ಜಿ.ಪಿ. — ನೆನಪಿನ ಪುಸ್ತಕ ೧, ಪ್ರತಿಭಾ ಯುವ ವೇದಿಕೆ ಬೆಂಗಳೂರು, ೧೯೯೩

೬ ರಾಜರತ್ನಂ ಜಿ.ಪಿ. — ಕನ್ನಡದಲ್ಲಿ ಮಕ್ಕಳ ಸಾಹಿತ್ಯ, ಪಳಕಳ ಸೀತಾರಾಮಭಟ್ಟ, ಸಂಸ್ಮರಣ ಸಮಿತಿ, ದ.ಕನ್ನಡ ೧೯೭೯

೭ ವಿಷ್ಣು ಪ್ರಿಂಟರ್‍ಸ್ — ಮಕ್ಕಳ ಮನೋಲ್ಲಾಸ, ಪ್ರಕಟಣೆ: ವಿಷ್ಣು ಪ್ರಿಂಟರ್‍ಸ್, ಅಂಡ್ ಪಬ್ಲಿಷರ್‍ಸ್, ೨೦೦೫

೮ ಸಂಕ್ಷಿಪ್ತ ಕನ್ನಡ ನಿಘಂಟು — ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೧೩

೯ ಸಿಸು ಸಂಗಮೇಶ — ಮಕ್ಕಳ ಸಾಹಿತ್ಯ ನಾನು ಕಂಡಂತೆ, ಪ್ರ: ಭಾರತಿ ಸಾಹಿತ್ಯ ಭಂಡಾರ ಬಿಜಾಪುರ, ೧೯೯೬

೧೦ ಸಿ.ಬಿ.ಟಿ. — ಮಕ್ಕಳಿಗಾಗಿ ಸಣ್ಣಕತೆಗಳು, ನವದೆಹಲಿ, ೧೯೯೩

**ಪತ್ರಿಕೆಗಳು :**

ಬಾಲ ಮಂಗಳ, ಸಂ ಮರೇಂದ್ರ ಪಾರೆಕಟ್, ಮಂಗಳ ಪಬ್ಲಿಕೇಷನ್ ಬೆಂಗಳೂರು, ಸಂಚಿಕೆ ೨೩-೨೪ ೨೦೧೭

ಬಾಲ ಸಾಹಿತ್ಯ ಅಂತರ್ಜಾಲ ತ್ರೈಮಾಸಿಕ ಪತ್ರಿಕೆ. ವಿವಿಧ ಸಂಚಿಕೆಗಳು, ಸಂ. ಡಾ. ಆನಂದ ಪಾಟೀಲ.

ಬಾಲ ಸಾಹಿತ್ಯ, (ಅಂತರ್ಜಾಲ ತ್ರೈಮಾಸಿಕ ಪತ್ರಿಕೆ) ವಿವಿಧ ಸಂಪುಟಗಳು. ಸಂ: ಆನಂದ ಪಾಟೀಲ.

ಮಕ್ಕಳ ಸಾಹಿತ್ಯ ಒಂದಷ್ಟು ಮಾತುಕತೆ ವಿವಿಧ ಸಂಪುಟಗಳು, ಅಂತರ್ಜಾಲ ತ್ರೈಮಾಸಿಕ ಪತ್ರಿಕೆ, ಸಂ.ಆನಂದ ಪಾಟೀಲ.

ಮಕ್ಕಳ ಸಾಹಿತ್ಯ: ಮಾತುಕತೆ (ಅಂತರ್ಜಾಲ ತ್ರೈಮಾಸಿಕ ಪತ್ರಿಕೆ) ೧೩–೨೩ ರ ಸಂಪುಟಗಳು. ಸಂ: ಆನಂದ ಪಾಟೀಲ.

ಸಂಧ್ಯಾ: ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ ೧, ಪ್ರ : ಸಂಧ್ಯಾ ಸಾಹಿತ್ಯ ವೇದಿಕೆ, ಕಲಬುರ್ಗಿ, ೧೯೯೪

ಸಂಧ್ಯಾ: ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ ೨, ಪ್ರ : ಸಂಧ್ಯಾ ಸಾಹಿತ್ಯ ವೇದಿಕೆ, ಕಲಬುರ್ಗಿ, ೧೯೯೪

ಸಂಧ್ಯಾ ಸಾಹಿತ್ಯ ಮಾಲೆ ೪, ಪ್ರ : ಸಂಧ್ಯಾ ಸಾಹಿತ್ಯ ವೇದಿಕೆ, ಕಲಬುರ್ಗಿ, ೧೯೯೫

children's Literature, (ಅಂತರ್ಜಾಲ ತ್ರೈಮಾಸಿಕ ಪತ್ರಿಕೆ) ವಿವಿಧ ಸಂಪುಟಗಳು. ಸಂ: ಆನಂದ ಪಾಟೀಲ.

children's Literature in india- Navin Menon & Bhavan Nair, CBT, New Delhi-1999

children's Literature- Huck, Chorlotters. Holt Rinehart and Winston U.S.A, 1976

The Panchathantra- Ryder, Arthur.W.Jaco Publishing House.

